ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ
ಕ.ರಾ.ಶಿ. ಸಂಸ್ಥೆಯ ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ ಬೀದರ

# ಆಧುನಿಕ ವಚನ ಸಾಹಿತ್ಯದ ನೆಲೆಗಳು

(ಬೀದರ ಮತ್ತು ಗುಲಬರ್ಗಾ ಜಿಲ್ಲೆಗಳನ್ನು ಅನುಲಕ್ಷಿಸಿ)

(ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

**ಸಂಶೋಧಕರು**

ದೀಪಾ ಮಾಣಿಕರಾವ

**ಮಾರ್ಗದರ್ಶಕರು**

ಡಾ. ಜಗನ್ನಾಥ ಹೆಬ್ಬಾಳೆ
ಕರಾಶಿ ಸಂಸ್ಥೆಯ
ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ ಬೀದರ



ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ--585276

2018

ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ
ಕ.ರಾ.ಶಿ. ಸಂಸ್ಥೆಯ ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ ಬೀದರ

# ಆಧುನಿಕ ವಚನ ಸಾಹಿತ್ಯದ ನೆಲೆಗಳು

(ಬೀದರ ಮತ್ತು ಗುಲಬರ್ಗಾ ಜಿಲ್ಲೆಗಳನ್ನು ಅನುಲಕ್ಷಿಸಿ)

(ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)



**ಸಂಶೋಧಕರು**
ದೀಪಾ ಮಾಣಿಕರಾವ

**ಮಾರ್ಗದರ್ಶಕರು**
ಡಾ. ಜಗನ್ನಾಥ ಹೆಬ್ಬಾಳೆ
ಕರಾಶಿ ಸಂಸ್ಥೆಯ
ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ ಬೀದರ



ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ-585276

2018

# ಪ್ರಮಾಣ ಪತ್ರ

ಆಧುನಿಕ ವಚನ ಸಾಹಿತ್ಯದ ನೆಲೆಗಳು (ಬೀದರ ಹಾಗೂ ಗುಲಬರ್ಗಾ ಜಿಲ್ಲೆ ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಜಗನ್ನಾಥ ಹೆಬ್ಬಾಳೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯ ಹಂಪಿಯ ಭಾಷಾ ನಿಕಾಯದ ಅಧ್ಯಯನ ವಿಭಾಗಕ್ಕೆ ಪಿಹೆಚ್.ಡಿ. ಪದವಿಗಾಗಿ ಪ್ರಸ್ತುತ ಮಹಾಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ. ಈ ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೇ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಬೀದರ
ದಿನಾಂಕ:- 24/2/18

**ದೀಪಾ ಮಾಣಿಕರಾವ**
ಸಂಶೋಧನಾ ವಿದ್ಯಾರ್ಥಿನಿ
ಕರಾಶಿ ಸಂಸ್ಥೆಯ
ಹೈದ್ರಾಬಾದ ಕರ್ನಾಟಕ ಸಂಶೋಧನ
ಕೇಂದ್ರ ಬೀದರ–585401

# ಮಾರ್ಗದರ್ಶಕರ ಪ್ರಮಾಣಪತ್ರ

**ಆಧುನಿಕ ವಚನ ಸಾಹಿತ್ಯದ ನೆಲೆಗಳು (ಬೀದರ ಹಾಗೂ ಗುಲಬರ್ಗಾ ಜಿಲ್ಲೆ ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ದೀಪಾ ಮಾಣಿಕರಾವ** ಅವರು ನನ್ನ ಮಾರ್ಗದರ್ಶನದಲ್ಲಿ ಪಿಹೆಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಬೀದರ
ದಿನಾಂಕ:-24/2/18

**ಡಾ. ಜಗನ್ನಾಥ ಹೆಬ್ಬಾಳೆ**
ಮಾರ್ಗದರ್ಶಕರು
ಕರಾಶಿ ಸಂಸ್ಥೆಯ
ಹೈದ್ರಾಬಾದ ಕರ್ನಾಟಕ ಸಂಶೋಧನ
ಕೇಂದ್ರ ಬೀದರ–585401

ಸಂಯೋಜನಾಧಿಕಾರಿಗಳು
ಹೈದ್ರಾಬಾದ ಕರ್ನಾಟಕ ಸಂಶೋಧನ ಕೇಂದ್ರ
ಬೀದರ

## ಪರಿವಿಡಿ


| | | |
|---|---|---|
| **ಅಧ್ಯಾಯ – 1** | ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ಮತ್ತು ವೈಧಾನಿಕತೆ. | 1–09 |
| **ಅಧ್ಯಾಯ – 2** | ಬೀದರ ಹಾಗೂ ಗುಲಬರ್ಗಾ (ಕಲಬುರ್ಗಿ) ಜಿಲ್ಲೆಯ ಹಾಗೂ ಆಧುನಿಕ ವಚನಕಾರರ ಪರಂಪರೆ | 10–32 |
| **ಅಧ್ಯಾಯ – 3** | ಬೀದರ ಜಿಲ್ಲೆಯ ಆಧುನಿಕ ವಚನಕಾರರು ಹಾಗೂ ಅವರ ವಚನ ಸಾಹಿತ್ಯ | 33–75 |
| **ಅಧ್ಯಾಯ – 4** | ಗುಲಬರ್ಗಾ (ಕಲಬುರ್ಗಿ) ಜಿಲ್ಲೆಯ ಆಧುನಿಕ ವಚನಕಾರರು ಮತ್ತು ಅವರ ವಚನ ಸಾಹಿತ್ಯ | 76–100 |
| **ಅಧ್ಯಾಯ – 5** | ಆಧುನಿಕ ವಚನ ಸಾಹಿತ್ಯದ ನೆಲೆಗಳು | 101–219 |

**5–1 ವ್ಯಕ್ತಿ ಹಾಗೂ ವ್ಯಕ್ತಿತ್ವದ ನೆಲೆ**

5–1–1– ಮಾನಸಿಕ ನೆಲೆ

5–1–2– ಆತ್ಮವಿಮರ್ಶೆಯ ಚಿಂತನೆ

5–1–3– ಅಂತರಂಗ–ಬಹಿರಂಗ ಚಿಂತನೆಯ ನೆಲೆ

5–1–4– ಆಚಾರ–ವಿಚಾರಗಳ ನೆಲೆ

5–1–5– ವ್ಯಕ್ತಿ ಸಂಬಂಧದ ಚಿಂತನೆ

5–1–6– ಆರೋಗ್ಯ ಚಿಂತನೆ

**5–2 ಸಾಮಾಜಿಕ ನೆಲೆ**

5–2–1– ಜಾತಿ ಭೇದದ ಚಿಂತನೆ

5–2–2– ನೈತಿಕ ನೆಲೆ

5–2–3– ಆತ್ಮೋನ್ನತಿಯ ಚಿಂತನ

5–2–4– ಸಮಾಜಿಕ ವಿಡಂಬನೆ

5–2–5– ಕೌಟುಂಬಿಕ ಚಿಂತನೆ

5–2–6– ಸಮಾಜವಾದ ಮತ್ತು ಬದುಕುವ ಕಲೆಯ ಚಿಂತನೆ

**5–3 ಧಾರ್ಮಿಕ ನೆಲೆ**

5–3–1– ದೇವರ ಕುರಿತ ಚಿಂತನೆ

5–3–2– ಭಕ್ತಿ ನೆಲೆ

5–3–3– ಮೂಢನಂಬಿಕೆಗಳ ನಿರಾಕರಣೆ

5–3–4– ಸಮಾಜೋ–ಧಾರ್ಮಿಕ ಚಿಂತನೆ

**5–4 ರಾಜಕೀಯ ನೆಲೆ**

5–4–1– ದೇಶಪ್ರೇಮದ ಚಿಂತನೆ

5–4–2– ಚುನಾವಣೆಗಳ ಉಲ್ಲೇಖ

**5–5 ಸಾಂಸ್ಕೃತಿಕ ನೆಲೆ**

5–5–1– ಸಾಂಸ್ಕೃತಿಕ ಸ್ಥಿತ್ಯಂತರ

5–5–2– ಜೀವನ ದರ್ಶನ

5–5–3– ಶೈಕ್ಷಣಿಕ ರಂಗದ ಚಿಂತನೆ

**5–6 ವೈಚಾರಿಕ ಮತ್ತು ವೈಜ್ಞಾನಿಕ ನೆಲೆ**

| | | |
|---|---|---|
| **ಅಧ್ಯಾಯ – 6** | ಆಧುನಿಕ ವಚನಗಳ ವಸ್ತು, ಭಾಷೆ, ಶೈಲಿ ಮತ್ತು ತಂತ್ರ | **220–240** |
| **ಅಧ್ಯಾಯ – 7** | ಸಮಾರೋಪ | 241–244 |
| **ಅನುಬಂಧ** | ವಚನಕಾರರು ಹಾಗೂ ಅಂಕಿತನಾಮಗಳು | 245–247 |
| | ಗ್ರಂಥಋಣ | 248–255 |
| | ವಕ್ತಾರರ ಪಟ್ಟಿ | 256–257 |

## ಅಧ್ಯಾಯ – ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಸ್ವರೂಪ ಮತ್ತು ವೈಧಾನಿಕತೆ

ಕನ್ನಡ ಸಾಹಿತ್ಯದಲ್ಲಿ ವಚನಸಾಹಿತ್ಯಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಅದು ಕನ್ನಡ ಭಾಷೆ, ಸಾಹಿತ್ಯಕ್ಕೆ ಹೊಸ ದಿಕ್ಕನ್ನು ತೋರಿಸಿತು. ೧೨ನೆಯ ಶತಮಾನದಲ್ಲಿ ಕಲ್ಯಾಣ ನಾಡೊಂದನ್ನು ಕಟ್ಟಲು, ಹೆಣಗಿದ ಬಸವಾದಿ ಶರಣರ ವಿನೂತನ ಕ್ರಾಂತಿ ಇದು. ಆ ಕ್ರಾಂತಿಯ ಫಲವಾಗಿ ಜನಿಸಿದ ವಚನ ಸಾಹಿತ್ಯ ನಂತರದ ಕನ್ನಡ ಸಾಹಿತ್ಯದ ಬೆಳವಣಿಗೆಯ ಮೇಲೆ ದಟ್ಟವಾದ ತನ್ನ ಪ್ರಭಾವವನ್ನು ಬೀರಿತು. ಹೀಗೆ ಮುಂದೆ ಬಂದ ತ್ರಿಪದಿ, ಸಾಂಗತ್ಯ, ಕೀರ್ತನೆಗಳ ಮೇಲೆ ಪ್ರಭಾವ ಬೀರಿದಂತೆ, ಆಧುನಿಕ ವಚನ ಸಾಹಿತ್ಯದ ಮೇಲೂ ತನ್ನ ದಟ್ಟವಾದ ಪ್ರಭಾವದ ಮುದ್ರೆಯೊತ್ತಿತು. ಈ ಸಂದರ್ಭದಲ್ಲಿ ಮೂಡಿಬಂದ ಆಧುನಿಕ ವಚನಗಳ ಸಂಖ್ಯೆ ಸುಮಾರು ೩೦ ಸಾವಿರಕ್ಕೂ ಹೆಚ್ಚಾಗಿವೆ. ೧೨ನೇಯ ಶತಮಾನದಲ್ಲಿ ರಚಿತವಾಗಿರುವ ವಚನಗಳ ಸಂಖ್ಯೆಯನ್ನು ಬಿಟ್ಟರೆ ಇಷ್ಟೊಂದು ಅತ್ಯಧಿಕ ಸಂಖ್ಯೆಯಲ್ಲಿ ವಚನಗಳು ರಚನೆಯಾಗಿರುವುದು ಇದೇ ಕಾಲದಲ್ಲಿ. ಕಲ್ಯಾಣ ಕರ್ನಾಟಕದ ಬೀದರ ಹಾಗೂ ಕಲಬುರ್ಗಿ ಜಿಲ್ಲೆಯನ್ನು ಅನುಲಕ್ಷಿಸಿ ಹೇಳುವುದಾದರೆ, ಇಲ್ಲಿ ಸುಮಾರು ೧೫೦ಕ್ಕಿಂತ ಹೆಚ್ಚು ಆಧುನಿಕ ವಚನ ರಚನೆಕಾರರು ಬಿಡಿ ಬಿಡಿಯಾಗಿ ವಚನಗಳನ್ನು ಪ್ರಕಟಿಸಿದ್ದು ಕಂಡುಬರುತ್ತದೆ. ೫೦ಕ್ಕಿಂತ ಹೆಚ್ಚು ವಚನಕಾರರು 'ವಚನ ಸಂಕಲನ'ಗಳನ್ನು ಹೊರತಂದಿದ್ದಾರೆ. ಇಷ್ಟೊಂದು ಪ್ರಮಾಣದಲ್ಲಿ ಈ ರಚನೆಗಳು ಆಗಿರುವುದನ್ನು ಗಮನಿಸಿದರೆ ಈ ವಚನಗಳ ಅಧ್ಯಯನಕ್ಕೆ ಇದು ಒಳ್ಳೆಯ ಸಮಯವೆಂದು ಭಾವಿಸಲಾಗಿದೆ.

ಪ್ರಸ್ತುತ ಅಧ್ಯಾಯನವು ಆಧುನಿಕ ವಚನಸಾಹಿತ್ಯದ ರಚನೆ, ಸ್ವರೂಪ, ಬೆಳವಣಿಗೆ ಹಾಗೂ ಅದರ ಮಹತ್ವಗಳನ್ನು ಕುರಿತು ವಿವೇಚಿಸುವುದರೊಂದಿಗೆ ಆ ಕೃತಿಗಳಲ್ಲಿರುವ ಹೊಸ ಹೊಸ ಆಯಾಮಗಳನ್ನು ಕಂಡುಹಿಡಿಯಲು ಪ್ರಯತ್ನಿಸುವುದಾಗಿದೆ. ೧೨ನೇಯ ಶತಮಾನದಲ್ಲಿ ರಚಿತಗೊಂಡಿರುವ ಶರಣರ ವಚನಗಳಿಗೆ ಪ್ರಾಪ್ತವಾಗಿರುವ ಅಧ್ಯಾಯನದ ವ್ಯಾಪ್ತಿ, ವಿಧಾನಗಳು ಈ ಶತಮಾನದ ವಚನಗಳಿಗೆ ಇನ್ನೂ ಸಿಕ್ಕಿಲ್ಲ. ಇಂದಿನ ವಚನ ಸಾಹಿತ್ಯವು ಒಂದು ಕಾಲಮಾನದ ಅಗತ್ಯಕ್ಕೆ ತಕ್ಕಂತೆ ರೂಪಗೊಂಡಿರುವ ಅಭಿವ್ಯಕ್ತಿ ಮಾಧ್ಯಮವಾಗಿರುವುದರಿಂದ ಅದನ್ನೊಂದು ಸಂಶೋಧನೆಯ ಶಿಸ್ತಿಗೆ ಒಳಪಡಿಸಿ ಅಧ್ಯಯನ ಮಾಡುವ ಅಗತ್ಯವು ಕಂಡು ಬರುತ್ತದೆ.

"ಯಾವುದೇ ಒಂದು ಸಾಹಿತ್ಯ ಪ್ರಕಾರವು ಬೆಳೆದು, ನಿರ್ದಿಷ್ಟ ತಿರುವಿನಲ್ಲಿ ನಿಂತಾಗ ಅದರ ಮೌಲ್ಯಮಾಪನ ಮಾಡಬೇಕಾದ ಜವಾಬ್ದಾರಿ ಸಾಹಿತ್ಯ ವಿಮರ್ಶೆಗಿರುತ್ತದೆ. ೨೦ನೇಯ ಶತಮಾನದಲ್ಲಿ ವಚನ ಪ್ರಕಾರವು ಕಾಲಮಾನದ ಅಗತ್ಯಕ್ಕೆ ತಕ್ಕಂತೆ, ಶರಣ ಯುಗಕ್ಕಿಂತ ಭಿನ್ನವಾದ ನೆಲೆಯನ್ನು ಹೊಂದಿದೆ. ಆದ ಕಾರಣ ಶರಣವಚನಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಆಧುನಿಕ ವಚನಗಳ ಅಧ್ಯಯನ ನಡೆಯಬೇಕಾಗುತ್ತದೆ."[೧] ಎಂಬುದನ್ನು ಇಲ್ಲಿ ಗಮನಿಸಬಹುದು.

ಕನ್ನಡ ಸಂಸ್ಕೃತಿಯನ್ನು ವಿಶಿಷ್ಟವಾಗಿ ಅಭಿವ್ಯಕ್ತಿಸುವ 'ವಚನ ಸಾಹಿತ್ಯ' ೧೨ನೇಯ ಶತಮಾನದ ಶರಣರ ನವೀನ ಕೊಡುಗೆ, ಈ ಯುಗದ ಶರಣರು 'ಬೀದರ ನಾಡಿನ ಪರಿಸರದಲ್ಲಿದ್ದುಕೊಂಡು, ಧರ್ಮ, ನೀತಿ–ತತ್ವಗಳ

ಆಧ್ಯಾತ್ಮಿಕ ಅನುಭವವನ್ನು ತಮ್ಮ ರಚನೆಗಳ ಮೂಲಕ ವ್ಯಕ್ತಗೊಳಿಸಿದ್ದಾರೆ. ಜಗತ್ತಿನ ಯಾವುದೇ ಸಾಹಿತ್ಯ ಪ್ರಕಾರಗಳಲ್ಲಿ ಕಾಣಸಿಗದ 'ವಚನಗಳ'ರಚನೆ ಕನ್ನಡ ಶರಣರ ಅಪೂರ್ವ ಸೃಷ್ಟಿ. ನಡೆ-ನುಡಿ, ಬದುಕು-ಬರಹಗಳಲ್ಲಿ ಎಂದೂ ಭೇದ ಕಾಣದ, ವೃತ್ತಿ, ಜಾತಿ, ಲಿಂಗಗಳಲ್ಲಿ ಎಂದೂ ಎರಡನ್ನೆಣಿಸದ ವಚನಕಾರರು, ಸಮಾಜದಲ್ಲಿ 'ಸಮಾನತೆ' ತರಲು ತುಂಬಾ ಹೋರಾಡಿದರು. ಆ ಯುಗದಲ್ಲಿ ಜನರ ಬದುಕಿನಲ್ಲಿ ನೆಲೆಯೂರಿ ನಿಂತಿದ್ದ ತಮ್ಮ ಅನುಭವದ ವಿವಿಧ ನೆಲೆಗಳನ್ನು ಅಭಿವ್ಯಕ್ತಿಸಲು 'ಅಂಕಿತನಾಮ'ಗಳನ್ನು ಬಳಸಿಕೊಂಡರು. ಅವು ಕೆಲವರ ಆರಾಧ್ಯದೈವದ ಸಂಕೇತಗಳಾಗಿದ್ದರೆ, ಇನ್ನೂ ಕೆಲವು ಅವರವರ ಹೆಸರುಗಳೇ ಆಗಿವೆ. ತಾವು ಅಭಿವ್ಯಕ್ತಿಸುವ ಅನುಭವದ ನೆಲೆಗಳಿಗೆ ಅವು ಸಾಕ್ಷಿಯಾಗಿ ನಿಂತಿರುವುದು ಗಮನಾರ್ಹ ಅಂಶ. ಇವರ ಇಂಥ ಅನುಕರಣೆ ಆಧುನಿಕ ವಚನಕಾರರಲ್ಲಿಯೂ ಕಂಡುಬರುತ್ತದೆ. ಆ ಅಂಕಿತನಾಮಗಳ ನೆಲೆಗಳನ್ನು ಕಂಡುಕೊಳ್ಳುವುದರೊಂದಿಗೆ ಬೀದರ-ಕಲಬುರ್ಗಿ ಜಿಲ್ಲೆಯ ಆಧುನಿಕ ವಚನಕಾರರ ವಚನಗಳ ಸ್ವರೂಪವನ್ನು ಅರಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

'ಆಧುನಿಕ ವಚನ ಸಾಹಿತ್ಯ'ವು ಸ್ವಾತಂತ್ರ್ಯೋತ್ತರ ಕಾಲದಿಂದ ಇಲ್ಲಿ ಹುಲುಸಾಗಿ ಬೆಳೆಯುತ್ತ ಬಂದಿದೆ. ವೈವಿಧ್ಯಮಯವಾದ ಈ ಆಧುನಿಕ ವಚನ ಸಾಹಿತ್ಯಕ್ಕೆ ಕನ್ನಡ ನಾಡಿನಲ್ಲಿ ತನ್ನದೇ ಆದ ಒಂದು ಪರಂಪರೆಯಿದೆ. ಒಂದು ಅಂದಾಜಿನ ಪ್ರಕಾರ "ಕರ್ನಾಟಕದಲ್ಲಿ ಈಗ ಆಧುನಿಕ ವಚನಕಾರರ ಸಂಖ್ಯೆ ೬೦೦ಕ್ಕೂ ಮಿಕ್ಕಿದೆ.[೨] ಅವರ ವಚನಗಳ ಸಂಖ್ಯೆ ೨ ಲಕ್ಷ ೫೦ ಸಾವಿರಕ್ಕೂ ಮೀರಿ ಮುಂದೆ ಸಾಗಿದೆ."[೩]

ಆಧುನಿಕ ವಚನ ಸಾಹಿತ್ಯವನ್ನು ಒಂದು ಜೀವಂತ ಸಾಹಿತ್ಯ ಪ್ರಕಾರವಾಗಿ ಗುರುತಿಸುವುದರಿಂದ ಅದರ ವೈವಿಧ್ಯತೆ, ವೈಶಿಷ್ಟ್ಯತೆಗಳನ್ನು ಅವುಗಳ ಅಭಿವ್ಯಕ್ತಿ ನೆಲೆಯಲ್ಲಿ ಗುರುತಿಸಿ, ಮೌಲ್ಯಮಾಪನ ಮಾಡುವುದು ಅಗತ್ಯವಾಗಿದೆ. ಸಾಹಿತ್ಯ ರೂಪದ ಬಗೆಗಿನ 'ಸಿದ್ಧಾಂತ'ವನ್ನು ಆಧಾರವಾಗಿಟ್ಟುಕೊಂಡು ಈ ಭಾಗದ ವಚನಗಳನ್ನು ಇಲ್ಲಿಯವರೆಗೆ ಗಂಭೀರವಾಗಿ ಯಾರೂ ಅಧ್ಯಯನ ಮಾಡಿಲ್ಲ. ಆ ನೆಲೆಯಲ್ಲೂ ವಿಶ್ಲೇಷಣೆ ಮಾಡಲು ಆಶಿಸಲಾಗಿದೆ. ಅದರೊಂದಿಗೆ ಆಶಯ ಮತ್ತು ರಚನಾ ವಿಧಾನ ಹಾಗೂ ಅಭಿವ್ಯಕ್ತಿಯ ದೃಷ್ಟಿಯಿಂದ ಈ ಎರಡೂ ಜಿಲ್ಲೆಗಳ ಆಧುನಿಕ ವಚನಗಳು ವಿವರಿಸುವ ರೂಪಾಂಶ ಹಾಗೂ ಆಶಯದ ಇತಿಮಿತಿಗಳನ್ನು ಅರಿಯಲು ಇಲ್ಲಿ ಪ್ರಯತ್ನಿಸಲಾಗುತ್ತದೆ.

ಬೀದರ ಜಿಲ್ಲೆ ಹಾಗೂ ಕಲಬುರ್ಗಿ ಜಿಲ್ಲೆಯ ಆಧುನಿಕ ವಚನಕಾರರನ್ನು ಗುರುತಿಸಿ ಪರಿಚಯಿಸುವುದರೊಂದಿಗೆ ಈ ಅಧ್ಯಾಯನಕ್ಕೆ ಸಂಬಂಧಿಸಿದ ಸಾಹಿತ್ಯದ ನೆಲೆಗಳನ್ನು ಗುರುತಿಸಲು ಅತ್ಯಗತ್ಯವಾದ ಸಾಂಧರ್ಭಿಕತೆಯನ್ನು ಈ ಪ್ರಬಂಧದಲ್ಲಿ ಮೊದಲು ರೂಪಿಸಿಕೊಳ್ಳಲಾಗಿದೆ. ಆಧುನಿಕ ವಚನ ಸಾಹಿತ್ಯದ ಆಶಯಗಳನ್ನು ಮೊದಲು ಚರ್ಚಿಸಲಾಗಿದೆ. ಈ ರಚನೆಗಳಿಗೆ ಪ್ರೇರಕವಾಗಿ ಕನ್ನಡದ ನವೋದಯ ಸಾಹಿತ್ಯದ ಬಗೆಯನ್ನು ಅದರ ಆಶಯಗಳ ಹಿನ್ನೆಲೆಯಲ್ಲಿ ಮುಖ್ಯವಾಗಿರಿಸಿಕೊಳ್ಳಲಾಗಿದೆ. ಇದಕ್ಕೆ ಕಾಲಮಾನದ ಅಗತ್ಯತೆ ಹಾಗೂ ಸ್ವರೂಪಗಳನ್ನು ವಿವೇಚಿಸುವ ಪ್ರಯತ್ನ ಇಲ್ಲಿದೆ.

ಆಧುನಿಕ ವಚನ ಸಾಹಿತ್ಯದ ನೆಲೆಗಳನ್ನು ಪ್ರಮುಖವಾಗಿ ವ್ಯಕ್ತಿನೆಲೆ, ಸಾಮಾಜಿಕ ನೆಲೆ, ಆರ್ಥಿಕ ನೆಲೆ, ರಾಜಕೀಯ ನೆಲೆ, ನೈಸರ್ಗಿಕ ನೆಲೆ, ಧಾರ್ಮಿಕ ನೆಲೆ ಹಾಗೂ ಭಾಷಿಕ ನೆಲೆಗಳ ಹಿನ್ನೆಲೆಯಲ್ಲಿ ವಿವೇಚಿಸಲಾಗುತ್ತಿದ್ದು ಅವುಗಳಡಿಯಲ್ಲಿ ಉಪ ವಿಭಾಗಗಳನ್ನು ಮಾಡಿಕೊಂಡ ಅಧ್ಯಯನ ಮಾಡಲು ಪ್ರಯತ್ನಿಸಲಾಗುತ್ತದೆ. ಸಾಮಾಜಿಕ ಆಶಯದ ಅಧ್ಯಾಯನಕ್ಕೆ ಪೂರಕವಾಗಿ ಸಾಹಿತ್ಯ ಹಾಗೂ ಸಮಾಜದ ನಡುವಿನ

ಸಂಬಂಧದ ಸ್ವರೂಪವನ್ನು ತಿಳಿಯಪಡಿಸಲಾಗಿದ್ದು, ಸಾಮಾಜಿಕವಾಗಿ ಶರಣರ ರಚನೆಗಳಿಗಿಂತ ಸೈದ್ಧಾಂತಿಕವಾಗಿ ಹಾಗೂ ಸ್ವರೂಪಾತ್ಮಕವಾಗಿ ಭಿನ್ನವಾಗಿರುವ ಆಧುನಿಕ ವಚನಗಳ ವ್ಯಕ್ತಿ ನೆಲೆಯನ್ನು ಕೌಟುಂಬಿಕ ಹಿನ್ನೆಲೆಯ, ವಿವಾಹ, ವರದಕ್ಷಿಣೆ, ಮೂಢನಂಬಿಕೆ, ಆರೋಗ್ಯ ಮೊದಲಾದ ವಸ್ತು ವಿನ್ಯಾಸಗಳಡಿಯಲ್ಲಿ ವಿವರಿಸಲು ಉದ್ದೇಶಿಸಲಾಗಿದೆ. ಇಂದಿನ ಆಧುನಿಕತೆಯ ಯುಗಧರ್ಮದ ನಾಗರಿಕತೆಯ ಹಿನ್ನೆಲೆಯಲ್ಲಿ ರೂಪಗೊಂಡಿರುವ ಸಾಮಾಜಿಕ ನೆಲೆಯನ್ನು ವ್ಯಕ್ತಿ ಕೇಂದ್ರಿತ ಪ್ರಜ್ಞೆಯ ಫಲವಾಗಿ ರೂಪಗೊಂಡು ಅಭಿವ್ಯಕ್ತವಾಗಿರುವುದ್ದನ್ನು ಅವು ಹೇಗೆ? ಸಾಮಾಜಿಕ  ಆಶಯಗಳಾಗಿ ರೂಪಗೊಂಡಿವೆ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

ಇಂದು ಎಲ್ಲವನ್ನು ವ್ಯಾಪಾರೀ ನೆಲೆಯಲ್ಲಿ ಗುರುತಿಸುವ ಬದುಕಿನ ರೀತಿ–ನೀತಿಗಳನ್ನು ಆಧುನಿಕ ವಚನಗಳು ಯಾವ ರೀತಿಯಲ್ಲಿ ನಿರೂಪಿಸುತ್ತವೆ ಎಂಬುದನ್ನು ವ್ಯಾಪಾರ, ಹಣಕಾಸು,  ಭ್ರಷ್ಟತೆ,  ಹಲವು ಸವಲತ್ತುಗಳಾದ ಅನ್ನಭಾಗ್ಯ, ಇತ್ಯಾದಿಗಳ ವ್ಯವಸ್ಥೆಯಲ್ಲಿ ಆರ್ಥಿಕತೆಯ ಕುರಿತು ರಚನೆಗಳು ಎಷ್ಟರ ಮಟ್ಟಿಗೆ ಪ್ರಭಾವಶಾಲಿಯಾಗಿ ಪ್ರಸ್ತುತತೆಯನ್ನು ವ್ಯಕ್ತಗೊಳಿಸುತ್ತವೆ? ಎಂಬುದನ್ನು ಕುರಿತು ಚರ್ಚಿಸಲು ಯೋಚಿಸಲಾಗಿದೆ.

'ರಾಜಕೀಯ' ಬದುಕು ಇಂದಿನ ಜೀವನದ ಮೇಲೆ ಗಾಢವಾದ ಪ್ರಭಾವ ಬೀರುತ್ತಿದೆ. ಬದುಕಿನ ಎಲ್ಲ ನೆಲೆಗಳಲ್ಲಿ, ಅದು ಧಾರ್ಮಿಕವಾಗಿರಬಹುದು, ಸಾಮಾಜಿಕವಾಗಿರಬಹುದು, ಕಲಾವಿಷಯದಲ್ಲಾಗಿರಬಹುದು ಎಲ್ಲದರಲ್ಲಿ 'ರಾಜಕಾರಣ' ಬೆರೆತು ನಿಲ್ಲುತ್ತದೆ. ಇಂದಿನ ಪ್ರಜಾಪ್ರಭುತ್ವ, ಸಮಾಜವಾದ, ಸರ್ವೋದಯ ಸಾಮಾಜಿಕ ನ್ಯಾಯದ ಪರಿಕಲ್ಪನೆಯಲ್ಲಿ 'ಮಾನವ ಕೇಂದ್ರಿತ ರಾಜಕೀಯ'ದ ಮೂಲಕ ರೂಪಗೊಂಡು, ಈ ವಿಷಯವನ್ನು ಹೇಗೆ ವ್ಯಕ್ತಪಡಿಸುತ್ತವೆ? ಎಂಬುದನ್ನು ಉದಾಹರಣೆಗಳ ಮೂಲಕ ಇಲ್ಲಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

೧೨ನೇಯ ಶತಮಾನದ ಶರಣರ ಆಶಯಕ್ಕೂ, ಆಧುನಿಕರ ಧಾರ್ಮಿಕ ನೆಲೆಗಳಿಗೂ ಇರುವ ನಡುವಿನ ಅಂತರದ ಹಿನ್ನೆಲೆಯಲ್ಲಿ ಆಯಾ ಧರ್ಮದ ಚೌಕಟ್ಟಿನಲ್ಲಿ ಆಧುನಿಕರ ರಚನೆಗಳ ವಿವೇಚನೆಯನ್ನು ಅಧ್ಯಾಯನಕ್ಕೊಳಪಡಿಸಲಾಗುತ್ತದೆ. ಬದಲಾದ ಇಂದಿನ ವಾತಾವರಣದಲ್ಲಿ ಧಾರ್ಮಿಕ ಚೌಕಟ್ಟಿನ ರಚನೆಗಳು ಎಷ್ಟರ ಮಟ್ಟಿಗೆ ಪ್ರಭಾವಶಾಲಿಯಾಗಿವೆ, ಹಾಗೂ ಪ್ರಸ್ತುತವಾಗುತ್ತವೆ ಎಂಬ ಚರ್ಚೆಯೂ ಈ ಅಧ್ಯಾಯನದಲ್ಲಿದೆ. "ಧರ್ಮಗಳನ್ನು, ಧಾರ್ಮಿಕ ನೈತಿಕ ಮೌಲ್ಯಗಳನ್ನು, ಸಂಸ್ಕೃತಿಯ ಚರ್ಚೆಯ ಮುಖ್ಯ ಆಕರಗಳನ್ನಾಗಿ ಬಳಸುತ್ತ, ಕರ್ನಾಟಕ ಸಂಸ್ಕೃತಿಯನ್ನು ಚರ್ಚಿಸುವುದು ಈ ಮಾದರಿಯ ಇನ್ನೊಂದು ಲಕ್ಷಣ"[೩]ವಾದ್ದರಿಂದ ಈ ನೆಲೆಯನ್ನೂ ಇಲ್ಲಿ ಗಮನಿಸಬಹುದಾಗಿದೆ.

ವಚನ ಸಾಹಿತ್ಯಕ್ಕೆ ಬೀದರ ಹಾಗೂ ಕಲಬುರ್ಗಿ ಪ್ರದೇಶಗಳ ಕೊಡುಗೆಯು ಅತ್ಯಮೂಲ್ಯವಾದುದು. ಇಲ್ಲಿಯ ಪ್ರಾತಿನಿಧಿಕ ಆಧುನಿಕ ವಚನಕಾರರು ಸಾವಿರಾರು ವಚನಗಳನ್ನು ರಚಿಸಿದ್ದಾರೆ. ಅವರೂ ಸಹ ಯಾವುದೇ ಭೇದ ಭಾವವಿಲ್ಲದೆ ಸರ್ವತೋಮುಖವಾಗಿ ಬೆಳೆಯುತ್ತಿದ್ದಾರೆ. ಅವರನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಪರಿಚಯಿಸುವ ಉದ್ದೇಶವೂ ಇಲ್ಲಿ ಪ್ರಮುಖವಾಗಿದೆ. ಇಂದಿನ ಆಧುನಿಕ ಸಮಸ್ಯೆಗಳ ಹಿನ್ನೆಲೆಯಲ್ಲಿ ಇಂದಿನ ವಚನಗಳು ರಚನೆಗೊಳ್ಳುತ್ತಿರುವುದರಿಂದ ಆ ಮೂಲಕ ಪ್ರಗತಿಪರವಾದ ವಿಚಾರದ ವ್ಯಾಪ್ತಿ ವಿಸ್ತಾರವಾಗಿದ್ದು, ಅವರ ವಚನಗಳಲ್ಲಿ ಅಭಿವ್ಯಕ್ತಗೊಂಡಿರುವ ವೈಯಕ್ತಿಕ ವಿವರಕ್ಕಿಂತ, ಅವರು ಕನ್ನಡ ಸಾಹಿತ್ಯಕ್ಕೆ ಹಾಗೂ ಆ ಮೂಲಕ ವಿಶ್ವ ಸಾಹಿತ್ಯಕ್ಕೆ ನೀಡಿದ ಸಂದೇಶ ಹಾಗೂ ಕೊಡುಗೆಗಳನ್ನು ಕುರಿತು ಇಲ್ಲಿ ಪರಿಶೀಲಿಸುವುದು ಮುಖ್ಯವೆಂದು ಭಾವಿಸಲಾಗಿದೆ.

**ವ್ಯಾಪ್ತಿ**

ಈ ಅಧ್ಯಾಯನವನ್ನು ನಾನು ಎರಡು ಜಿಲ್ಲೆಗಳಿಗೆ ಅನುಲಕ್ಷಿಸಿದ್ದೇನೆ. ಅವುಗಳೆಂದರೆ ಬೀದರ ಮತ್ತು ಗುಲಬರ್ಗಾ (ಕಲಬುರ್ಗಿ) ಜಿಲ್ಲೆಗಳಾಗಿವೆ. ಈ ಎರಡು ಜಿಲ್ಲೆಯಲ್ಲಿ ಬರುವ ಆಧುನಿಕ ವಚನಕಾರರ ಸುಮಾರು ೧೫೦ ಕ್ಕಿಂತ ಅಧಿಕ ಸಂಖ್ಯೆಯಲ್ಲಿ ವಚನಕಾರರು ಇರುವುದನ್ನು ತಿಳಿದು ಬರುತ್ತದೆ. ಅವರುಗಳಲ್ಲಿ ಹೇಳಬೇಕಾದರೆ ಬಿಡಿ-ಬಿಡಿ ವಚನಕಾರರನ್ನು ಅದ್ಯಯನದಲ್ಲಿ ಬಳಸಿಕೊಂಡಿಲ್ಲ. ನಾನು ಪುಸ್ತಕದ ರೂಪದಲ್ಲಿ ಪ್ರಕಟಿತವಾದ ವಚನಕಾರರನ್ನು ಮಾತ್ರ ಅಧ್ಯಾಯನದಲ್ಲಿ ಬಳಸಿಕೊಂಡಿದ್ದೇನೆ. ಅವರನ್ನು ಈ ಕೆಳಗಿನಂತೆ ಹೆಸರಿಸಿದ್ದೇನೆ. ಹುಲಸೂರಿನ ಶಿವಾನಂದ ಸ್ವಾಮೀಜಿಯವರು, ಶಿವಸ್ವಾಮಿ ಚಿನಕೇರಾರವರು, ಎಂ.ಜಿ. ಗಂಗನಪಳ್ಳಿ, ಬಿ.ಎಸ್. ಖೂಬಾ, ಕರುಣಾ ಸಲಗರ, ವೀರಶೆಟ್ಟಿ ಬಾವುಗೆ, ದೇಶಾಂಶ ಹುಡಗಿ, ಗಿರಿಜಾ ಧರ್ಮರಡ್ಡಿ, ಜಗದೇವಿ ದುಬಲಗುಂಡೆ, ಪುಷ್ಪಾ ಜಿ. ಕನಕಾ, ಎಂ. ಮುಕ್ತಂಬಿ, ಶ್ರೀ ಚೆನ್ನಪ್ಪ ಮೋರ್ಗೆ, ಎಂಜಿ. ದೇಶಪಾಂಡೆ, ಬಸವರಾಜ ಹದನೂರೆ ಜನವಾಡಕರ, ಶ್ರೀಮತಿ ಮಹೇಶ್ವರಿ ಹೇಡೆ, ಶಾಂತಲಿಂಗ ಸ್ವಾಮಿ, ಸೋಮನಾಥ ಯಾಳವಾರ, ವಿ. ಸಿದ್ಧರಾಮಣ್ಣ, ಶೋಭಾ ಔರಾದೆ, ವಜ್ರಾ ಪಾಟೀಲ, ವಿಶ್ವನಾಥ ಬಿರಾದರ, ಚಂದ್ರಪ್ಪ ಹೆಬ್ಬಾಳಕರ, ಹಂಶಕವಿ, ಶಾಂತಮ್ಮ ಬಲ್ಲೂರ, ರಘುನಾಥ ಹಡಪದ, ವೇದಾವತಿ ಮಠಪತಿ, ಚಂದ್ರಮ್ಮ ದರ್ಗೆ, ಮಂಗಲ ಮಾಶೆಟ್ಟಿ, ರಾಜಮ್ಮ ಚಿಕ್ಕ ಪೇಟೆ, ಕರುಣಕ್ಕ ಜೀರ್ಗೆ, ಈಶ್ವರಮ್ಮ ಪಾಟೀಲ, ಸುಂದರಮ್ಮ, ರಮೇಶ ಬಿರಾದರ, ಎಸ್.ಎಂ. ಜನವಾಡಕರ್, ಶ್ರೀಮತಿ ಕಲಾವತಿ ಬಿರಾದರ ಇಷ್ಟು ಬೀದರ ಜಿಲ್ಲೆಯಲ್ಲಿ ಬರುವ ಆಧುನಿಕ ವಚನಕಾರರನ್ನು ಅಧ್ಯಾಯನದಲ್ಲಿ ಬಳಸಿಕೊಂಡಿದ್ದೇನೆ.

ಗುಲಬರ್ಗಾ ಜಿಲ್ಲೆಯಲ್ಲಿ ಬರುವಂತಹ ಆಧುನಿಕ ವಚನಕಾರರನ್ನು ಈ ರೀತಿಯಿಂದ ಪರಿಚಯಿಸಿದ್ದೇನೆ. ಅವರುಗಳು ಸಿದ್ಧರಾಮ ಪೋಲೀಸ ಪಾಟೀಲ, ಶರಣಬಸಪ್ಪ ಅಪ್ಪ, ಚನ್ನಣ್ಣ ವಾಲೀಕರ, ಹನುಮಂತರಾವ ಮೋತಕಪಳ್ಳಿ, ಗುರುಲಿಂಗಪ್ಪ ಹಾಲಹಳ್ಳಿ, ಭೀಮರಾವ, ಸರಸ್ವತಿ ಚಿಮ್ಮಲಗಿ, ಶೈಲಜಾ ಉಡಚಣ, . ಎಸ್.ಎಸ್. ಪಾಟೀಲ, ವಿಜಯಕುಮಾರ ಪರುತೆ, ಶ್ರೀಮತಿ ನಾಗಮ್ಮ ಮುಗಳಿ, ಬಸವರಾಜ ಮೋದಿ, . ನಾಗೇಂದ್ರ ಮಸೂತಿ, ಶಿವಕವಿ ಹಿರೇಮಠ, ಮಹಾದೇವ ಬಡಿಗೇರ, ಬಸವರಾಜ ಸಬರದ, ಸೂಗಯ್ಯ ಹಿರೇಮಠ, ಮುಂತಾದ ಆಧುನಿಕ ವಚನಕಾರರನ್ನು ಗುಲಬರ್ಗಾ ಜಿಲ್ಲೆಯಲ್ಲಿ ಆಯ್ಕೆಯನ್ನು ಮಾಡಿಕೊಂಡಿದ್ದೇನೆ. ಇಷ್ಟೇ ಅಲ್ಲದೆ ಇನ್ನೂ ಸಾಕಷ್ಟು ಆಧುನಿಕ ವಚನಕಾರರನ್ನು ನಾವು ಈ ಎರಡು ಜಿಲ್ಲೆಗಳಲ್ಲಿ ಕಾಣಬಹುದು. ಈ ಮೇಲೆ ಸೂಚಿಸಿದ ಆಧುನಿಕ ವಚನಕಾರರನ್ನು ಮಾತ್ರ ನನ್ನ ಅಧ್ಯಾಯನದ ವ್ಯಾಪ್ತಿಗೆ ಬಳಸಿಕೊಂಡಿದ್ದೇನೆ.

ಸಂಗ್ರಹಿಸಿದ ಕೃತಿಗಳನ್ನು ಅಧ್ಯಾಯನವನ್ನು ಮಾಡಿ ಅವುಗಳಲ್ಲಿ ವಚನಗಳ ವಿಂಗಡನೆಯನ್ನು ಮಾಡಿಕೊಂಡು ನನ್ನ ಅಧ್ಯಯನಕ್ಕೆ ನಾನು ಅಧ್ಯಾಯಗಳನ್ನು ಸಿದ್ಧಪಡಿಸಿಕೊಂಡಂತೆ ಅವುಗಳ ವಿವರಣೆಯನ್ನು ಮಾಡಿರುತ್ತೇನೆ. ಹಾಗೆಯೇ ಇಲ್ಲಿಬಟ್ಟು ೧೫೦ ಕ್ಕೂ ಹೆಚ್ಚು ಅಧಿಕ ವಚನಕಾರರು ಈ ಎರಡು ಜಿಲ್ಲೆಗಳಲ್ಲಿ ದೊರಕುತ್ತಾರೆ. ಬೀದರ ಜಿಲ್ಲೆಯಲ್ಲಿ ಸುಮಾರು ಮೂವತ್ತಾರು ಆಧುನಿಕ ವಚನಕಾರರನ್ನು ನನ್ನ ಅಧ್ಯಾಯನದಲ್ಲಿ ಬಳಸಿಕೊಂಡಿದ್ದೇನೆ ಹಾಗೆಯೇ ಕಲ್ಬುರ್ಗಿ ಜಿಲ್ಲೆಯಲ್ಲಿ ಸುಮಾರು ಇಪ್ಪತ್ತು ಜನ ಆಧುನಿಕ ವಚನಕಾರರನ್ನು ಪರಿಚಯಿಸಿದ್ದೇನೆ. ಇನ್ನೂ ವಚನಕಾರರು ಇದ್ದಾರೆ ಆದರೂ ನಾನು ೨೦೧೬ ರಲ್ಲಿ ಪ್ರಕಟವಾದ ಆಧುನಿಕ

ವಚನಗಳ ಪುಸ್ತಕಗಳು ಹೊರಬಂದವರನ್ನು ಮಾತ್ರ ನನ್ನ ಅಧ್ಯಾಯನದ ವ್ಯಾಪ್ತಿಗೆ ಬಳಸಿಕೊಂಡಿದ್ದೇನೆ. ಇನ್ನೂ ಬಿಡಿ ಬಿಡಿ ವಚನಕಾರರು ಅಧಿಕ ಸಂಖ್ಯೆಯಲ್ಲಿ ಇಲ್ಲಿ ಸಿಗುತ್ತಾರೆ.

**ವೈಧಾನಿಕತೆ**

"ಆಧುನಿಕ ವಚನ ಸಾಹಿತ್ಯದ ನೆಲೆಗಳು" (ಬೀದರ ಮತ್ತುಕಲ್ಬುರ್ಗಿ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ವಿಷಯದ ಈ ಮಹಾಪ್ರಬಂಧದ ರಚನೆಯಲ್ಲಿ ಪ್ರಾಥಮಿಕ ಮತ್ತು ಅನುಷಂಗಿಕ ಮೂಲಾಧಾರಗಳನ್ನು ಬಳಸಿಕೊಳ್ಳಲಾಗಿದೆ.

'ಪ್ರಾಥಮಿಕ ಆಕಾರಗಳು'- ವ್ಯಕ್ತಿ ಸಂದರ್ಶನ, ಅವಲೋಕನ, ವಿದ್ವಾಂಸರಾದ ಸೋಮನಾಥ ಯಾಳವಾರ, ದೇಶಾಂವಶಹುಡಗಿ, ಎಮ್.ಜಿ.ಗಂಗನಪಳ್ಳಿ, ಬಿ.ಎಸ್.ಖೂಬಾ, ಚಿಲುಮೆ, ಸಂಗಮೇಶ ಹಂಡಗಿ ಇವರೊಂದಿಗೆ ಚರ್ಚಿಸಲಾಗಿದೆ. ಆಧುನಿಕ ವಚನ ಸಾಹಿತ್ಯ ಸಮ್ಮೇಳನಗಳಿಗೆ ಭಾಗವಹಿಸಿದ್ದೇನೆ ೨೭ ಮತ್ತು ೨೮-೧೨-೧೨ ರಂದು ಹಳಕಟ್ಟಿ ವಚನೋತ್ಸವ ರಾಷ್ಟ್ರಮಟ್ಟದ ಏಳನೇ ಸಮ್ಮೇಳನ ಬೀದರದಲ್ಲಿ ನಡೆಯಿತು. ಬೀದರ ಜಿಲ್ಲಾ ದ್ವಿತೀಯ ಆಧುನಿಕ ವಚನ ಸಾಹಿತ್ಯ ಸಮ್ಮೇಳನ ೨೭ ಮತ್ತು ೨೮-೦೧-೨೦೧೪ ರಂದು ಎರಡು ದಿನಗಳ ಕಾರ್ಯಕ್ರಮವು ಸಸ್ತಾಪೂರ ತಾ॥ ಬಸವ ಕಲ್ಯಾಣ ಜಿ॥ ಬೀದರದಲ್ಲಿ ನಡೆಯಿತು. ಬಸವೋತ್ಸವ, ವಚನ ಝೇಂಕಾರ ಮುಂತಾದ ಕಾರ್ಯಕ್ರಮಗಳು ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅವುಗಳಲ್ಲಿ ಭಾಗವಹಿಸಿದ್ದೇನೆ. ಆ ವಿಷಯಗಳ ಕುರಿತು ಚರ್ಚೆ ಟಿಪ್ಪಣಿ ಮಾಡಿಕೊಂಡಿದ್ದೇನೆ.

ಅನುಷಂಗಿಕ ಆಕಾರಗಳು- ಪತ್ರಿಕೆಯ ಸಹಾಯ ತೆಗೆದುಕೊಂಡಿದ್ದೇನೆ. ಅವುಗಳೆಂದರೆ ಬೆಳೆವಸಿರಿ, ಜ್ಞಾನದಿಪ್ತಿ, ದಾಸೋಹ ಜ್ಞಾನಿರತ್ನ, ಶರಣಚೇತನ, ವಿಜಯವಾಣಿ, ಸಂಯುಕ್ತಕರ್ನಾಟಕ, ಪ್ರಜಾವಾಣಿ, ಮುಂತಾದ ಪತ್ರಿಕೆ ಪತ್ರಿಕೆಯಲ್ಲಿನ ಲೇಖನಗಳನ್ನು ನನ್ನಅಧ್ಯಯನದ ವಿಧಾನವಾಗಿ ಬಳಸಿಕೊಂಡಿದ್ದೇನೆ. ಈ ರೀತಿಯಾಗಿ ನನ್ನ ಸಂಶೋಧನಾ ಮಹಾಪ್ರಬಂಧದ ವೈಧಾನಿಕತೆಯಾಗಿದೆ.

**ಈವರೆಗೆ ನಡೆದ ಅಧ್ಯಯನದ ಸಮೀಕ್ಷೆ:**

ಆಧುನಿಕ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇಲ್ಲಿಯವರೆಗೆ ಸಾಕಷ್ಟು ಅಧ್ಯಯನಗಳು ನಡೆದಿದ್ದು ನಾವು ಅವುಗಳನ್ನು ಗಮನಿಸಬಹುದಾಗಿದೆ ಅವುಗಳಲ್ಲಿ ಲೇಖನಗಳು, ಕೃತಿಗಳು, ಪಿಎಚ್.ಡಿ.ಮಹಾಪ್ರಬಂಧಗಳು, ಎಂ.ಫಿಲ್. ಪ್ರಬಂಧಗಳು ಹೊರಬಂದಿರುವದನ್ನು ನಾವು ಕಾಣಬಹುದಾಗಿದೆ.

ಅವುಗಳಲ್ಲಿ ಪ್ರಮುಖವಾಗಿರುವುದೆಂದರೆ

* ಶ್ರೀ ಜ.ಚ.ನಿ ವಚನ ಸಾಹಿತ್ಯ ಒಂದು ಅಧ್ಯಯನ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ೧೯೯೦ ಸಾದರ ಪಡಿಸಿದ ಪಿಹೆಚ್.ಡಿ ಮಹಾಪ್ರಂಬಂಧದಿಂದ ಡಾಕ್ಟರೇಟ್ ಪದವಿ ಪಡೆದಿದ್ದಾರೆ. ಆಧುನಿಕ ವಚನಕಾರರಲ್ಲಿ ಒಬ್ಬರಾಗಿದ್ದಾರೆ ಜ.ಚ.ನಿ ಯವರ ಬಗ್ಗೆ ಡಾ॥ ಸಂಗಮೇಶ ಹಂಡಗಿಯವರು ಬರೆದ ಈ ಮಹಾ ಪ್ರಬಂಧದಲ್ಲಿ ವಚನ ಸಾಹಿತ್ಯ ಸಮೀಕ್ಷೆ ಮತ್ತು ಲಕ್ಷಣ ವಸ್ತು ವಿಷಯಗಳನ್ನು ಇಲ್ಲಿ ಗಮನಿಸಬಹುದಾಗಿದೆ ಹಾಗೇಯೆ ಶಿವಶರಣರ ವಚನ ಸಾಹಿತ್ಯವನ್ನು ಇಂದಿನ ಆಧುನಿಕ ವಚನಗಳ ದೃಷ್ಟಿಕೋನವನ್ನು ಪರಿಚಯಿಸಿದ್ದಾರೆ ಈ ಕಾಲದ ವಚನಕಾರರು ಸಹ ಶಿವಶರಣರಂತೆ ವಚನಗಳನ್ನು ರಚಿಸಲು ಸಮರ್ಥರಾಗಿದ್ದಾರೆ ಎಂಬ ವಿಷಯವನ್ನು ಇಲ್ಲಿ ಮನವರಿಕೆ ಮಾಡಿದ್ದಾರೆ. ಇಪ್ಪತ್ತನೇ ಶತಮಾನದ ವಚನ ಸಾಹಿತ್ಯ ಒಂದು ಅಧ್ಯಯನ ಇದು ಪ್ರೀತಿ ಶುಭಶ್ಚಂದ್ರ ಇವರು ೧೯೭೫ ರಲ್ಲಿ ಈ ಪುಸ್ತಕವನ್ನು

ಪ್ರಕಟಿಸಿದ್ದಾರೆ ಆಧುನಿಕ ವಚನ ಸಾಹಿತ್ಯ ಎಂದರೇನು ? ಮತ್ತು ಆಧುನಿಕ ವಚನಕಾರರು ಶಿವಶರಣರಂತೆಯೇ ವಚನಗಳ ಮೂಲಕ ಸಮಾಜಕ್ಕೆ ಒಂದು ಒಳ್ಳೇಯ ಸಂದೇಶವನ್ನು ನೀಡುವ ಉದ್ದೇಶವನ್ನು ಹೊಂದಿದ್ದಾರೆ ಎಂಬುದನ್ನು ತಿಳಿಸಿದ್ದಾರೆ. ಡಾ॥ ರಾಮಚಂದ್ರ ಗಣಾಪುರೆ ಗುಲ್ಬರ್ಗಾ ಜಿಲ್ಲೆಯ ಆಧುನಿಕ ವಚನ ಸಾಹಿತ್ಯ ಈ ವಿಷಯದ ಮೇಲೆ ಎಂ.ಫಿಲ್ ಪದವಿಯನ್ನು ಪಡೆದಿದ್ದಾರೆ. ಇಲ್ಲಿ ಗುಲ್ಬರ್ಗಾ ಜಿಲ್ಲೆಯಲ್ಲಿ ಬರುವ ಆಧುನಿಕ ವಚನಕಾರರನ್ನು ಕನ್ನಡ ಸಾಹಿತ್ಯಕ್ಕೆ ಪರಿಚಯಿಸುವ ಉದ್ದೇಶವು ಇವರಲ್ಲಿ ಇರುವದನ್ನು ನಾವು ಕಾಣಬಹುದಾಗಿದೆ. ಹಾಗೇಯೇ ಇದು ಪುಸ್ತಕದ ರೂಪದಲ್ಲಿ ಪ್ರಕಟವಾಗಿದ್ದು ಸಂಶೋಧನೆ ಮಾಡುವವರಿಗೆ ದಾರಿದೀಪವಾಗಿ ಇದೆ. ಹನುಮಂತ ಮೇಲಕೇರಿ ಇವರು ಹೈದರಾಬಾದ ಕರ್ನಾಟಕದ ಆಧುನಿಕ ವಚನಕಾರರು ಎಂಬ ವಿಷಯದ ಮೇಲೆ ಡಾಕ್ಟರೇಟ್ ಪದವಿಯನ್ನು ಗುಲ್ಬರ್ಗಾ ವಿಶ್ವವಿದ್ಯಾಲಯದಿಂದ ಪಡೆದುಕೊಂಡಿದ್ದಾರೆ ಈ ಮಹಾಪ್ರಬಂಧದ ಮೂಲಕ ಮೇಲಕೇರಿಯವರು ಹೈದರಾಬಾದ ಕರ್ನಾಟಕದಲ್ಲಿ ಬರುವ ವಚನಕಾರರನ್ನು ಪರಿಚಯಿಸುವದರ ಜೊತೆಗೆ ಅವರ ಸಾಹಿತ್ಯಕ್ಕೆ ನೀಡಿದ ಕೊಡುಗೆಯನ್ನು ತಿಳಿಸುವ ಪ್ರಯತ್ನವನ್ನು ಮಾಡಿದ್ದಾರೆ ಇದು ಸಹ ಮುಂದೆ ಬರುವ ಸಂಶೋಧಕರಿಗೆ ದಾರಿದೀಪವಾಗಲಿದೆ. ಹೀಗೆ ಆಧುನಿಕ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಈಗಾಗಲೇ ಅನೇಕ ಅಧ್ಯಾಯನಗಳು ನಡೆದಿರುವುದು ಗಮನಿಸಬಹುದಾಗಿದೆ ಈ ವಿಷಯವನ್ನು ಬೇರೆ ಬೇರೆ ನೆಲೆಗಳಲ್ಲಿ ಅಧ್ಯಯನವನ್ನು ನಡೆದಿರುವುದು ತಿಳಿಯ ಬಹುದಾಗಿದೆ ಈ ಎಲ್ಲಾ ಅಧ್ಯಾಯನಗಳಲ್ಲಿ ಆಧುನಿಕ ವಚನಕಾರರ ವಚನಗಳು ಶಿವಶರಣರ ವಚನಗಳಿಗೆ ಹೋಲಿಕೆಯಾಗುವ ರೀತಿಯಲ್ಲಿ ರಚಿಸುವ ಪ್ರಯತ್ನವನ್ನು ಮಾಡಲಾಗುತ್ತಿದೆ ಎಂದು ಹೇಳಬಹುದು ಆಧುನಿಕ ವಚನ ಸಾಹಿತ್ಯದ ನೆಲೆ (ಬೀದರ ಮತ್ತು ಗುಲ್ಬರ್ಗಾ ಜಿಲ್ಲೆಯನ್ನು ಅನುಲಕ್ಷಿಸಿ) ಕುರಿತಂತೆ ಪೂರ್ಣಪ್ರಮಾನದ ಅಧ್ಯಾಯನಗಳು ನಡೆದಿಲ್ಲ ಈ ನಿಟ್ಟಿನಲ್ಲಿ ಆಧುನಿಕ ವಚನ ಸಾಹಿತ್ಯ ನೆಲೆ ಎಂಬ ಈ ನನ್ನ ಅಧ್ಯಾಯನ ಒಂದು ಚಿಕ್ಕ ಪ್ರಯತ್ನ ಎಂದು ಹೇಳಬಹುದಾಗಿದೆ.

**ಸ್ವರೂಪ**

೧ನೇಯ ಅಧ್ಯಾಯನದಲ್ಲಿ ಅಧ್ಯಾಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವೈಧಾನಿಕತೆಯನ್ನು ಮೊದಲನೆಯ ಅಧ್ಯಾಯನದಲ್ಲಿ ತಿಳಿಸಿರುತ್ತೇನೆ.

೨ನೇ ಅಧ್ಯಾಯನದಲ್ಲಿ ಈ ಎರಡೂ ಜಿಲ್ಲೆಗಳ ಆಧುನಿಕ ವಚನಕಾರರ ಸಾಹಿತ್ಯದ ನೆಲೆಗಳ ಅಧ್ಯಾಯನಕ್ಕೆ ಪೂರಕವಾದ ಹಿನ್ನೆಲೆಯನ್ನು ಎರಡನೆಯ ಅಧ್ಯಾಯನಲ್ಲಿ ರೂಪಿಸಿಕೊಳ್ಳಲಾಗಿದೆ. ಕರ್ನಾಟಕದ ಇತರ ಜಿಲ್ಲೆಗಳ ಹಿಂದಿನ ವಚನಕಾರರ ಕೊಡುಗೆ ಹಾಗೂ ಅವರ ವಚನಗಳ ಪ್ರಭಾವ ಪ್ರೇರಣೆ ಹಾಗೂ ಧೋರಣೆಗಳನ್ನು ಆಧುನಿಕ ವಚನಗಳಲ್ಲಿ ಪ್ರಧಾನವಾಗಿರುವ ನವೋದಯದ ಆಶಯಗಳನ್ನು ಇಲ್ಲಿ ಚರ್ಚಿಸಲಾಗಿದೆ. ಹಾಗೆಯೇ ನಂತರದಲ್ಲಿ ಪ್ರಾತಿನಿಧಿಕ ವಚನ ಸಂಕಲನಗಳನ್ನು ಆಯಾ ಲೇಖಕರ ಪರಿಚಯದೊಂದಿಗೆ ವಿವೇಚಿಸಲಾಗಿದೆ. ಕರ್ನಾಟಕದ ಪ್ರಮುಖ ಆಧುನಿಕ ವಚನಕಾರರನ್ನು ಸಂಕ್ಷಿಪ್ತವಾಗಿ ಪರಿಚಯಿಸಿ, ಆಧುನಿಕ ವಚನಕಾರರ ಪರಂಪರೆಯನ್ನು ಪೂರ್ವಭಾವಿಯಾಗಿ ಕಂಡುಕೊಳ್ಳಲಾಗಿದೆ.

೩ನೇಯ ಅಧ್ಯಾಯದಲ್ಲಿ ಬೀದರ ಜಿಲ್ಲೆಯ ಪ್ರಾತಿನಿಧಿಕ ಆಧುನಿಕ ವಚನಕಾರರು' ಹಾಗೂ ಅವರ ವಚನ ಕೃತಿಗಳನ್ನು, ಅವು ಪ್ರಕಟಗೊಂಡಿರುವ ಕಾಲದ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ. ಈ ಜಿಲ್ಲೆಯಲ್ಲಿ ಇಂದು ಗಣನೀಯ ಪ್ರಮಾಣದಲ್ಲಿ ವಚನಗಳನ್ನು ರಚಿಸಿ, ಹಿಂದಿನ ವಚನ ಸಾಹಿತ್ಯರೂಪಕ್ಕೆ ಇವರು ನೀಡಿರುವ ಆಧುನಿಕ ಅನುಭವ ಹಾಗೂ ನಿರೂಪಣೆಯ ಕ್ರಮವನ್ನು ಕುರಿತು ವಿವೇಚಿಸಲು ಪ್ರಯತ್ನಿಸಲಾಗಿದೆ. ಈ ಜಿಲ್ಲೆಯಲ್ಲಿ ಈಗಾಗಲೇ ತಮ್ಮ ವಚನ ಸಂಕಲನಗಳನ್ನು ಬೆಳಕಿಗೆ ತಂದವರನ್ನು ಅವರು ಕೃತಿ ಪ್ರಕಟಿಸಿದ ಕಾಲದ ಆಧಾರದ ಮೇಲೆ ಅನುಕ್ರಮವಾಗಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದ್ದು, ಅವರ ಸಾಂಸ್ಕೃತಿಕ ವಚನ ಪರಂಪರೆಯನ್ನು ಇಲ್ಲಿ ಗುರುತಿಸಲು ಯತ್ನಿಸಲಾಗಿದೆ.

೪ನೇ ಅಧ್ಯಾಯದಲ್ಲಿ ಕಲಬುರ್ಗಿ ಜಿಲ್ಲೆಯ ಪ್ರಾತಿನಿಧಿಕ ಆಧುನಿಕ ವಚನಕಾರರು' ಹಾಗೂ ಅವರ ವಚನ ಕೃತಿಗಳನ್ನು, ಅವು ಪ್ರಕಟಗೊಂಡಿರುವ ಕಾಲದ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ. ಈ ಜಿಲ್ಲೆಯಲ್ಲಿ ಇಂದು ಗಣನೀಯ ಪ್ರಮಾಣದಲ್ಲಿ ವಚನಗಳನ್ನು ರಚಿಸಿ, ಹಿಂದಿನ ವಚನ ಸಾಹಿತ್ಯರೂಪಕ್ಕೆ ಇವರು ನೀಡಿರುವ ಆಧುನಿಕ ಅನುಭವ ಹಾಗೂ ನಿರೂಪಣೆಯ ಕ್ರಮವನ್ನು ಕುರಿತು ವಿವೇಚಿಸಲು ಪ್ರಯತ್ನಿಸಲಾಗಿದೆ. ಈ ಜಿಲ್ಲೆಯಲ್ಲಿ ಈಗಾಗಲೇ ತಮ್ಮ ವಚನ ಸಂಕಲನಗಳನ್ನು ಬೆಳಕಿಗೆ ತಂದವರನ್ನು ಅವರು ಕೃತಿ ಪ್ರಕಟಿಸಿದ ಕಾಲದ ಆಧಾರದ ಮೇಲೆ ಅನುಕ್ರಮವಾಗಿ ಅಧ್ಯಾಯನಕ್ಕೆ ಒಳಪಡಿಸಿಕೊಳ್ಳಲಾಗಿದ್ದು, ಅವರ ಸಾಂಸ್ಕೃತಿಕ ವಚನ ಪರಂಪರೆಯನ್ನು ಇಲ್ಲಿ ಗುರುತಿಸಲು ಯತ್ನಿಸಲಾಗಿದೆ.

ಆಧುನಿಕ ವಚನಕಾರರು ಆಯ್ಕೆ ಮಾಡಿಕೊಂಡ ಮಾಧ್ಯಮ 'ವಚನ ಸಾಹಿತ್ಯ' ಮಾರ್ಗವಾಗಿದ್ದರೂ, ೧೨ನೇಯ ಶತಮಾನದ ವಚನಕಾರರಿಗಿಂತ ಭಿನ್ನ ನೆಲೆಯಲ್ಲಿ ಇವರ ಆಲೋಚನೆಗಳಿವೆ. ಅಭಿವ್ಯಕ್ತಿ ಹಾಗೂ ಆಶಯಗಳೂ ಭಿನ್ನವಾಗಿವೆ. ಅಂದು ವಚನ ರಚನೆ ಹಾಗೂ ಅಭಿವ್ಯಕ್ತಿ ರೀತಿ-ನೀತಿ ಕರ್ನಾಟಕದ ಇತಿಹಾಸದಲ್ಲಿ ಒಂದು ಕ್ರಾಂತಿಯನ್ನು ನಿರ್ಮಿಸಿತು. ಅದಕ್ಕೆ ಕಾರಣ ಅವರು ಬಯಸಿದ್ದ ಬದಲಾವಣೆಯು ಧಾರ್ಮಿಕ, ಸಾಮಾಜಿಕ, ಭಾಷಿಕ ಹಾಗೂ ಆರ್ಥಿಕ ರಂಗದಲ್ಲೆಲ್ಲ ವ್ಯಾಪಿಸಿತ್ತು. ಆದರೆ ಇಂದಿನ ವಚನಕಾರರಿಗೆ ಅಂಥ ಸ್ಪಷ್ಟ ಉದ್ದೇಶ ಕಾಣುವುದಿಲ್ಲ. ಆದರೂ 'ಜೀವನದ ಆದರ್ಶ'ಕ್ಕೆ ಅನೇಕ ವಚನಕಾರರ ನಿರೂಪಣೆಗಳು ಬದ್ಧವಾಗಿವೆ ಎನಿಸುತ್ತದೆ. ಇಂದಿನ ರಾಜಕೀಯ ಹಾಗೂ ಆಧುನಿಕ ಜೀವನ ಪದ್ಧತಿಯ ವಿವೇಚನೆ ಹೆಚ್ಚಿನ ವಚನಗಳಲ್ಲಿ ಅಭಿವ್ಯಕ್ತಗೊಂಡಿದೆ. ಹೀಗಾಗಿ ಇಂದಿನ ವಚನಕಾರರ ರಚನಾ ವಿನ್ಯಾಸ, ನಡೆ-ನುಡಿಯಲ್ಲಿರುವ ಅಸಮಾನತೆಗಳು, ಸಂಬಂಧಗಳು ಅನಿವಾರ್ಯತೆಗಳು ಇಂದು ಭಿನ್ನವಾಗಿವೆ. ಇಂದಿನ ಪರಿಸರದ ಹಿನ್ನೆಲೆಯಲ್ಲಿ ಅವರ ರಚನೆಗಳನ್ನು ಅಧ್ಯಯನ ಮಾಡುವುದು ಹಾಗೂ ಅವುಗಳಲ್ಲಿರುವ ಭಿನ್ನತೆ ಗುರುತಿಸುವುದು ಮುಖ್ಯವಾಗಿದೆ.

೫ನೇ ಅಧ್ಯಾಯದಲ್ಲಿ ಆಧುನಿಕ ವಚನ ಸಾಹಿತ್ಯದ ನೆಲೆಗಳನ್ನು ಕುರಿತು ವಿವರವಾಗಿ ಅಧ್ಯಯನ ಮಾಡುವುದಾಗಿದೆ, ಇಲ್ಲಿ ಈ ವಚನ ಸಾಹಿತ್ಯೋದಯದ ನೆಲೆ-ಬೆಲೆಗಳನ್ನು ಗುರುತಿಸುವುದರೊಂದಿಗೆ, ಇಲ್ಲಿ ವ್ಯಕ್ತಿನೆಲೆ, ಕುಟುಂಬ ನೆಲೆ, ಸಾಮಾಜಿಕ ನೆಲೆ, ಆರ್ಥಿಕ ನೆಲೆ, ರಾಜಕೀಯ ನೆಲೆ ಹಾಗೂ ಸಾಂಸ್ಕೃತಿಕ ನೆಲೆ ಮತ್ತು ಭಾಷಿಕ ನೆಲೆಯ ಹಿನ್ನೆಲೆಯಲ್ಲಿ ಅವುಗಳನ್ನು ಅಧ್ಯಾಯನ ಮಾಡಲು ಪ್ರಯತ್ನಿಸಲಾಗಿದೆ.
ಬೀದರ ಹಾಗೂ ಕಲಬುರ್ಗಿ ಜಿಲ್ಲೆಯ ಆಧುನಿಕ ವಚನಕಾರರ ವಚನ ಸಾಹಿತ್ಯದ ಆಶಯ ಹಾಗೂ ಅಭಿವ್ಯಕ್ತಿಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಆಧುನಿಕ ಸಾಹಿತ್ಯದ ರೂಪ ಹೊಸ ಹೊಸ ಸಾಧ್ಯತೆಗಳನ್ನು ರೂಢಿಸಿಕೊಂಡು ಪ್ರಯೋಗಗೊಳ್ಳುತ್ತಿರುವುದು ಅದರ ಜೀವಂತಿಕೆಯ ಲಕ್ಷಣ. ವಚನಕಾರರು

ತಾವು ಅರಿತು ಆಚರಿಸಿದ ದಾರಿಯನ್ನು ತತ್ವ ಸಿದ್ಧಾಂತಗಳನ್ನು ಜನಸಾಮಾನ್ಯರಲ್ಲಿ ಬಿತ್ತಲು ಪ್ರಯತ್ನಿಸಿದ ಪರಿಯನ್ನು ಗಮನಿಸಲಾಗಿದೆ.

೬ನೇಯ ಅಧ್ಯಾಯದಲ್ಲಿ ಆಧುನಿಕ ವಚನಗಳ ವಸ್ತು, ಭಾಷೆ, ಶೈಲಿ ಮತ್ತು ತಂತ್ರಗಳನ್ನು ಕುರಿತು ನೋಡಲಾಗಿದೆ. ಇಲ್ಲಿ ಪುರುಷ ಹಾಗೂ ಮಹಿಳಾ ವಚನಕಾರ್ತಿಯರ ವಿಚಾರಗಳು ಹೇಗೆ ಕಲಾತ್ಮಕವಾಗಿ ಚಿತ್ರಣಗೊಂಡಿವೆ ಎಂಬುದನ್ನು ವಿವೇಚಿಸುವುದರೊಂದಿಗೆ, ಆಧುನಿಕ ವಚನ ಸಾಹಿತ್ಯ ಈ ಜಿಲ್ಲೆಗಳ ಕನ್ನಡ ವಾಙ್ಮಯಕ್ಕೆ ಒಂದು ಸಾಹಿತ್ಯ ಪ್ರಕಾರವಾಗಿ ಸಮೃದ್ಧವಾಗಿ ಹೇಗೆ ಬೆಳೆದು ನಿಂತಿದೆ? ಎಂಬುದನ್ನು ಗುರುತಿಸಲಾಗಿದೆ.

ಆಧುನಿಕ ಜೀವನ ಪದ್ಧತಿಯ ಮಾರ್ಗದಲ್ಲಿ, ಅಧಿಕಾರ, ಅಂತಸ್ತು, ಕೀರ್ತಿಗಾಗಿ ಬಡಿದಾಡುವ ಸಂದರ್ಭದಲ್ಲಿ, ಈ ಯುಗದ ಜನರ ಮನೋಭಾವಗಳನ್ನು ಪ್ರಾಮಾಣಿಕವಾಗಿ ತೆರೆದಿಡಲು ಇಂದಿನ ವಚನಕಾರರು ಯಾವ ನೆಲೆಯಲ್ಲಿ ಕನ್ನಡ ಭಾಷೆಯನ್ನು ಉಪಯೋಗಿಸಿಕೊಂಡಿದ್ದಾರೆ ಎಂಬುದನ್ನು ಅರಿಯುವುದೂ ಮುಖ್ಯವಾಗಿದೆ. ಅದಕ್ಕಾಗಿ ಇಲ್ಲಿಯ ವಚನ ವಿನ್ಯಾಸದ ವಿವಿಧತೆಯನ್ನು, ಶೈಲಿಯನ್ನು ಕುರಿತು ಚಿಂತಿಸಲು ಪ್ರಯತ್ನಿಸಲಾಗಿದೆ.

೭ನೇ ಅಧ್ಯಾಯದಲ್ಲಿ ಸಮಾರೋಪವಿದೆ. ಇದರಲ್ಲಿ ಒಟ್ಟು ಅಧ್ಯಾಯನವನ್ನು ಸಂಕ್ಷಿಪ್ತವಾಗಿ ಹಿಡಿದಿಡಲು ಪ್ರಯತ್ನಿಸಿರುವುದರೊಂದಿಗೆ ಅಧ್ಯಾಯನದ ಫಲಿತಗಳನ್ನು ಕಂಡಿರಿಸಲಾಗಿದೆ. ಈ ಎರಡೂ ಜಿಲ್ಲೆಯ ಆಧುನಿಕ ವಚನಕಾರರ ಹೊಸ ಹೊಸ ವಿಚಾರಗಳನ್ನು ಶೋಧಿಸಿ ಇರಿಸುವ ಪ್ರಯತ್ನ ಮಾಡಲಾಗಿದೆ.

ಬೀದರ ಹಾಗೂ ಕಲಬುರ್ಗಿ ಜಿಲ್ಲೆಗಳು ಪ್ರಾಚೀನ ಕಾಲದಿಂದಲೂ ಕನ್ನಡ ನಾಡು ಹಾಗೂ ನುಡಿಗೆ ಸ್ಮರಣೀಯವಾದ ಕೊಡುಗೆ ನೀಡಿವೆ. ಹಳೇಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡ ದೃಷ್ಟಿಯಿಂದ ಈ ಜಿಲ್ಲೆಗಳು ಮಹಾನ್ ಸಾಧನೆಗೈದಿವೆ. ಅಂತೆಯೇ ಆಧುನಿಕ ವಚನ ಸಾಹಿತ್ಯಕ್ಕೂ ಅವು ನೀಡಿರುವ ಕೊಡುಗೆ ಅಪಾರವಾದುದು ಎಂಬುದನ್ನು ನಾವಿಲ್ಲಿ ಒಟ್ಟಿನಲ್ಲಿ ಅರಿಯಬಹುದಾಗಿದೆ. ಒಟ್ಟಿನಲ್ಲಿ ಪ್ರಸ್ತುತ ಅಧ್ಯಾಯನದಲ್ಲಿ ಇಂದಿನ ಯುಗದ ಆಶಯ–ಪ್ರೇರಣೆ–ಧೋರಣೆಗಳನ್ನು ತಿಳಿಯುವುದರೊಂದಿಗೆ, ಆಧುನಿಕ ವಚನಸಾಹಿತ್ಯದ ನೆಲೆಗಳನ್ನು ಗುರುತಿಸುತ್ತ, ಆ ವಚನಕಾರರು ನಾಡಿಗೆ, ಸಾಹಿತ್ಯಕ್ಕೆ ನೀಡಿರುವ ಒಟ್ಟು ಕೊಡುಗೆಗಳನ್ನು ಗುರುತಿಸುವ ವಿಮರ್ಶಾತ್ಮಕ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಟಿಪ್ಪಣಿಗಳು

೧) ಡಾ. ಪ್ರೀತಿ ಶುಭಚ್ಚಂದ್ರ – ಇಪ್ಪತ್ತನೆಯ ಶತಮಾನದ ವಚನ ಸಾಹಿತ್ಯ – ಪು. ೧.

೨) ಎಲ್ಲೆಗೌಡ ಬೇಸಗರಹಳ್ಳಿ – ಆಧುನಿಕ ವಚನಕಾರರು – ಪು. ೫

೩) ಸಂ. ಹಂಶ ಕವಿ – ಆಧುನಿಕ ವಚನ ಮಂಜರಿ – ಬೀದರ – ಪು. ೧

೪) ರಹಮತ್ ತರೀಕೆರೆ – ಕನ್ನಡ ಸಂಶೋಧನೆ ತಾತ್ವಿಕ ವಿಚಾರ – ಪು. ೨೮

## ಅಧ್ಯಾಯ – ೨

## ಬೀದರ – ಕಲಬುರ್ಗಿ ಜಿಲ್ಲೆ ಹಾಗೂ ಆಧುನಿಕ ವಚನಕಾರರ ಪರಂಪರೆ

ಕರ್ನಾಟಕದ ಉತ್ತರದ ತುದಿಯಲ್ಲಿರುವ ಬೀದರ–ಕಲಬುರ್ಗಿ ಜಿಲ್ಲೆಗಳು ಕಲ್ಯಾಣ ಕರ್ನಾಟಕದ ಐತಿಹಾಸಿಕ ತಾಣಗಳು. ಇಲ್ಲಿಯ ಭಾಷೆ, ನೆಲ, ಜಲ, ಧರ್ಮ, ಸಾಮಾಜಿಕ ಪರಿಸರ, ಸಂಪ್ರದಾಯ ಹಾಗೂ ಸಂಸ್ಕೃತಿ ಎಲ್ಲವೂ ವೈವಿಧ್ಯಮಯ. ಈ ಎಲ್ಲ ಕಾರಣಗಳಿಂದ ಕರ್ನಾಟಕದ ಉಳಿದ ಜಿಲ್ಲೆಗಳಿಗಿಂತ ಇವು ಭಿನ್ನವಾಗಿ ನಿಲ್ಲುತ್ತವೆ. "ಇತಿಹಾಸ ಕಾಲದಿಂದ ಈ ಮಣ್ಣಿನಲ್ಲಿ ವೈಶಿಷ್ಟ್ಯಮಯ ಸಾಂಸ್ಕೃತಿಕ ಬದುಕು ರೂಪಗೊಂಡು ಬೆಳೆದು ಬಂದಿರುವುದು ಸುಸ್ಪಷ್ಟ. ಹಿಂದೀ, ಮರಾಠಿ, ಉರ್ದು, ಇಂಗ್ಲೀಷ, ತೆಲುಗು ಮೊದಲಾದ ಭಾಷೆಗಳ ಪ್ರಭಾವಕ್ಕೊಳಗಾಗಿರುವ ಕನ್ನಡವು ದಿನ ಬಳಕೆಯ ಭಾಷೆ. ಹಲವು ಮತ ಧರ್ಮಗಳ ಸಂಗಮದ ಸ್ಥಾನವಾಗಿ, ಪರಧರ್ಮ ಸಹಿಷ್ಣತೆಗೆ ಹೆಸರುವಾಸಿಯಾಗಿರುವ ಇಲ್ಲಿ ವೈವಿಧ್ಯಮಯ ಸಾಂಸ್ಕೃತಿಕ ಬದುಕನ್ನು ಕಾಣಬಹುದು.

ಶತ ಶತಮಾನಗಳ ಐತಿಹ್ಯ ಹಾಗೂ ಇತಿಹಾಸ ಹೊಂದಿರುವ ಈ ಜಿಲ್ಲೆಗಳು "ಶಿವಭಕ್ತರಿದ್ದ ನಾಡು, ಅಲ್ಲಾನ ನಮಾಜ ಮಾಡುವವರ ಬೀಡು, ಬುದ್ಧ, ಬಸವ, ಯೇಸುಕ್ರಿಸ್ತ, ಗುರುನಾನಕ, ಬೊಮ್ಮಗೊಂಡೇಶ್ವರ, ಶರಣಬಸಪ್ಪ, ಖಾಜಾಬಂದೇನವಾಜ, ತಿಂತಿಣಿ ಮೌನೇಶ್ವರ, ಕೊಡೇಕಲ್ಲ ಬಸವಣ್ಣ, ಮಾಣಿಕಪ್ರಭು, ಮಾಣಿಕೇಶ್ವರಿ, ಅಂಬೇಡ್ಕರ, ಡಿಗ್ಗಿ ಸಂಗಮನಾಥ ಮೊದಲಾದ ಮಹಾವ್ಯಕ್ತಿಗಳ ತತ್ವಸಿದ್ಧಾಂತಗಳನ್ನು ಪಾಲಿಸುತ್ತಿರುವವರ ಪ್ರದೇಶ. ಕಲ್ಯಾಣದ ಪ್ರಣತೆಗೆ ಭಕ್ತಿ ತೈಲವನೆರೆದು, ಆಚಾರದ ಬತ್ತಿಗೆ ವಿಚಾರದ ಜ್ಯೋತಿ ಮುಟ್ಟಿಸಿ! ಜ್ಞಾನ ಪ್ರಕಾಶವನ್ನು ಎಲ್ಲೆಡೆ ಬೆಳಗಿಸಿರುವ ಶರಣ–ಸಂತರ ನಾಡು. ಉಜ್ವಲ ಧಾರ್ಮಿಕ ಪರಂಪರೆ ಹಾಗೂ ಸಮಾನತೆಯ ಸಮಾಜ ನಿರ್ಮಾಣಕ್ಕೆ ಅಡಿಪಾಯ ಹಾಕಿರುವ ಜಿಲ್ಲೆಗಳಿವೆ."[೧]

ಈ ಜಿಲ್ಲೆಗಳಿಗೆ ಕ್ರಿ.ಶ. ೩ನೇಯ ಶತಮಾನದ ಐತಿಹಾಸಿಕ ಹಿನ್ನೆಲೆಯಿದ್ದು, ಸಾಮ್ರಾಟ ಮೌರ್ಯರಿಂದ ಹಿಡಿದು, ಶಾತವಾಹನ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರು, ಕಳಚೂರಿಯರು, ಕಾಕತೀಯರು, ಖಿಲ್ಜಿ, ಮೊಘಲ, ಬಹಮನಿ ಹಾಗೂ ಹೈದ್ರಾಬಾದ ನಿಜಾಂರ ಆಳ್ವಿಕೆಗೆ ಒಳಪಟ್ಟ ಐತಿಹಾಸಿಕ ಹಿರಿಮೆಯಿದೆ. ಸಮಶೀತೋಷ್ಣತೆಯಿಂದ ಕೂಡಿರುವ ಈ ಜಿಲ್ಲೆಗಳ ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಸಂಸ್ಕೃತಿಯು ವೈಶಿಷ್ಟ್ಯಪೂರ್ಣವಾಗಿದ್ದು ಬಹುರೂಪಿ ನೆಲೆಗಳ ಸಾಹಿತ್ಯಿಕ ವಾತಾವರಣ ಇಲ್ಲಿದೆ.[೨]

**ಸಾಹಿತ್ಯ ಹಿನ್ನೆಲೆ**

ಕನ್ನಡದ ಅತ್ಯಂತ ಪ್ರಾಚೀನ ಉಪಲಬ್ಧ ಗ್ರಂಥ ಕವಿರಾಜಮಾರ್ಗ ಹುಟ್ಟಿದ್ದು ಇದೇ ನಾಡಾದ ಕಲಬುರ್ಗಿ ಜಿಲ್ಲೆಯ ಮಳಖೇಡದಲ್ಲಿ. ಕನ್ನಡ ಕಾವ್ಯ ಮೀಮಾಂಸೆಯ ಬೆಳವಣಿಗೆಯಲ್ಲಿ ಕವಿರಾಜಮಾರ್ಗಕ್ಕೆ ನಾನಾ ಕಾರಣಗಳಿಂದ ಅತ್ಯಂತ ಮಹತ್ವದ ಸ್ಥಾನವಿದೆ. "ಇದು ಕಾವ್ಯಶಾಸ್ತ್ರವನ್ನು ನಿರೂಪಿಸುವ ಸ್ವತಂತ್ರ ದೃಷ್ಟಿಯ ಲಕ್ಷಣಗ್ರಂಥ. ತನ್ನ ಕಾಲದವರೆಗಿನ ಕನ್ನಡ ಕಾವ್ಯಮಾರ್ಗ ಕ್ರಮಣಪದ್ಧತಿಯ ತಪ್ಪು ಒಪ್ಪುಗಳನ್ನು ಗುರುತಿಸಿ ತಿಳಿಸುವುದರ ಜೊತೆಗೆ ಕವೀಶ್ವರ ಎನಿಸಿಕೊಳ್ಳಬೇಕೆಂಬ ಕವಿಗಳಿಗೆ ಒಂದು ರಾಜಮಾರ್ಗವನ್ನು ಕಲ್ಪಿಸಿಕೊಡುವ ಘನವಾದ ಉದ್ದೇಶದಿಂದ ರಚಿತವಾದ್ದು" ಈ ಕವಿರಾಜಮಾರ್ಗ. ಇದು ರಾಷ್ಟ್ರಕೂಟ ಚಕ್ರವರ್ತಿ ಅಮೋಘ ವರ್ಷ ನೃಪತುಂಗನ ಮತದಂತೆ ರಚಿತವಾಗಿದೆ.[೩] ಕನ್ನಡ ನಾಡು, ಅದರ ಮೇರೆಗಳು, ಕನ್ನಡಿಗರ ಗುಣಸ್ವಭಾವ, ಅಲಂಕಾರಗಳನ್ನು ತಿಳಿಸುವ ಈ ಕೃತಿಯು ಈ ಪ್ರದೇಶದ ಸಾಂಸ್ಕೃತಿಕ ಮಾರ್ಗಕ್ಕೆ ಕನ್ನಡಿ ಹಿಡಿಯುತ್ತದೆ.

ಅಂತೆಯೇ "ಜಗತ್ತಿನ ಇತಿಹಾಸದಲ್ಲಿ ಸುಪ್ರಸಿದ್ಧ ರಾಜಧಾನಿ ನಗರಗಳಾದ ಅಥೆನ್ಸ್, ರೋಮ್, ಕನಸ್ಟಾಂಟಿನೋಪಲ್, ಬಗ್ದಾದ್, ಲಂಡನ್, ಟೋಕಿಯೋ, ಲಿಯೋಥ್ಯೆ, ಧಾರಾನಗರ, ಉಜ್ಜಯಿನಿ ಮುಂತಾದವುಗಳಷ್ಟೇ ಚಾರಿತ್ರಿಕ-ಸಾಂಸ್ಕೃತಿಕ ಪ್ರಸಿದ್ಧ ನಗರ ಬಸವಕಲ್ಯಾಣ"[೩] ಇದು ಬೀದರ ಜಿಲ್ಲೆಯ ಪ್ರಸಿದ್ಧ ನಗರ. ೧೨ನೇಯ ಶತಮಾನದ ಕಲ್ಯಾಣ ಚಾಳುಕ್ಯರ ರಾಜಧಾನಿ. ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ (ಕ್ರಿ.ಶ. ೧೦೭೬-೧೧೨೬) ಚಾಲುಕ್ಯ ವಿಕ್ರಮವರ್ಷವನ್ನು ಆರಂಭಿಸಿತು. ಆತನ ಕಾಲದಲ್ಲಿ ಅನೇಕ ದೇಶಗಳ ಸಾಮಂತರು, ವಿದ್ವಾಂಸರು, ಕವಿಗಳು, ಧಾರ್ಮಿಕ ವ್ಯಕ್ತಿಗಳು, ಇನ್ನಿತರರು ದೂರ ದೂರದಿಂದ ಕಲ್ಯಾಣಕ್ಕೆ ಆಗಮಿಸಿದ್ದರು. ಅಂಥ ವಿದ್ವಾಂಸರಲ್ಲಿ 'ವಿಕ್ರಮಾಂಕ ದೇವ ಚರಿತ್ರ' ಎಂಬ ೧೮ ಸರ್ಗಗಳ ವಿಸ್ತಾರವಾದ ಕಾವ್ಯ ಬರೆದ ಕಾಶ್ಮೀರದ ಬಿಲ್ಹಣಿ, ವಿಕ್ರಮಾದಿತ್ಯನ ಆಸ್ಥಾನ ಪಂಡಿತನಾಗಿದ್ದ. ವಿಜ್ಞಾನೇಶ್ವರ ಮೊದಲಾದವರು ಇಲ್ಲಿ ಪ್ರಮುಖ ಕವಿಗಳಾಗಿ ಹೋಗಿದ್ದಾರೆ.

ನಂತರದ ಕಳುಚುರಿ ಬಿಜ್ಜಳನ ಆಳ್ವಿಕೆಯಲ್ಲಿ ಬಸವಾದಿ ಶರಣರ ಸಮಾಜೋ-ಧಾರ್ಮಿಕ ಕ್ರಾಂತಿ ಉಂಟಾಯಿತು. ಆ ಕ್ರಾಂತಿಯ ಫಲವಾಗಿ ಕನ್ನಡದಲ್ಲಿ **'ವಚನ ಸಾಹಿತ್ಯ'**ವೆಂಬ ವಿನೂತನ ಸಾಹಿತ್ಯವು ನಿರೂಪಿತವಾಯಿತು. ಹನ್ನೆರಡನೆಯ ಶತಮಾನದ ಈ ಜನಪರ ಸಾಹಿತ್ಯದ ನೇತಾರ ಕ್ರಾಂತಿಪುರುಷ ಬಸವಣ್ಣನವರು. ಅವರು ವಿವಿಧ ವರ್ಗದ, ವರ್ಣದವರನ್ನೆಲ್ಲ ಲಿಂಗಭೇದವಿಲ್ಲದೆ ಒಂದೆಡೆ ಸೇರಿಸಿ ಸರ್ವರಿಗೂ ಚರ್ಚಿಸಲು ಅವಕಾಶ ನೀಡಿ, ಅವರಿಂದ ವಚನಗಳನ್ನು ರಚಿಸುವ ಪ್ರೇರಕ ಶಕ್ತಿಯಾದರು. ಪ್ರತಿಯೊಬ್ಬ ಅಲ್ಲಿರುವ ಶರಣನು ಸತ್ಯ. ಶುದ್ಧ ಕಾಯಕದಲ್ಲಿ ನಿರತನಾಗಿ ದಾಸೋಹವನ್ನು ಸಾಧಿಸುವ ಮಾರ್ಗ ತೋರಿದನು. ಅನುಭವದ ನುಡಿಗಡಣಗಳ ಕೊಡು-ಕೊಳ್ಳುವಿಕೆಗಾಗಿ 'ಅನುಭವ ಮಂಟಪ'ವೆಂಬ ನೆಲೆಯೊಂದನ್ನು ನಿರ್ಮಿಸಿ, ಶೂನ್ಯ ಸಿಂಹಾಸನವನ್ನಲ್ಲಿ ಸಂಸ್ಥಾಪಿಸಿ, ಅಲ್ಲಮಪ್ರಭುವನ್ನು ಅದರ ಅಧ್ಯಕ್ಷರನ್ನಾಗಿಸಿ ವಚನಗಳ ಸೃಷ್ಟಿಗೆ ವೇದಿಕೆ ನಿರ್ಮಿಸಿದನು. ಅದರ ಪರಿಣಾಮವಾಗಿ ಕನ್ನಡದ ವಿನೂತನ ಸಾಹಿತ್ಯವೊಂದು ರಚನೆಗೊಂಡಿತು ಅದೇ ವಚನ ಸಾಹಿತ್ಯ.

೧೯೪೭ ಆಗಷ್ಟ ೧೫ ರಂದು ಭಾರತ ದೇಶ ಸ್ವತಂತ್ರ ಪಡೆದರೂ ಬೀದರ, ಕಲಬುರ್ಗಿ, ರಾಯಚೂರು ಜಿಲ್ಲೆಗಳು ಸ್ವತಂತ್ರವಾಗಲಿಲ್ಲ. ಹೈದ್ರಾಬಾದ ನಿಜಾಂರ ಸಂಸ್ಥಾನಕ್ಕೊಳಪಟ್ಟಿದ್ದ ಈ ಪ್ರದೇಶದಲ್ಲಿ ಆಗ ರಜಾಕಾರರ ಹಾವಳಿಯಿಂದಾಗಿ ಜನ ಸಾಮಾನ್ಯರ ಪರಿಸ್ಥಿತಿ ಹದಗೆಟ್ಟು ಹೋಗಿತ್ತು. ಅಂದಿನ ಉಪ ಪ್ರಧಾನಿ ಸರ್ಧಾರ ವಲ್ಲಭಾಯಿ ಪಟೇಲರ ಮುಂದಾಳತ್ವದಿಂದ ನಿಜಾಂ ಆಡಳಿತ ಕೊನೆಗೊಂಡು ೧೯೪೮ರ ಸಪ್ಟೆಂಬರ ೧೭ ರಂದು ಈ ಪ್ರದೇಶಕ್ಕೆ ಸ್ವಾತಂತ್ರ್ಯ ಬಂದಿತು. ಹೀಗಾಗಿ ೧೨ನೇಯ ಶತಮಾನದ ಕೊನೆಯಿಂದ ಹಿಡಿದು ನಿಜಾಂ ಆಡಳಿತದ ಅಂತ್ಯದವರೆಗಿನ ಕಾಲದಲ್ಲಿ ಇಲ್ಲಿ ಶಿಷ್ಟಸಾಹಿತ್ಯ ನಿರ್ಮಾಣವಾದದ್ದು ತಿಳಿದುಬರುವುದಿಲ್ಲ. ಆದರೆ ಬುಲಾಯಿ ಹಾಡು, ಜನಪದ ಸಂಪ್ರದಾಯದ ಹಾಡುಗಳು, ತತ್ವಪದಗಳು ರಚನೆಯಾದದ್ದು ಕಂಡುಬರುತ್ತದೆ. "೧೨ನೇಯ ಶತಮಾನದಲ್ಲಿ ಶ್ರೇಷ್ಠ ಶರಣ ಅನುಭಾವಗಳಿಂದ ಹೊಸ ಬೆಳಕನ್ನು ಕಂಡ ಬೀದರ ಜಿಲ್ಲೆ ೧೮ನೇಯ ಶತಮಾನದಿಂದ ಇದುವರೆಗಿನ ಅವಧಿಯಲ್ಲಿ ಜಾನಪದ ಅನುಭವಿ ಕವಿಗಳಿಂದ ಮತ್ತೆ ಜೀವಂತಿಕೆಯನ್ನು ಪಡೆದಿದೆ. ಈ ಅವಧಿಯಲ್ಲಿ ಕಂಡುಬರುವ ಈ ಜಿಲ್ಲೆಯ ಅನುಭವಿ ಕವಿಗಳ ಸಂಖ್ಯೆ ಸುಮಾರು ೭೦ಕ್ಕೂ ಮೀರಿ ಬೆಳೆದಿದೆ"[೪] ಈ ಎಲ್ಲ ಕವಿಗಳು ಜಾನಪದ ಸಾಹಿತ್ಯದ ವಿವಿಧ ಪ್ರಕಾರಗಳಾದ ತತ್ವಪದ, ಭಜನೆಪದ, ಆರತಿ ಪದ, ಗೀಗಿಪದ, ಹಂತೀಪದ, ಮೋಹರಂ ಹಾಡು, ಸೋಬಾನ ಪದ,

ಜೋಗುಳಪದ, ಬುಲಾಯಿ ಪದ, ದಪ್ಪಿನಾಟದ ಪದಗಳನ್ನು ಪ್ರಾದೇಶಿಕ ಭಾಷೆಯಲ್ಲಿ ರಚಿಸಿದ್ದು ಕಂಡುಬರುತ್ತದೆ. ಈ ಸಾಹಿತ್ಯದ ಮೇಲೆ ಶರಣರ ದಟ್ಟವಾದ ಪ್ರಭಾವಪಿರುವುದನ್ನು ಆ ಹಾಡುಗಳ ಆಧ್ಯಾತ್ಮದ ತಳಹದಿಯ ಮೇಲೆ ಗುರುತಿಸಬಹುದಾಗಿದೆ.

"ಜಗತ್ಪ್ರಸಿದ್ಧ 'ಬಿದಿರಿ' ಕಲೆಯ ಹೆಸರಿನೊಂದಿಗೆ ಗುರುತಿಸಿಕೊಳ್ಳುವ ಬೀದರ ಕರ್ನಾಟಕದ ಉತ್ತರಕ್ಕೆ ಅದರ ಕಳಸದಂತಿದೆ. ೫ ತಾಲ್ಲೂಕುಗಳನ್ನು ಹೊಂದಿರುವ ಈ ಜಿಲ್ಲೆಯ ವಿಸ್ತೀರ್ಣ ಸು. ೫೪೫೮ ಚ.ಕಿ.ಮೀ. ೫೪೧ ಹಳ್ಳಿಗಳನ್ನು ಹೊಂದಿರುವ ಈ ಜಿಲ್ಲೆಯ ಕೇಂದ್ರ ಸ್ಥಾನ ಸಮುದ್ರ ಮಟ್ಟದಿಂದ ಸು. ೨೨೦೬ ಆಡಿ ಎತ್ತರದಲ್ಲಿದೆ. ಬೌದ್ಧ, ಜೈನ, ಶೈವ, ವೈದಿಕ ಮತಗಳಿಗೆ ನೆಲೆ ನೀಡಿರುವ ಈ ಜಿಲ್ಲೆಯ ಬಹುದೊಡ್ಡ ಧಾರ್ಮಿಕ ಕೊಡುಗೆ ಬಸವಧರ್ಮದ್ದು."[೬]

"ಕಲ್ಲಿನ ಭೂಮಿ, ಕಲ್ಲಿನ ಮಾಳಿಗೆ, 'ಕಲ್ಲಿನ ರಾಶಿ' ಎಂದು ಅರ್ಥ ಹೊಂದಿರುವ ಕಲ್ಬುರ್ಗಿ ಬೀದರ ಜಿಲ್ಲೆಯ ದಕ್ಷಿಣ ಮೇರೆಯಲ್ಲಿದೆ. 'ಗುಲ್' ಎಂದರೆ ಹೂ 'ಬರ್ಗ್' ಎಂದರೆ ಎಲೆ, ಪರ್ಶಿಯನ್ ಭಾಷೆಯಲ್ಲಿ ಇದು ಹೂವಿನೊಡನೆ ಎಲೆ ಇರುವಿಕೆಯನ್ನು ಸೂಚಿಸುತ್ತದೆ. ಜಿಲ್ಲೆಯ ವಿಸ್ತೀರ್ಣ ೬೨೮೧೨ ಚ.ಮೈಲು ಇದ್ದು, ಈ ಮೊದಲು ೨ ಉಪವಿಭಾಗಗಳನ್ನು ಹೊಂದಿದ್ದು, ೧೦ ತಾಲ್ಲೂಕುಗಳನ್ನು ಹೊಂದಿತ್ತು[೭] ಈಗ 'ಯಾದಗಿರಿ' ಜಿಲ್ಲೆಯಾದ ಮೇಲೆ **ಐದು** ತಾಲ್ಲೂಕುಗಳು ಉಳಿದಿವೆ." ಆರೋಗ್ಯಕರ ಹವಾಗುಣ ಹೊಂದಿರುವ ಜಿಲ್ಲೆಯಲ್ಲಿ 'ಬೇಸಿಗೆ'ಯ ಬಿಸಿಲು ಅಧಿಕ.

ಪ್ರಖ್ಯಾತ 'ಕವಿರಾಜ ಮಾರ್ಗ' ಬರೆದ ಕವಿ ಶ್ರೀ ವಿಜಯನು ರಾಷ್ಟ್ರಕೂಟ ಮನೆತನದ ನೃಪತುಂಗನ ಆಸ್ಥಾನದವನು. ಇವರ ರಾಜಧಾನಿ ಈ ಜಿಲ್ಲೆಯ ಮಾನ್ಯಖೇಟ. 'ಶಾಂತಿ ಪುರಾಣ' ರಚಿಸಿದ ಪೊನ್ನನು ಈ ರಾಜವಂಶದ ಮೂರನೆಯ ಕೃಷ್ಣನ ಆಸ್ಥಾನ ಕವಿ. 'ಜೇಡರ ದಾಸಿಮಯ್ಯ' ಕನ್ನಡ ವಚನಕಾರರಲ್ಲಿ ಮೊದಲಿಗನು. ಈತನು ಈ ಜಿಲ್ಲೆಯ ಸುರುಪುರ ತಾಲ್ಲೂಕಿನ 'ಮುದುನೂರಿ'ನವನು. ಪ್ರಸಿದ್ಧ ಜೈಮಿನಿ ಭಾರತದ ಕವಿ ಲಕ್ಷ್ಮೀಶನು. ಸುರಪುರ ತಾಲೂಕಿನ 'ದೇವಪುರ'ದವನು. ರಾಜಾಕಾಳಿಚಂದರು ಉರ್ದು ಪರ್ಸಿಯನ್ ಭಾಷೆಗಳಲ್ಲಿ ಪರಿಣಿತ ಕವಿ. ಖ್ವಾಜಾ ಬಂದೇ ನವಾಜರು ಉರ್ದು ಗದ್ಯದ ಪ್ರಥಮ ಲೇಖಕರು. ಕುರಾನಿನ ವ್ಯಾಖ್ಯಾನ್ನ ಬರೆದಿದ್ದಾರೆ.[೬] ಲಂಬಾಣಿ ಕುಣಿತ, ಚಪ್ಪಳಿಕೆ ಹಾಡು, ಕೋಲಾಟ, ತತ್ವಪದಗಳು, ಸಂಪ್ರದಾಯದ ಹಾಡುಗಳ ಪರಂಪರೆ ಇಲ್ಲಿ ಕಾಣಸಿಗುತ್ತವೆ.

ವಚನ ಸಾಹಿತ್ಯಕ್ಕೆ ಕಲಬುರ್ಗಿ ಜಿಲ್ಲೆಯ ಕೊಡುಗೆ ಮಹತ್ವದ್ದಾಗಿದೆ. ಈ ಜಿಲ್ಲೆಯ ವಚನಕಾರರು ವಚನ ಸಾಹಿತ್ಯದ ಬೆಳವಣಿಗೆಯಲ್ಲಿ ಸ್ಮರಣೀಯ ಕಾರ್ಯ ಮಾಡಿದ್ದಾರೆ. ಆದ್ಯ ವಚನಕಾರ ಜೇಡರ ದಾಸಿಮಯ್ಯರಾದರೆ, ಆದ್ಯ ವಚನಕಾರ್ತಿ ಅಫ್ಜಲಪುರ ತಾಲೂಕಿನ ಗೊಬ್ಬರು ಗ್ರಾಮದ ಶರಣೆ ದುಗ್ಗಳೆ. ಈ ದಂಪತಿಗಳು ತೋರಿದ ಸಾಹಿತ್ಯಿಕ ಮಾರ್ಗದಲ್ಲಿ ಅನೇಕ–ಶರಣ–ಶರಣೆಯರು ನಡೆದು ತಮ್ಮ ಅನುಭವ ಅಭಿವ್ಯಕ್ತಿಯನ್ನು ಸುಲಲಿತಗೊಳಿಸಿಕೊಂಡರು. ಮಹಾಮಾನವತಾವಾದಿ ಬಸವಣ್ಣನವರು ಸಾಧಿಸಿದ ವಚನ ವಸಂತೋತ್ಸವದ ಪ್ರಥಮ ಕೋಗಿಲೆಗಳು ಈ ಜಿಲ್ಲೆಯವು ಎನಿಸುತ್ತದೆ."[೭] ಕಲ್ಯಾಣವು ಶಿವಶರಣರ ಕೇಂದ್ರವಾಗುವ ಪೂರ್ವದಲ್ಲಿ ಕಲಬುರ್ಗಿ ಜಿಲ್ಲೆಯ ಜೇವರ್ಗಿ ತಾಲೂಕಿನ ಕೊಂಡಗುಳಿಯಲ್ಲೊಮ್ಮೆ, ಸುರಪುರದ ಮುದುನೂರಿನಲ್ಲೊಮ್ಮೆ ಶರಣರ ಸಂಗ ಗೋಷ್ಠಿಗಳು ಕಾಲಕಾಲಕ್ಕೆ ನಡೆಯುತ್ತಿದ್ದವೆಂಬ ವಿಷಯ ಶಿವಶರಣರ ಚರಿತ್ರಾವಲೋಕನದಿಂದ ವಿಧಿತವಾಗುತ್ತದೆ.[೮] ಈ ಜಿಲ್ಲೆಯ ಆಳಂದ ತಾಲೂಕಿನವನಾದ ಏಕಾಂತ ರಾಮಯ್ಯನ "ಎನ್ನಯ್ಯ ಚನ್ನರಾಮ"

ಎಂಬ ಅಂಕಿತದ ಏಳು ವಚನಗಳು ಉಪಲಬ್ದವಾಗಿವೆ. ಸೌರಾಷ್ಟ್ರದ ಆದಯ್ಯನವರು ತಮ್ಮ ಒಂದು ವಚಸದಲ್ಲಿ 'ಏಕೋರಾಮಯ್ಯನೆನ್ನ ನಾಸಿಕ' ಎಂದು ಗೌರವ ನೀಡಿದ್ದಾನೆ.

ಕಳಚೂರಿ ವಂಶದ ಬಿಜ್ಜಳರಾಯನ ತಂದೆ ಪೆರ್ಮಾಡಿರಾಯನ ಪ್ರಧಾನ ಮಂತ್ರಿಯಾಗಿ ಬಸವಣ್ಣನವರಿಗಿಂತ ಸು. ಒಂದುನೂರು ವರ್ಷ ಪೂರ್ವದಲ್ಲಿ ಆಗಿ ಹೊಗಿದ್ದ ಕೊಂಡಗುಳ್ಳಿ ಕೇಶಿರಾಜನು ಜೇವರಗಿ ತಾಲ್ಲೂಕಿನ ಕೊಂಡಗುಳಿ ಗ್ರಾಮದವನು. ಕೇಶಿರಾಜ ದಣ್ಣಾಯಕನೆಂದು ಪ್ರಸಿದ್ಧನಾಗಿದ್ದ ಈತನು, ಕಂದ-ವೃತ್ತ ಬರೆದದ್ದು, 'ಷಡಕ್ಷರ ಮಂತ್ರ ಮಹಿಮೆ ಲಿಂಗಸ್ತೋತ್ರ ಕಂದ' ರಚಿಸಿದ್ದುದು ಗೊತ್ತಾಗುತ್ತದೆ. ಈ ಕಂದಗಳಲ್ಲಿ ತನ್ನ ದೈವವನ್ನು ಶಿಶುಭಾವದಿಂದ, ರತಿಭಾವದಿಂದ ಓಲೈಸುವ ಹರವಿದೆ. ಪ್ರತಿಯೊಂದು ಬಿಡಿ ಬಿಡಿ ಪದ್ಯಗಳಾಗಿರುವುದರಿಂದ ಭಾವಗಳು ಬೇರೆ ಬೇರೆ ಬಗೆಗಳಲ್ಲಿ ಬೆಳೆಯುವುದು ಅನಿವಾರ್ಯವಾಗಿದೆ"[೯] ಕುತೂಹಲದ ಅಂಶವೆಂದರೆ ಈತನ ಕೆಲವು ಪದ್ಯಗಳ ಛಾಯೆ ಬಸವಣ್ಣನವರ ವಚನಗಳಲ್ಲಿ ಕಂಡುಬರುವುದು[೧೦] ಎನ್ನಲಾಗಿದೆ.

ಮಹಾನುಭಾವ ಬಸವಣ್ಣನವರಿಗೆ ನೀಡಲು ಕಲಿಸಿದ ಸುರಪುರ ತಾಲ್ಲೂಕಿನ ಕೆಂಭಾವಿ ಭೋಗಣ್ಣನ ಜೀವನವೂ ತುಂಬಾ ಉದಾತ್ತವಾಗಿದೆ. ಮಹಾಶಿವಭಕ್ತನಾದ ಆದರೆ ಜಾತಿಯಿಂದ ಅಸ್ಪೃಶ್ಯನಾದ ಶರಣನೊಬ್ಬನಿಗೆ ಭೋಗಣ್ಣನವರು ಸಹ ಪಂಕ್ತಿಸ್ಥಾನ  ನೀಡಿ ಅಲ್ಲಿಯ ವಿಪ್ರರ ನಿಂದೆಗೆ ಗುರಿಯಾಗುತ್ತಾರೆ ಅಷ್ಟೇ ಅಲ್ಲ ಅಂದಿನ ರಾಜ ಚಂದಿಮರಸರ ಶಿಕ್ಷೆಗೂ ಗುರಿಯಾಗುತ್ತಾರೆ. **'ನಿಜಗುರು ಭೋಗೇಶ್ವರಾ'** ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾರೆ. ಬಸವಾದಿ ಶರಣರಿಗಿಂತ ಮೊದಲೇ ಆಗಿ ಹೋಗಿರಬಹುದಾದ ಇವರ ೨೨ ವಚನಗಳು ಮಾತ್ರ ಉಪಲಬ್ಧವಾಗಿವೆ ಬೆಡಗಿನ ವಚನಗಳಿಗೆ ಭೋಗಣ್ಣ ಪ್ರೇರಕ ಶಕ್ತಿ ಎನಿಸುತ್ತಾನೆ ಎಂಬುದನ್ನು ಅವರ ವಚನಗಳಿಂದ ಗುರುತಿಸಬಹುದು.

ಆ ಮೇಲೆ ಕೆಂಭಾವಿಯ ಭೋಗಣ್ಣನ 'ಲಿಂಗಸ್ನೇಹ' ಪವಾಡದಿಂದ ಮನಸೋತ ಚಂದಿಮರಸರು ನಿಜಗುಣ ಶಿವಯೋಗಿಯ ಗುರುತ್ವವನ್ನು ಅಂಗೀಕರಿಸಿ ಶ್ರೇಷ್ಠ ಶರಣನಾಗುವುದನ್ನು ನಾವಿಲ್ಲಿ ಗಮನಿಸಬಹುದು. ಶ್ರೇಷ್ಠ ವಚನಕಾರನಾಗಿರುವ ಈತನು ಕೆಂಭಾವಿಯನ್ನು ಬಿಟ್ಟು ಸಿಮ್ಮಲಿಗೆಯ ಚೆನ್ನರಾಮನ ಕ್ಷೇತ್ರಕ್ಕೆ ಬಂದು ಸಾಹಿತ್ಯ ರಚಿಸುತ್ತಾನೆ. ಈ ಶರಣನ ೧೬೦ ವಚನಗಳು ಉಪಲಬ್ಧವಾಗಿವೆ. "ಸಿಮ್ಮಲಿಗೆಯ ಚೆನ್ನರಾಮಾ" ಎಂಬುದು ಅವುಗಳ ಅಂಕಿತ. ಕ್ಲಿಷ್ಟತೆಯಿಲ್ಲದ ಭಾಷೆ, ಬಸವಧರ್ಮದ ತತ್ವಸಿದ್ಧಾಂತಗಳ ವಿವರಣೆಯನ್ನು ಇಲ್ಲಿ ಕಾಣಬಹುದು.

ಅದರಂತೆ ಅಗ್ನಿಯ ಹೊನ್ನಯ, ಹಾವಿನಾಳ ಕಲ್ಲಯ್ಯ, ತಿಂಥಿಣಿ ಮೋನಪ್ಪಯ್ಯ ಕೊಡೇಕಲ್ಲ ಬಸವಪ್ಪಯ್ಯ ಮೊದಲಾದವರು ಈ ಜಿಲ್ಲೆಯಲ್ಲಿ ಆಗಿ ಹೋಗಿದ್ದಾರೆ. ಸಗರದ ಬ್ರಹ್ಮಯ್ಯನೂ ವಚನ ಕಣಜಕ್ಕೆ ತನ್ನ ಧಾನ್ಯಗಳನ್ನು ಸೇರಿಸಿದ್ದಾನೆ. ಶಹಾಪೂರ ತಾಲೂಕಿನ ಜೋಳದ ಹಾಳ್‌ದ ಒಕ್ಕಲಿಗ ಮುದ್ದಣ್ಣ ಇನ್ನೊಬ್ಬ ವಚನಕಾರ. 'ಕಾಮಭೀಮ ಜೀವದನೊಡೆಯ' ಎಂಬುದು ಮುದ್ದಣ್ಣನ ವಚನಾಂಕಿತ. ಗುರುಲಿಂಗಜಂಗಮರಿಗೆ ಎಲ್ಲವನ್ನು ಅರ್ಪಿಸಿದ ಶರಣನೀತ. ಒಕ್ಕಲುತನದ ವಿಚಾರಗಳನ್ನೇ ಬಳಸಿಕೊಂಡು ಈತ ವಚನಗಳನ್ನು ರಚಿಸಿದ್ದಾನೆ.[೧೧] ಕಲಬುರ್ಗಿ ಜಿಲ್ಲೆಯ 'ಸಗರನಾಡು' ಶಿವಶರಣರ ಆಡುಂಬೊಲ ಎಂದು ಕರೆಸಿಕೊಂಡಿದೆ. ಜೇವರಿಗೆ ತಾಲೂಕಿನ ನೆಲಗಿಯ ಶಾಂತಯ್ಯ ಪ್ರಮುಖ ವಚನಕಾರ. ನೆಲ್ಲಿಗೆ ಶಾಂತಯ್ಯ ಮತ್ತು ಗಣಸಹಸ್ರರಲ್ಲಿ ಬರುವ ಕೋಲ ಶಾಂತಯ್ಯ ಒಬ್ಬರೆ ಆಗಿರಬೇಕು ಎನಿಸುತ್ತದೆ[೧೨] ಈತನ ವಚನಾಂಕಿತ 'ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ' ಎಂಬುದು.

ಏಲೇಶ್ವರ ಕೇತಯ್ಯ, ಅಮರಗುಂಡದ ಮಲ್ಲಿಕಾರ್ಜುನ, ಸೇಡಂ ತಾಲೂಕಿನ ಅನಾಮಿಕ ನಾಚಯ್ಯ, ಚಿತ್ತಾಪುರ ತಾಲೂಕಿನ ಮಾರಡಿಗೆಯ ನಾಚಯ್ಯ, ಆಳಂದ ತಾಲೂಕಿನ ಗಜೇಶ ಮಸಣಯ್ಯ, ಜೇವರಗಿಯ ಷಣ್ಮುಖ ಶಿವಯೋಗಿಗಳು ಮೊದಲಾದವರು ಕಲಬುರ್ಗಿ ಜಿಲ್ಲೆಯಲ್ಲಿ ವಚನಕಾರರಾಗಿ ಹೋಗಿದ್ದಾರೆ. ಕಲಬುರ್ಗಿ

ಕಲ್ಯಾಣದ ಹೆಬ್ಬಾಗಿಲು ಎಂದು ಕರೆಸಿಕೊಂಡಿರುವುದರಿಂದ 'ಕಲ್ಯಾಣ'ದಲ್ಲಿ ಆಗಿ ಹೋಗಿರುವ ಏಳುನೂರಾ ಎಪ್ಪತ್ತು ಅಮರ ಗಣಂಗಳಲ್ಲಿ ಅರ್ಧದಷ್ಟಾದರೂ ಶರಣರು ಕಲಬುರ್ಗಿ ಜಿಲ್ಲೆಯವರಾಗಿರಬೇಕು ಎನಿಸುತ್ತದೆ. ಎಂದು ಬಿ. ಮಹಾದೇವಪ್ಪನವರು ಅಭಿಪ್ರಾಯ ಪಡೆತ್ತಾರೆ.[೧೩]

**ಷಣ್ಮುಖಶಿವಯೋಗಿ**ಗಳ ನಂತರ ಅಷ್ಟೇ ಪ್ರಬುದ್ಧ ಹಾಗೂ ಪ್ರಾಮಾಣಿಕತೆಯಿಂದ ಬರೆದ ವಚನಕಾರರು ೨೦ನೆಯ ಶತಮಾನದವರೆಗೆ ಬರಲೇ ಇಲ್ಲ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಮಧ್ಯದ ೧೯ನೆಯ ಶತಮಾನದಲ್ಲಿ ಕಡಕೋಳ ಮಡಿವಾಳಪ್ಪ ಹಾಗೂ ಅವನ ಶಿಷ್ಯಂದಿರಾದಂತಹ ಅನುಭಾವಿ ಕವಿಗಳು ಆಗಿ ಹೋದದ್ದು ಕಂಡುಬರುತ್ತದೆ. ಒಟ್ಟನಲ್ಲಿ ಈ ಜಿಲ್ಲೆಯ ಎಲ್ಲ ತಾಲ್ಲೂಕುಗಳಲ್ಲಿ ಬಸವಾದಿ ಶರಣರ ಕಾಲ ಹಾಗೂ ನಂತರದಲ್ಲಿ ಅನೇಕ ಶರಣರು ಮಹಾನುಭಾವಿಗಳಾಗಿ ಸಮಾಜದ ಸಮಸ್ಯೆಗಳಿಗೆ ವಚನಗಳ ಮೂಲಕ ಸ್ಪಂದಿಸಿ ಹೋಗಿರುವುದನ್ನು ತಿಳಿಯಬಹುದು. ಈ ವಚನಕಾರರ ಪ್ರೇರಣೆ – ಪ್ರಭಾವದ ಛಾಯೆ ಆಧುನಿಕ ವಚನಕಾರರ ಮೇಲಾಗಿರುವುದು ಗಮನೀಯ ಅಂಶ.

ಹಾಗೆಯೇ ಬೀದರ ಜಿಲ್ಲೆಯ **ಕಲ್ಯಾಣಕ್ಷೇತ್ರವು** ೧೨ನೇಯ ಶತಮಾನದಲ್ಲಿ ತುಂಬಾ ಖ್ಯಾತಿಯನ್ನು ಪಡೆದಿತ್ತು. ಬಸವಣ್ಣನವರ ವ್ಯಕ್ತಿತ್ವಕ್ಕೆ ಆಕರ್ಷಿತರಾಗಿ ಭಾರತದ ವಿವಿಧೆಡೆಯಿಂದ ಆಧ್ಯಾತ್ಮಿಕ ಜೀವಿಗಳು ಕಲ್ಯಾಣಕ್ಕೆ ಓಡಿ ಬಂದರು. ಅಂಥವರಲ್ಲಿ ಕಾಶ್ಮೀರದ ಅರಸನಾದ ಮಹಾದೇವ ಭೂಪಾಲ ದಂಪತಿಗಳು ಇಲ್ಲಿಗೆ ಬಂದು ಮೋಳಿಗೆ ಮಾರಯ್ಯ ದಂಪತಿಗಳಾಗಿ, ಕಾಯಕ ಜೀವಿಗಳಾಗಿ ಬಾಳಿ ಹೋಗಿದ್ದಾರೆ. ಅವರು ಅನೇಕ ವಚನಗಳನ್ನು ರಚಿಸಿದ್ದಾರೆ. ಅವರ ಸ್ಮಾರಕಗಳು ಈಗಲೂ ಮೋಳಕೇರಾ ಗ್ರಾಮದಲ್ಲಿವೆ. ಕಲ್ಯಾಣ ಕ್ರಾಂತಿಯ ನಂತರದಲ್ಲೂ ಅವರು ಇಲ್ಲಿಯೇ ಉಳಿದಂತಿದೆ. ಮೋಳಿಗೆಯ ಮಾರಯ್ಯನ ೮೧೯ ವಚನಗಳು ದೊರಕಿವೆ. ಅವನ ಹೆಂಡತಿ ಮಹಾದೇವಮ್ಮನ ೨೦ ವಚನಗಳು ಈಗ ಲಭ್ಯವಾಗಿದೆ.

ಬೀದರ ಜಿಲ್ಲೆಯಲ್ಲಿಯೇ ಜನ್ಮ ತಾಳಿ, ಶರಣರಾಗಿ ವಚನ ರಚಿಸಿದವರೆಂದರೆ ಕೇತಲದೇವಿ, ಲದ್ದೆಯ ಸೋಮಣ್ಣ, ಬಹುರೂಪಿ ಚೌಡಯ್ಯ, ಘಟ್ಟಿವಾಳಯ್ಯ, ಮೇದಾರ ಕೇತಯ್ಯ ಮೊದಲಾದವರು, ಕೇತಲದೇವಿ ಕುಂಬಾರ ಗುಂಡಯ್ಯನ ಪತ್ನಿ. ಬಸವಾದಿ ಶರಣರ ಸಮಕಾಲೀನಳಾಗಿದ್ದ ಈಕೆಯ ಒಂದು ವಚನ ದೊರಕಿದೆ. ಅವಳ ಅಂಕಿತನಾಮ ಕುಂಭೇಶ್ವರ[೧೪] ಕುಂಬಾರ ಗುಂಡಯ್ಯ ಬೀದರ ಜಿಲ್ಲೆಯ ಭಾಲ್ಕಿಯವರಾಗಿದ್ದಾರೆ.

**ಲದ್ದೆಯ ಸೋಮಣ್ಣರು** ಬೀದರ ಜಿಲ್ಲೆಯಲ್ಲಿಯೇ ಜನ್ಮತಾಳಿದವನು. ಈತನು ಬೀದರ ಜಿಲ್ಲೆಯ ಭಾಲ್ಕಿ ತಾಲೂಕಿನ ಲದ್ದೆ ಎಂಬ ಗ್ರಾಮದವನು ಎಂದು ಡಾ. ಎಚ್. ಚಂದ್ರಶೇಖರ ಅವರು ಹೇಳಿದ್ದಾರೆ.[೧೫] ಹುಲ್ಲನ್ನು ಮಾರಿ ಗುರುಲಿಂಗ ಜಂಗಮಕ್ಕೆ ಅರ್ಪಿಸಿ ಪ್ರಸಾದ ಸೇವಿಸುತ್ತಿದ್ದ ಶರಣನೀತ ಈತನ ಒಂದೇ ಒಂದು ವಚನ ಉಪಲಬ್ಧವಾಗಿದೆ. 'ಭಾಪು ಲದ್ದೆಯ ಸೋಮ' ಎಂಬುದು ಆತನ ಅಂಕಿತನಾಮ.

**ಬಹುರೂಪಿ ಚೌಡಯ್ಯ** ಬೀದರ ಜಿಲ್ಲೆಯ ರೇಕುಳಗಿ ಎಂಬ ಗ್ರಾಮದ ಶರಣ ಬಹುರೂಪಿ ಕಲೆಯಲ್ಲಿ ನಿಪುಣನಾಗಿದ್ದ ಆತನು, ಆ ಕಲೆಯ ಪ್ರದರ್ಶನದಲ್ಲಿ ಹಲವಾರು ಪಾತ್ರಗಳನ್ನು ನಿರ್ವಹಿಸಿ ಜನರಲ್ಲಿ ಜಾಗೃತಿಮೂಡಿಸುತ್ತಿದ್ದನು. ತುಂಬಾ ಸುಂದರವಾಗಿ ಆತನು ಹಾಡುತ್ತಿದ್ದನು. ಅದರಲ್ಲೂ 'ರಾಮಕ್ರಿಯಾ'ರಾಗ

ಅವನ ಪ್ರಾಣವಾಗಿತ್ತು. ಶರಣರ ದಾಸೋಹಕ್ಕಾಗಿ ಈ ರಾಗವನ್ನು ಒತ್ತೆಯಿಟ್ಟು, ನಂತರ ದೇವಕೃಪೆಯಿಂದ ಅವನು ಸಾಲ ತೀರಿಸಿ ಹಾಡಿದನೆಂಬ ಪ್ರತೀತ ಇದೆ. ಶರಣರ ಕಥೆಗಳನ್ನು ಆಡಿ ತೋರಿಸುತ್ತಿದ್ದ ಚೌಡಯ್ಯ ಶರಣರ ಸತ್ಸಂಗದಿಂದ ಅನೇಕ ವಚನಗಳನ್ನು ರಚಿಸಿದ್ದಾನೆ. 'ರೇಕಣ್ಣಪ್ರಿಯ ನಾಗಿನಾಥ' ಎಂಬುದು ಈತನ ಅಂಕಿತನಾಮ.[೧೬]

**ಘಟ್ಟಿವಾಳಯ್ಯನು** ಬಸವಕಲ್ಯಾಣ ತಾಲೂಕಿನ 'ಹಂದ್ರಾಳ' ಗ್ರಾಮದಲ್ಲಿ ಐಕ್ಯನಾಗಿದ್ದರೂ, ಆತನು 'ಘಟ್ಟಿಬೋರಿವಳ್ಳಿ' (ಘಾಟಬೋರಾಳ) ಯವನಾಗಿರುವಂತಿದೆ. ಆದರೆ ಅಲ್ಲಿ ಈಗ ಯಾವ ಸ್ಮಾರಕಗಳು ಕಾಣಿಸುವುದಿಲ್ಲ ಆ ಊರಿನ ಹೆಸರು ಈ ಶರಣನದೇ ಆಗಿದೆ[೧೭] ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಹಂದ್ರಾಳದಲ್ಲಿ ಗಟ್ಟಿವಾಳಯ್ಯನ ಗುಡಿಯೊಂದಿದೆ. ಈತನು 'ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ' ಎಂಬ ಅಂಕಿತನಾಮದಲ್ಲಿ ಅನೇಕ ವಚನಗಳನ್ನು ರಚಿಸಿದ್ದಾನೆ. ಸದ್ಯ ಈ ಶರಣನ ೧೫೦ ವಚನಗಳು ಉಪಲಬ್ಧವಾಗಿವೆ.

**ಮೇದಾರ ಕೇತಯ್ಯ** ಬೀದರ ಪಕ್ಕದಲ್ಲಿರುವ ಚಿಟ್ಟ ಗ್ರಾಮದವನೆಂದು ಹೇಳಲಾಗುತ್ತದೆ. ಅಲ್ಲೊಂದು ಕೇತಯ್ಯನದೆನ್ನುವ ಚಿಕ್ಕ ಗುಡಿ ಹಾಗೂ ಭಗ್ನಗೊಂಡ ಮೂರ್ತಿ ಇರುವುದಾಗಿ ತಿಳಿದುಬರುತ್ತದೆ.[೧೮] 'ಬುರುಡರು' ಎಂಬ ಜನಾಂಗಕ್ಕೆ ಸೇರಿದ ಈಶರಣನು ಉತ್ತಮ ವಚನಕಾರನಾಗಿದ್ದು, 'ಗವರೇಶ್ವರ' ಅಂಕಿತದ ಆತನ ೧೪ ವಚನಗಳು ಈಗ ಉಪಲಬ್ಧವಾಗಿವೆ. ಇಲ್ಲಿ ಲೋಕಾನುಭವವನ್ನು ಕಾಣಬಹುದು.

ಈ ಎರಡು ಜಿಲ್ಲೆಗಳ ವಚನಕಾರರ ವಚನಗಳು ಹಾಗೂ ಬಸವಾದಿ ಶರಣರ ವಚನಗಳ ಪ್ರಭಾವ-ಪ್ರೇರಣೆಯು ಆಧುನಿಕ ವಚನ ರಚನೆಕಾರರ ಮೇಲಾಗಿರುವುದನ್ನು ಗುರುತಿಸಬಹುದು. ಅದೆಂದರೆ – ೧ ಅಂಕಿತನಾಮ ಪದ್ಧತಿ. 'ಮುಕ್ತಕತೆ' 'ಸ್ವಚ್ಛಂಧಲಯ'ಗಳನ್ನು ೧೨ನೇಯ ಶತಮಾನದ ಶರಣರಂತೆ ಆಧುನಿಕ ವಚನಕಾರರು ಬಳಸಿಕೊಂಡಿದ್ದಾರೆ. ಬಸವಾದಿ ಶರಣರು, ೧೨ನೇಯ ಶತಮಾನದ ಪ್ರಜ್ಞೆಯ ಮತಿಯನ್ನು ಸೂರೆಹೊಡೆದು ವಚನ ಸೃಷ್ಟಿ ಮಾಡಿದರು. ಅಂದು ಶಿವಶರಣರು ಕೊಟ್ಟ ಸಾಹಿತ್ಯರೂಪದ ವಚನಗಳು, ಇಂದು ಇಪ್ಪತ್ತು ಮತ್ತು ಇಪ್ಪತ್ತೊಂದನೆಯ ಶತಮನಾದಲ್ಲಿ ನೂರಾರು ಆಧುನಿಕ ವಚನಕಾರರನ್ನು ಸೃಷ್ಟಿಸಲು ಪ್ರೇರಣೆಯಾದವು.[೧೯]

"ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಆಶಯ ಹಾಗೂ ರಚನೆಯ ದೃಷ್ಟಿಯಿಂದ ಶಿವಶರಣರ ವಚನಗಳ ಪ್ರಭಾವ, ಪ್ರೇರಣೆಯನ್ನು ಗುರುತಿಸಬಹುದು. "೧೯ನೆಯ ಶತಮಾನದಲ್ಲಿ ಇಂಗ್ಲೀಷ ವಿದ್ಯಾಭ್ಯಾಸದ ಪರಿಣಾಮವಾಗಿ ದೇಶದ ಪ್ರಜ್ಞೆಯಲ್ಲಿಯೇ ಆದ ಸ್ಥಿತ್ಯಂತರವು ಹೊಸಗನ್ನಡ ಸಾಹಿತ್ಯ ನಿರ್ಮಿತಿಯನ್ನು ನಿರ್ಣಯಿಸುವ ಪ್ರಧಾನ ಅಂಶ. ಸಾಹಿತ್ಯವು ಹೊಸ ಸ್ವರೂಪವನ್ನು ಪಡೆಯುವುದರೊಂದಿಗೆ, ಅನಿವಾರ್ಯವಾಗಿ ಸಾಹಿತ್ಯವನ್ನು ಕುರಿತ ದೃಷ್ಟಿಕೋನದಲ್ಲೂ ಮಹತ್ತರ ಬದಲಾಣೆಗಳಾದವು.[೨೦] ಅವುಗಳಲ್ಲಿ ಪ್ರಮುಖವಾದುದೆಂದರೆ ಆಧುನಿಕ ವಿದ್ಯಾಭ್ಯಾಸದ ಮೂಲಕ ಅಕ್ಷರಜ್ಞಾನವು ಹೆಚ್ಚು ಜನರಿಗೆ ಸಿಗುವಂತಾದುದರಿಂದ, ಮಿತವಾಗಿದ್ದ ಕೃತಿಕಾರವಲಯ ಅಭಿವ್ಯಕ್ತಿ ಸಾಧ್ಯತೆಯು ವಿಸ್ತಾರಗೊಂಡಿತು. ಅಭಿವ್ಯಕ್ತಿ ಸಾಮರ್ಥ್ಯ ತಮಗೂ ಇದೆ ಎಂಬ ಹುಮ್ಮಸ್ಸು ಸಾಮಾನ್ಯ ಜನತೆಯಲ್ಲಿ ಕೂಡಾ ಈ ಕಾಲದಲ್ಲಿ ಉಂಟಾಯಿತು. ಹೀಗಾಗಿ 'ಗೆಳೆಯರ ಗುಂಪು' 'ತುಂಟರ ತಂಡ' ಮೊದಲಾದ ಉತ್ಸಾಹಿ ಯುವ ಸಾಹಿತಿಗಳ 'ಗುಂಪು' ನಿರ್ಮಾಣವಾಗಿರುವ ಕಾಲವಿದು.

ಈ ನವೋದಯ ಸಾಹಿತ್ಯದ ವಿಶಿಷ್ಟ ಲಕ್ಷಣಗಳೆಂದರೆ ಧರ್ಮ ನಿರಪೇಕ್ಷತ್ವ ಹಾಗೂ ಪ್ರಜಾಪ್ರಭುತ್ವೀಕರಣ. ಇವುಗಳೊಂದಿಗೆ ರಾಷ್ಟ್ರೀಯತೆ ಹಾಗೂ ಪ್ರಾದೇಶಿಕತೆಗಳು ಸೇರಿಕೊಂಡವು. ಈ ಸಂದರ್ಭದಲ್ಲಿ ನಡೆದಿರುವ

ಗಾಂಧೀಜಿಯವರ 'ಅಸಹಕಾರ ಚಳುವಳಿ'ಯಿಂದ ಆಯಾ ಪ್ರಾಂತ್ಯದ ಭಾಷಾಮಾಧ್ಯಮಕ್ಕೆ ಆತ್ಮವಿಶ್ವಾಸ, ಗೌರವವನ್ನು ತುಂಬುವುದರ ಮೂಲಕ ಅದು ಯಶಸ್ಸು ಪಡೆಯಿತು. 'ರಾಷ್ಟ್ರೀಯ' ಏಕೀಕರಣದ ಪ್ರಯತ್ನದಲ್ಲಿ ಪ್ರಾದೇಶಿಕ ಪ್ರಜ್ಞೆ ಜಾಗೃತವಾಯಿತು. ನಾಡು ನುಡಿಯ ಅಭಿಮಾನ, ಕನ್ನಡಿಗರ ಸ್ಥಿತಿ-ಗತಿಯ ಬಗೆಗಿನ ಅರಿವು, ನಾಡಿನ ಭಾಷಾ

ಸಂಸ್ಕೃತಿಗಳ ಪುನರುಜ್ಜೀವನವನ್ನು ಗುರಿಯಾಗಿಟ್ಟುಕೊಂಡು ಏಕಕಾಲದಲ್ಲಿ ಸಾಹಿತ್ಯ ಸೃಷ್ಟಿ ಮತ್ತು ಕ್ರಿಯಾತ್ಮಕ ಜವಾಬ್ದಾರಿಯನ್ನು ಈ ಯುಗದ ಸಾಹಿತಿಗಳು ಹೊರಬೇಕಾಯಿತು. ಇಂಥ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಹಾಗೂ ಸಾಂಸ್ಕೃತಿಕ ಪರಂಪರೆಯ ಪ್ರೇರಣೆ ಅವರಿಗೆ ಅನಿವಾರ್ಯವಾಗಿತ್ತು. ಈ ನವೋದಯ ಸಾಹಿತ್ಯವು ಕನ್ನಡ ಸಾಹಿತ್ಯ ಪರಂಪರೆಯಿಂದ ಪಡೆದಿರುವ ಪ್ರೇರಣೆಯಲ್ಲಿ ಶರಣರ ವಚನಗಳ ಪ್ರಭಾವ ಹಲವಾರು ಕಾರಣಗಳಿಗಾಗಿ ಗಮನಾರ್ಹವಾಗುತ್ತದೆ. ಅವುಗಳಲ್ಲಿ ವಚನಗಳು ಸ್ವರೂಪದಲ್ಲಿ ಚಂಪೂ ಕೃತಿಗಳಿಗಿಂತ ಭಿನ್ನವಾಗಿರುವುದು, ಆಶಯದ ಅಭಿವ್ಯಕ್ತಿಯಲ್ಲಿ ಸ್ವತಂತ್ರವಾಗಿರುವುದು. ಪ್ರೌಢವಾದ ಸಂಸ್ಕೃತ ಭೂಯಿಷ್ಠ ಭಾಷೆಯನ್ನು ಬಿಟ್ಟು, ಆಡುನುಡಿಯನ್ನು ಬಳಸಿಕೊಂಡದ್ದು, ಆಸ್ಥಾನದ ಪಂಡಿತರನ್ನು ಗುರಿಯಾಗಿರಿಸಿಕೊಳ್ಳದೆ ಸಾಮಾನ್ಯ ಶ್ರೋತೃವರ್ಗವನ್ನು ಗುರಿಯಾಗಿರಿಸಿಕೊಂಡು ವಚನಗಳನ್ನು ರಚಿಸಲಾಯಿತು. ಪೌರಾಣಿಕ ಸಿದ್ಧವಸ್ತುವಿನ ವಸ್ತು ನಿಷ್ಠೆಯನ್ನು ಉಳಿದು, ಜನ ಸಾಮಾನ್ಯರ ಬದುಕನ್ನು ತಮ್ಮ ಅಭಿವ್ಯಕ್ತಿಗೆ ವಸ್ತುವನ್ನಾಗಿಸಿಕೊಂಡ ನಿರೂಪಣೆ ಇಲ್ಲಿ ಮುಖ್ಯವಾಯಿತು. "ಶರಣರ ವಚನಗಳಲ್ಲಿ ದೇಶೀಯ ಸತ್ವವಿರುವುದರೊಂದಿಗೆ, ವಚನಗಳ ಆಶಯದ ಸ್ವರೂಪವು ನವೋದಯರ ಆಶಯಗಳಿಗೆ ಹತ್ತಿರವಾಗಿ ನಿಲ್ಲುತ್ತವೆ. ತಮ್ಮ ಸುತ್ತಣ ಸಮಾಜದ ಸುಧಾರಣೆ ಹಾಗೂ ಅಂತರಂಗದ ಜಗತ್ತು ಹಾಗೂ ಸಾಮಾಜಿಕ ಜಗತ್ತಿನ ಸಂಕೀರ್ಣ ಚಿತ್ರಣವಿದೆ. ಜನಸಾಮಾನ್ಯರಿಂದ, ಜನಸಾಮಾನ್ಯರಿಗಾಗಿ ಎಂಬ ಎರಡೂ ಆಶಯಗಳನ್ನು ಶರಣರ ವಚನಗಳು ಹೊಂದಿವೆ.[೨೧] ನವೋದಯದ ಸಾಹಿತ್ಯದ ಆಶಯವು ಈ ರೀತಿ ಶರಣರ ವಚನಗಳಲ್ಲೂ ಕಂಡುಬಂದಿರುವುದನ್ನು ಅರಿಯಬಹುದು.

ಈ ಶರಣರ ವಚನ ಪರಂಪರೆಯು ಆಧುನಿಕ ವಚನಕಾರರ ಮೇಲೆ ಇಂಥ ವಿವಿಧ ರೀತಿಯಲ್ಲಿ ಗಮನಾರ್ಹ ಪ್ರಭಾವವನ್ನು ಬೀರಿದ್ದು ಕಂಡುಬರುತ್ತದೆ. ಆದರೂ ಆಧುನಿಕ ವಚನಗಳು ಶಿವಶರಣರ ವಚನಗಳಿಗಿಂತ ಭಿನ್ನವಾಗಿ ನಿಲ್ಲುತ್ತವೆ ಎನ್ನುವುದರಲ್ಲಿ ಒಮ್ಮತದ ಅಭಿಪ್ರಾಯವಿದೆ. ಇದಕ್ಕೆ ಕಾರಣಗಳನ್ನು ಹುಡುಕಬಹುದಾದರೆ, ೧೨ನೆಯ ಶತಮಾನಕ್ಕೂ ಇಂದಿನ ಶತಮಾನದ ವಚನ ನಿರ್ಮಿತಿಗೂ ಕಾರಣವಾದ ಕಾಲಮಾನದ ಅಗತ್ಯಗಳು ಬೇರೆ ಬೇರೆಯೇ ಇವೆ. ಬಸವಪೂರ್ವಯುಗದಲ್ಲಿ "ರಾಜಕೀಯ ರಂಗದಲ್ಲಿ ಅರಾಜಕತೆ, ಧಾರ್ಮಿಕ ಕ್ಷೇತ್ರದಲ್ಲಿ ಅಭಾಸತೆ, ಸಮಾಜ ಜೀವನದಲ್ಲಿ ಅಸಮಾನತೆ, ಸಾಹಿತ್ಯ ಕ್ಷೇತ್ರದಲ್ಲಿ ಪ್ರೌಢತೆ, ಸಾಂಸ್ಕೃತಿಕ ಬದುಕಿನಲ್ಲಿ ಅಸಂಪೂರ್ಣತೆಗಳು ತಲದೋರಿದ್ದು, ಒಟ್ಟು ಸಮಾಜ ಜೀವನದಲ್ಲಿ ಜಡ್ಡುಗಟ್ಟಿದ ಸ್ಥಿತಿ ಉಂಟಾಗಿತ್ತು. ಇದನ್ನು ತೊಡೆದು ಹಾಕಲು ಅಲ್ಲಲ್ಲಿ ವೈಯಕ್ತಿಕವಾಗಿ ಪ್ರತಿಕ್ರಿಯೆಗಳು ತೋರುತ್ತ ನಡೆದಿದ್ದವು. ಕೊಂಡಗುಳಿ ಕೇಶಿರಾಜ, ಬಾಹೂರ ಬೊಮ್ಮಯ್ಯ, ತೆಲುಗು ಜೊಮ್ಮಯ್ಯ, ಜೇಡರ ದಾಸಿಮಯ್ಯ ಮೊದಲಾದ ಬಸವಣ್ಣನವರ ಹಿರಿಯ ಸಮಕಾಲೀನರಾದ ಶರಣರು, ಅರಸೊತ್ತಿಗೆಯನ್ನು ದಿಕ್ಕರಿಸುವ ಮೂಲಕ, ಮೇಲು-ಕೀಳು, ಸ್ತ್ರೀ-ಪುರುಷ, ಪ್ರಭು-ಪ್ರಜೆ, ಉತ್ತಮ-ಅಧಮ ಎಂಬ ಭೇದಭಾವ ತೊಡೆಯುವುದರ ಮೂಲಕ, ಅನುಭಾವ ಗೋಷ್ಠಿ ನಡೆಸುವುದರ ಮೂಲಕ, ಶಿವಪರವಾದ, ಜನಪರವಾದ ಕೃತಿಗಳನ್ನು ರಚಿಸುವುದರ ಮೂಲಕ ಸ್ಥಗಿತ ವ್ಯವಸ್ಥೆಯನ್ನು ಒಡೆದುಹಾಕಲು ಪ್ರಯತ್ನಗಳನ್ನು ನಡೆಸಿದರು."[೨೨] ವರ್ಗ, ವರ್ಣ, ಜಾತಿ ಭೇದಗಳನ್ನು

ನಿರಾಕರಿಸುವ ಶರಣರ ವಚನಗಳು ತಮ್ಮದೇ ಆದ ತಾತ್ವಿಕ ಚೌಕಟ್ಟನ್ನು ನಿರ್ಮಿಸಿದವು. ಅವುಗಳಲ್ಲಿ ಗುರು-ಲಿಂಗ-ಜಂಗಮ ಮೊದಲಾದ ಅಷ್ಟಾವರಣಗಳು, ಪಂಚಾಚಾರಗಳು, ಷಟ್‌ಸ್ಥಲ ಮಾರ್ಗ, ಕಾಯಕ-ದಾಸೋಹದ ಪರಿಕಲ್ಪನೆಗಳು, ಭಕ್ತಿ-ಭಾವದ ರೀತಿ ಮಾರ್ಗಗಳು, ಸೇರಿದವು. ಈ ತತ್ವಗಳ ಆಧಾರದ ಮೇಲೆ, ಅಂತರಂಗ ಬಹಿರಂಗದ ವಿಕಾಸ, ನಡೆ - ನುಡಿ, ಆಚಾರ - ವಿಚಾರ, ಜ್ಞಾನ-ಕ್ರಿಯೆಗಳ ಸಮನ್ವಯವನ್ನು ಸಾಧಿಸಿಕೊಂಡು ಸಮಾಜ ಸುಧಾರಣೆಗೆ ದಾರಿ ತೋರಿದ ಧಾರ್ಮಿಕವಾದ ಈ ವಿಚಾರಗಳು ಅವರ ವಚನ ರಚನೆಯನ್ನು ನಿರ್ದೇಶಿಸುವ ಪ್ರಮುಖ ನೆಲೆಗಳಾಗಿ ನಿರೂಪಿತವಾದವು ಆದರೂ ಇಲ್ಲಿ ನಾವು ಶರಣರು ಸಾನುಭವಕ್ಕೆ ಅಭಿವ್ಯಕ್ತಿಕೊಟ್ಟುಕೊಳ್ಳುವ ಜನಪದ ರೂಢಿಯನ್ನೇ ಅವುಗಳ ರಚನೆಯಲ್ಲಿ ಬಳಸಿಕೊಂಡದ್ದು ಎದ್ದು ಕಾಣುವುದನ್ನು ಗಮನಿಸುತ್ತೇವೆ.

**ಶಂಕರ ಮೊಕಾಶಿ ಪುಣೇಕರ** ಅವರು 'ಧರ್ಮನಿರಪೇಕ್ಷತೆಯು' ನವೋದಯ ಸಂದರ್ಭದಲ್ಲಿ ಪಡೆದುಕೊಂಡಿರುವ ಸ್ವರೂಪವನ್ನು ಖಚಿತವಾಗಿ ಗುರುತಿಸಿದ್ದಾರೆ. ಅವರು ಹೇಳುವುದೇನೆಂದರೆ ಧರ್ಮಯುಗದಿಂದ ಕಣ್ತೆರೆದು ವ್ಯಕ್ತಿತ್ವವನ್ನು ಗುರುತಿಸಿ, ಮಾನಸಿಕ ಸ್ಥರಗಳಲ್ಲಿಯೇ ಭಾವಜೀವನದ ಸ್ವಯಂ ಪೂರ್ಣತೆಯನ್ನು ಸವಿಯುವ ಹೊಸಯುಗದ ಲಕ್ಷಣವಾಗಿ 'ಮಾನವ ಕೇಂದ್ರಿತ ವ್ಯಕ್ತೀಕರಣ' ಕಂಡು ಬರುತ್ತದೆ.[೨೩] ಮನುಷ್ಯನ ಎಲ್ಲ ಭಾವನೆ, ಸಂವೇದನೆಗಳು, ಮಾನವನ ಮನಸ್ಸಿನಲ್ಲಿಯೇ ಹುಟ್ಟಿ, ಆ ಮಾನವಿಕ ಸ್ತರದಲ್ಲಿಯೇ ಅವು ಪರಿಪಾಕಗೊಳ್ಳುವ ಕ್ರಿಯೆಯೇ 'ಮಾನವ ಕೇಂದ್ರಿತ ವ್ಯಕ್ತೀಕರಣ'. ಇದು ಬಸವಾದಿ ಶಿವಶರಣರಲ್ಲಿ ತಮ್ಮೆಲ್ಲ ಆಂತರಂಗದ ನೋವು ನಲಿವುಗಳಿಗೆ ಯಾವುದೋ ಅಲೌಕಿಕ ದೈವವನ್ನು ಸಾಕ್ಷಿಯನ್ನಾಗಿಟ್ಟುಕೊಂಡು ಅ ಮೂಲಕ ಅದನ್ನು ಪರಿಭಾವಿಸುವ ಕ್ರಿಯೆ ನಡೆಸಿದರು, ನವೋದಯ ಸಾಹಿತ್ಯ ಹಾಗೂ ಆಧುನಿಕ ವಚನಕಾರರಲ್ಲಿ 'ಅಲೌಕಿಕ ದೈವವನ್ನು' ಸಾಕ್ಷಿಯಾಗಿರಿಸಿಕೊಳ್ಳದೆ ತನ್ನೊಳಗಿನ ಶಕ್ತಿಯನ್ನೇ **'ಆತ್ಮ'**ನೆಂಬ ಸಂಕೇತದ ಮೂಲಕ ಪರಿಭಾವಿಸುವ ಕ್ರಿಯೆ ಇಲ್ಲಿ ಜರುಗಿತು. ಇದು ಆಧುನಿಕ ವಚನಗಳ ಕಾವ್ಯದ ಪ್ರಮುಖ ಲಕ್ಷಣವೆನಿಸುತ್ತದೆ.

ಈ ಸಂದರ್ಭದಲ್ಲಿ 'ಜರುಗಿರುವ **'ಭಕ್ತಿ ಮಾರ್ಗ'**ವೂ ಇದೇ ಹಿನ್ನೆಲೆಯಲ್ಲಿ ಸ್ಥಿತ್ಯಂತರಗೊಂಡಿರುವುದನ್ನು ತಿಳಿಯಬಹುದು. 'ಧರ್ಮಯುಗ'ದಿಂದ ಹೊರಬಂದು, ಮಾನವಿಕಸ್ತರದಲ್ಲಿಯೇ ಆ ಧರ್ಮಯುಗದ ಸಾಮಗ್ರಿಯನ್ನು 'ಹೊಸ ಯುಗ'ವು ತನ್ನ ಅಭಿವ್ಯಕ್ತಿಗಾಗಿ ಬಳಸಿಕೊಂಡಿತು. ಹೀಗಾಗಿ ಆಧುನಿಕ ವಚನಗಳ **'ವಚನಾಂಕಿತ'**, 'ದೈವ'ವೆಂಬ ಸಂಕೇತದಲ್ಲಿ ಬದುಕಿದರೂ ಅದು ಇಲ್ಲಿ **'ಅಂತರಾತ್ಮ'**ವಾಗಿ ಪರಿಣಮಿಸುತ್ತದೆ. ಹೀಗಾಗಿ ಆಧುನಿಕ ವಚನ ಸಾಹಿತ್ಯವು ತನ್ನ ಹಿಂದಿನ ಭಕ್ತಿಪೂರ್ಣವಾದ ಶರಣರ ವಚನಗಳಿಂದ ಪ್ರೇರಣೆಯನ್ನು ಪಡೆದುಕೊಂಡಿರುವಂತೆಯೇ, ಅದರಿಂದ ಭಿನ್ನವಾಗಿ ನಿಲ್ಲುವ ಪರಿಯನ್ನೂ ಇಲ್ಲಿ ಕಂಡುಕೊಳ್ಳಬಹುದಾಗಿದ್ದನ್ನು ತಿಳಿಯಬಹುದು.

ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ನಿರೂಪಿತಗೊಂಡಿರುವ **ಆಧುನಿಕ ವಚನಗಳು** ರಚನೆಯ ತಾಂತ್ರಿಕತೆಯ ದೃಷ್ಟಿಯಿಂದ ಶರಣರ ವಚನಗಳಿಂದ ಪ್ರೇರಿತವಾಗಿರುವಂತೆ, ಅನ್ಯಮೂಲಗಳಿಂದಲೂ ಪ್ರಭಾವಿತವಾಗಿವೆ. ಅನುಭಾವದ ಕಾವುಳ್ಳ ಆಡುಮಾತಿನ ಗದ್ಯವು, ಕಾವ್ಯಾತ್ಮಕ ಶೈಲಿಯಲ್ಲಿ ಪ್ರಕಟಣೆಗೊಳ್ಳುವ ಬಗೆಯು ಪ್ರಪಂಚದ ಹಲವಾರು ಅನುಭಾವಿ ಗದ್ಯ ಬರಹಗಳಲ್ಲಿ ಕಂಡುಬರುತ್ತದೆ. ಪ್ರಕೃತಿಯ ಪ್ರತಿಯೊಂದು ಮುಖವನ್ನೂ ತನ್ನ ಆಲೋಚನೆಯ ಪ್ರಖರತೆಯ ಅಭಿವ್ಯಕ್ತಿಗಾಗಿ ಬಳಸಿಕೊಳ್ಳುವ ಖಲೀಲ ಗಿಬ್ರಾನನ ರಚನೆಗಳು

ಹೃದಯಸ್ಪರ್ಶಿಯಾದ ಮಾನವೀಯತೆಯ ಮಿಡತವನ್ನೇ ಒಳಗೊಂಡಿವೆ. ತಾತ್ವಿಕ ಭಾವನೆಗಳಿಗೆ ಅಭಿವ್ಯಕ್ತಿಕೊಡುವ ಗಿಬ್ರಾನನ ರಚನೆಗಳಲ್ಲಿ ಚಿಂತನೆಯ ಸೌಂದರ್ಯವೇ ತನ್ನ ಕಲ್ಪಕತೆಯಿಂದಾಗಿ ಓದುಗರ ಮನವನ್ನು ಸೆರೆಹಿಡಿಯುತ್ತದೆ. ಗಿಬ್ರಾನನ ಅರಬ್ಬೀ ಕವನಗಳನ್ನು 'ಆಂಡ್ರೋ ಫರೀಬ್' ಎಂಬುವವನು '**ವಚನ ಕವನ**'ಗಳಾಗಿ ಹೊರತಂದಿದ್ದಾನೆ."[೨೪] ಹಾಗೆಯೇ – ಲೋಕಾನುಭವ, ಅನುಭವ ಪಕ್ವತೆ ಹಾಗೂ ಭಾಷಾಭಿವ್ಯಕ್ತಿಯ ದೃಷ್ಟಿಯಿಂದ ಶರಣರ ವಚನಗಳ ಗುಣಗಳನ್ನು ಕಾಣಬಹುದಾದ ರಚನೆಗಳು ರಾಮಕೃಷ್ಣ ವಚನವೇದ, ಬೈಬಲ್ ಸೂಕ್ತಿಗಳು ಮುಂತಾದವುಗಳಲ್ಲಿವೆ.

ಒಟ್ಟಿನಲ್ಲಿ ಆಧುನಿಕ ವಚನ ಸಾಹಿತ್ಯದ ಮೇಲೆ ಶಿವಶರಣರ ವಚನಗಳ ಪ್ರೇರಣೆಯಿರುವಂತೆ, ಏಕಕಾಲಕ್ಕೆ ಅನ್ಯದೇಶಿಯ, ಅನ್ಯಭಾಷಿಕ ನವೋದಯ ಕನ್ನಡ ಸಾಹಿತ್ಯ ಹಾಗೂ ವಿಚಾರಗಳ ಪ್ರಭಾವವಾಗಿರುವುದು ಕಂಡು ಬರುತ್ತದೆ. ಹಾಗೆಯೇ ಅದು ವಚನಕಾರರ ಸ್ವಂತಿಕೆ, ಪ್ರಾದೇಶಿಕತೆ, ಆಡುನುಡಿ ಮತ್ತು ಸಂಸ್ಕೃತಿಕ ಪರಂಪರೆಯನ್ನು ಸೃಜನಶೀಲತೆಗೆ ಮೂಲ ಪ್ರೇರಣೆಯಾಗಿಸಿಕೊಂಡು ಆಧುನಿಕ ವಚನ ರಚನೆಯು ಸಿದ್ಧಗೊಂಡಂತಿದೆ.

**ಆಧುನಿಕ ವಚನಗಳ ಪ್ರಾರಂಭ**

'ವಚನ ಸಾಹಿತ್ಯ'ವು ತನ್ನದೇ ಆದ ವಿಶಿಷ್ಟ ಪರಂಪರೆಯನ್ನು ಹೊಂದಿದ್ದು ೧೨ನೇಯ ಶತಮಾನದಿಂದ ಇಂದಿನವರೆಗೆ ವಿವಿಧ ರೀತಿಯಲ್ಲಿ, ಆಯಾ ಕಾಲದ ಅಗತ್ಯ ಹಾಗೂ ಪರಿಸರಕ್ಕೆ ತಕ್ಕಂತೆ ರಚನೆಗೊಂಡಿದೆ. ಹಿಂದಿನ ಸಾಹಿತ್ಯ ಪರಂಪರೆಯಿಂದ ಬಿಡಿಸಿಕೊಂಡು ಸ್ವತಂತ್ರವಾಗಿ, ಸ್ವಚ್ಛಂಧವಾಗಿ ನಿರೂಪಿತಗೊಂಡಿರುವ ವಚನಗಳು ಎಂ.ಆರ್. ಶ್ರೀಯವರು ಹೇಳುವಂತೆ 'ಕನ್ನಡದ ಸ್ವಯಾರ್ಜಿತ ಸೊತ್ತುಗಳು. ಗದ್ಯ-ಪದ್ಯಗಳ ನಡುವಿನ ಮಾದರಿಗಳೆಂದು ಕರೆಯಲ್ಪಡುವ ಇವು, ಯಾವುದೇ ಸಿದ್ಧ, ಸ್ಥಾವರ ವ್ಯವಸ್ಥೆಯನ್ನು ಒಪ್ಪಿಕೊಳ್ಳದ ಸ್ವತಂತ್ರ ಮನೋಧರ್ಮದ ಪ್ರತೀಕಗಳೆನಿಸಿವೆ. ತಮ್ಮದೇ ಆದ ವಿಶಿಷ್ಟತೆ ಹಾಗೂ ಸ್ವಂತಿಕೆಯನ್ನು ಹೊಂದಿರುವ ಶರಣರ ವಚನಗಳ ಅಚ್ಚಳಿಯದ ಪ್ರಭಾವದಿಂದಾಗಿ ಆಧುನಿಕ ಯುಗದಲ್ಲಿಯೂ 'ವಚನ'ವೆಂಬ ಮಾಧ್ಯಮ ಬೆಳೆಯಲು ಕಾರಣವಾಯಿತು.

ಬಸವಾದಿ ಶರಣರ ಕಾಲದ ನಂತರದಲ್ಲಿ ಅಲ್ಲಲ್ಲಿ ವಚನಗಳ ಮಾದರಿಯು ದೇಶಿ ಛಂದಸ್ಸಿನಲ್ಲಿ ಕಾಣಬರುತ್ತಿದ್ದರೂ, ಹೊಸಗನ್ನಡದ ನವೋದಯ ಸಂದರ್ಭದಿಂದ ಮೊದಲ್ಗೊಂಡು ಇಂದಿನವರೆಗೆ ರಚನೆಗೊಂಡಿರುವ 'ವಚನ ಸ್ವರೂಪ ಸಾಹಿತ್ಯವನ್ನು 'ಆಧುನಿಕ ವಚನ ಸಾಹಿತ್ಯ'ವೆಂದು ಕರೆಯಲಾಗಿದೆ. "ಕನ್ನಡದಲ್ಲಿ ಆಧುನಿಕ ವಚನಗಳನ್ನು ಮೊದಲು ಬರೆದವರು ದ.ರಾ. ಬೇಂದ್ರೆಯವರು ಎಂಬ ಹೇಳಿಕೆಯೊಂದಿದೆ. ಇವರು ೧೯೩೦-೩೧ರಲ್ಲಿ '**ನೋವಿನ ನೆಲೆ-ಹಿಗ್ಗಿನ ಬೆಲೆ**' ಎಂಬ ವಚನಗಳನ್ನು ಮೊದಲು ಬರೆದರು (ಜಿ.ಎಂ. ಹೆಗಡೆ) ಆನಂತರ 'ಜಯಕನಾಟಕ'ದಲ್ಲಿ ೧೯೩೧ರಲ್ಲಿ ಅವರ '**ಕರುಳಿನ ವಚನ**'ಗಳು ಪ್ರಕಟವಾದವು ಎನ್ನಲಾಗಿದೆ.[೨೫] ಇತ್ತೀಚೆಗೆ ಡಾ. ಮಾಣಿಕರಾವ ಧನಾಶ್ರೀಯವರು ೨ನೇಯ ಸಲ ಪ್ರಕಟಿಸಿರುವ 'ಹರ್ಡೇಕರ ಮಂಜಪ್ಪ'ನವರ '**ಜನಸೇವಕನ ವಚನಗಳು**' ಎಂಬ ೩೨ ವಚನಗಳ ಕಿರು ಕೃತಿಯ ಪ್ರಸ್ತಾವನೆಯಲ್ಲಿ, ಹರ್ಡೇಕರ ಮಂಜಪ್ಪನವರೇ ಆಧುನಿಕ ವಚನ ಸಾಹಿತ್ಯಕ್ಕೆ ಆದ್ಯರೆಂಬುದು ನಮ್ಮ ಪ್ರಾಮಾಣಿಕ ಅಭಿಪ್ರಾಯವಾಗಿದೆ ಎಂದು ಬರೆದಿದ್ದಾರೆ.[೨೬] ಇದಕ್ಕೆ ಅವರು ಕೊಡುವ ಕಾರಣವೆಂದರೆ ಹರ್ಡೇಕರ ಮಂಜಪ್ಪನವರ ಸಾಹಿತ್ಯ ರಚನೆಯ ಕಾಲ ಸು. ೧೯೨೭ ರಿಂದಾಗುತ್ತದೆ. ಹೀಗಾಗಿ ಅವರು ೧೯೩೦ರೊಳಗೆ ವಚನಗಳನ್ನು ಬರೆದಿರಬಹುದೆಂಬುದು ಅವರ ವಿಚಾರ. ಅವರ 'ಜನಸೇವಕನ ವಚನಗಳು' ೧೯೩೩ರಲ್ಲಿ ಪ್ರಕಟವಾದರೆ, ನಂತರ ಎಸ್.ವ್ಹಿ. ರಂಗಣ್ಣನವರ

**'ರಂಗಯ್ಯನ ವಚನ'**ಗಳು ೧೯೩೪ರಲ್ಲಿ ಬರಹಗಾರನ ಹೆಸರಿಲ್ಲದೆ ಪತ್ರಿಕೆಯಲ್ಲಿ ಪ್ರಕಟವಾಗಿವೆ.[೨೭] ಇಲ್ಲಿ ೧೫ ವಚನಗಳು ಪ್ರಕಟವಾಗಿವೆ. ಅವರ ವಚನ ಸಂಕಲನ **'ರಂಗಭಿನ್ನಪ'** ಪ್ರಕಟವಾದದ್ದು ೧೯೬೩ರಲ್ಲಿ. ಇದಕ್ಕೂ ಮೊದಲು ಅಂದರೆ ೧೯೩೨ರಲ್ಲಿಯೇ ಹರ್ಡೇಕರ ಮಂಜಪ್ಪನವರ ಕೃತಿ **'ಜನಸೇವಕನ ವಚನಗಳ'** ಪ್ರಥಮ ಮುದ್ರಣವಾದದ್ದು ತಿಳಿದುಬರುತ್ತದೆ.[೨೮]

ಬೇಂದ್ರೆಯವರ **'ಕರುಳಿನ ವಚನಗಳು'**, ಕುವೆಂಪು ಅವರ **'ಕಿಂಕಿಣಿ'** ಮತ್ತು ದಿವಾಕರರ **'ಅಂತರಾತ್ಮನಿಗೆ'** ಎಂಬುವುಗಳು ನವೋದಯ ಸಾಹಿತ್ಯದಲ್ಲಿ ವಚನಗಳನ್ನು ಹೋಲುವ ಕೃತಿಗಳಾಗಿವೆ. ಗದ್ಯಗೀತಾತ್ಮಕ ಗುಣವುಳ್ಳ ಇವುಗಳ ಮೇಲೆ ವಿಶ್ವಕವಿ ರವೀಂದ್ರನಾಥ ಠಾಕೂರನ 'ಗೀತಾಂಜಲಿ'ಯ ದಟ್ಟವಾದ ಪ್ರಭಾವವಿದೆ ಎಂದು ಗುರುತಿಸುವ ಅನ್ನದಾನಯ್ಯ ಪುರಾಣಿಕರು ಅವುಗಳ ರಚನೆಯನ್ನು ಮೆಚ್ಚಿಕೊಂಡಿದ್ದಾರೆ. ಕುವೆಂಪು ಹಾಗೂ ಬೇಂದ್ರೆಯವರು ವಚನ ರಚನೆಯಲ್ಲಿ ಮುಂದುವರೆಯದೇ ಹೊದದ್ದು ವಚನ ಸಾಹಿತ್ಯಕ್ಕೆ ನಷ್ಟವಾಯಿತು. ಎಂದೂ ಹೇಳಿದ್ದಾರೆ.[೨೯] ಆದರೆ ಜಿ.ಎನ್. ಹೆಗಡೆಯವರು ಬೇಂದ್ರೆ ಹಾಗೂ ಕುವೆಂಪು ಅವರ ಈ ರಚನೆಗಳನ್ನು 'ವಚನಗಳು' ಎಂದು ಹೇಳಲುಬಾರದು. ಯಾಕಂದರೆ ಇವು 'ಗದ್ಯಗೀತೆ'ಯಂತೆ ಕಂಗೊಳಿಸುತ್ತವೆ[೩೦] ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.. ಸ್ವತಃ ಬೇಂದ್ರೆಯವರೇ ತಮ್ಮ ವಚನ ರಚನೆಯ ದೃಷ್ಟಿಕೋನ ವಿಭಿನ್ನವಾದ್ದೆಂದು ಹೇಳಿ, ಅವು ಲೌಕಿಕ ಭಾವದ ಪ್ರಕಟಣೆಗೆ ಬಳಸಿಕೊಂಡಂಥವುಗಳು, ತಾವು ಕಾವ್ಯದಲ್ಲಿ ಸ್ವಚ್ಛಂದ್ರ ಛಂದೋಲಯವನ್ನು ತರುವುದಕ್ಕಾಗಿ ಈ ಬಗೆಯ ಹೊಸ ಪ್ರಯೋಗಗಳನ್ನು ಮಾಡಿಕೊಂಡಿದ್ದಾಗಿ ಹೇಳಿಕೊಂಡಿದ್ದಾರೆ. ಆದರೂ ಆಧುನಿಕ 'ವಚನ ಸಾಹಿತ್ಯ' ಸ್ವರೂಪಕ್ಕೆ ನವೋದಯ ಕವಿಗಳು ಸ್ಪಂದಿಸಿದ್ದನ್ನು, ಆ ಮೂಲಕ ನೂತನ ಕಾವ್ಯ ಪ್ರಯೋಗವನ್ನು ಕಂಡುಕೊಂಡರೆಂಬುದನ್ನು ಇಲ್ಲಿ ಮನಗಾಣಬಹುದು.

ಡಾ. ಬಸವರಾಜ ಸಬರದ ಅವರು ದಿನಾಂಕ : ೨೯–೧೧–೨೦೧೬ ರಂದು ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಜರುಗಿದ ಡಾ. ಎಸ್.ಎಂ. ಹಿರೇಮಠರ ೬೦ನೆಯ ವರ್ಷದ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಮಾತನಾಡುತ್ತ, ಕನ್ನಡದ ಪ್ರಪ್ರಥಮ ಆಧುನಿಕ ವಚನಕಾರ ರಾಯಚೂರ ಜಿಲ್ಲೆಯ ದೇವದುರ್ಗದ **'ಆದಿ ಅಮಾತೆಪ್ಪ'** ಎಂದು ಹೇಳಿದರು. ಆತನು ೧೯೨೧ರ ಸುಮಾರಿನಲ್ಲಿಯೇ **'ದೇವದುರ್ಗ ವಚನ'**ಗಳನ್ನು ರಚಿಸಿದ್ದಾನೆ. ಅವು ಈಗ ಬೆಳಕಿಗೆ ಬಂದಿವೆ ಎಂದು ಹೇಳಿದರು. ಅವು ಮತ್ತೊಮ್ಮೆ ೧೯೮೧ರಲ್ಲಿ ಪ್ರಕಟವಾಗಿರುವಂತಿದೆ ಎಂದು ತಿಳಿಸಿದ್ದಕ್ಕೆ ಅವರು ಹೆಚ್ಚಿನ ಆಧಾರಗಳನ್ನು ಕೊಡಲಿಲ್ಲ.

೧೯೮೭ರಲ್ಲಿ ಹರ್ಡೇಕರ ಮಂಜಪ್ಪನವರ ವಚನಗಳನ್ನು ಸಂಪಾದನೆ ಮಾಡಲಾಗಿದ್ದು, ಅದರ ಮುನ್ನುಡಿಯಲ್ಲಿ ಡಾ. ಸಿದ್ಧಯ್ಯ ಪುರಾಣಿಕರು "ನನಗೆ ನೆನಪಿರುವಂತೆ ಹರ್ಡೇಕರ ಮಂಜಪ್ಪನವರು, **'ಜನಸೇವಕನ ವಚನಗಳು'** ಎಂಬ ವಚನಗಳನ್ನು ಬರೆದುದುಂಟು. ಅವು ಒಂದು ಪುಸ್ತಿಕೆಯ ರೂಪದಲ್ಲಿ ಪ್ರಕಟವಾಗಿದ್ದಂತೆ ಕೂಡ ನೆನಪಿದೆ. ಆ ಪುಸ್ತಿಕೆಯಲ್ಲಿರುವ ವಚನಗಳೂ ಈಗ ಪ್ರಕಟವಾಗುತ್ತಿರುವ ಈ ವಚನಗಳೂ ಒಂದೇ ಆಗಿದ್ದಲ್ಲಿ ಇವುಗಳ ಕರ್ತೃತ್ವದ ಬಗ್ಗೆ ಸಂದೇಹವೇ ಉಳಿಯುವದಿಲ್ಲ." ಹೊಸಗನ್ನಡ ಯುಗದಲ್ಲಿ ವಚನ ರಚನೆಯನ್ನು ಪ್ರಾರಂಭೀಸಿದವರಲ್ಲಿ ಹರ್ಡೇಕರ ಮಂಜಪ್ಪನವರೇ ಮೊದಲಿಗರಾಗಬಹುದು[೩೧]. ಎಂದಿರುವುದನ್ನು ಗಮನಿಸಬಹುದು. ಈ ಹೇಳಿಕೆಗಳ ನ್ನು ಗಮನಿಸಿದರೆ ಸದ್ಯದ ಮಟ್ಟಿಗೆ ಹರ್ಡೇಕರ ಮಂಜಪ್ಪನವರೇ ಆಧುನಿಕ ವಚನಕಾರರಲ್ಲಿ ಮೊದಲಿಗರು ಎಂದು ತಿಳಿದುಕೊಳ್ಳಬಹುದಾಗಿದೆ.

**ಆಧುನಿಕ ವಚನಕಾರರ ಪರಂಪರೆ**

೧೨ನೇಯ ಶತಮಾನದ 'ವಚನ ಸಾಹಿತ್ಯ'ಕ್ಕಿಂತ ಭಿನ್ನವಾದ ನೆಲೆಗಳನ್ನು ಹೊಂದಿರುವ 'ಆಧುನಿಕ ವಚನ'ಗಳ ರೀತಿ–ನೀತಿಗಳು ಬೇರೆ ಬೇರೆ ಆಗಿದ್ದರೂ, ಅಲ್ಲಿರುವ ರಚನೆಯ ಸ್ವರೂಪ, ಅಭಿವ್ಯಕ್ತಿ ಮಾರ್ಗ ಬೇರ ಬೇರೆ

ಆಗಿದ್ದರೂ ಅಲ್ಲಿ ವಚನಕಾರರು ತೋರಿಸುವ ಸಂದೇಶ, ಪ್ರಧಾನವಾಗಿ ಸಾಮಾಜಿಕ ಕಾಳಜಿಯಾಗಿರುವುದು ಗಮನಾರ್ಹ ಅಂಶ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಆಗಿ ಹೋಗಿರುವ ಆಧುನಿಕ ವಚನಕಾರರು ತಮ್ಮ ಪರಿಸರದ ಪ್ರೇರಣೆ ಹಾಗೂ ತಮ್ಮದೇ ಆದ ಧೋರಣೆಗಳ ಹಿನ್ನೆಲೆಯಲ್ಲಿ, ತಮ್ಮ ತಮ್ಮ ರಚನೆಗಳಲ್ಲಿ ಆದರ್ಶ ಹಾಗೂ ಸಾಮಾಜಿಕ ಪ್ರಜ್ಞೆಯನ್ನು ಜೀವಂತವಾಗಿ ಉಳಿಸಿಕೊಂಡು, ಬೆಳೆಸಿಕೊಂಡು ಬಂದಿರುವುದು ಗೊತ್ತಾಗುತ್ತದೆ.

ಕರ್ನಾಟಕವನ್ನು ಕುರಿತು ಹೇಳುವುದಾದರೆ ಕನ್ನಡ ವಚನಕಾರ ಪರಂಪರೆಯು ಪ್ರಮುಖವಾಗಿ ನಾಲ್ಕು ಘಟ್ಟಗಳಲ್ಲಿ ಕಂಡುಬರುತ್ತದೆ. ಅವುಗಳೆಂದರೆ.

೧) ಬಸವ ಪೂರ್ವಯುಗದ ವಚನಕಾರರು

೨) ಬಸವಯುಗದ ವಚನಕಾರರು

೩) ಬಸವೋತ್ತರ ಯುಗದ ವಚನಕಾರರು

೪) ಆಧುನಿಕ ಯುಗದ ವಚನಕಾರರು

ಮೊದಲ ಮತ್ತು ಎರಡನೆಯ ಯುಗದ ವಚನಕಾರರನ್ನು ಶಿವಶರಣರೆಂದು, ಬಸವೋತ್ತರ ಯುಗದವರನ್ನು ಸಂಕಲನಕಾರರು ಹಾಗೂ ಸಂಪಾದನೆಕಾರರೆಂದು ಗುರುತಿಸಿದರೆ, ಆಧುನಿಕ ಯುಗದ ವಚನಕಾರರನ್ನು ವಚನರಚನಕಾರರೆಂದು ಕರೆಯಲಾಗುತ್ತದೆ.

ಮೇಲ್ಕಾಣಿಸಿದ ಒಂದರಿಂದ ಮೊದಲಿನ ಮೂರು ಯುಗದ ವಚನಕಾರರು, ಶುದ್ಧ ಪಾರಮಾರ್ಥಿಕ ಸಾಧನೆಯ ಮಾರ್ಗದಲ್ಲಿಯೇ ವಚನಗಳನ್ನು ರಚಿಸಿದರೆ, ಆಧುನಿಕ ವಚನಗಳಲ್ಲಿ ಕೆಲವರು ಲೌಕಿಕತೆಯನ್ನು ಪಾರಮಾರ್ಥದಲ್ಲಿ ಬಳಸಿದರೆ, ಹಲವರು ಲೌಕಿಕ ಭಾವದ ಪ್ರಕಟಣೆಗೆ ಅವುಗಳನ್ನು ಬಳಸಿಕೊಂಡರು. ಬೇಂದ್ರೆಯವರ ಮಾತಿನಲ್ಲಿ ಗಮನಿಸುವುದಾದರೆ – "ಪ್ರಾಚೀನ ವಚನಗಳು ಶುದ್ಧ ಪಾರಮಾರ್ಥಿಕ ಸಾಧನೆಯ ಮಾರ್ಗದೊಳಗಿನವು. 'ಕರುಳಿನ ವಚನಗಳು' ಲೌಕಿಕ ಭಾವದ ಪ್ರಕಟಣೆಗೆ ಬಳಸಿಕೊಂಡಂಥವು."[೩೨] ಅಂದರೆ ಸ್ವಚ್ಛಂದ ಛಂದೋಲಯವನ್ನು ಬಳಸಿಕೊಂಡು, ವಿನೂತನ ಕಾವ್ಯ ಪ್ರಯೋಗವಾಗಿ ಕಂಡುದರ ಪರಿಣಾಮಗಳಿವು ಎನ್ನಬಹುದು.

ಆದರೂ ಆಧುನಿಕ ಯುಗದ ವಚನಕಾರರು ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಕಾಣಿಕೆಯನ್ನು ಕೊಟ್ಟಿದ್ದು, ಸಾಹಿತ್ಯದ ವೈವಿಧ್ಯತೆ ಹಾಗೂ ಶ್ರೀಮಂತಿಕೆಯ ದೃಷ್ಟಿಯಿಂದ ಅತಿಮಹತ್ವದ್ದನೆಸುತ್ತವೆ. ಸಮಾಜದ ಸರ್ವತೋಮುಖ ಅಭಿವೃದ್ಧಿ ಬಯಸುವ ವಚನಕಾರರಲ್ಲಿ ಕಲಬುರ್ಗಿ ಹಾಗೂ ಬೀದರ ಜಿಲ್ಲೆಯ ವಚನಕಾರರೂ ಗಮನಾರ್ಹವಾದ ಕೊಡುಗೆ ನೀಡಿದ್ದಾರೆ. ಅವರನ್ನು ಕುರಿತು ಅಧ್ಯಾಯನ ಮಾಡುವ ಮೊದಲು ಕರ್ನಾಟಕದ ಕೆಲವು ಪ್ರಮುಖ ಆಧುನಿಕ ವಚನಕಾರರನ್ನು ಇಲ್ಲಿ ಪರಿಚಯಿಸಿಕೊಳ್ಳಬಹುದು.

**ಹರ್ಡೇಕರ ಮಂಜಪ್ಪ (೧೮೮೬-೧೯೪೭)**

'ನಿರಂಜನ ಶರಣ', 'ಕನಾಟಕ ಗಾಂಧೀ' ಎಂದು ಪ್ರಸಿದ್ಧರಾಗಿದ್ದ ಹರ್ಡೇಕರ ಮಂಜಪ್ಪನವರು ಕನ್ನಡ ನಾಡಿನ ಮಹಾಚೇತನರಾಗಿದ್ದರು. ಸಾಮಾನ್ಯವಾಗಿ ಜನಿಸಿ ಅಸಾಮಾನ್ಯವಾಗಿ ಬಾಳಿ ಹೋದರು. "ಮಂಜಪ್ಪನವರು ಮುಖ್ಯತಃ ಸಾತ್ವಿಕರು, ಸಜ್ಜನರು, ಸಂಭಾವಿತರು, ಸುಶೀಲರು ಸ್ಪಷ್ಟವಾದಿಗಳು, ಸಹನಶೀಲತೆಯುಳ್ಳವರು. ಸಾಹಸವೃತ್ತಿಯವರು, ಸಾಧುಗಳು ಅವರ ದೊಡ್ಡ ಗುಣವೆಂದರೆ ನಿರಹಂಕಾರ ವೃತ್ತಿ" ಎಂದು ಕವಿಗಳು ಗುರುತಿಸಿದ್ದಾರೆ.[೩೩]

ದ.ರಾ. ಬೇಂದ್ರೆಯವರು ಮಂಜಪ್ಪನವರನ್ನು ಕುರಿತು "ಅವರು ಹುಟ್ಟಾ ಬೋಧಕರು, ಶಿಕ್ಷಕರು, ಸುಧಾರಕರು, ಅವರು ಸ್ವಭಾವತಃ ಪ್ರಯೋಗಶೀಲ ಶರಣರು, ಅವರ ಕ್ರಿಯೆ ಅದಕ್ಕೆ ಬೇಕಾದ ಜ್ಞಾನೋದಯವೇ ನಮ್ಮ ನಾಡಿನ ಭಾಗ್ಯೋದಯ"ವೆಂದು ಸಾರಿದ್ದಾರೆ. ಕವಿ ಚಾಮರಸರು ಬಾಳಿಬೆಳಗಿದ ನಾಡಾದ ಬನವಾಸಿಯಲ್ಲಿ ಹರ್ಡೇಕರ ಮಂಜಪ್ಪನವರು ೧೮೮೬ರಲ್ಲಿ ಸಾಮಾನ್ಯ ಕುಟುಂಬದಲ್ಲಿ ಜನಿಸಿದರು. ೧೯೦೩ರಲ್ಲಿ ಮುಲಕೀ ಪರೀಕ್ಷೆ ಪಾಸಾದ ಇವರು, ಖಾಸಗೀ ಶಾಲೆಯ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ೧೯೦೫ರಲ್ಲಿಯೇ ಅವರು ಕನ್ನಡ ಒಂದನೆಯ ಪುಸ್ತಕಕ್ಕೆ ಶಬ್ದಾರ್ಥ ಬರೆದ ಪುಸ್ತಕ ಪ್ರಕಟಿಸಿದರು. ಆನಂತರದಲ್ಲಿ ಅವರ ಹೋರಾಟದ ಬದುಕು ಆರಂಭವಾಯಿತು. ಆರ್ಯ ಸಮಾಜದ ಪ್ರಭಾವಕ್ಕೊಳಗಾದ ಅವರು ಶಾಸ್ತ್ರಿಯಾಗಬೇಕೆಂದು ಹಂಬಲಿಸಿದರು. ನಂತರ ಅವರು ಶಿಕ್ಷಕರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ಅವರಿಗೆ ಬಸವಣ್ಣನವರ ವಚನ 'ದಾಸೀ ಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕೆ ಸಾಕ್ಷಾತ್ ಶಿವ್‌ನೆಂದು ವಂದಿಸಿ ಪೂಜಿಸಿ ಪಾದೋದಕ ಪ್ರಸಾದವ ಕೊಂಬುದೇ ಯೋಗ್ಯ...." ಎಂಬುದನ್ನು ತೋರಿಸಿದ ಮೇಲೆ ಅದನ್ನು ಓದಿದ ಮಂಜಪ್ಪನವರ ಬಾಳಿನ ಗುರಿ ಬದಲಾಯಿತು. ದಾವಣಗೆರೆಗೆ ಪ್ರಯಾಣ ಬೆಳೆಸಿದರು 'ಧನುರ್ಧಾರಿ' ವಾರ ಪ್ರತಿಕೆ ಆರಂಭಿಸಿದರು. 'ಬಸವತತ್ವ'ದೆಡೆ ಆಕರ್ಷಿತರಾಗಿ, ಮೃತ್ಯುಂಜಯ ಸ್ವಾಮಿಗಳವರ ಸಂಪರ್ಕಕ್ಕೆ ಬಂದು ಅಥಣಿ ಶಿವಯೋಗಿಗಳಿಂದ ದೀಕ್ಷೆ ಪಡೆದರು. ಆಮೇಲೆ ಗಾಂಧೀಜಿಯವರ ದರ್ಶನ ಪಡೆದು, ಲೋಕಮಾನ್ಯ ತಿಲಕರ ಸಂಪರ್ಕಕ್ಕೆ ಬಂದು ಅವರ ವಿಚಾರಗಳ ಪ್ರಭಾವಕ್ಕೊಳಗಾಗಿ ಅನೇಕ ಸಾಮಾಜಿಕ ಕಾರ್ಯಗಳನ್ನು ಕೈಗೊಂಡರು.

'ವೀರಶೈವ ತರುಣ ಸಂಘ', ಜ್ಞಾನ ಪ್ರಸಾರಕ ಸಂಘ ಸ್ಥಾಪಿಸಿದರು. 'ರಾಷ್ಟ್ರಜೀವನ ಗ್ರಂಥಮಾಲೆ' ಪ್ರಾರಂಭಿಸಿದರು. 'ತರುಣರ ಸಮ್ಮೇಳನಗಳನ್ನು ಮಾಡಿದರು. ಖಾದಿ ಚಳುವಳಿಗೆ ನಾಂದಿ ಹಾಡಿದರು. ಆಲಮಟ್ಟಿಯಲ್ಲಿ ಆಶ್ರಮ ಸ್ಥಾಪಿಸಿ ೧೯೨೭ರಲ್ಲಿ ಅಲ್ಲೊಂದು ವಿದ್ಯಾಲಯವನ್ನು ಆರಂಭಿಸಿದರು. ಅಕ್ಕನ ಬಳಗ, ಬಸವದಳ ಸ್ಥಾಪನೆ, ಪ್ರಾರಂಭಿಸಿದ್ದಲದೆ ಕರ್ನಾಟಕದಲ್ಲಿ ಮೊಟ್ಟ ಮೊದಲು ೧೯೧೨ರಲ್ಲಿ 'ಬಸವ ಜಯಂತಿ'ಯನ್ನು ಪ್ರಾರಂಭಿಸಿದ ಕೀರ್ತಿ ಮಂಜಪ್ಪನವರದು.

'ಜ್ಞಾನೋದಯ ಗ್ರಂಥಮಾಲೆ' ಹಾಗೂ 'ಪ್ರಗತಿ ಗ್ರಂಥಮಾಲೆ' ಯೋಜನೆಯನ್ನು ತಯಾರಿಸಿ ಆ ಮೂಲಕ ಅನೇಕ ಪ್ರಗತಿಪರ ವಿಚಾರಗಳ ಲೇಖಕರ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದರು. ೧೯೦೫ ರಿಂದ ಆರಂಭಿಸಿ ೧೯೪೬ರ ವರೆಗೆ ಸುಮಾರು ೮೮ಕ್ಕಿಂತ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ.' 'ಕನ್ನಡ ಒಂದನೇ ಪುಸ್ತಕ ಶಬ್ದಾರ್ಥದಿಂದ ಆರಂಭಿಸಿ, ಪತಿತೋದ್ಧಾರ', 'ಸ್ವ ಕರ್ತವ್ಯಸಿದ್ಧಾಂತ', 'ಬಸವೇಶ್ವರ ನೈತಿಕ ವಚನಗಳು', 'ಅಪ್ಪಾಸಾಹೇಬ ವಾರದ', 'ಆಧುನಿಕ ಜರ್ಮನಿ', 'ಮಹಾತ್ಮಾ ಗಾಂಧೀ ಚರಿತ್ರೆ', 'ವೀರಶೈವ ಸಮಾಜ ಸುಧಾರಣೆ', 'ಸ್ವಾಮಿ ರಾಮತೀರ್ಥರ ಉಪನ್ಯಾಸಗಳು', 'ಅಹಿಂಸೆ', 'ಖಾದಿ', ಬುದ್ಧ ಚರಿತೆ', 'ಬಸವ ಚರಿತೆ', 'ಶಿಕ್ಷಣ',

ಏಕಲವ್ಯನ ಕಥೆ', 'ದಾಂಪತ್ಯ ಧರ್ಮ' ಇತ್ಯಾದಿ ಕೃತಿಗಳು ಗಮನಾರ್ಹವಾಗಿವೆ. ಇವುಗಳೊಂದಿಗೆ 'ಧನುರ್ಧಾರಿ, ಖಾದಿ ವಿಜಯ', 'ಉದ್ಯೋಗ', 'ಶರಣ ಸಂದೇಶ' ಎಂಬ ವಾರ ಹಾಗೂ ಮಾಸ ಪತ್ರಿಕೆಗಳನ್ನು ಅವರು ನಡೆಸಿದ್ದರು."[೩೪] ಅವರ ದೊರೆತಿರುವ ೮೮ ಕೃತಿಗಳಲ್ಲಿ **'ಜನಸೇವಕನ ವಚನಗಳು'** ಎಂಬ ಆಧುನಿಕ ವಚನ ಗ್ರಂಥ ಆಧುನಿಕ ವಚನ ಸಾಹಿತ್ಯದಲ್ಲಿ ಮೊದಲನೆಯದೆಂದು ಗುರುತಿಸಲಾಗಿದೆ.[೩೫]

ಸಮಾಜ ಸೇವೆ, ರಾಷ್ಟ್ರ ಸೇವೆ ಹಾಗೂ ಜನಪರ ಕಾರ್ಯಗಳಿಗೆ ತಮ್ಮ ಜೀವನವನ್ನೇ ಮುಡುಪಾಗಿರಿಸಿದಂತಹ ಮಹಾನ್ ಚೇತನ ಮಂಜಪ್ಪನವರು. ಆದ್ಯ ಆಧುನಿಕ ವಚನಕಾರರೆನಿಸಿರುವ ಅವರ 'ಜನಸೇವಕನ ವಚನಗಳು' ಎಂಬ ೩೨ ವಚನಗಳ ಸಂಕಲವನ್ನು ಪ್ರಪ್ರಥಮವಾಗಿ ಪ್ರಕಟಿಸುವುದರೊಂದಿಗೆ ಇಂದಿನ ವಚನ ಸಾಹಿತ್ಯಕ್ಕೆ ಹೊಸ ರೂಪ ನೀಡಿದ್ದಾರೆ. "ಕನ್ನಡಕ್ಕೆ ಎಲ್ಲವನ್ನು ಕೊಟ್ಟ ವ್ಯಕ್ತಿ ಒಬ್ಬನೇ ಎಂಬ ಸಥ್ಯವನ್ನು ಒತ್ತಿ ಹೇಳಿದರೆ ಮಂಜಪ್ಪನವರನ್ನು ಬಲ್ಲವರೂ ಬೆರಗಾಗಬಹುದು. ಅವರ ಕೃತಿ ವೈಫಲ್ಯವನ್ನು, ವೈವಿಧ್ಯವನ್ನು, ವೈಶಿಷ್ಟ್ಯವನ್ನು ಕಂಡು ಬೆರಗಾಗುವವರೇ ಇವುಗಳನ್ನು ಅಪೇಕ್ಷಿಸಿದವರ ಬಗ್ಗೆ ಕನಿಕರ ತೋರದಿರಲಾರರು" ಎಂದಿದ್ದಾರೆ ಸಿದ್ಧಯ್ಯ ಪುರಾಣಿಕರು.[೩೬]

ತಾವು ಸ್ವೀಕರಿಸಿದ 'ಧರ್ಮ'ದ ಶ್ರೇಷ್ಠತೆಯನ್ನು ಉಳಿಸುವ ಹಿನ್ನೆಲೆಯಲ್ಲಿ ಅವರ 'ಪ್ರಭುದೇವ' ಅಂಕಿತದ ವಚನಗಳು, ವಚನಕಾರರ ಆತ್ಮನಿವೇದನೆಯ ನುಡಿಗಳಾಗಿವೆ. ತಮ್ಮನ್ನು **'ಜನಸೇವಕ'**ನೆಂದು ಗುರುತಿಸಿಕೊಳ್ಳುವಲ್ಲಿ ಅವರು ಬಸವ ಮಾರ್ಗದಲ್ಲಿರುವುದನ್ನು ಅರಿಯಬಹುದು. ವಿನಯತನ, ಪ್ರಾಮಾಣಿಕತೆ, ಜನಪರ ದೃಷ್ಟಿ, ಸಮಾಜಾಭಿವೃದ್ಧಿಯ ಚಿಂತನೆಗಳ ಜೀವನ ಮೌಲ್ಯಗಳ ವಿವೇಚನೆ ಆ ವಚನಗಳಲ್ಲಿದೆ. ಆಧುನಿಕ ವಚನ ಸಾಹಿತ್ಯದ ಆರಂಭದ ಘಟ್ಟದಲ್ಲಿದ್ದ ಮಂಜಪ್ಪನವರು, ತಮ್ಮ ಸಮಷ್ಠಿ ಪ್ರಜ್ಞೆಯ ಮೂಲಕ ಈ ಸಾಹಿತ್ಯ ಪ್ರಕಾರಕ್ಕೊಂದು ಉತ್ತಮ ಅಡಿಪಾಯ ಹಾಕಿದ್ದಾರೆ ಎನ್ನಬಹುದು.

ಮಂಜಪ್ಪನವರ ವಚನಗಳಲ್ಲಿ ವ್ಯಕ್ತವಾಗಿರುವ ಗುರುಸ್ತುತಿ, ಗುರುಸ್ವರೂಪದರ್ಶನ, ಆತ್ಮವಿಮರ್ಶೆಗಳು, ಅವರ ವ್ಯಕ್ತಿತ್ವದ ದರ್ಶನ ಮಾಡಿಸುತ್ತವೆ. ಬಸವಣ್ಣ ಹಾಗೂ ಗಾಂಧೀಜಿಯವರ ಆರಾಧಕರಾಗಿದ್ದ ಹರ್ಡೇಕರ ಅವರು ಒಂದರ್ಥದಲ್ಲಿ ಆ ಎರಡೂ ವ್ಯಕ್ತಿತ್ವಗಳ ಪ್ರತಿನಿಧೀಯಂತೆ ಇದ್ದರು. ಸಾಮಾಜಿಕ ಕಳಕಳಿ, ತ್ಯಾಗಮನೋಭಾವ, ಲೋಕಾನುಭಾವಿತ್ವಗಳು ಅವರ ಶಿವಾನುಭವದ ಜೀವನ ದರ್ಶನ ಮಾಡುತ್ತವೆ. ಆಧ್ಯಾತ್ಮದ ಅನುಸಂಧಾನಿಯಾಗಿದ್ದ ಅವರ ವ್ಯಕ್ತಿತ್ವ ಹಿರಿದಾಗಿತ್ತು. ಶರಣ ಜೀವನದ ಪ್ರಾಮಾಣಿಕ ವ್ಯಕ್ತಿಯಾಗದ್ದ ಹರ್ಡೇಕರ ಮಂಜಪ್ಪನವರು ಆಧುನಿಕ ವಚನ ಸಾಹಿತ್ಯಕ್ಕೆ ವಿನೂತನ ಕಾಣಿಕೆ ನೀಡಿದ್ದಾರೆ ಎನ್ನಬಹುದು.

**ಎಸ್.ವಿ. ರಂಗಣ್ಣ (೧೮೯೮ – ೧೯೮೭)**

ಇಂಗ್ಲೀಷ ಪ್ರಾಧ್ಯಾಪಕರಾಗಿದ್ದ ರಂಗಣ್ಣನವರು ಬೋಧನೆಗೆ ಮಾತ್ರ ಸೀಮಿತವಾಗಿರಲಿಲ್ಲ. ಜನರಲ್ಲಿ ಭಾಷಾಭಿಮಾನ ಮೂಡಿಸುವುದು, ಸ್ಕೌಟ ಚಳುವಳಿ, ಕನ್ನಡ ಸಾಹಿತ್ಯ ಪರಿಷತ್ತಿನ ಪದಾಧಿಕಾರಿಯಾಗಿ, ಸಾಮಾಜಿಕ ಕಾರ್ಯಮಾಡಿದ್ದಾರೆ. ಇದರಿಂದ ಅಪಾರ ಜ್ಞಾನಗಳಿಸಿದ್ದರು. ಹಲವು ಕೃತಿಗಳನ್ನು ರಚಿಸಿರುವ ಇವರ 'ರಂಗಬಿನ್ನಪ' (೧೯೬೩) ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಬಾಜನವಾದ ಗಣ್ಯ ಕೃತಿ, **'ಮಾವಿನ ಕೆರೆ ರಂಗಯ್ಯ'** ಎಂಬ ಅಂಕಿತದಲ್ಲಿ ರಚಿತವಾಗಿರುವ ಇದರಲ್ಲಿ ೧೨೧೨ ವಚನಗಳಿವೆ.[೩೭]

ಇಲ್ಲಿನ ವಚನಗಳು ಮಾನವ ಸ್ವಭಾವಗಳಾದ ಸುಖ, ದುಃಖ, ಆಸೆ, ನಿರಾಸೆ, ಮಾನ, ಅಪಮಾನ, ಕಷ್ಟಕಾರ್ಪಣ್ಯ, ಬದುಕನ್ನು ಎದುರಿಸಬೇಕೆಂಬ ಶ್ರದ್ಧೆ, ಧೈರ್ಯ, ಛಲ ಮೊದಲಾದ ನಾನಾ ಭಾವಗಳನ್ನು ಅಭಿವ್ಯಕ್ತಗೊಳಿಸುತ್ತವೆ. ಅಪರೂಪದ ವಚನಗಳ **'ರಂಗಬಿನ್ನಪ'** ಕವಿಯ ಅನುಭವ ಸಾರಿದಂತಿದೆ. ಗದ್ಯಪದ್ಯ, ಉದ್ದ-ಕಿರುಪಂಕ್ತಿಗಳು ಗಮನ ಸೆಳೆಯುತ್ತವೆ. ಈ ಕೃತಿಗೆ ಅವರು 'ರಂಗಯ್ಯನ ವಚನಗಳು' ಎಂದು ಹೆಸರು ಇಡಲು ಯೋಚಿಸಿದರಂತೆ. ಕಡೆಗೆ ಯಾವ ವಾಕ್ಯವನ್ನು ವಚನಿಸಿದರೂ ಅದು ಭಗವಂತನಿಗೆ ವಿಜ್ಞಾಪನೆ ಎಂದೂ, ದಾಸರ 'ಬಿನ್ನಹಕೆ ಬಾಯಿಲ್ಲವಯ್ಯ' ಎಂಬ ಪಲ್ಲವಿಯಿಂದಲೂ, ಚಿಕ್ಕದೇವರಾಜ ಬಿನ್ನಪರಿಂದಲೂ ಅರ್ಥೈಸಿ 'ರಂಗ ಬಿನ್ನಪ' ಎಂದು ವಚನ ಸಂಕಲನಕ್ಕೆ ಹೆಸರಿಟ್ಟರು ಎಂಬುದು ಅವರ ಕೃತಿಯಿಂದ ತಿಳಿದುಬರುತ್ತದೆ.[೩೮] ವರ್ತಮಾನ ಕಾಲದ ಸದುಪಯೋಗವಾಗಲಿ ಎಂಬ ಅವರ ಆಶಯದ ವಚನ ಹೀಗಿದೆ.

'ಸತ್ತ ನಿನ್ನೆಯು ಕತ್ತಲು
ಬರುವ ನಿನ್ನೆಯು ಕತ್ತಲು
ಯಾವ ಗುರಿ? ಏನು ಗೊತ್ತು;
ಈ ಹೊತ್ತು ನಮ್ಮ ಸೊತ್ತು
ಇದೆ ರಂಗವಚನ, ರಂಗನಚಿತ್ತ" (ರಂಗಬಿನ್ನಪ)

ವಾಸ್ತವ ಬದುಕಿನ ಸದುಪಯೋಗವೇ 'ರಂಗವಚನ'ವೆಂಬುದನ್ನು ಅರ್ಥವತ್ತಾಗಿ ಹೇಳಿದ್ದಾರೆ. ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸಿರುವ ರಂಗಣ್ಣನವರ ವಚನಗಳಲ್ಲಿ ಅವರ ವಿದ್ವತ್ತು, ಲೋಕಾನುಭವ ಹಾಗೂ ವಿಮರ್ಶನದೃಷ್ಟಿ ಹೆಚ್ಚಾಗಿ ಕಂಡುಬರುತ್ತವೆ. ಸಮಾಜದ ಓರೆಕೋರೆಗಳನ್ನು ತಿದ್ದುವಂತಹ ಅನೇಕ ವಚನಗಳು ಇಲ್ಲಿದ್ದು, ವಸ್ತುವಿನ ದೃಷ್ಟಿಯಿಂದ ಇಂದಿನ ಸಮಾಜವನ್ನು ಅಭಿವ್ಯಕ್ತಿಸುತ್ತವೆ. ಕವಿಯಾಗಿರುವ ಹಾಗೂ ವಿಮರ್ಶಕರಾಗಿರುವ ರಂಗಣ್ಣನವರು ತಮ್ಮ ವಚನಗಳ ಮೂಲಕ ಆಧುನಿಕ ವಚನಕಾರರಲ್ಲಿ ಮಹತ್ವದ ಸ್ಥಾನ ಗಳಿಸಿದ್ದಾರೆ.

**ಜ.ಚ.ನಿ. ೧೯೦೩**

ಶ್ರೀ ಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯ ಸಿಂಹಾಸನಾಧೀಶ್ವರ, ಜಗದ್ಗುರು ಶ್ರೀ ಚನ್ನಬಸವರಾಜ ದೇಶೀಕೇಂದ್ರ ಮಹಾಸ್ವಾಮಿಗಳು ಆಧುನಿಕ ವಚನ ಸಾಹಿತ್ಯವನ್ನು ಶ್ರೀಮಂತಗೊಳಿಸಿರುವ ಶ್ರೇಷ್ಠ ವಚನಕಾರರು. ಸುಮಾರು ಆರು ಸಾವಿರಕ್ಕಿಂತ ಅಧಿಕ ವಚನ ರಚಿಸಿರುವ ಇವರು ೨೦ನೇಯ ಶತಮಾನದ ಅಗ್ರಗಣ್ಯ ವಚನಕಾರರೆನಿಸಿದ್ದಾರೆ.[೩೯] ಬೆಳಗಾವಿ ಜಿಲ್ಲೆಯ ಕಿತ್ತೂರು ನಾಡಿನ ಅಂಬಡಗಟ್ಟೆಯಲ್ಲಿ ೧೯೦೩ರಲ್ಲಿ ಜನಿಸಿದರು. "ಸೂರ್ಯ ಸಿಂಹಾಸನಾಧೀಶ್ವರ" ಎಂಬ ಅಂಕಿತದಲ್ಲಿ ಅವರು ಸು. ೬೩೬೧ ವಚನಗಳನ್ನು ರಚಿಸಿರುವುದಾಗಿ ತಿಳಿದುಬರುತ್ತದೆ. 'ಜ.ಚ.ನಿ.' ಎಂಬುದು ಅವರ ಕಾವ್ಯನಾಮ ಇವರು ನೀಡುಮಾಮಿಡಿ ಸಂಸ್ಥಾನ, ಗೂಳೂರಿನ ಮಹಾಸ್ವಾಮಿಗಳು. ಶರಣರ ಮಾರ್ಗದಲ್ಲಿ ಮುನ್ನಡೆದು ಪ್ರಾಚೀನ ವಚನ ಸಾಹಿತ್ಯ ಪರಂಪರೆಯನ್ನು ಮುಂದುವರೆಸಿಕೊಂಡು ಬಂದ ಶ್ರೇಯಸ್ಸು ಶ್ರೀಗಳಿಗೆ ಸಲ್ಲುತ್ತದೆ. ಜೊತೆಗೆ ಸಮಕಾಲೀನ ಯುಗ ಪ್ರಜ್ಞೆಯನ್ನು ಪ್ರಕಟಿಸಿರುವುದು ಗಮನಾರ್ಹ ಅಂಶ. ಇವರು ಹಲವು ವಚನ ಸಂಕಲನಗಳನ್ನು ತಂದಿದ್ದಾರೆ.

**'ವಚನಾಂಜಲಿ** (೧೯೪೯) ಪ್ರಕಟವಾದ ಶ್ರೀಗಳ ಪ್ರಪ್ರಥಮ ವಚನ ಸಂಕಲನ ೧೧ ಮೀಸಲು ವಚನ ಸೇರಿ ಇದರಲ್ಲಿ ೧೭೧ ವಚನಗಳಿವೆ. ಅಂತರಂಗ-ಬಹಿರಂಗವೆಂಬ ಎರಡು ವಿಭಾಗಗಳಲ್ಲಿ ವಚನಗಳನ್ನು

ವಿಭಾಗಿಸಲಾಗಿದೆ. **'ವಚನ ಮಂಜರಿ'** ೧೯೫೧ರಲ್ಲಿ ಪ್ರಕಟವಾಗಿದೆ. ಆರು ಅಧ್ಯಾಯಗಳಲ್ಲಿ ಒಟ್ಟು ೪೪೯ ವಚನಗಳನ್ನು ಈ ಕೃತಿ ಒಳಗೊಂಡಿದೆ. ಪ್ರಾರ್ಥನೆ, ಪಿಂಡ, ಪಿಂಡಜ್ಞಾನ, ವೈಯಕ್ತಿಕ, ಸಾಮಾಜಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಎಂಬುದಾಗಿ ಆರು ಅಧ್ಯಾಯಗಳಿವೆ. ಪ್ರತಿ ಅಧ್ಯಾಯದ ಅಂತ್ಯಕ್ಕೆ ಆಚಾರ್ಯರ ಕುರಿತು ಮಂಗಳ ವಚನಗಳಿವೆ. ಭಾಷಾ ಸೌಂದರ್ಯದೊಂದಿಗೆ, ಭಾವಸೌಂದರ್ಯ ಬಿಂಬಿಸುವ ಅನೇಕ ವಚನಗಳು ಇದರಲ್ಲಿದ್ದು, ಇದು ಅನುಭಾವದ ಆಗರವಾಗಿ, ವಿವಿಧ ವಿಚಾರಗಳ ಕೋಶವಾಗಿ, ಸಾಹಿತ್ಯದ ಸುಧೆಯಾಗಿ, ಉತ್ತಮ ವಚನಗಳ ಮಾದರಿಯಾಗಿ ನಿಲ್ಲುವಂತಿದೆ. **ವಚನವಲ್ಲರಿ-ಭಾಗ-೧** ೧೯೫೮ರಲ್ಲಿ ಪ್ರಕಟವಾದ ೩೬೬ ವಚನಗಳ ಸಂಕಲನವಾಗಿದೆ. ವ್ಯಕ್ತಿಗತ ತತ್ವತ್ರಯಗಳಾದ ಮಾತು, ಮನ-ಮೆಯ್, ಎಂಬ ಮೂರು ಸುದೀರ್ಘ ವಿಭಾಗಗಳಿವೆ. ಮಾತು ವಿಭಾಗದಲ್ಲಿ ಮಾತಿನ ಮೂಲ, ಹುಟ್ಟು, ಮಹತ್ವದ ೬೯ ವಚನಗಳು, ತಾತ್ವಿಕವಾಗಿ ಮನದ ಮಾತನ್ನು ಹೇಳುವ ೫೩ ವಚನಗಳು, 'ಮೆಯ್' ವಿಭಾಗದ ೨೦೧ ವಚನಗಳು ಇಲ್ಲಿವೆ. ತತ್ವದ ಜಟಿಲತೆ ಇದ್ದರೂ ಸರಳತೆಯಿಂದಾಗಿ ವಚನಗಳು ಗಮನಾರ್ಹವಾಗುತ್ತವೆ.

**ವಚನವಲ್ಲರಿ-ಭಾಗ-೨** ೧೯೬೩ರಲ್ಲಿ ಪ್ರಕಟವಾಗಿದ್ದು, ಅದರಲ್ಲಿ ೭೯೧ ವಚನಗಳಿವೆ. ಇದರಲ್ಲಿ ಸಮಷ್ಟೀ ತತ್ವತ್ರಯಗಳಾದ – ಜೀವ – ಜಗತ್ತು – ಈಶ್ವರ ಚಿಂತನೆಯ ವಿವರಗಳಿವೆ. ಕ್ಲಿಷ್ಟಕರವಾದ ಈ ಮೂರು ತತ್ವಗಳನ್ನು ವಚನಕಾರರು ಸಾಮಾನ್ಯರಿಗೆ ತಿಳಿಯುವಂತೆ, ಸರಳವಾಗಿ ಹಾಗೂ ಆಕರ್ಷಣೀಯವಾಗಿ ಹೇಳಿದ್ದನ್ನಿಲ್ಲಿ ಕಾಣಬಹುದು. ಜೀವತತ್ವ ಪ್ರತಿಪಾದನೆಗಾಗಿ ೫೪೨ ವಚನಗಳು, ಜಗತ್ತು ಪ್ರಕರಣದಲ್ಲಿ ೧೩೪ ವಚನಗಳು ಹಾಗೂ 'ಈಶ್ವರ' ತತ್ವ ಕುರಿತ ೧೧೫ ವಚನಗಳಿವೆ. ಈ ತತ್ವಗಳ ಪ್ರತಿಪಾದನೆಯಲ್ಲಿ ಶ್ರೀಗಳ ಪ್ರಗತಿಪರ ದೃಷ್ಟಿ ಎದ್ದುಕಾಣುತ್ತದೆ.

**ಮಣಿವಚನಗಳು** ೧೯೬೩ರಲ್ಲಿ ರಚಿಸಿದರು. ಈ ಕೃತಿಯು ಮೂಲ 'ಸಿದ್ಧಾಂತ ಶಿಖಾಮಣಿ'ಯನ್ನು ೧೯೨೬ ವಚನಗಳ ರೂಪದಲ್ಲಿ ಹೊತ್ತು ನಿಂತಿದೆ. ಶಿವಾಚಾರ್ಯರ ತತ್ವಗಳನ್ನು ಶಿವಶರಣರ ಶೈಲಿಯಲ್ಲಿ ಪ್ರತಿಪಾದಿಸಿ, ಅವುಗಳಲ್ಲಿ ಸಮನ್ವಯ ಸಾಧಿಸಲು ಪ್ರಯತ್ನಿಸಿದ್ದರೆ. ಶ್ಲೋಕ ರೂಪದಲ್ಲಿರುವ ಕೃತಿಯನ್ನು ವಚನ ರೂಪಕ್ಕಿಳಿಸಿದುದು ಅವರ ಹೆಗ್ಗಳಿಕೆ ಎನ್ನಬಹುದು.

**ಯುಗವಚನ** :- ಕೃತಿಯು ೧೯೭೭ರಲ್ಲಿ ಪ್ರಕಟವಾಗಿದ್ದು, ಇದರಲ್ಲಿ ೨೪೪ ವಚನಗಳಿವೆ ವೈಜ್ಞಾನಿಕ ವಚನಗಳು ಈ ಕೃತಿಯ ವೈಶಿಷ್ಟ್ಯ. ವಿಜ್ಞಾನಕ್ಕೂ ಧರ್ಮಕ್ಕೂ ಸಂಬಂಧವಿದೆ ಎಂದುದನ್ನು ತೋರಿಸಿದ್ದಾರೆ.

**ಸೊಗವಚನ** :- ಇದು ಯುಗವಚನದ ಬೆನ್ನ ಹಿಂದೆಯೇ ೧೯೭೩ರಲ್ಲಿ ಬಂದ ಕೃತಿ. ೨೫೫ ವಚನಗಳಿವೆ. 'ಸೊಗವಚನ' ಪದ ಪ್ರಯೋಗದಲ್ಲಿ ವ್ಯಾಕರಣ ದೋಷವಿದ್ದರೂ 'ಯುಗವಚನ'ದ ಬೆಂಬಳಿಸಿ ಬಂದುದರಿಂದ ಬಗೆಗಿಂಪಾಗಿರುವುದರಿಂದ ಆ ಹೆಸರಿಡಲಾಗಿದೆಯೆಂದು ವಚನಕಾರರೇ ತಮ್ಮ ನುಡಿಯಲ್ಲಿ ಹೇಳಿದ್ದಾರೆ.[೪೦] ಇದರೊಂದಿಗೆ ಮಿಡಿವಚನ, ದುಡಿವಚನ, ಸದಾಶಿವ ಸೂಳ್ನುಡಿ, ವಚನ ವಿಭಾವ ಮೊದಲಾದ ೧೩ ವಚನ ಸಂಕಲನಗಳನ್ನು ತಂದಿದ್ದಾರೆ.

ಪ್ರಾಚೀನ ವಚನಗಳ ಮೈಕಟ್ಟನ್ನು ಉಳಿಸಿಕೊಂಡು, ನವೀನ ವಿಚಾರಗಳನ್ನು ವಚನಗಳ ಗಾತ್ರ, ಗುಣಗಳನ್ನು ನೋಡಿದರೆ, ಇಂದಿನ ವಚನಕಾರರಲ್ಲಿ ಅವರೇ ಪ್ರಮಥರು ಎಂದು ಧಾರಾಳವಾಗಿ ಒಪ್ಪಿಕೊಳ್ಳಬೇಕು ಎಂಬುದು ವಿಮಮರ್ಶಕರ ಮಾತು.[೪೧]

**ಎಸ್. ವ್ಹಿ. ಪರಮೇಶ್ವರ ಭಟ್ಟ (೧೯೧೪-೨೦೦೦)**

ಪರಮೇಶ್ವರ ಭಟ್ಟರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಒಳ್ಳೆಯ ಕವಿ ಹಾಗೂ ಅನುವಾದಕ ಎಂದು ಹೆಸರುವಾಸಿಯಾಗಿದ್ದಾರೆ. ಕನ್ನಡದ ಭಾಸ, ಕಾಳಿದಾಸ ಎಂದೇ ಖ್ಯಾತಿ ಪಡೆದಿರುವರು. ಇವರೋರ್ವ ಒಳ್ಳೆಯ ವಚನಕಾರರು ಅಗಿದ್ದಾರೆ. 'ಉಪ್ಪು ಕಡಲು' 'ಪಾಮರ' ಮತ್ತು ಉಂಬರ ಇವರ ವಚನ ಸಂಕಲನಗಳು.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಮಳೂರಿನಲ್ಲಿ ೧೯೧೪ರಲ್ಲಿ ಜನಿಸಿದರು. ಇವರ ತಂದೆ ಸದಾಶಿವರಾಯರ ಪೋಷಣೆಯಲ್ಲಿಯೇ ಬೆಳೆದಿದ್ದಾರೆ. ಮೈಸೂರು, ಮಂಗಳೂರುಗಳಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. **'ಸದಾಶಿವಗುರು'** ಎಂಬ ಅಂಕಿತದಲ್ಲಿ ಸು. ೧೪೦೬ ವಚನಗಳನ್ನು ರಚಿಸಿದ್ದಾರೆ. ಆಧುನಿಕ ಯುಗದ ಪ್ರತಿಭಾನ್ವಿತ ವಚನಕಾರರಾಗಿರುವ ಇವರು ಬಸವಾದಿ ಶರಣರ ವಚನಗಳಿಂದ ಪ್ರಭಾವಿತರಾಗಿದ್ದಾರೆ. ಅವರೇ ಹೇಳಿಕೊಂಡಿರುವಂತೆ ಇವರ ವಚನಗಳಲ್ಲಿ ಕಣಕ ಹಳೆಯದು ಆದರೆ ಹೂರಣ ಹೊಸದು. ಅಂದರೆ ವಚನಗಳ ದಾಟಿ ಹಿಂದಿನದು ಹಾಡು ಇಂದಿನದು.[೪೨]

ಇವರಿಗೆ ವಚನ ಸೃಷ್ಟಿಯಿಂದ ಸಮಾಜ ಸುಧಾರಿಸುತ್ತದೆ ಎಂಬ ಭ್ರಮೆ ಇರಲಿಲ್ಲ ಇವರು ಜೀವನವನ್ನು 'ಅನುಭವಕ್ಕೆ ಬಂದ ಸತ್ಯದ ಒಂದು ಮುಖ' ಎಂದು ಭಾವಿಸಿದ್ದರು. ಅವರ ವಚನಗಳಲ್ಲಿ ತನ್ನ ಸುತ್ತ ಮುತ್ತಲಿನ ಬದುಕಿನ ಅಂಕು-ಡೊಂಕುಗಳನ್ನು ಕಂಡು, ಅವುಗಳನ್ನು ವಿಡಂಬಿಸುವ ಅನುಕಂಪ, ಒಳಿತನ್ನು ಕಂಡು ಹಾರೈಸುವ ಸಹೃದಯತೆ ಕಂಡುಬರುತ್ತದೆ. ಕಾವ್ಯ, ಮುಕ್ತಕ, ವಚನ, ಅನುವಾದ ಸಾಹಿತ್ಯವನ್ನು ಸೃಷ್ಟಿಸಿರುವ ಭಟ್ಟರು, ಕನ್ನಡ ಸಾಹಿತ್ಯಕ್ಕೆ ಅದರಲ್ಲೂ ಆಧುನಿಕ ವಚನ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ.

**ಸಿದ್ಧಯ್ಯ ಪುರಾಣಿಕರು (೧೯೧೮-೧೯೯೪)**

'ಕಾವ್ಯಾನಂದ' ಎಂಬ ಕಾವ್ಯನಾಮದಿಂದ ಪ್ರಸಿದ್ಧವಾಗಿರುವ ಸಿದ್ಧಯ್ಯ ಪುರಾಣಿಕರು ಕವಿಗಳು, ನಾಟಕಕಾರರು, ಜೀವನ ಚರಿತ್ರಕಾರರು ಮತ್ತು ಆಧುನಿಕ ವಚನಕಾರರೂ ಆಗಿದ್ದರು. ಐ.ಎ.ಎಸ್. ಅಧಿಕಾರಿಗಳಾಗಿ ತಮ್ಮ ಕಾರ್ಯ ಬಾಹುಳ್ಯದ ನಡುವೆ ಅಪಾರವಾದ ಸಾಹಿತ್ಯ ಕೃಷಿ ಮಾಡಿದರು. 'ಜಲಪಾತ, ಮೊದಲು ಮಾನವನಾಗು, ಕಲ್ಲೋಲ ಮಾಲೆ, ಕರುಣಾ ಶ್ರಾವಣ, ಮಾನಸ ಸರೋವರ, ಹಾಲ್ದೆನೆ, ಚರಗ, ಮರುಳಸಿದ್ಧನ ಕಂತೆ' ಮೊದಲಾದ ಕಾವ್ಯ ಸಂಕಲನಗಳನ್ನು ಪ್ರಕಟಿಸಿದರು. 'ಭಾರತ ವೀರ, ರಜತ ರೇಖೆ, ಭುವನಮಲ್ಲ ಕಾದಂಬರಿ, ತುಪ್ಪಾರೊಟ್ಟಿ ಗೇಗೇಗೇ, ಗಿಲ್ ಗಿಲ್ ಗಿಲಗಚ್ಚಿ' ಮೊದಲಾದ ಮಕ್ಕಳ ಸಾಹಿತ್ಯ, ಶರಣ ಚರಿತಾಮೃತ, ಸಿದ್ಧರಾಮ ಮೊದಲಾದ ಜೀವನ ಚರಿತ್ರೆಗಳು ಇವರ ಪ್ರಕಟಿತ ಕೃತಿಗಳು.[೪೩]

**ವಚನೋದ್ಯಾನ** (೧೯೭೭), **'ವಚನ ನಂದನ'**, **'ವಚನ ರಾಮ**'ಗಳೆಂಬ ವಚನ ಕೃತಿಗಳನ್ನು ೧೯೭೭ರ ನಂತರದಲ್ಲಿ ಪ್ರಕಟಪಡಿಸಿದರು. **'ಸ್ವತಂತ್ರಧೀರ ಸಿದ್ದೇಶ್ವರಾ'** ಅಂಕಿತದಲ್ಲಿ ಅವರ ಸಾವಿರಾರು ವಚನಗಳನ್ನು ರಚಿಸಿದ್ದಾರೆ. ಅವು ಹೊಸ ಕಾಲದ ಬದುಕಿನ ಸೂತ್ರಗಳಂತಿವೆ. ಅವರ 'ವಚನೋಧ್ಯಾನ' ಕೃತಿಗೆ ಭಾರತೀಯ ಭಾಷಾ ಪರಿಷತ್ತು ಕೋಲಕತ್ತಾದ ಶ್ರೇಷ್ಠ ಸಾಹಿತ್ಯ ಕೃತಿ ಪ್ರಶಸ್ತಿ ದೊರೆತಿದೆ. ಅವರ "ವಚನಗಳಲ್ಲಿ ಆಧ್ಯಾತ್ಮ, ಪ್ರಕೃತಿ, ನೀತಿ, ಉದಾರತೆ, ಕಾಳಜಿ, ನಾಡು-ನುಡಿ, ಭಾಷಾಭಿಮಾನ, ರಾಜಕೀಯ ವಿಡಂಬನೆ, ಆರ್ಥಿಕ ಅಸಮಾನತೆ, ಶೋಷಣೆ, ಶಿಕ್ಷಣ, ವಿಜ್ಞಾನ, ಮಾನವೀಯತೆಯ ಆಶಯ, ಧರ್ಮ ಕುರಿತ ವಾಸ್ತವಿಕ ನೆಲೆಗಳಿವೆ. ಅವೆಲ್ಲವುಗಳು ಅಧ್ಯಯನಕ್ಕೆ ಯೋಗ್ಯವಾಗಿವೆ.[೪೪] ಪುರಾಣಿಕರ ಯಾವ ವಚನವಾಗಲಿ, ತತ್ವಬದ್ದ, ಸತ್ಯಶೋಧ, ಪಾಠ ಕಲಿಸುವ ಗುಣವುಳ್ಳವುಗಳು. ಆದರೆ ಅವು ಉಪದೇಶಗಳಲ್ಲ. ಅವುಗಳಲ್ಲಿ ಒಂದೇ ಧರ್ಮಗೋಚರ, ಅದು ಜೀವನ ಧರ್ಮ,

ಅದು ಒಂದೇ ಮತ, ಮಾನವ ಮತ, ಒಂದೇ ಪಥ ಶಿವಪಥ. ನಮ್ಮೆಲ್ಲರನ್ನು ಕಾಣದ ಕೈಯೊಂದು ಕಾಯುತ್ತಿದೆ ಎಂಬ ಶ್ರದ್ಧೆ ಅಲ್ಲಿದೆ. ಅದು ಪುರಾಣಿಕರ ದೃಢವಾದ ನಂಜಿಕೆ ಎಂಬುದನ್ನು ಅರಿಯಬಹುದು.

**ಮೂಜಗಂ** :– ಆಧುನಿಕ ವಚನ ಸಾಹಿತ್ಯದಲ್ಲಿ 'ಮೂಜಗಂ'ರ ಹೆಸರು ಚಿರಪರಿಚಿತವಾಗಿದೆ. ಹುಬ್ಬಳ್ಳಿಯ ಮೂರು ಸಾವಿರ ಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು **'ಮೂಜಗಂ'** ಎಂದೇ ಪ್ರಸಿದ್ಧರು. ಇದು ಅವರ ಕಾವ್ಯನಾಮ. ಕನ್ನಡ ನಾಡಿನ ಲಿಂಗವಂತ ಮಠಗಳಲ್ಲಿ ಹುಬ್ಬಳ್ಳಿಯ ಮೂರುಸಾವಿರ ಮಠ ಪ್ರಸಿದ್ಧವಾದುದು. ಆ ಮಠದ ಪಟ್ಟಾಧಿಕಾರಿಗಳಾಗಿದ್ದ 'ಮೂಜಗಂ' ಅವರು ತಮ್ಮ ಮಠದ ಪ್ರಕಾಶನದಿಂದ ಅನೇಕ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಇವರು ಸ್ವತಃ ಸಾಹಿತಿಗಳಾಗಿದ್ದು, **'ಚಿತ್ಸುಮನೆ'** ಎಂಬ ವಚನ ಸಂಕಲನ ತಂದಿದ್ದಾರೆ. ಈ ಕೃತಿಯಲ್ಲಿ **'ಭೃಲತಾಪುರೀಶ'** ಕರ್ತೃ **'ಜಗದ್ಗುರು ಗುರುಸಿದ್ಧೇಶ್ವರಾ'** ಎಂಬ ಅಂಕಿತದ೨೩೦ ವಚನಗಳಿವೆ. ಇದರೊಂದಿಗೆ ಈ ಶ್ರೀಗಳು **'ಪೂರ್ಣಜ್ಞ'** ಅಂಕಿತದಲ್ಲಿ ಬರೆದ 'ಪೂರ್ಣಜ್ಞನ ವಚನಗಳು' ಎಂಬ ಕೃತಿಯಲ್ಲಿ ೩೦೦೦ಕ್ಕೂ ಹೆಚ್ಚು ವಚನಗಳಿವೆ.[೪೫]

ಇವರ ವಚನಗಳ ಮೇಲೆ ಬಸವಾದಿ ಶರಣರ ಪ್ರಭಾವವಾಗಿರುವುದನ್ನು ಗುರುತಿಸಬಹುದಾದರೂ, 'ಚಿತ್ಸುಮನ' ವಚನಗಳಲ್ಲಿ ಕೃತಿಕಾರನ ವೈಯಕ್ತಿಕ ಜೀವನದ ವಿವರ, ಧಾರ್ಮಿಕ ಚಿಂತನೆ, ಅಂತರಂಗ–ಬಹಿರಂಗ ಶುದ್ಧಿಯ ವಿಚಾರಗಳಿವೆ. **'ಪೂರ್ಣಜ್ಞ'**ನ ವಚನಗಳಲ್ಲಿ ಲಿಂಗಾಯತ ಸಮಾಜ, ಸಾಮಾಜಿಕ ಕಳಕಳಿ, ಆತ್ಮಾನುಭವದ ವಿವರಣೆ ಇದ್ದು, ಸರ್ವಜ್ಞನ ತ್ರಿಪದಿಗಳಂತೆ ಓದುಗರ ಮನಸ್ಸನ್ನು ಸೂರೆಗೊಳ್ಳುತ್ತವೆ. ಈ ಲೋಕದ ಬಗೆಬಗೆಯ ಅನುಭವಗಳನ್ನು ಜೀವನದ ಸಮಸ್ಯೆಗಳನ್ನು, ಸಾಮಾಜಿಕ ಅನಿಷ್ಟಗಳನ್ನು, ಧರ್ಮ ಸಮನ್ವಯ ಭಾವವನ್ನು ಕೃತಿಕಾರರು ಇಲ್ಲಿ ತಮ್ಮದೇ ಆದ ಸರಳ ಹಾಗೂ ಸ್ಪಷ್ಟ ನುಡಿಗಳಲ್ಲಿ ಹಿಡಿದಿಟ್ಟಿರುವುದು ಪೂರ್ಣಜ್ಞನ ವಚನಗಳ ವೈಶಿಷ್ಟ್ಯವೆನ್ನಬಹುದು.

**ಮಹಾದೇವ ಬಣಕಾರ (೧೯೩೨–)**

ಕನ್ನಡ ನಾಡು–ನುಡಿಗಾಗಿ ಹೋರಾಡಿದ ಕವಿ, ರಾಜಕಾರಣಿ ಹಾಗೂ ಆಧುನಿಕ ವಚನಕಾರ ಮಹಾದೇವ ಬಣಕಾರ. ಇವರ ಕನ್ನಡ ಪ್ರೇಮ ಅನನ್ಯವಾದುದು. ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲೂಕಿನ ಮೋಟೆ ಬೆನ್ನೂರಿನಲ್ಲಿ ೧೯೩೨ರಲ್ಲಿ ಜನಿಸಿರುವ ಬಣಕಾರರು ಪ್ರತಿಭಾವಂತ ಲೇಖಕರು. ಆಡಳಿತ ಭಾಷೆ ಕನ್ನಡವಾಗಬೇಕೆಂದು ಉಗ್ರವಾಗಿ ಪ್ರತಿಪಾದಿಸಿದ್ದರು. ಆಧುನಿಕ ವಚನಕಾರರಲ್ಲಿ ಅತ್ಯಂತ ಪ್ರಮುಖರು. **'ಎನ್ನ ವರಗುರು ಶಿವಕುಮಾರ ಪ್ರಭು'** ಎಂಬ ಅಂಕಿತದಲ್ಲಿ ೧೧೦೮ ವಚನಗಳನ್ನು ರಚಿಸಿದ್ದಾರೆ. ಅನುಭವಿ ಕವಿ, ವಚನಕಾರರಾಗಿರುವ ಇವರು **'ಮಹಾದೇವ ಬಣಕಾರ ವಚನಗಳು'** ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ.

"ಇವರ ವಚನಗಳ ಮೇಲೆ ಬಸವಾದಿ ಶರಣರ ಪ್ರಭಾವ ದಟ್ಟವಾಗಿ ಆಗಿದೆ. ಅವರ ಬಹು ಸಂಖ್ಯೆಯ ವಚನಗಳು ಬಸವಾದಿ ಶರಣರ ವಚನಗಳನ್ನೆ ಹೋಲುತ್ತವೆ. ಆದ್ದರಿಂದ ಈ ಗ್ರಂಥವನ್ನು ನೋಡಿರುವ ಡಾ. ಎಂ.ಎಂ. ಕಲಬುರ್ಗಿಯವರು "ಈ ಗ್ರಂಥದ ಮೇಲೆ ಲೇಖಕರ ಹೆಸರಿಲ್ಲದಿದ್ದ ಪಕ್ಷದಲ್ಲಿ ಇದು ೧೨ನೇಯ ಶತಮಾನದ ರಚನೆಯೆಂದು ನಂಬಿಗೆ ಹುಟ್ಟಿಸುವ ಕೃತಿ"[೪೬] ಎಂದು ಹೇಳಿರುವುದು ಸಮಂಜಸವೆನಿಸುತ್ತದೆ. ಶರಣರ ವಚನಗಳಲ್ಲಿಯಂತೆ ಬಣಕಾರರ ವಚನಗಳಲ್ಲಿ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಜೀವ–ಜಗತ್ತು–ಮಾಯೆಶಿವ ಮುಂತಾದ ವಿಷಯಗಳು ವ್ಯಕ್ತವಾಗಿವೆ. ಆದರೂ ಕೆಲವು ವಚನಗಳಲ್ಲಿ ಉಗ್ರವಾದ ಸಾಮಾಜಿಕ ವಿಡಂಬನೆ ವ್ಯಕ್ತವಾಗಿರುವುದನ್ನು ಮನಗಾಣಬಹುದು. ಆದರೂ ಸಮಕಾಲೀನ ಸಮಾಜ ವಿಷಯಗಳು,

ಸಮಸ್ಯೆಗಳು ಇವರ ವಚನಗಳಲ್ಲಿ ಹೆಚ್ಚಾಗಿ ಬಾರದೇ ಇದ್ದುದು ಒಂದು ಕೊರತೆಯಾಗಿದೆ. ಆದರೂ ಆಧುನಿಕ ವಚನ ಸಾಹಿತ್ಯಕ್ಕೆ ಅವರ ಕೊಡುಗೆ ಗಮನಾರ್ಹವೆನ್ನಬಹುದು.

**ಸಂಗಮೇಶ ಹೊಸಮನಿ**

ವೃತ್ತಿಯಿಂದ ಶಿಕ್ಷಕರು, ಪ್ರವೃತ್ತಿಯಿಂದ ಕವಿಗಳಾಗಿರುವ ಸಂಗಮೇಶ ಹೊಸಮನಿಯವರು ಆಧುನಿಕ ವಚನಕಾರರ ಪರಂಪರೆಯಲ್ಲಿ ಗುರುತಿಸಿಕೊಂಡಿದ್ದಾರೆ. ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನ ರಾಮವಾಡಿಗಿ ಇವರ ಊರು. ಉತ್ತಮ ಶಿಕ್ಷಕರಾಗಿ ಹೆಸರು ಗಳಿಸಿದಂತೆ ಶ್ರೇಷ್ಠ ಕವಿಯಾಗಿಯೂ ಪ್ರಸಿದ್ಧಿ ಪಡೆದಿರುವರು. ಹಲವು ಮೌಲಿಕ ಕವನ ಸಂಕನಗಳನ್ನು ತಂದಿರುವ ಇವರು **'ಶ್ರೀ ಸಂಗಮನಾಥ'** ಹಾಗೂ **'ಕೂಡಲ ಸಂಗಮನಾಥ'** ಅಂಕಿತದಲ್ಲಿ ೧೧೧೨ ವಚನಗಳನ್ನು ರಚಿಸಿದ್ದಾರೆ. ಇವರ **'ಸಂಗಮನಾಥನ ವಚನಗಳು'** ಎಂಬ ಕೃತಿಯಲ್ಲಿ ೧೦೧ ಹಾಗೂ **'ವಚನ ತೀರ್ಥ'**ವೆಂಬ ಕೃತಿಯಲ್ಲಿ ೧೦೧೧ ವಚನಗಳು ನಿರೂಪಿತವಾಗಿವೆ.

"ವಚನವೆಂಬುದು ಕಾವ್ಯ ರಚನೆಯ ರಂಜನೆಯಲ್ಲ" ಎನ್ನುವ ಹೊಸಮನಿಯವರ ವಚನಗಳಲ್ಲಿ 'ಶಿಕ್ಷಕ ವೃತ್ತಿಯ ಪಾವಿತ್ರತೆ, ಭಕ್ತಿ ಹಾಗೂ ಸುತ್ತಣ ಬದುಕಿನ ವಿದ್ಯಮಾನಗಳು ಅಭಿವ್ಯಕ್ತಗೊಂಡಿವೆ. ತುಂಬ ಸರಳ ಹಾಗೂ ಸುಲಭವಾದ ಭಾಷೆಯಲ್ಲಿ ವ್ಯಕ್ತಗೊಂಡಿರುವ ಇವರ ಬಹುತೇಕ ವಚನಗಳು ಭಾವಗೀತಗಳಂತೆ ಇವೆ. 'ಒಟ್ಟಿನಲ್ಲಿ ಇವು ಶಿವಾನುಭವ ಹಾಗೂ ಲೋಕಾನುಭಾವಗಳಿಂದ ಮೂಡಿ ಬಂದಿದ್ದು, ಕಾವ್ಯಾಂಶಗಳನ್ನೊಳಗೊಂಡ ಒಳ್ಳೆಯ ಭಾವಗೀತಗಳಾಗಿವೆ. ಶರಣರ ವಚನಗಳ ಪ್ರಭಾವ ಇವುಗಳ ಮೇಲಾಗಿರದಿದ್ದರೂ, ಆ ಪ್ರಭಾವದಾಚೆ ಬಂದು ಜೀವಂತಿಕೆಯಿಂದ ನಳನಳಿಸುವ ತಮ್ಮ ಪರಿಸರದ ಭಾಷೆಯಲ್ಲಿರುವುದು ಇವುಗಳ ವೈಶಿಷ್ಟ್ಯ"[೪೭] ಎನ್ನಬಹುದು.

**ಜಗದ್ಗುರು ಶ್ರೀ ಅನ್ನದಾನೇಶ್ವರ ಸ್ವಾಮಿಗಳು**

ಗದಗ ಜಿಲ್ಲೆಯ ಮಂಡರಗಿ ಮಠದ ಮಠಾಧೀಶರಾದ ಇವರು ಶ್ರೇಷ್ಠ ವಚನಕಾರರು ವೀರಶೈವ ಸಾಹಿತ್ಯ, ಸಂಸ್ಕೃತಿ ಹಾಗೂ ಸಿದ್ಧಾಂತಗಳನ್ನು ಆಳವಾಗಿ ಅಭ್ಯಾಸಿಸಿದ ಇವರು ೧೦೫ ಗ್ರಂಥಗಳನ್ನು ಬರೆದು ಹೆಸರುವಾಸಿಯಾಗಿದ್ದಾರೆ. ಸಂಪಾದಕರಾಗಿ, ವಿಮರ್ಶಕರಾಗಿ, ಕವಿಗಳಾಗಿ, ಚಿಂತನ ಬರಹಗಾರರಾಗಿ ಪ್ರಸಿದ್ಧರಾಗಿರುವಂತೆ ಆಧುನಿಕ ವಚನಕಾರರಾಗಿಯೂ ಗಮನ ಸೆಳೆದಿದ್ದಾರೆ.

**'ಮೃಡಗಿರಿ ಅನ್ನದಾನೇಶ'** ಎಂಬ ಅಂಕಿತದಲ್ಲಿ ಸು. ೧೫೪೯ ವಚನಗಳನ್ನು ರಚಿಸಿದ್ದಾರೆ. ಇದರಲ್ಲಿ ೬೧೧ ವಚನಗಳು ಅವರ **'ವಚನ ಸಂಪದ'** ಕೃತಿಯಲ್ಲಿ ಪ್ರಕಟವಾಗಿದ್ದರೆ, ಅವರ **'ವಚನ ಪರಿಮಳ'**ದಲ್ಲಿ ೩೫೦ ವಚನಗಳು ರಚನೆಯಾಗಿವೆ. ಈ ಎಲ್ಲವುಗಳನ್ನು ಸೇರಿಸಿ ೨೦೦೪ರಲ್ಲಿ **'ಸಮಗ್ರ ವಚನ ಸಂಪದ'**ವೆಂಬ ಹೆಸರಿನಲ್ಲಿ ಆ ಎಲ್ಲ ವಚನಗಳನ್ನು ಆಕಾರಾದಿಯಲ್ಲಿ ಸಂಪಾದಿಸಲಾಗಿದೆ.

೧೯೭೬ ರಿಂದಲೇ ವಚನ ರಚನೆಯಾರಂಭಿಸಿದ ಈ ಸ್ವಾಮಿಗಳು ತಮ್ಮದೇ ಆದ ವಚನ ಬೇಸಾಯ ಕೈಕೊಂಡಿದ್ದಾರೆ. 'ಲಿಂಗಾಯತ' ಧರ್ಮ ಸಿದ್ಧಾಂತಗಳು, ನೀತಿಬೋಧೆ, ಭಕ್ತಿಯಾಚರಣೆ, ಲೋಕಾನುಭವ ಮುಂತಾದ ವಿಷಯಗಳನ್ನು ಇಲ್ಲಿಯ ವಚನಗಳು ಒಳಗೊಂಡಿವೆ. ಸಮಾನತೆ ಹಾಗೂ ಸೋದರತೆಯ ಆದರ್ಶಮಾರ್ಗದ ಶ್ರೀಗಳು ಬಸವತತ್ವನಿಷ್ಠರು. ಆ ತತ್ವಕ್ಕನುಗುಣವಾಗಿ ತಮ್ಮ ಜೀವನ ಪಥವನ್ನು ಸಾಗಿಸಿಕೊಂಡು ಬಾಳಿದವರು. ಹೀಗಾಗಿ ಅನ್ನದಾಸೋಹ, ಜ್ಞಾನ ದಾಸೋಹಗಳ ಸಾಮಾಜಿಕ ಕಳಕಳಿಯನ್ನು ತೋರಿಸುತ್ತ, ತಮ್ಮ ವಚನಗಳ ಮೂಲಕ ಬದುಕು, ದೇಶ-ಭಾಷೆ, ಯುವಶಕ್ತಿ, ಆರೋಗ್ಯ, ವಿಜ್ಞಾನ, ನೀತಿ, ಬಂಧನ, ಮೊದಲಾದ ಲೌಕಿಕ ವೈಭವಗಳ ಬಗ್ಗೆಯೂ ತಿಳಿಸಿ ಹೇಳಿದ್ದಾರೆ. ಕವಿಯ ಪಾಂಡಿತ್ಯ, ವ್ಯಕ್ತಿತ್ವ ಪ್ರಜ್ಞೆಗಳು ಅವರ ಕೃತಿಗಳಲ್ಲಿ

ಕಾಣುವಂತೆ, ಅವರ ಆಧುನಿಕ ವಚನಗಳಲ್ಲಿ ಆಧ್ಯಾತ್ಮ ಚಿಂತನೆಯೊಂದಿಗೆ ಸಾಮಾಜಿಕ ಕಳಕಳಿಯೂ ವ್ಯಕ್ತವಾಗಿರುವುದನ್ನು ಅಲ್ಲಗಳೆಯಲಾಗದು.

ಒಟ್ಟಿನಲ್ಲಿ ಡಾ. ಪಿ.ವ್ಹಿ. ನಾರಾಯಣ ಅಭಿಪ್ರಾಯಪಡುವಂತೆ "ಬಸವಣ್ಣನ ನಂತಹ ವಚನಕಾರರಲ್ಲಿ ಅಂಕಿತವು ಅದ್ಭುತವಾದ ರೀತಿಯಲ್ಲಿ ಆತನ ನೆರವಿಗೆ ಬರುತ್ತದೆ. ಅದು ರಚಿಯಿತನ ಗುರುತು ಎಂಬುದು ಅದರಿಂದಾಗುವ ಮೊದಲ ಪ್ರಯೋಜನ. ಜಗತ್ತಿನಲ್ಲಿ ತಾನು ಕಂಡ ಸಂಗತಿಗಳಿಂದ ಧೃತಿಗೆಡುವ, ಗೊಂದಲಕ್ಕೀಡಾಗುವ ಚೇತನವು ತನ್ನ ಅನುಭವವನ್ನು ಎಲ್ಲರಿಗೂ ಮೇಲೆರುವ ವಿಶ್ವಚೇತನಕ್ಕೆ ವರದಿಯೊಪ್ಪಿಸುವ ದಾಟಿಯಲ್ಲಿ ಅಂಕಿತ ಬಳಕೆಯಾಗಬಹುದು. ಒಳತೋಟ, ತೊಳಲಾಟ, ಪಾಪ ನಿವೇದನೆಗಳಂತಹ ಸನ್ನಿವೇಶಗಳಲ್ಲಿ ವಚನಕಾರನ ಅಂಕಿತ ಸಾಕ್ಷಿ ಪ್ರಜ್ಞೆಯಾಗಿ ಕೆಲಸಮಾಡಬಹುದು. ಆದರೆ ಶ್ರೀ ಅನ್ನದಾನೇಶ್ವರ ಮಹಾಸ್ವಾಮಿಗಳ ವಚನಗಳಲ್ಲಿ ಆತ್ಮ ನಿವೇದನೆ, ಆತ್ಮ ವಿಡಂಬನೆ, ಆತ್ಮ ವಿಮರ್ಶೆ ಕಾಣಿಸುವುದಿಲ್ಲ. ಇದಕ್ಕೆ ಕಾರಣ ಇವರ ದೃಷ್ಟಿಯು ಹೊರಗಿನದು; ಒಳಗಿನದಲ್ಲ. ಅಬ್ಬರವಿಲ್ಲದ ನೇರ ಮಾತು, ಮಾತುಗಾರಿಕೆ, ವಿವೇಚನಾಯುತವಾದ ದೃಷ್ಟಿ, ಲೋಕ ವಿವೇಕ ಇವುಗಳಿಂದಾಗಿ ಇವರ ವಚನಗಳು ವಿಶಿಷ್ಟವಾಗಿವೆ[೪೮] ಎಂಬುದು ಸರಿಯಾದ ಮಾತೆನ್ನಬಹುದು.

**ಸಂಗಮೇಶ ಹಂಡಗಿ (೧೯೩೮)**

ಆಧುನಿಕ ವಚನ ಸಾಹಿತ್ಯದ ಬಗ್ಗೆ ಅಧ್ಯಯನ ಮಾಡಿದ ಆಧುನಿಕ ವಚನಕಾರ ಶ್ರೀ ಸಂಗಮೇಶ ಹಂಡಗಿಯವರು. ವಿಜಯಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನ ತೆಲಗಿ ಗ್ರಾಮದಲ್ಲಿ ೧೯೩೮ರಲ್ಲಿ ಜನಿಸಿದರು. ಶಿಕ್ಷಕರಾಗಿ, ಉಪನ್ಯಾಸಕರಾಗಿ, ಪತ್ರಕರ್ತರಾಗಿ, ವಾಗ್ಮಿಗಳಾಗಿ, ಪ್ರಸಿದ್ಧರಾಗಿರುವ ಸಂಗಮೇಶ ಅವರು **'ಜ.ಚ.ನಿ., ವಚನ ಸಾಹಿತ್ಯ'** ಕುರಿತು ಅಧ್ಯಯನ ಮಾಡಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿಹೆಚ್.ಡಿ. ಪದವಿ ಪಡೆದಿದ್ದಾರೆ.

ಈಗಾಗಲೇ ೩೨ ಕೃತಿಗಳನ್ನು ಪ್ರಕಟಿಸಿರುವ ಹಂಡಗಿಯವರು ಕರ್ನಾಟಕದ ಪ್ರಮುಖ ಆಧುನಿಕ ವಚನಕಾರರಲ್ಲಿ ಒಬ್ಬರಾಗಿದ್ದಾರೆ. **"ಸಂಗಮೇಶ ಪ್ರಿಯ ನಿಡುಮಾಮಿಡಿ ಚನ್ನಬಸವೇಶ್ವರಾ"** ಎಂಬ ಅಂಕಿತದಲ್ಲಿ ನಾಲ್ಕು 'ವಚನ ಸಂಕಲನ'ಗಳನ್ನು ಹೊರತಂದಿದ್ದಾರೆ. ಅವುಗಳೆಂದರೆ **ನುಡಿಮಿಡಿ, ಶರಣಾನುಭವ, ವಚನಸ್ತವನ, ವಚನ ಮಯೂರ** ಎಂಬುವುಗಳು ಕಾವ್ಯ, ವಿಮರ್ಶೆ, ಸಂಶೋಧನೆ, ಸಂಪಾದನೆ, ವಿಚಾರ ಸಾಹಿತ್ಯ ಹಾಗೂ ಆಧುನಿಕ ವಚನಗಳ ಮೂಲಕ ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಠ ಕೊಡುಗೆಯನ್ನು ನೀಡಿದ್ದಾರೆ. "ಜ.ಚನಿ. ಕಾವ್ಯಾನಂದ, ಮೂಜಗದಂತಹ ಕೆಲವೇ ಆಧುನಿಕ ವಚನಕಾರರ ಸಾಲಿನಲ್ಲಿ ಇವರು ಅಗ್ರಗಣ್ಯರಾಗಿ ನಿಲ್ಲುತ್ತಾರೆ"[೪೯] ಎಂಬುದನ್ನು ಗಮನಿಸಬಹುದು.

**ಶಿವಲಿಂಗಮ್ಮ ಕಟ್ಟಿ (೧೯೩೨)**

ಶಿವಲಿಂಗಮ್ಮ ಕಟ್ಟಿಯವರು ಮೂಲತಃ ಬಾಗಲಕೋಟೆಯವರು. ಮಹಿಳಾಮಂಡಳ, ಲೇಕಿಯರ ಸಂಘಗಗಳನ್ನು ಕಟ್ಟಿಕೊಂಡು ಸಕ್ರಿಯವಾಗಿ ತಮ್ಮನ್ನು ಮಹಿಳೆಯರ ಜಾಗ್ರತಿಗಾಗಿ ತೊಡಗಿಸಿಕೊಂಡವರು. ಶರಣರ ವಚನಗಳ ಅಧ್ಯಯನ ಹಾಗೂ ಸತ್ಸಂಗದ ಪ್ರಭಾವದ ಹಿನ್ನೆಲೆಯಲ್ಲಿ **'ಶ್ರೀಗುರು ಕುಮಾರೇಶ'** ಅಂಕಿತದಲ್ಲಿ ೧೭೩ ವಚನಗಳನ್ನು ರಚಿಸಿದ್ದಾರೆ. **'ಕರುಣ-ಕಿರಣ'** ಎಂಬ ಈ ಕೃತಿಯಲ್ಲಿ ಸ್ತುತಿ, ಆತ್ಮನಿವೇದನೆ, ಲಿಂಗಾಯತ ತತ್ತ್ವ ಸಿದ್ಧಾಂತಗಳ ಪ್ರತಿಪಾದನೆಯಿದೆ. ಕೆಲವು ಬೆಡಗಿನ ವಚನಗಳೂ ಇಲ್ಲಿ ಕಾಣಸಿಗುತ್ತವೆ. ಬಸವತತ್ತ್ವ ಸಂಸ್ಕೃತಿಯಲ್ಲಿ

ಬಾಳಿರುವ ಶಿವಲಿಂಗಮ್ಮ ಒಬ್ಬ ಶ್ರೇಷ್ಠ ವಚನಕಾರ್ತಿ ಎನಿಸಿದ್ದು, ಸಮಾಜವನ್ನು ತುಂಬಾ ಸೂಕ್ಷ್ಮವಾಗಿ ಅವರು ಅವಲೋಕಿಸಿದ್ದು ತಿಳಿದುಬರುತ್ತದೆ.

**ಗಂಗಮ್ಮ ಹೊಸಮನಿ**

ರಾಯಚೂರ ಜಿಲ್ಲೆಯ ಲಿಂಗಸೂಗೂರಿನವರಾದ ಗಂಗಮ್ಮ ಹೊಸಮನಿಯವರು **'ವಿಜಯ ಮಹಾಂತೇಶ'** ಅಂಕಿತದಲ್ಲಿ ೧೦೧ ವಚನಗಳನ್ನು ಬರೆದಿದ್ದಾರೆ. ಅವರ **'ವಚನಾಂಜಲಿ'** ಕೃತಿಯಲ್ಲಿ ಭಕ್ತಿಯೆ ಪ್ರಧಾನವಾಗಿದ್ದು. ಲೋಕಾನುಭವವೂ ಅಲ್ಲಲ್ಲಿ ಕಾಣಿಸಿಕೊಂಡಿದೆ.

**ಕಮಲಾ ಹಂಪನಾ (೧೯೩೫)**

'ಕಮಲಾ ಹಂಪನಾ' ಎಂದೇ ಖ್ಯಾತರಾಗಿರುವ ಶ್ರೀಮತಿ ಸಿ.ಆರ್. ಕಮಲಮ್ಮ ಅವರು ಸಂಶೋಧಕಿ, ವಿಮರ್ಶಕಿ, ಸಂಪಾದಕಿಯಾಗಿ ಹಲವಾರು ಮಹತ್ವದ ಕೃತಿಗಳನ್ನು ಹೊರತಂದಿದ್ದಾರೆ. ಇವರು **'ಕಮಲಾಪ್ರಿಯ'** ಅಂಕಿತದಲ್ಲಿ ೭೦ ವಚನಗಳನ್ನು **'ಬಿಂದಲಿ'** ಎಂಬ ಕೃತಿಯ ಮೂಲಕ ಪ್ರಕಟಿಸಿದ್ದಾರೆ. ಇವು ವಚನಗಳೆನ್ನುವುದಕ್ಕಿಂತ ಇವುಗಳನ್ನು ಹನಿಗವನ, ಚುಟುಕು ಎನ್ನಬಹುದು. ಆದರೆ ಅದರಲ್ಲಿ ಅಂಕಿತನಾಮವಿರುವುದರಿಂದ ಅವುಗಳನ್ನು ವಚನಗಳೆನ್ನಲಾಗುತ್ತದೆ.

ಅಂತರಂಗದ ತಳಮಳ, ನಿವೇದನೆ, ಇವರ ವಚನಗಳಲ್ಲಿ ಆಧುನಿಕ ಗಡಿಬಿಡಿಯ ಬದುಕಿನ ಹಿನ್ನೆಲೆಯಲ್ಲಿ ಪರಿಣಾಮಕಾರಿಯಾಗಿ ವ್ಯಕ್ತಗೊಂಡುದ್ದನ್ನು ಅರಿಯಬಹುದು.

**ಕುಮಾರ ಕಕ್ಕಯ್ಯ**

ಬಿ.ಎಸ್. ಪೋಳ ಅವರ ಅಂಕಿತನಾಮ **'ಕುಮಾರ ಕಕ್ಕಯ್ಯ'**. ವಿಜಯಪುರದವರಾದ ಇವರು ವೃತ್ತಿಯಲ್ಲಿ ಸರಕಾರಿ ನೌಕರರು, ಪ್ರವೃತ್ತಿಯಲ್ಲಿ ಕವಿ ಹಾಗೂ ಆಧುನಿಕ ವಚನಕಾರರಾಗಿದ್ದಾರೆ. ೧೯೭೮ರಲ್ಲಿ ಇವರು **'ಕುಮಾರ ಕಕ್ಕಯ್ಯನ ವಚನಗಳು'** ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ೯೭೫ ವಚನಗಳಿದ್ದು, ಅವು ತುಂಬಾ ಪ್ರಗತಿಪರ ವಿಚಾರಗಳಿಂದ ಕೂಡಿವೆ[೪೪] ಇವರ ಅನೇಕ ವಚನಗಳು 'ಲಿಂಗನುಡಿ'ಯಲ್ಲಿ ಪ್ರಕಟಗೊಂಡಿದ್ದು ಸಮಕಾಲೀನ ಸಮಾಜದ ವಿದ್ಯಮಾನ, ಸಮಸ್ಯೆಗಳಿಗೆ ಅವು ತೀವ್ರತರವಾಗಿ ಸ್ಪಂದಿಸುತ್ತವೆ.

ಜಾತಿ ಭೇದ, ಲಿಂಗಭೇದ, ವರ್ಣಭೇದ ಮುಂತಾದ ಅನಿಷ್ಟಗಳನ್ನು ಖಂಡಿಸುವ ಪ್ರಗತಿಪರ ವಿಚಾರಗಳು ಅದರಲ್ಲಿವೆ. 'ಕುಮಾರ ಕಕ್ಕಯ್ಯನ ವಚನಗಳು', "ಜನನದಿಂದ ಮರಣದವರೆಗೆ, ಪ್ರಪಂಚದಿಂದ ಪರಮಾರ್ಥದವರೆಗೆ, ಆತ್ಮದಿಂದ ಪರಮಾತ್ಮನವರೆಗೆ, ಆಸ್ತಿಕತೆಯಿಂದ ನಾಸ್ತಿಕತೆಯವರೆಗೆ, ಪತಿ–ಪತ್ನಿ ಪ್ರೇಮದಿಂದ ವೈರಾಗ್ಯ ಸಾಕ್ಷ ಮೋಕ್ಷಗಳವರೆಗೆ, ಕುಡಿತ, ಕಾಮ, ಕದನದಿಂದ, ಅಧಿಕಾರ, ಆಡಳಿತ, ರಾಜಕಾರಣ ಇತ್ಯಾದಿಗಳವರೆಗೆ ಮಾನವ ಜೀವನದ ಎಲ್ಲ ಸ್ತರಗಳಲ್ಲಿ ಸೂಕ್ತ ಮಾರ್ಗದರ್ಶನ ಮಾಡಬಲ್ಲಂಥ ಅಮೂಲ್ಯ ನುಡಿಗಳ ಸ್ವತಂತ್ರ ಕೃತಿಯಾಗಿದೆ"[೫೦] ಎಂದು ಹೇಳಿರುವುದು ಸರಿಯಾದ ಹೇಳಿಕೆ ಎನ್ನಬಹುದು.

ಇದರೊಂದಿಗೆ ಪಿ.ಎಸ್. ಪಾಟೀಲರು, **'ಕ್ರಾಂತಿ ಕಾಮನ ವಚನಗಳು'** ಎಂಬುದನ್ನು ೧೯೭೬ ಪ್ರಕಟಿಸಿದರು. ಉತ್ತರ ಕರ್ನಾಟಕದ ಜನಪ್ರಿಯ ಕವಿ **ಬೆಟಗೇರಿ ಕೃಷ್ಣಶರ್ಮರು** ೧೯೮೧ರಲ್ಲಿ **"ಆನಂದ ಕಂದ"** ಎಂಬ ಅಂಕಿತದಲ್ಲಿ **'ಸಾಮಾಜಿಕ ಸಂವಚನ'**ಗಳನ್ನು ಹೊರತಂದಿದ್ದಾರೆ. ಸಿ.ಪಿ. ಕೃಷ್ಣಕುಮಾರ ಅವರು **'ಅಂತರತಮ'**, **'ನೂರೊಂದು'** ಎಂಬ ವಚನ ಸಂಖಲನಗಳನ್ನು ಹೊರತಂದಿದ್ದಾರೆ. ಈಗ ನವೀನವಾಗಿ –

**ಎಲ್ಲೇಗೌಡ ಬೆಸಗರಹಳ್ಳಿ, ಡಿ.ಲಿಂಗಯ್ಯ, ದೇವದುರ್ಗದ ಶ್ರೀ ಶರಣಪ್ಪ ಗುಡದಿನ್ನಿ, ದೊಡ್ಡ ರಂಗೇಗೌಡ, ಗೋ.ರು. ಚನ್ನಬಸಪ್ಪ, ಡಾ. ಎಚ್. ತಿಪ್ಪೇರುದ್ರಸ್ವಾಮಿ** ಮೊದಲಾದವರು ಆಧುನಿಕ ವಚನಗಳನ್ನು ರಚಿಸಿದ್ದಾರೆ.

ಇಂದು ಆಧುನಿಕ ವಚನ ಸಾಹಿತ್ಯ ದಷ್ಟ-ಪುಷ್ಟವಾಗಿ ಬೆಳೆಯಲು ನೂರಾರು ಹಿರಿಯ ಸಾಹಿತಿಗಳು, ಕಿರಿಯರು, ಸ್ತ್ರೀಯರು ವಚನ ಸಾಹಿತ್ಯದಲ್ಲಿ ಆಸಕ್ತಿ ಹೊಂದಿರುವುದು ತಿಳಿದುಬರುತ್ತದೆ. ಮಹಿಳೆಯರ ಸಂಖ್ಯೆಯೂ ಇಲ್ಲಿ ಗಣನೀಯವಾಗಿರುವುದನ್ನು ಅರಿಯಬಹುದು. ಮಹಮ್ಮದೀಯ ಬಂಧುಗಳಾದ ಪ್ರೊ. ಜಿ. ಅಬ್ದುಲ್ ಬಷೀರ್ ಅವರು **'ಅಲ್ಲರಖಾ'** ಅಂಕಿತದಲ್ಲಿ ವಚನ ಬರೆದು ಸಂತ ಕವಿ ಶಿಶುನಾಳ ಶರೀಫರಂತೆ ಅನುಭವ ಕವಿ ಎನಿಸಿದ್ದು ತಿಳಿದುಬರುತ್ತದೆ. ಈಶ್ವರ ಸಣಕಲ್ಲ್, ನಿರುಪಾದೀಶಸ್ವಾಮಿಗಳು, ಬ.ನಿ. ಯಲ್ಲಟ್ಟಿ, ಜಿ.ಎಸ್. ಹನ್ನೆರಡು ಮಠ, ಎನ್ ಮಹಾದೇವಪ್ಪ, ಶಿವಮೂರ್ತಿ ಮುರುಘರಾಜೇಂದ್ರ ಶರಣರು, ಪ್ರೊ. ಸಿದ್ಧಣ್ಣ ಲಂಗೋಟಿ, ಪ್ರೊ. ಬಿ.ಎಂ. ಹಿರೇಮಠ, ಅಪ್ಪಾಸಾಹೇಬ ಅಲಿಬಾದಿ ಚಂದ್ರಶೇಖರ ಹಿರೇಮಠ ಮೊದಲಾದ ೫೦೦ಕ್ಕೂ ಹೆಚ್ಚು ಆಧುನಿಕ ವಚನಕಾರರು ಕಲ್ಬುರ್ಗಿ ಹಾಗೂ ಬೀದರ ಜಿಲ್ಲೆಯನ್ನು ಹೊರತುಪಡಿಸಿ ಕಾಣಸಿಗುತ್ತಾರೆ.

ಶರಣರ ವಚನ ಸಾಹಿತ್ಯ ಪರಂಪರೆ, ಒಂದು ಕಾಲ ಘಟ್ಟದಲ್ಲಿ ನಿಂತು ಹೋಗಿದ್ದರೂ ಇಂದು ಅದು ಹೆಮ್ಮರವಾಗಿ ಬೆಳೆಯುತ್ತಿರುವ ಸೂಚನೆಯನ್ನು 'ಕಲಬುರ್ಗಿ ಹಾಗೂ ಬೀದರ ಜಿಲ್ಲೆಯ ಆಧುನಿಕ ವಚನಕಾರರ ಪರಂಪರೆಗೆ ಹಿನ್ನೆಲೆಯಾಗಿ ಕಾಣಬಹುದೆಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ಗಮನಿಸಬಹುದಾಗಿದೆ.

ಟಿಪ್ಪಣಿಗಳು

೧) ಡಾ. ಸೋಮನಾಥ ಯಾಳವಾರ – "ಬೀದರ ಜಿಲ್ಲಾ ದರ್ಶನ" – ಪು. ೩.

೨) ಎಂ.ವ್ಹಿ. ಸೀತಾರಾಮಯ್ಯ – ಕವಿರಾಜಮಾರ್ಗ ಪ್ರವೇಶಿಕೆ – 'ಕವಿರಾಜಮಾರ್ಗ ಶಾಸ್ತ್ರೀಯ ಶ್ರೋತ' ಪು – ೧೫

೩) ಡಾ. ಆರ್.ಎಂ. ಷಡಕ್ಷರಯ್ಯ – ಬಸವಕಲ್ಯಾಣದ ಕಲೆ ಸಂಸ್ಕೃತಿ – ಸಂ. ರೇವಯ್ಯ ಒಡೆಯರ್ – ಪು ೪

೪) ಡಾ. ಸೋಮನಾಥ ಯಾಳವಾರ & ಡಾ. ಪ್ರೇಮಾ ಸಿರ್ಸೆ (ಸಂ) ಬೀದರ ಜಿಲ್ಲಾ ದರ್ಶನ – ಪು. ೧೪

೫) ಪ್ರೊ. ಎಲ್.ಎಸ್. ಶೇಷಗಿರಿರಾವ್ (ಸಂ) ಕಿರಿಯರ ಕರ್ನಾಟಕ – ಪು. ೧೭೭

೬) ಪ್ರೊ. ಎಲ್.ಎಸ್. ಶೇಷಗಿರಿರಾವ್ – ಕಿರಿಯರ ಕರ್ನಾಟಕ – ಪು. ೧೭೯

೭) ಡಾ. ಈಶ್ವರಯ್ಯ ಮಠ (ಸಂ) – ಬಸವ ಸಾಗರ – ಪು. ೧೨೦

೮) ಡಾ. ಈಶ್ವರಯ್ಯ ಮಠ (ಸಂ)– ಬಸವ ಸಾಗರ – ಪು. ೧೨೧

೯) ಕನ್ನಡ ಸಾಹಿತ್ಯ ಚರಿತ್ರೆ – ನಾಲ್ಕನೆಯ ಸಂಪುಟ – ಪು. ೩೭೭

೧೦) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ – ಪು. ೫೮೬

೧೧) ಬಸವ ಸಾಗರ – ಸಂ. ಈಶ್ವರಯ್ಯಾ ಮಠ – ಪು. ೧೨೬

೧೨) ಬಸವ ಸಾಗರ – ಸಂ. ಈಶ್ವರಯ್ಯಾ ಮಠ – ಪು. ೧೨೬ರಲ್ಲಿ

೧೩) ಎಚ್. ಆರ್. ರಾಜಲಕ್ಷ್ಮೀ – ಕನ್ನಡ ಸಾಹಿತ್ಯ ಚರಿತ್ರೆ – ಪು. ೬೦೫

೧೪) ಡಾ. ಎಚ್. ಚಂದ್ರಶೇಖರ – ಲದ್ದೆಯ ಸೋಮಣ್ಣ – ಪು ೧೮

೧೫) ಸ.ನ. ಗಾಯತ್ರಿ – ಕನ್ನಡ ಸಾಹಿತ್ಯ ಚರಿತ್ರೆ, – ಪು. ೬೬೬

೧೬) ಡಾ. ಸೋಮನಾಥ ಯಾಳವಾರ – ಬೀದರ ಜಿಲ್ಲೆಯ ಶರಣ ಸ್ಮಾರಕಗಳು – ಪು. ೨೦

೧೭) ಬಸವಸಾಗರ – (ಸಂ) ಈಶ್ವರಯ್ಯ ಹಿರೇಮಠ – ಪು. ೧೩೨

೧೮) ಆಧುನಿಕ ವಚನಕಾರರು – ಆರ್.ಡಿ.ಜಿ. – ಪು.೪

೧೯) ಇಪ್ಪತ್ತನೆಯ ಶತಮಾನದ ವಚನ ಸಾಹಿತ್ಯ ಡಾ. ಪ್ರೀತಿ ಶುಭಚಂದ್ರ – ಪು. ೧೪

೨೦) ಡಾ. ಪ್ರೀತಿ ಶುಭಶ್ಚಂದ್ರ – ಇಪ್ಪತ್ತನೆಯ ಶತಮಾನದ ವಚನ ಸಾಹಿತ್ಯದ ಹಿನ್ನೆಲೆ – ಪು. ೧೭

೨೦) ಡಾ. ವೀರಣ್ಣ ರಾಜೂರ – 'ಷಟಸ್ಥಲ ಚಕ್ರವರ್ತಿ ಚನ್ನಬಸವಣ್ಣನವರು' (ಸಂ) ಅನ್ನದಾನೇಶ್ವರ ಮಹಾಸ್ವಾಮಿಗಳು ಮೆಂಡರಗಿ–ಪು.೧೧–೧೨

೨೧) ಶಂಕರ ಮೊಕಾಶಿ ಪುಣೇಕರ, ಸ್ವಾತಂತ್ರ್ಯಪೂರ್ವ ಹೊಸಗನ್ನಡ ಸಾಹಿತ್ಯ – ೧ – ಪೂರ್ವೋಕ್ತ – ಪು. ೧೨೧

೨೨) ಪ್ರೀತಿ ಶುಭಶ್ಚಂದ್ರ – ಇಪ್ಪತ್ತನೆಯ ಶತಮಾನದ ವಚನ ಸಾಹಿತ್ಯ – ಪು. ೩೩

೨೩) ಡಾ. ರಾಮಚಂದ್ರ ಗಣಾಪುರ – ಗುಲ್ಬರ್ಗ ಜಿಲ್ಲೆಯ ಆಧುನಿಕ ವಚನ ಸಾಹಿತ್ಯ – ಪು. ೩೧

೨೪) ಡಾ. ಮಾಣಿಕರಾವ ಧನಾಶ್ರೀ – 'ಜನಸೇವಕನ ವಚನಗಳು' – ಪ್ರಸ್ತಾವನೆಯಲ್ಲಿ

೨೫) ಕರ್ನಾಟಕದ ದೀಪಾವಳಿ ಸಂಚಿಕೆ – ಸಂ. ೧೧೬. ಸಂ. ೨

೨೬) ಡಾ. ರಾಮಚಂದ್ರ ಗಣಾಪುರ – ಗುಲಬರ್ಗಾ ಜಿಲ್ಲೆ ಆಧುನಿಕ ವಚನ ಸಾಹಿತ್ಯ – ಪು. ೩೧

೨೭) ಬಸವಪಥ – ೨೦೦೦ – ಜೂನ್. ಬಸವ ಭವನ ಶ್ರೀ ಬಸವೇಶ್ವರ ವೃತ್ತ ಬೆಂಗಳೂರು

೨೮) ಶಾಂತಸಾಗರ – ೨೦೦೦ – ಎಸ್.ಎಸ್. ಪಾಟೀಲ ಸನ್ಮಾನ ಸಮಿತಿ, ಶಿಗ್ಗಿ, ಬೆಳಗಾವಿ,

೨೯) ಎನ್.ಬಿ.ಬುಳ್ಳಾ – ಡಾ. ಸಿದ್ಧಯ್ಯ ಪುರಾಣಿಕರ ಕೃತಿಗಳು – ಪು. ೯೧

೩೦) ಡಾ. ರಾಮಚಂದ್ರ ಗಣಾಪುರ – 'ಗುಲಬರ್ಗಾ ಜಿಲ್ಲೆಯ ಆಧುನಿಕ ವಚನ ಸಾಹಿತ್ಯ' – ಪು. ೩೨

೩೧) ಆಲೂರ ವೆಂಕಟರಾಯರು – ಕರ್ನಾಟಕ ಗಾಂಧಿ ಹರ್ಡೇಕರ ಮಂಜಪ್ಪನವರು

೩೨) ಪ್ರೊ. ಸಿದ್ಧಣ್ಣ ಲಂಗೋಟಿ – ಹರ್ಡೇಕರ ಮಂಜಪ್ಪನವರು – ಪು. ೩೮–೪೦

೩೩) ಸಿದ್ಧಯ್ಯ ಪುರಾಣಿಕ – ಹರ್ಡೇಕರ ಮಂಜಪ್ಪನವರು – ವೀ.ಪು.ಪು. ಮಾಲಿಕೆ ಗದಗ

೩೪) ಸಿದ್ಧಯ್ಯ ಪುರಾಣಿಕ – ಹರ್ಡೇಕರ ಮಂಜಪ್ಪನವರು – ವೀ. ಪುಣ್ಯಪುರುಷರು ಮಾಲಿಕೆ ಗದಗ

೩೫) ಆರ್.ಡಿ.ಜಿ. ಆಧುನಿಕ ವಚನಕಾರರು – ಪು. ೧೨

೩೬) ಎಂ. ಶಿವಕುಮಾರ ಸ್ವಾಮಿ, ಪ್ರಧಾನ ಸಂಪಾದಕರು – ಆಧುನಿಕ ವಚನವೇತ್ತರು – ಪು. ೪೫

೩೭) ಡಾ. ಸಂಗಮೇಶ ಹಂಡಗಿ – ಸಾಹಿತ್ಯ ತಪಸ್ವಿ ಡಾ. ಜ.ಚ.ನಿ. – ಪು. ೩೩

೩೮) ಡಾ. ಸಂಗಮೇಶ ಹಂಡಗಿ – ಸಾಹಿತ್ಯ ತಪಶ್ವಿ – ಡಾ. ಜ.ಚ.ನಿ. – ಪು. ೪೩

೩೯) ದ.ಲ. ಕೆರೂರ – ಸಂಯುಕ್ತ ಕರ್ನಾಟಕ – ೨–೬–೧೯೮೫

೪೦) ಎಂ. ಶಿವಕುಮಾರಸ್ವಾಮಿ, ಪ್ರಧಾನ ಸಂಪಾದಕರು, 'ಆಧುನಿಕ ವಚನವೇತ್ತರು – ಪು. ೩೯

೪೧) ಆರ್.ಡಿ.ಜಿ. – ಆಧುನಿಕ ವಚನಕಾರರು – ಪು. ೧೯

೪೨) ಡಾ. ಗವಿಸಿದ್ಧಪ್ಪ ಪಾಟೀಲ – ಡಾ. ಸಿದ್ಧಯ್ಯ ಪುರಾಣಿಕ – ಪು. ೫೦

೪೩) ಡಾ. ವ್ಹಿ.ಜಿ. ಪೂಜಾರ ವಚನ ಸಾಹಿತ್ಯ ಸಮೀಕ್ಷೆ – ಪು. ೧೩೦

೪೪) ಮಹಾದೇವ ಬಣಕಾರರ 'ಅಜ್ಞಾನ ನಿರಸನ ಸ್ಥಲ' ಭಾಗ–೧ – ೧೯೮೧ – ರಕ್ಷಾ ಪುಟ – ೨

೪೫) ವ್ಹಿ.ಜಿ. ಪೂಜಾರ – 'ವಚನ ಸಾಹಿತ್ಯ ಸಮೀಕ್ಷೆ – ಪು. ೧೫೯

೪೬) ಅನ್ನದಾನೇಶ್ವರ ಮಹಾಸ್ವಾಮಿಗಳ ವಚನ ವಿಮರ್ಶೆ 'ಅನುಭಾವಿ' ಸಂ. ಆರ್.ಎಲ್. ಪೋಲಿಸ ಪಾಟಿಲ – ಪು. ೩೭೭

೪೭) ಗವಿಸಿದ್ಧಪ್ಪ ಪಾಟೀಲ – ಸಮಾರೋಪ – ಪು. ೯೮

೪೮) ವಿ.ಜಿ. ಪೂಜಾರ – 'ವಚನ ಸಾಹಿತ್ಯ ಸಮೀಕ್ಷೆ – ೨೦೦೯ – ಪು. ೧೭೫

೪೯) ಕುಮಾರ ಕಕ್ಕಯ್ಯನ ವಚನಗಳು, ಮುನ್ನುಡಿ – ಪು. ೧

## ಅಧ್ಯಾಯ – ೩

## ಬೀದರ ಜಿಲ್ಲೆಯ ಆಧುನಿಕ ವಚನಕಾರರು

## ಹಾಗೂ ಅವರ ವಚನ ಸಾಹಿತ್ಯ

ಯಾವುದೇ ಪ್ರಕಾರದ ಸಾಹಿತ್ಯ ಕೃತಿಗಳನ್ನು ಅಧ್ಯಾಯನಕ್ಕೆ ತೊಡುಗುವಾಗ ಅದರ ಕರ್ತೃಗಳ ಜೀವನ ಹಾಗೂ ಸಾಧನೆಗಳನ್ನು ಪ್ರಮುಖವಾಗಿ ತಿಳಿದಿರಬೇಕಾದುದು ಅವಶ್ಯವೆಂದು ಹೇಳಬಹುದು. ಕಾರಣವೆಂದರೆ ಸಾಹಿತ್ಯ ರಚನೆಗೆ ಕಾರಣವಾಗಿರುವ ಕವಿ ಅಥವಾ ಲೇಖಕನ ಜೀವನ ವಿಧಾನವೂ ಇಲ್ಲಿ ಮುಖ್ಯವೆಂದು ಅರಿಯಬಹುದು.

ಕಾವ್ಯ ಕವಿಯ ಜೀವನಾನುಭವಗಳ ಹಿನ್ನೆಲೆಯ ಒಂದು ಸ್ತರದಲ್ಲಿಯೇ ಮೂಡುವಂತಹದ್ದು. ಕವಿಯ ಬದುಕು, ಪರಿಸರ, ವ್ಯಾಸಾಂಗ, ಧ್ಯೇಯ, ಧೊರಣೆ, ಸಾಧನೆ–ಸಿದ್ಧಿ ಮುಂತಾದವುಗಳು ಆ ಸಾಹಿತಿಯ ಕಾವ್ಯ ಸೃಷ್ಟಿಯ ಪರಿಕರಗಳಾಗಿರುವುದರಿಂದ ಅವುಗಳಿಗೆ ಅತೀತನಾಗಿ ಕವಿಯೊಬ್ಬನು ಕಾವ್ಯವನ್ನು ದುಡಿಸಿಕೊಳ್ಳುವುದು ಅಸಾಧ್ಯವಾಗಿ ಕಾಣುತ್ತದೆ. "ಕವಿ ತನ್ನತನವನ್ನು ಎಷ್ಟೇ ಮರೆಮಾಚಿಕೊಳ್ಳಲು ಯತ್ನಿಸಿದರೂ ಅದು ಆತನ ಕೃತಿಗಳಲ್ಲಿ  ಒಂದಿಲ್ಲ ಒಂದು ರೀತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಕಾವ್ಯ ವಸ್ತುವಿನ ಆಯ್ಕೆಯಲ್ಲಿ ಆತನ ಅಭಿರುಚಿಯೂ ಅಭಿವ್ಯಕ್ತಿಯ ರೂಪದಲ್ಲಿ ಆತನ ಸಂಸ್ಕಾರವೂ ವ್ಯಕ್ತವಾಗಿರುವುದನ್ನು ಗುರುತಿಸಬಹುದು.[೧] ಕೃತಿಯೊಂದರ ಅಧ್ಯಯನದಲ್ಲಿ ತೊಡಗುವಾಗ ಸಾಮಾನ್ಯ ಸಾಹಿತಿಯ ಚರಿತ್ರೆಯಲ್ಲಿ ಮುಖ್ಯ ಭಾಗ ಅವನ ಪುಸ್ತಕ; ಅವನ ಜೀವನ ಆ ಪುಸ್ತಕಕ್ಕೆ ಅಂಗ. ಮಹಾಸಾಹಿತಿಯ ಚರಿತ್ರೆಯಲ್ಲಿ ಜೀವನ ಮುಖ್ಯ ಭಾಗ; ಪುಸ್ತಕ ಅದರ ಅಂಗ. ಉತ್ತಮ ಜೀವನದಿಂದ ಉತ್ತಮ ಸಾಹಿತ್ಯ, ಉತ್ತಮ ಸಾಹಿತ್ಯದಿಂದ ಉತ್ತಮ ಜೀವನ ಹೀಗೆ ಜೀವನ ಮತ್ತು ಸಾಹಿತ್ಯಗಳು ಪರಸ್ಪರ ಉದ್ಧಾರಕಗಳು"[೨] ಎಂಬ ಡಿ.ವ್ಹಿ.ಜಿ.ಯವರ ಮಾತನಲ್ಲಿ ಗಮನಿಸಬೇಕು. ಈ ಮಾತಿನ ಸತ್ಯಾಸತ್ಯತೆಯನ್ನು ನಮ್ಮ ಅನೇಕ ಪ್ರಾಚೀನ ಹಾಗೂ ನವೀನ ಕವಿಗಳ ಜೀವನ ಸಾಧನೆಯ ಹಿನ್ನೆಲೆಯಲ್ಲಿ ತಿಳಿಯಬಹುದಾಗಿದೆ.

ಕನ್ನಡದ ಕವಿಗಳ ಮಟ್ಟಿಗೆ ಆಲೋಚಿಸುವುದಾದರೆ, ನಮ್ಮ ಸಾಹಿತ್ಯೇತಿಹಾಸದಲ್ಲಿ ಯಾವ ಒಬ್ಬ ಮಹತ್ವದ ಕವಿಯೂ ತನ್ನ ಜೀವನ ದೃಷ್ಟಿ ಬೇರೆ, ಕಾವ್ಯ ಧೊರಣೆ ಬೇರೆ ಎಂದು ಭಾವಿಸಿರುವಂತೆ ಕಾಣಿಸುವುದಿಲ್ಲ. ಆದಿ ಕವಿ ಪಂಪನಿಂದ ಹಿಡಿದು ಕುವೆಂಪು ಕವಿಯವರೆಗಿನ ಯಾವ ಕವಿಯ ಹೆಸರನ್ನು ಎತ್ತಿಕೊಂಡು ಆಲೋಚಿಸಿದರೂ, ಅವರ ಕಾವ್ಯಗಳಲ್ಲಿ ಆಯಾ ಕವಿಗಳ ಜೀವನ ದೃಷ್ಟಿ, ಕವಿದರ್ಶನ ಸಮ್ಮಿಳಿತವಾದದ್ದನ್ನು ಗುರುತಿಸಬಹುದು.

ಯಾವುದೇ ಒಂದು 'ಸಾಹಿತ್ಯ' ಸೃಷ್ಟಿ ಕವಿಯ ಅನುಭವ ಮತ್ತು ಸಂವೇದನೆಗಳ ಮೂಲಕವೇ ವಿಶಿಷ್ಟವಾದ ಒಂದು ಸ್ವರೂಪವನ್ನು ಪಡೆಯುತ್ತದೆ. ಹಾಗಾಗದೇ ಹೋದಲ್ಲಿ ಕವಿಯ ಸ್ವಂತಿಕೆಗೆ ಭಂಗ ಬರುವ ಸಂಭವ ಹೆಚ್ಚು. ಒಬ್ಬ ಕವಿ, ಇನ್ನೊಬ್ಬ ಕವಿಯಿಂದ ಭಿನ್ನವಾಗಿ ಕಾಣಿಸಲು ಕಾರಣವಾಗಿರುವುದೇ ಈ ಕವಿಯ ಸ್ವಂತಿಕೆ ಎನ್ನಬಹುದು. ಆ ಸ್ವಂತಿಕೆಯನ್ನು ಕವಿಯ ಜೀವನ ಹಾಗೂ ಆತನ ಪರಿಸರದ ಹಿನ್ನೆಲೆಯಲ್ಲಿ ಗುರುತಿಸಬಹುದು.

"ಕಾವ್ಯ ಕವಿಯ ಕರ್ಮ. ಅದು ಅಂಕುರಿಸಿ ಮೊಳೆತು ಫಲಿಸುವುದು ಕವಿಯ ಮನದ ಕೊನೆಯಲ್ಲಿ ಆತನ ಸಂಸಾರ, ಪರಿಸರ, ವೈಯಕ್ತಿಕ ಒಲವು, ಆತನ ಮನೋಧರ್ಮ, ಅವನ ಕಾವ್ಯವನ್ನು ರೂಪಿಸುತ್ತದೆ.[೩] ಕವಿಯ ಜೀವನದ ಅಭ್ಯಾಸವು ಆ ಕವಿಯ ಸಮಗ್ರ ಕಾವ್ಯಾಭ್ಯಾಸಕ್ಕೆ ಹೇಗೆ ನೆರವಾಗಬಲ್ಲದು ಎಂಬುದನ್ನು

ಡಾ. ಆರ್.ಸಿ. ಹಿರೇಮಠರು "ಕಾವ್ಯವನ್ನು ಕವಿಯ ಜೀವನದ ಕನ್ನಡಿ ಎಂದು ಕರೆಯಬಹುದು. ಕವಿಯ ಆಸೆ, ಆಕಾಂಕ್ಷೆ, ಆದರ್ಶಗಳು ಆತನ ಕಾವ್ಯಗಳಲ್ಲಿ ಪಡಿಮೂಡಿರುತ್ತವೆ.[೪] ಎಂದು ಹೇಳಿರುವುದನ್ನಿಲ್ಲಿ ಅರಿಯಬಹುದು.

ಆಧುನಿಕ ಕಾವ್ಯ ವಿಮರ್ಶೆಯಲ್ಲಿ ಕವಿಯ ಜೀವನವನ್ನು ಪ್ರತ್ಯೇಕಿಸಿ, ಆತನ ಕೃತಿಯನ್ನು ಪರಿಶೀಲಿಸಬೇಕೆಂಬ ವಾದವೂ ಇದೆ. ಮಾನಸ ಶಾಸ್ತ್ರದ ಭೂಮಿಕೆಯ ಮೇಲೆ ನಿಂತ ಈ ಅಭಿಪ್ರಾಯಕ್ಕೆ ವಿಮರ್ಶಾ ಕ್ಷೇತ್ರದಲ್ಲಿ ಮಹತ್ವದ ಸ್ಥಾನವಿದೆಯಾದರೂ ಇದೇ ಎಲ್ಲ ಕೃತಿಗಳ ವಿಮರ್ಶೆಗೆ ಮಾನದಂಡವಾಗಲಾರದು. ಕವಿ ಹಾಗೂ ಆತನ ಕೃತಿಗಳಲ್ಲಿ ಅವಿನಾಭಾವ ಸಂಬಂಧವಿರುವೆಡೆಗಳಲ್ಲಿ ಕವಿಯನ್ನು ಬದಿಗಿಟ್ಟು ಆತನ ಕೃತಿಗಳನ್ನು ಗಮನಿಸಿವುದು ಸಮಂಜಸವೆನಿಸದು. ಒಂದು ವೇಳೆ ಹಾಗೆ ಮಾಡಿದರೆ ಕವಿಗೆ ಅಪಚಾರವಾಗುವುದಲ್ಲದೆ ಆತನ ಕೃತಿಗಳಲ್ಲಡಕವಾದ ಅನೇಕ ಸಂಗತಿಗಳು ತಿಳಿಯದೆ ಹೋಗುವವು.[೫] ಹೀಗಾಗಿ ವಿ.ಕೃ. ಗೋಕಾಕ ಅವರು ಸಾಹಿತಿಯ ಜನಾಂಗವಾವುದು ಎಂಬುದನ್ನು ತಿಳಿಯಲು ಅವನು ಬಾಳಿದ ಕಾಲ, ಅವನು ಯಾವ ಆವರಣದಲ್ಲ ಬೆಳೆದನೊ, ಅದು ಹಾಗೂ ಅವನ ವ್ಯಕ್ತಿತ್ವ ಈ ವಿಷಯಗಳನ್ನು ಅಭ್ಯಾಸಿಸಿದರೆ ಮಾತ್ರ ನಾವು ಆಯಾ ಸಾಹಿತಿಗಳ ಕೃತಿಗಳನ್ನು ತಿಳಿಯಲು ಸಾಧ್ಯವಾಗುವುದು[೬] ಎಂದು ಅಭಿಪ್ರಾಯಪಟ್ಟಿದ್ದಾರೆ.

ಸಾಹಿತಿಯಾದವನು ಕೇವಲ ಸಮಾಜದ ಒಬ್ಬ ವ್ಯಕ್ತಿಯಾಗಿರದೆ ಆತನು ಬದುಕುವ ಪ್ರದೇಶದ ಸಾಂಸ್ಕೃತಿಕ ರಾಯಭಾರಿಯಾಗಿರುತ್ತಾನೆ. ತನ್ನ ಕೃತಿಗಳ ಮೂಲಕ ಸಮಕಾಲೀನ ಸಾಮಾಜಿಕ ಸಂದರ್ಭಗಳ ಏರು–ಪೇರುಗಳನ್ನು ಹಾಗೂ ಪರಿಸರದ ಪ್ರಜ್ಞೆಯನ್ನು ಹಾಗೂ ಜನಸಾಮಾನ್ಯರ ಜೀವನದ ರೀತಿ–ನೀತಿಗಳನ್ನು ದಾಖಲಿಸುತ್ತಾನೆ. ಹಾಗೂ ಅವುಗಳೊಂದಿಗೆ ಪರೋಕ್ಷವಾಗಿ ಹಲವು ಸಲ ಪ್ರತ್ಯಕ್ಷವಾಗಿ ಆ ಕೃತಿಯಲ್ಲಿ ಕಾಣಿಸಿಕೊಳ್ಳುತ್ತಾನೆ. ಹೀಗಾಗಿ ಕೃತಿಗಳ ಅಧ್ಯಾಯನಕ್ಕೆ ತೊಡಗುವುದರಿಂದ ಒಂದು ಪ್ರದೇಶದ ಐತಿಹಾಸಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಮತ್ತು ಆಡಳಿತಾತ್ಮಕ ವ್ಯವಸ್ಥೆಯನ್ನು ಅಲ್ಲಿ ಕಾಣಬಹುದಾಗುತ್ತದೆ. ಸಾಹಿತಿಯ ಬದುಕಿನ ಹಿನ್ನೆಲೆಯಲ್ಲಿ ಇವುಗಳನ್ನು ಅರಿಯಲು ಸಾಧ್ಯವಾಗುತ್ತದೆ.

ಒಟ್ಟಿನಲ್ಲಿ ಕವಿಯೊಬ್ಬನ ಕೃತಿಯಲ್ಲಿ ತನ್ನ ತರ್ಕದಿಂದ ಕಂಡುಕೊಳ್ಳುವ ವಿಮರ್ಶಕನ ವಿಚಾರಗಳಿಗಿಂತ ಕವಿಯಿಂದ ನಿರ್ದಿಷ್ಟವಾಗಿರುವ ಅನಿಸಿಕೆ, ಆಶಯ, ಅನುಭವಗಳು ಮಹತ್ವವಾದವುಗಳು. ಅವುಗಳನ್ನು ಖಚಿತವಾಗಿ ಅರಿಯಲು ಆ ಲೇಖಕನ ಜೀವನ ಸಾಧನೆಯನ್ನು ಪ್ರತ್ಯೇಕಿಸಿ ನೋಡುವುದು ಸರಿಯಾದ ರೀತಿ ಅಲ್ಲವೆಂದು ಹೇಳಬಹುದು. ಆ ಕಾರಣದಿಂದ ಹೊಸಗನ್ನಡ ಸಾಹಿತ್ಯದಲ್ಲಿ ಪ್ರಮುಖರಾಗಿರುವ ಕವಿಗಳು ಹಾಗೂ ಆಧುನಿಕವಚನ ರಚನೆಕಾರರಾಗಿರುವ ಬೀದರ ಜಿಲ್ಲೆಯ ಪ್ರಮುಖ ಆಧುನಿಕ ವಚನಕಾರರ ಸಂಕ್ಷಿಪ್ತ ಹಾಗೂ ಅವರ ವಚನ ಕೃತಿಗಳನ್ನು ಈ ಅಧ್ಯಾಯದಲ್ಲಿ ಪರಿಚಯಿಸಿಕೊಂಡು ಮುಂದಿನ ಅಧ್ಯಾಯದಲ್ಲಿ ಈ ಪ್ರದೇಶದ ಆಧುನಿಕ ವಚನ ಸಾಹಿತ್ಯದ ನೆಲೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

**೩.೧ ಹುಲಸೂರಿನ ಶಿವಾನಂದ ಸ್ವಾಮಿಜಿಯವರ – 'ವಚನಗಳು' ಕೃತಿ (೧೯೮೯)**

ಶ್ರೀ ಶಿವಾನಂದ ಸ್ವಾಮಿಗಳು ಶರಣರ ನಾಡಾದ ಬಸವಕಲ್ಯಾಣ ತಾಲೂಕಿನ ಹುಲಸೂರು ಶ್ರೀ ಗುರುಬಸವೇಶ್ವರ ಸಂಸ್ಥಾನ ಮಠದ ಪೀಠಾಧೀಪತಿಗಳು. ಬಸವತತ್ವ ನಿಷ್ಠರು, ಶಿಕ್ಷಣ ಪ್ರೇಮಿಗಳು, ತತ್ವಪದಕಾರರು ಹಾಗೂ ಆಧುನಿಕ ವಚನಕಾರರೆಂದು ಪ್ರಸಿದ್ಧರಾಗಿದ್ದಾರೆ. **'ಶಿವಾನಂದ ಪ್ರಿಯ ಗುರುಬಸವ ಪ್ರಭುವೆ'** ಎಂಬ ಅಂಕಿತದಲ್ಲಿ ೮೦ ಆಧುನಿಕ ವಚನಗಳುಳ್ಳ ಕೃತಿಯನ್ನು ೧೯೮೯ರಲ್ಲಿ ಪ್ರಕಟಿಸಿ ಬೀದರ ಜಿಲ್ಲೆಯ ಪ್ರಥಮ ಆಧುನಿಕ ವಚನಕಾರರೆನಿಸಿದ್ದಾರೆ.

ಇವರ ಪ್ರಾರಂಭದ ಹೆಸರು ಶಿವಯ್ಯ. ಬಾಗಲಕೋಟ ಜಿಲ್ಲೆಯ ಮುಧೋಳ ತಾಲೂಕಿನ ನಿಂಗಾಪುರ ಗ್ರಾಮದಲ್ಲಿ ೦೩-೧೨-೧೯೫೨ರಲ್ಲಿ ಜನಿಸಿದರು. ಇವರ ತಂದೆ ಗುರುಪಾದಯ್ಯ ತಾಯಿ ಕಾಶಿಬಾಯಿ. ತಮ್ಮ ಪ್ರಾಥಮಿಕ ಹಾಗೂ ಪ್ರೌಢ ಶಾಲಾ ಶಿಕ್ಷಣವನ್ನು ಮುಧೋಳದಲ್ಲಿ ಮುಗಿಸಿದರು. ಮುಧೋಳದ ಮೃತ್ಯುಂಜಯ ಮಹಾಸ್ವಾಮಿಗಳ ಆಶ್ರಯ ಹಾಗೂ ಮಾರ್ಗದರ್ಶನದಲ್ಲಿ ಬೆಳೆದ ಇವರು, ಸನ್ಯಾಸಿಯಾಗುವ ಉದ್ದೇಶದಿಂದ 'ಶಿವಯೋಗ' ಮಂದಿರದಲ್ಲಿ ವ್ಯಾಸಂಗ ಮಾಡಿ ೧೯೭೦ರಲ್ಲಿ ಕಲಬುರ್ಗಿ ಜಿಲ್ಲೆಯ ಚಿಂಚೊಳ್ಳಿ ತಾಲೂಕಿನ ಮುಕರಂಬಾ ವಿರಕ್ತಮಠದ ಅಧಿಕಾರಿಯಾದರು. ನಂತರ ಭರತನೂರಿನ ಶಿವನಂಜೇಶ್ವರ ಸ್ವಾಮಿಗಳ ಒತ್ತಾಯದ ಮೇರೆಗೆ, ೧೯೮೧ರ ಫೆಬ್ರುವರಿಯಲ್ಲಿ ಬಸವಕಲ್ಯಾಣ ತಾಲೂಕಿನ ಹುಲುಸೂರ ಗ್ರಾಮದ 'ಗುರುಬಸವೇಶ್ವರ ಮಠ'ದ ಪೀಠಾರೋರಣ ಮಾಡಿದರು.

ನೂರೊಂದು ಹಳ್ಳಿಗಳ ಪಾದಯಾತ್ರೆ, ದೀನ ದಲಿತರ ಪರ ಕಾಳಜಿ, ಭಾರತದ ಹಲವು ಪ್ರದೇಶಗಳಿಗೆ ತೆರಳಿ ಬಸವತತ್ವ ಪ್ರಚಾರ ಕೈಗೊಂಡಿರುವ ಶಿವಾನಂದ ಸ್ವಾಮಿಗಳು, ಗುರುಬಸವೇಶ್ವರ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ, ಊರಲ್ಲಿಯೇ ಹೈಸ್ಕೂಲ ಮಟ್ಟದ ಶಿಕ್ಷಣ ಎಲ್ಲರಿಗೂ ಸಿಗುವಂತೆ ಮಾಡಿದ್ದಾರೆ. ಮಾಸಿಕಶಿವಾನುಭವ ಕಾರ್ಯಕ್ರಮ, ಶ್ರಾವಣ ಮಾಸದಲ್ಲಿ ಪ್ರವಚನ, ತಮ್ಮ ಗುರುಗಳ ಪುಣ್ಯಸ್ಮರಣೆ ಹಾಗೂ ಜಯಂತೋತ್ಸವ ಕಾರ್ಯಕ್ರಮಗಳನ್ನು ಹಳ್ಳಿಯ ಪ್ರದೇಶದಲ್ಲಿ ಏರ್ಪಡಿಸುವ ಮೂಲಕ ಜನ ಜಾಗ್ರತಿ ಮಾಡುತ್ತಿದ್ದಾರೆ. ಹುಲುಸೂರಿನಲ್ಲಿ ಅಖಿಲ ಭಾರತ ಶರಣ ಸಾಹಿತ್ಯದ ಜಿಲ್ಲಾ ಸಮ್ಮೇಳನ, ರಾಜ್ಯಮಟ್ಟದ ಪ್ರಥಮ ದೇಶಿ ಸಮ್ಮೇಳನ ಹಾಗೂ ತಾಲೂಕು ಸಮ್ಮೇಳನಗಳನ್ನು ಯಶಸ್ವಿಯಾಗಿ ನಡೆಸಿಕೊಟ್ಟಿದ್ದಾರೆ. ಸಾಹಿತ್ಯ, ಧರ್ಮ, ಕಲೆಗಳನ್ನು ಪ್ರೋತ್ಸಾಹಿಸುವ ಇವರು ತಮ್ಮ ಸಂಸ್ಥೆಯಲ್ಲಿ 'ಪ್ರಕಾಶನ' ಭಾಗವನ್ನು ತೆರೆದು ಬೀದರ ಪ್ರದೇಶದ ಹಲವು ಸಾಹಿತ್ಯ ಕೃತಿಗಳನ್ನು ಪ್ರಕಟಿಸಿದ್ದಾರೆ. ನೂರಾರು ಕಲಾವಿದರು ಹಾಗೂ ಸಾಹಿತಿಗಳನ್ನು ಸನ್ಮಾನಿಸಿದ್ದಾರೆ. ಸ್ವತಃ ಸಾಹಿತಿಗಳಾಗಿರುವ ಈ ಶ್ರೀಗಳು ಅನುಭಾವಿ ಕವಿ ಹಾಗೂ ಆಧುನಿಕ ವಚನಕಾರರಾಗಿದ್ದಾರೆ. '೨೦೦೧'ರಲ್ಲಿ 'ಕಲ್ಯಾಣ ಕೈಲಾಸ'ವೆಂಬ ಹೆಸರಲ್ಲಿ 'ಗುರುಬಸವ' 'ಹುಲುಸೂರು ಗುರುಬಸವ', 'ಹುಲುಸೂರೇಶ' ಮೊದಲಾದ ಅಂಕಿತಗಳಲ್ಲಿ ೭೦ ತತ್ವಪದಗಳನ್ನು ಪ್ರಕಟಿಸಿದ್ದಾರೆ. ಸರಳ ಹಾಗೂ ನೇರ ಶೈಲಿಯ ತತ್ವಪದಗಳು ಗಮನಾರ್ಹವಾಗಿವೆ.

'೧೯೮೯'ರಲ್ಲಿ ಶಿವಾನಂದ ಸ್ವಾಮಿಗಳು ಪ್ರಕಟಪಡಿಸಿರುವ 'ಹುಲುಸೂರು ಶಿವಾನಂದ ಸ್ವಾಮಿಗಳ ವಚನಗಳು' ಎಂಬ ಕೃತಿಯು ಬೀದರ ಜಿಲ್ಲೆಯ ಪ್ರಪಥಮ ಪ್ರಕಟಿತ ಆಧುನಿಕ ವಚನಗಳ ಸಂಕಲನವೆನ್ನಬಹುದು. **'ಶಿವಾನಂದ ಪ್ರಿಯಗುರು ಬಸವಪ್ರಭುವೆ'** ಎಂಬ ಅಂಕಿತವನ್ನು ಹೊಂದಿರುವ ನೂರೊಂದು ವಚನಗಳು ಇದರಲ್ಲಿವೆ. ಇದರಲ್ಲಿಯ ಬಹುಪಾಲು ವಚನಗಳು ಬಸವಣ್ಣನವರನ್ನು ಹಾಗೂ ಬಸವಧರ್ಮವನ್ನು ಕುರಿತಾಗಿಯೇ

ರಚನೆಯಾಗಿವೆ. 'ಲಿಂಗವಂತ ಧರ್ಮ ಜನಕ ಬಸವಣ್ಣನವರು', 'ಬಸವ ಧರ್ಮಕ್ಕೆ ವಂಚನೆ ಬೇಡ', 'ಬಸವಣ್ಣನವರದು ಮಾನವಕುಲ', 'ಬಸವ ಮಂತ್ರವೇ ಮೋಕ್ಷ ಸಾಧನ', 'ಬಸವಣ್ಣನವರೇ ನಮ್ಮ ಧರ್ಮಗುರು', 'ವಿಶ್ವ ಭರಿತ ಬಸವಣ್ಣನವರು', 'ಗುರುಬಸವ ಸಂಸ್ಕಾರ ಹೊಂದಬೇಕು' 'ಬಸವ ಗುರುವಿನ ನಾಮ ಸ್ಮರಣೆ ಮಾಡು', ಈ ಮೊದಲಾದ ವಚನಗಳನ್ನು ಗಮನಿಸಿದರೆ

ಶಿವಾನಂದ ಸ್ವಾಮಿಯವರಿಗೆ ಬಸವಣ್ಣನವರ ಮೇಲೆ ಅನುಪಮ ಭಕ್ತಿ ಹಾಗೂ ಬಸವ ಧರ್ಮದ ಮೇಲೆ ಅಪಾರ ಅಭಿಮಾನ[೬] ಎಂಬ ಮಾತು ಸರಿಯಾದ ಹೇಳಿಕೆ ಎನ್ನಬಹುದು.

**೩.೨ ಶಿವಸ್ವಾಮಿ ಚಿನಕೇರಾರ "ವಚನಾಂಕುರ"(೧೯೯೫) ಹಾಗೂ "ಲಿಂಗದೇವನ ದೀಪ್ತಿ"(೨೦೦೨)**

'ಶಿವಸ್ವಾಮಿ'ಯವರು ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನ ಚಿನಕೇರಾ ಎಂಬ ಗ್ರಾಮದವರು. ಸರಳ, ಸಜ್ಜನಿಕೆಯ ಸ್ವಭಾವದ ಇವರು ೨೩-೦೫-೧೯೭೮ರಲ್ಲಿ ಚಿನಕೇರಾದಲ್ಲಿ ಜನಿಸಿದರು. ಬಡತನದ ಕುಟುಂಬದಲ್ಲಿ ಜನ್ಮತಾಳಿದ ಇವರ ತಂದೆ ಲಿಂಗಪ್ಪ ಹಾಗೂ ತಾಯಿ ರೇವಮ್ಮ. ಶರಣ ಸಂಸ್ಕೃತಿಯ ಸದಾಚಾರದ ಮನೆತನವದು. ಚಿಕ್ಕಂದಿನಿಂದಲೇ ಆಧ್ಯಾತ್ಮದ ಕಡೆಗೆ ತುಡಿಯುತ್ತಿದ್ದ 'ಶಿವಸ್ವಾಮಿ' ಬಾಲ್ಯ ಜೀವನದಲ್ಲಿಯೇ ಬಸವಾದಿ ಶರಣರು ಹಾಗೂ ಗೌತಮ ಬುದ್ಧನ ಜೀವನ ಸಾಧನೆಗಳಿಂದ ಪ್ರಭಾವಿತರಾಗಿದ್ದರು. ಅವರು ಓದಿದ್ದು ಅಲ್ಪವಾದರೂ, ಜೀವನಾನುಭವದಿಂದ ಅರಿತುಕೊಂಡದ್ದೇ ಹೆಚ್ಚು. ಸಂಗೀತ ಜ್ಞಾನ, ಸಾಹಿತ್ಯ ಜ್ಞಾನ ಹಾಗೂ ಪ್ರವಚನ ಮಾಡುವ ಕಲೆಯನ್ನು ಬೆಳೆಸಿಕೊಂಡರು.

ಇವರಿಗೆ ಒಂದರ್ಥದಲ್ಲಿ ಶರಣಪಥಕ್ಕೆ ಗುರುವಿನಂತಿದ್ದವರು ಶರಣ ಜೀವಿ ಕಲ್ಲಪ್ಪ ಬಿ. ದೇವಣಿ ಹುಮನಾಬಾದ ಶಿಕ್ಷಕರು. ಇವರ ಬದುಕಿಗೆ ಪ್ರೇರಕರು. ಅವರಿಂದ ಶರಣರ ಬಗೆಗಿನ ಹಲವು ವಿಚಾರಗಳಿಂದ ಪ್ರೇರೇಪಿತರಾಗಿ ಸಾಹಿತ್ಯ ಸೃಷ್ಟಿಗೆ ಕೈ ಹಾಕಿದ್ದಾರೆ. ಮೊದಮೊದಲು ಈ ಭಾಗದಲ್ಲಿ ಶರಣರ ತತ್ವ ಪ್ರಚಾರಗಳು ಕಡಿಮೆ ಇದ್ದ ಸಂದರ್ಭದಲ್ಲಿ, ತಮ್ಮ ಜೀವನವನ್ನು ಆ ತತ್ವ ಪ್ರಚಾರಕ್ಕಾಗಿಯೇ ಮೀಸಲಿರಿಸಿ, ಹಳ್ಳಿ, ಹಳ್ಳಿಗೆ ಹೋಗಿ ಪ್ರವಚನ ಹೇಳತೊಡಗಿದರು. ಆ ಅನುಭವದ ಹಿನ್ನೆಲೆಯಲ್ಲಿ ೧೯೯೫ರಲ್ಲಿ 'ವಚನಾಂಕುರ' ಎಂಬ ಕೃತಿ ರಚಿಸುವುದರೊಂದಿಗೆ 'ಆಧುನಿಕ ವಚನ ರಚನೆಗೆ ಕೈ ಹಾಕಿದರು. ೨೦೦೨ರಲ್ಲಿ 'ಲಿಂಗದೇವನ ದೀಪ್ತಿ' ಎಂಬ ಇನ್ನೊಂದು ಆಧುನಿಕ ವಚನದ ಕೃತಿಯನ್ನು ಹೊರತಂದರು.

**'ಲಿಂಗದೇವ'** ಎಂಬ ಅಂಕಿತವನ್ನಿರಿಸಿಕೊಂಡಿರುವ 'ಶಿವಸ್ವಾಮಿ' ೧೨೩ ಆಧುನಿಕ ವಚನಗಳನ್ನು ಪ್ರಕಟಿಸಿದ್ದಾರೆ.

**'ನಿರೂಪಲಿಂಗ'**ದ ಅಂಕಿತದಲ್ಲಿರುವ ಅವರ 'ವಚನಾಂಕುರ' ಸಂಕಲನವು ಶಿವಸ್ವಾಮಿಯವರ ಪ್ರಥಮ ಆಧುನಿಕ ವಚನದ ಕೃತಿಯಾಗಿದ್ದು. ತುಂಬಾ ಸರಳತೆಯಿಂದ ಕೂಡಿದ ವಚನಗಳನ್ನು ಅದು ನಿರೂಪಿಸುತ್ತದೆ.

ಅಯ್ಯಾ ನಿನ್ನ ಕರುಣ ರಸಾಬ್ಧಿಯೋಳ್
ಅಯ್ಯಾ ನಿನ್ನ ಸ್ಮರಣ ರಸಾಬ್ಧಿಯೋಳ್
ಅಯ್ಯಾ ನಿನ್ನ ಭಕ್ತಿ ರಸಾಬ್ಧಿಯೋಳ್
........................... ನಲಿದಾಡುತ್ತಿರಲು
ಶೋಕ ಮುಕ್ತನಾಗಿ ಅಶೋಕನಾಗಿರುವೆನಯ್ಯಾ" (ಬಿ.ಜಿ.ಆ.ವ.ಸಾ.ಪು.೩೩)

ಎನ್ನುವಂತೆ ಅಭಿವ್ಯಕ್ತವಾಗಿವೆ. ಸರಳರು, ಸಾತ್ವಿಕರು, ಚಿಂತನಶೀಲರಾಗಿರುವ ಶಿವಸ್ವಾಮಿಯವರು ಆಲೋಚನೆಗೆ ತಕ್ಕಂತೆ ಅಭಿವ್ಯಕ್ತಿ ನೀಡಲು ಸಮರ್ಥರಾಗಿಲ್ಲ. ಆದರೂ ಜಿಲ್ಲೆಯ ವಚನಕಾರರಲ್ಲಿ ಅವರ ಹೆಸರು ಸೇರಿದೆ.

**೩.೩ ಎಂ.ಜಿ. ಗಂಗನಪಳ್ಳಿಯವರ 'ವಚನ ಮಂದಾರ'(೧೯೯೯) ಹಾಗೂ 'ವಚನ ಕಿರಣ'(೨೦೧೬)**

ಬೀದರ ಜಿಲ್ಲೆಯ ಪ್ರಸಿದ್ಧ ಕನ್ನಡ ಕವಿಗಳಾದ ಎಂ.ಜಿ. ಗಂಗನಪಳ್ಳಿಯವರು ಆಧುನಿಕ ವಚನಕಾರರೂ ಹೌದು. ಬೀದರ ತಾಲೂಕಿನ ಸಿಕಂದ್ರಾಪುರದ ಗುಂಡಪ್ಪ ಮತ್ತು ನಾಗಮ್ಮ ದಂಪತಿಗಳ ಉದರಲ್ಲಿ ೦೨-೦೮-೧೯೪೬ರಲ್ಲಿ ಜನಿಸಿದರು. ಪ್ರೌಢ ಶಾಲಾ ಶಿಕ್ಷಕರಾಗಿ, ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸಿದ ಇವರು ೧೯೯೯ಕ್ಕಿಂತ ಮೊದಲೇ ರಾಜ್ಯ ಪ್ರಶಸ್ತಿ ವಿಜೇತ ಶಿಕ್ಷಕರಾಗಿದ್ದರು. ಕಥೆ, ಕವನ, ವಿಮರ್ಶೆ, ಜೀವನ ಚರಿತ್ರೆಗಳನ್ನು ರಚಿಸಿರುವ ಈ ಕವಿ, ಬೀದರ ಜಿಲ್ಲೆಯ ಹಿರಿಯ ಸಾಹಿತಿಗಳಲ್ಲಿ ಒಬ್ಬರಾಗಿದ್ದಾರೆ. ಬದುಕಿನಲ್ಲಿ ವಿರಾಗಿ ಜೀವನ ನಡೆಸುತ್ತಿರುವ ಇವರು ಈಗಾಗಲೇ ಕನ್ನಡ ಸಾಹಿತ್ಯಕ್ಕೆ 'ಬಾಳಹಂದರ' 'ವಿಚಾರೋಧ್ಯಾನ', ಗೊಮ್ಮಟಗಿರಿಯಲ್ಲಿ', 'ಗೀತಗುಚ್ಛ', 'ಕಾವ್ಯಕುಂಜ', 'ರೇವಪ್ಪಯ್ಯಶರಣರು', 'ನೀರು-ನೀರು-ನೀರು', 'ಚಿಂತನ ದೀಪ್ತಿ', 'ಗೀತಧಾರೆ', 'ವನಸಿರಿ', 'ಸುನೀತಸೌರಭ', 'ಕಾವ್ಯ ಚಂದ್ರಿಕೆ', 'ಬೆಳಕೇರಿಯ ಬೆಳಕು' ಮುಂತಾದ ೨೫ ಕ್ಕೂ ಹೆಚ್ಚು ಕೃತಿಗಳನ್ನು ನೀಡಿದ್ದಾರೆ.

'ಶಿಕ್ಷಣಸಿರಿ', 'ಉತ್ತಮ ಶಿಕ್ಷಕ', ಮೊದಲಾದ ಪ್ರಶಸ್ತಿಗಳಿಸಿರುವ ಇವರು ಜಿಲ್ಲಾ ಮಟ್ಟದ, ರಾಜ್ಯಮಟ್ಟದ ಪ್ರಶಸ್ತಿ - ಪುರಸ್ಕಾರ ಹೊಂದಿದ್ದಾರೆ. ಬೀದರ ಜಿಲ್ಲೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷತೆಯ ಗೌರವವೂ ಇವರಿಗೆ ದೊರಕಿದೆ. ರಾಜಮಟ್ಟದ ಹಲವು ಚಿಂತನ ಗೋಷ್ಠಿ, ಸಮ್ಮೇಳನಗಳಲ್ಲಿ ಭಾಗಿಯಾಗಿ ತಮ್ಮ ಕವನಗಳನ್ನು ವಾಚಿಸಿದ ಕೀರ್ತಿ ಇವರಿಗಿದೆ. ತಮ್ಮ ಜೀವನವನ್ನು ಕನ್ನಡ ಸೇವೆಗಾಗಿಯೇ ಮೀಸಲಾಗಿರಿಸಿರುವ ಅಪರೂಪದ ಸಾಹಿತಿ ಇವರು.

ಸರಳ, ಸಜ್ಜನಿಕೆಗೆ ಹೆಸರಾಗಿರುವ ಈ ಭಾವ ಜೀವಿ ಅತ್ಯುತ್ತಮ ಕನ್ನಡದ ಸಾನೆಟ್ ರಚನೆಕಾರರೂ ಆಗಿದ್ದಾರೆ. ಧರಿನಾಡು ಕನ್ನಡ ಸಂಘದ ಕ್ರಿಯಾಶೀಲ ಬರಹಗಾರರಲ್ಲಿ ಒಬ್ಬರೆನಿಸಿದ್ದಾರೆ. ಈ ಸಂಘದಿಂದ ಜರುಗಿದ ಪ್ರಥಮ 'ಗಡಿನಾಡು ಕನ್ನಡ ಸಾಹಿತ್ಯ ಸಮ್ಮೇಳನ'ದ ಸರ್ವಾಧ್ಯಕ್ಷತೆಯ ಸನ್ಮಾನಕ್ಕೂ ಪಾತ್ರರಾಗಿದ್ದಾರೆ. ಎಲ್ಲ ಸಮಾಜದ, ಎಲ್ಲವರ್ಗಗಳ ಹಾಗೂ ಎಲ್ಲ ಕನ್ನಡ ಪರ ಸಂಘಟನೆಗಳೊಂದಿಗೆ ನಿಕಟ ಸಂಪರ್ಕ ಹೊಂದಿರುವ ಸಂಘಜೀವಿಯಾಗಿದ್ದಾರೆ. ನಾಡು-ನುಡಿಯ ವಿಚಾರದಲ್ಲಿ ಅತ್ಯಂತ ನಿಷ್ಠೆಯುಳ್ಳ 'ಎಂ.ಜಿ. ಗಂಗನಪಳ್ಳಿ'ಯವರು ೧೯೯೯ರಲ್ಲಿ ತಮ್ಮ **'ವಚನ ಮಂದಾರ'**ವೆಂಬ ಆಧುನಿಕ ವಚನಗಳನ್ನು ಪ್ರಕಟಿಸುವುದರೊಂದಿಗೆ ಜಿಲ್ಲೆಯ 'ಆಧುನಿಕ ವಚನಕಾರ' ಎನಿಸಿದರು. ೨೦೧೬ರಲ್ಲಿ ಅವರು **'ವಚನ ಕಿರಣ'** ಎಂಬ ಇನ್ನೊಂದು ಕೃತಿಯನ್ನು ಈ ವಾಙ್ಮಯಕ್ಕೆ ಕಾಣಿಕೆಯಾಗಿ ನೀಡಿದ್ದಾರೆ.

**'ಶರಣ ಕಿರಣಪ್ರಿಯ ಮಾಣಿಕನು'** ಎಂಬ ಅಂಕಿತದಲ್ಲಿ ರಚಿಸಲಾಗಿರುವ ಇವರ ಆಧುನಿಕ ವಚನಗಳು ಸುಂದರವಾಗಿವೆ. ಅವರ 'ವಚನ ಮಂದಾರ' ಕೃತಿಯಲ್ಲಿ ೧೦೮ ವಚನಗಳು ಹಾಗೂ ಅವರ 'ವಚನ ಕಿರಣ'ದಲ್ಲಿ ೧೫೦ ವಚನಗಳಿವೆ. ಕವಿಯೇ ಹೇಳುವಂತೆ "ಹನ್ನೆರಡನೆಯ ಶತಮಾನದ ಉತ್ಕ್ರಾಂತಿಯ ಕೇಂದ್ರಬಿಂದುವಾದ ಬಸವಣ್ಣ ಬಹು ಹಿಂದೆಯೇ ನನ್ನ ಗಮನ ಸೆಳೆದ ಮಹಾನುಭಾವಿ. ಕ್ರಾಂತಿ ನಿರ್ಮಿತ ಬಸವಣ್ಣನ ಸಾಧನೆ ವಿಶ್ವರಂಗದಲ್ಲಿ ಅತ್ಯಪೂರ್ವ. ಸಮಾಜದ ಎಲ್ಲ ಸ್ತರಗಳ ಜನರ ಮನಮಿಡಿದ ಜನತೆಗೆ ಹತ್ತಿರದ ಹಿರಿಯಣ್ಣ ನೀತಿ.

ಬುದ್ಧನಂತೆ ಶೋಷಣೆಗೆ ವಿರುದ್ಧವಾಗಿ ದನಿ ಎತ್ತಿದ ಕೂಗು ಬಸವಣ್ಣನವರದು. ಬಸವ ಚಿಂತನೆ ಈ ವಚನ ಮಂದಾರಕ್ಕೆ ಬೆಳಕಿನ ಕಿರಣ ನೀಡಿದೆ[೮] ಎಂದು ಹೇಳಿರುವುದನ್ನು ಗಮನಿಸಬಹುದು.

**೩.೪ ಬಿ.ಎಸ್. ಖೂಬಾ ಅವರ 'ಶತಕಾಂತ್ಯದ ವಚನ ಶತಕ' (೨೦೦೧)**

ಎರಡು ಸಾವಿರದ ಒಂದನೂರರಲ್ಲಿ ಪ್ರಕಟವಾಗಿರುವ ಬಿ.ಎಸ್. ಖೂಬಾ ಅವರ ಈ ಕೃತಿ ಆಧುನಿಕ ವಚನಗಳ ಸಂಕಲನ. ಎರಡು ಸಾವಿರ ವರ್ಷದ ಅಂತ್ಯದಲ್ಲಿ ಇದು ರಚಿತವಾಗಿರುವುದರಿಂದ 'ಶತಕಾಂತ್ಯ' ಎಂದು ಕರೆಯಲಾಗಿದೆ. ಈ ಸಂಕಲನದಲ್ಲಿ "ನೂರು ಆಧುನಿಕ ವಚನ"ಗಳಿರುವುದರಿಂದ **"ಶತಕಾಂತ್ಯದ ವಚನ ಶತಕ"** ಎಂಬುದು ಅನ್ವರ್ಥಕ ಶೀರ್ಷಿಕೆಯಾಗಿದೆ.

ಕವಿಯಾಗಿ, ಕಥೆಗಾರನಾಗಿ, ಅನುವಾದಕನಾಗಿ, ಆಧುನಿಕ ವಚನಕಾರಿಯಾಗಿ ಗಮನ ಸೆಳೆದಿರುವ ಇವರು ಬೀದರ ಜಿಲ್ಲೆಯ 'ಸಾಂಸ್ಕೃತಿಕ ರಾಯಭಾರಿ'ಯಾಗಿಯೂ ಗುರುತಿಸಿಕೊಂಡಿದ್ದಾರೆ. ಹಿಂದಿ-ಕನ್ನಡ, ಉರ್ದು ಭಾಷೆಗಳನ್ನು ಬಲ್ಲವನಾಗಿರುವ ಇವರು ಆದರ್ಶ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ೧೯೩೮ರ ಜುಲೈ ೮ ರಂದು ಬಸವಕಲ್ಯಾಣ ತಾಲೂಕಿನ ರಾಜೋಳಾ ಗ್ರಾಮದಲ್ಲಿ ಜನಿಸಿದ ಇವರು ಕೃಷಿಕ ಮನೆತನದವರು. ಹಿಂದಿ, ಕನ್ನಡದಲ್ಲಿ ಎಂ.ಎ.ಬಿ.ಇಡಿ. ಪದವೀ ಪಡೆದವರು. ೧೯೫೨ ರಿಂದಲೇ 'ಸರಸ್ವತಿ ತನಯ' ಜಿಮ್ಮನಾಗಿ ಅದೇ ಕಾವ್ಯನಾಮದಲ್ಲಿ ಕೆಲವು ಕತೆಗಳನ್ನು ಬರೆದರು. ಆದರೂ ಅವರ ಮೊದಲ ಕೃತಿ ಪ್ರಕಟವಾದದ್ದು ೧೯೯೫ರಲ್ಲಿ. 'ಅಳುನಗೆಯ ಸುಳಿಯಲ್ಲಿ ಪೆದ್ದಜಿಮ್ಮ' ಎಂಬುದು ಆ ಕೃತಿ. ಆನಂತರದಲ್ಲಿ 'ಐವತ್ತೆಂಟರಲ್ಲಿ ಅನುತ್ತರನ ಪೌರುಷ' (೧೯೯೫), ಪುರಸ್ಕಾರ (೧೯೯೬) 'ಮುಗ್ಧ ಸಂಗಯ್ಯ' 'ವಿಚಾರ ವೀಚಿ' 'ಕಥಾ ಭಾರತಿ' 'ದಿವ್ಯರಶ್ಮಿ' ಮೊದಲಾದ ೧೬ ಕೃತಿಗಳನ್ನು ಪ್ರಕಟಿಸಿದ್ದಾರೆ.

'ಶತಕಾಂತ್ಯದ ವಚನ ಶತಕ' ಬೀದರ ಜಿಲ್ಲೆಯ ವಚನ ಸಾಹಿತ್ಯದಲ್ಲಿ ಆಧುನಿಕತೆಯ ದೃಷ್ಟಿಯಿಂದ ಗಮನಾರ್ಹವಾಗಿದೆ. ಬಂಡೆಪ್ಪ ಖೂಬಾ ಅವರ ಇಲ್ಲಿಯ ವಚನರಚನೆಗೆ ಮೂಲಸ್ಫೂರ್ತಿ **'ಹುಲಿಯ ಸಿದ್ಧೇಶ್ವರಾ'** ಬಸವಾದಿ ಶರಣರ ವಚನಗಳು ಹಾಗೂ ಡಾ. ಕೆ.ಬಿ. ಬ್ಯಾಳಿಯವರ 'ಧರೆ ಹತ್ತಿ ಉರಿದರೆ' ಎಂಬ ಆಧುನಿಕ ವಚನದ ಕೃತಿ. ಕವಿಯೇ ಹೇಳಿರುವಂತೆ, ಕೆ.ಬಿ. ಬ್ಯಾಳಿಯವರ ನೂರೊಂದು ಆಧುನಿಕ ವಚನಗಳನ್ನು ಓದಿದಾಗಿನಿಂದ ತಮ್ಮ ಮನದಲ್ಲಿ, ಹಲವು ಭಾವಗಳ ತರಂಗಗಳು ಏಳತೊಡಗಿದವು. ತಾನೂ ವಚನಗಳ ರೂಪದಲ್ಲಿ ಏನಾದರೂ ಬರೆಯಬೇಕೆನಿಸಿತು. ಬರೆಯಲು ಕುಳಿತು ೩ರೇ ದಿನದಲ್ಲಿ ನೂರು ವಚನಗಳ ಬರವಣಿಗೆ ಸಿದ್ಧವಾಯಿತು. ನನ್ನ 'ಯುಗವಾಣಿ' ಕಾವ್ಯ ಕೃತಿಗೆ ಪ್ರೇರಣೆ ನೀಡಿರುವ 'ಹುಲಿಯ ಸಿದ್ಧೇಶ್ವರ'ನ ಪ್ರೇರಣೆಯೂ ಈ ವಚನಗಳಿಗಾಗಿದೆ ಹಾಗಾಗಿ ನನ್ನ ವಚನಗಳ ಅಂಕಿತವು **'ಹುಲಿಯ ಸಿದ್ಧೇಶ್ವರಾ'** ಎಂದಾಯಿತು[೯] ಎಂಬ ಕವಿಯ ಮಾತನ್ನು ಅರಿಯಬಹುದು.

ಖೂಬಾ ಅವರ ಏಕೈಕ ವಚನ ಸಂಕಲನವಾಗಿರುವ ಇದರಲ್ಲಿ ಭೂತ, ವರ್ತಮಾನ ಹಾಗೂ ಭವಿಷತ್ತಿನ ಹಲವು ಚಿಂತನೆಗಳಿವೆ. ಛಂದಸ್ಸಿನ ಕಟ್ಟು ಪಾಡುಗಳಿಲ್ಲದೆ, ಪದ್ಯ ರೂಪದಂತೆ ತೋರುವ ಸರಳಗದ್ಯದಲ್ಲಿ ಇಲ್ಲಿಯ ವಚನಗಳನ್ನು ರಚಿಸಲಾಗಿದೆ. ತಮ್ಮ ಸಮಕಾಲೀನ ಅನುಭವಗಳನ್ನು ಖೂಬಾ ಅವರು ಇಲ್ಲಿಯ ವಚನಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಈ ವಚನಗಳಲ್ಲಿ ಬಸವಾದಿ ಶರಣರ ವಚನಗಳ ತಾತ್ವಿಕತೆ, ಆಧ್ಯಾತ್ಮಿಕತೆ ಹಾಗೂ ಅನುಭಾವದ ಚಿಂತನೆಗಳು ಕಾಣಿಸುವುದಿಲ್ಲ. ಇವರ ವಚನಗಳಲ್ಲಿ ಆದರ್ಶ ಸಮಾಜೋನ್ನತಿಯ ಪರಿಕಲ್ಪನೆ ಮಾತ್ರ ಹೆಚ್ಚಾಗಿ ಕಾಣಿಸುವುದರಿಂದ ನೀತಿ ಪ್ರಧಾನವಾದ ವಚನಗಳು ಹೆಚ್ಚಾಗಿವೆ. ಹಾಗೆಯೇ ಅದಕ್ಕನುಗುಣವಾಗಿ

ವಚನಗಳ 'ರಚನಾ ಶೈಲಿಯೂ ಭಿನ್ನವಾಗಿದ್ದು, ಹೆಚ್ಚು ಸರಳೀಕರಣತೆ ವಚನಗಳ ಸ್ಥಾಯಿಯಾಗಿದೆ. ಇದರಿಂದ 'ವಚನ' ರಚನೆಗೆ ಬರಬೇಕಾಗಿದ್ದ ಗೇಯ ಗುಣ ಇಲ್ಲಿ ಮಾಯವಾಗಿರುವುದರಿಂದ ಇವು ಸರಳವಾಗಿ ಓದಿಸಿಕೊಂಡು ಹೋಗುವಲ್ಲಿ ಮಾತ್ರ ಯಶಸ್ವಿಯಾಗಿವೆ ಎನಿಸುತ್ತದೆ.

ಒಟ್ಟಿನಲ್ಲಿ ಹೇಳಬೇಕಾದರೆ "ಇಲ್ಲಿ ಕವಿಯ ಸ್ವಾನುಭವ ಹಿರಿದಾಗಿ ಕಾಣುತ್ತಿದ್ದು ಕಿರಿಯ ಪಾದಗಳಲ್ಲಿ ಹಿರಿದರ್ಥ ತುಂಬಿ ನಿವೇದಿಸುವ ಗುಣ ಎದ್ದು ಕಾಣುತ್ತಿದೆ. ಇಲ್ಲಿ ಖೂಬಾ ಅವರಿಗೆ ಜೀವನವನ್ನು ನೋಡುವ ದೃಷ್ಟಿಯಿದೆ, ಸ್ಪಂದಿಸುವ ಹೃದಯವಿದೆ. ಅನುಭವಕ್ಕೆ ಆಕಾರ ನೀಡುವ ಅಭಿವ್ಯಕ್ತಿ ಸಾಮರ್ಥ್ಯವಿದೆ. ಮಾನವ ಸಹಜವಾದ ಕರುಣೆ, ಸ್ನೇಹ, ಸಹಕಾರಗುಣ, ಪ್ರಾಮಾಣಿಕತೆ, ಗೌರವ ಭಾವಗಳಂತಹ ಗುಣಗಳನ್ನು ಬದುಕಿನಲ್ಲಿ ಕಾಣಬಯಸುವ ಕವಿ ವಚನಗಳಲ್ಲಿ ಅವುಗಳನ್ನು ನಿವೇದಿಸಿದ್ದಾರೆ. ಆ ವಚನಗಳಲ್ಲಿ ಒಂದು ಧರ್ಮದ ವಿವೇಚನೆ ಮಾಡಿದ್ದಾರೆ. ಅದು ಮಾನವ ಧರ್ಮ, ಅದೇ ನಿಜವಾದ ಶಿವಪಥ, ಸಾತ್ವಿಕ ಸ್ವಭಾವದ ಕವಿಯೋರ್ವನ ಗ್ರಂಥವಿದು"[೧೩] ಎಂದು ವಿದ್ವಾಂಸರು ಹೇಳಿದ್ದು ಯಥೋಚಿತ ಅಭಿಪ್ರಾಯವೆನ್ನಬಹುದು.

**೩.೫ ಕರುಣಾ ಸಲಗರ ಅವರ 'ಶಿವಲಿಂಗೇಶ್ವರ ವಚನಗಳು (೨೦೦೪) ಮತ್ತು ಭಾವಧಾರೆ (೨೦೦೮)**

ಎರಡು ಆಧುನಿಕ ವಚನಗಳನ್ನು ಪ್ರಕಟಿಸಿರುವ ಕರುಣಾ ಸಲಗರ ಅವರು ವೃತ್ತಿಯಿಂದ ಪ್ರಾಥಮಿಕ ಶಾಲೆಯ ಶಿಕ್ಷಕರು, ಪ್ರವೃತ್ತಿಯಿಂದ ಕವಿ ಹಾಗೂ ಆಧುನಿಕ ವಚನಕಾರರು. ೧೯೬೬ರ ಜೂನ ೧ ರಂದು ಕಲಬುರ್ಗಿ ಜಿಲ್ಲೆಯ ಕುರಕೋಟಾದಲ್ಲಿ ಜನಿಸಿದ ಇವರು ಪಿಯುಸಿ ಓದಿ, ಟಿ.ಸಿ.ಎಚ್. ತರಬೇತಿ ಪಡೆದಿದ್ದಾರೆ. ವಿವಾಹದ ನಂತರ ಬೀದರ ಜಿಲ್ಲೆಯ ಹುಮನಾಬಾದ ನಿವಾಸಿಯಾಗಿದ್ದು, ಇಲ್ಲಿಯ ಶಿಕ್ಷಕ ವೃತ್ತಿಯಲ್ಲಿ ಸೇವೆಸಲ್ಲಿಸುತ್ತಿದ್ದಾರೆ.

ಶರಣ ಜೀವಿಯಾಗಿರುವ 'ಕರುಣಾ ಸಲಗರ ಅವರು ಕರುಣಾ ಮೂರ್ತಿಯಾಗಿದ್ದಾರೆ. ಶರಣರ ಭಕ್ತಿ, ದಾಸೋಹ, ಕಾಯಕಾದಿಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡು ಶರಣ ಮಾರ್ಗದಲ್ಲಿ ಮುನ್ನಡೆದಿದ್ದಾರೆ. ಅವರ ನಡೆ–ನುಡಿಗಳೆಲ್ಲ ಅವರ ವಚನಗಳಲ್ಲಿ ಪಡಿಯಚ್ಚುಗೊಂಡಿವೆ. ಹುಮನಾಬಾದ ಪರಿಸರದ ಸಾಹಿತಿಗಳ ಸಂಪರ್ಕದಿಂದ ಸಾಹಿತಿಯಾಗಿರುವ ಇವರು ಹಲವಾರು ಕಥೆ, ಕವನಗಳೊಂದಿಗೆ 'ಶಿವಲಿಂಗೇಶ್ವರಾ' ಎಂಬ ಅಂಕಿತದಲ್ಲಿ ವಚನಗಳನ್ನು ಬರೆದಿದ್ದಾರೆ.[೧೦] ೨೦೦೪ರಲ್ಲಿ ಇವರು 'ಶಿವಲಿಂಗೇಶ್ವರ ವಚನಗಳು' ಹಾಗೂ ೨೦೦೮ರಲ್ಲಿ 'ಭಾವಧಾರೆ' ಎಂಬ ಆಧುನಿಕ ವಚನಗಳ ಕೃತಿಗಳನ್ನು ಹೊರತಂದಿದ್ದಾರೆ.

ಇವರ ಮೊದಲ ಕೃತಿಯಲ್ಲಿ ೧೨೫ ವಚನಗಳು ಹಾಗೂ ಎರಡನೆಯ ಕೃತಿಯಲ್ಲಿ ೨೦೧ ವಚನಗಳಿವೆ. ಒಟ್ಟು ಇವರು ೩೨೬ ಆಧುನಿಕ ವಚನಗಳನ್ನು ರಚಿಸಿ ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ೨೭ ಪುಟದಲ್ಲಿ ೧೨೫ ವಚನಗಳು ಪ್ರಕಾಶಿತವಾಗಿರುವ 'ಶಿವಲಿಂಗೇಶ್ವರ ವಚನಗಳು' ಎಂಬ ಕೃತಿಯು ಪ್ರಮುಖವಾಗಿ ೧೨ನೆಯ ಶತಮಾನದ ಶರಣರ ವಿಚಾರಗಳಿಗೆ ಋಣಿಯಾಗಿದ್ದು, ಆಧುನಿಕ ಬದುಕಿನ ಹಿನ್ನೆಲೆಯಲ್ಲಿ ನಿರೂಪಿತವಾಗಿದೆ. ಇವರ ಬಹುತೇಕ ವಚನಗಳ ಮೇಲೆ ಬಸವಣ್ಣನವರ ವಚನಗಳ ಪ್ರಭಾವ ನಿಚ್ಚಳವಾಗಿ ತೋರುತ್ತದೆ. ಅನೇಕ ವಚನಗಳು ವಿವಿಧ ಶರಣರನ್ನು ನಮ್ಮ ಕಣ್ಣೆದುರಿನಲ್ಲಿ ನಿಲ್ಲಿಸುತ್ತವೆ.

**'ಭಾವಧಾರೆ'** ೨೦೦೮ರಲ್ಲಿ ಪ್ರಕಟಿತವಾಗಿರುವ ಕರುಣಾ ಅವರ ಎರಡನೇಯ ಆಧುನಿಕ ವಚನ ಸಂಕಲನ. ಡಾ. ಸೋಮನಾಥ ಯಾಳವಾರ ಅವರು ಅಭಿಪ್ರಾಯ ಪಡುವಂತೆ ಮೊದಲ ಸಂಕಲನದಲ್ಲಿಯ ಭಾವಾಭಿವ್ಯಕ್ತಿಯ ದ್ವಂದ್ವತೆ ಇಲ್ಲಿ ಹೆಚ್ಚು ಕಾಣದೆ ಇರುವುದು ಈ ಕೃತಿಯ ವೈಶಿಷ್ಟ್ಯವೆನ್ನಬಹುದು. ಇಲ್ಲಿಯ

ಬಹಳಷ್ಟು ವಚನಗಳು ಭಾವಪೂರ್ಣವಾಗಿದ್ದು, ಓದುಗರ ಕುತೂಹಲವನ್ನು ಕೆರಳಿಸುತ್ತವೆ. ಆಧ್ಯಾತ್ಮಿಕ ಬದುಕಿನ ಹಂಬಲ ಹೆಚ್ಚಿನ ವಚನಗಳ ವಿಷಯವಾಗಿದ್ದು, ಅದರ ಅನ್ವೇಷಣೆಯಲ್ಲಿ ತೊಡಗಿಕೊಂಡಿರುವುದರಿಂದ, ವೈಚಾರಿಕತೆ ಹಾಗೂ ವೈಜ್ಞಾನಿಕ ಆಲೋಚನೆಗಳಿಗಿಂತ, ನೀತಿ ನಿಯಮಗಳೇ ಪ್ರಧಾನವಾಗಿ ನಿರೂಪಿತವಾಗಿರುವುದು ಗಮನಾರ್ಹವಾಗುತ್ತದೆ.[೧೨]

ಒಟ್ಟಿನಲ್ಲಿ ಹೇಳಬಹುದಾದರೆ ಕರುಣಾ ಸಲಗರ ಅವರ ಇಲ್ಲಿಯ ವಚನಗಳು ಆಳವಾದ ದುಃಖದ ಅನುಭವದಲ್ಲಿ ಅರಳಿದ್ದರೂ, ಅವುಗಳಿಗೆ ಕಾವ್ಯದ ಸಿಂಚನವಾಗಿದೆ, ಆಧ್ಯಾತ್ಮದ ಅನುರಾಗ ಸ್ಪರ್ಶಿಸಿದೆ. ಎಲ್ಲಕ್ಕಿಂತ ಹೆಚ್ಚಾಗಿ ಅವುಗಳಲ್ಲಿ ಅವರ ಕವಿತ್ವದ ಮೌನ, ತುಟಿಬಿಚ್ಚಿ ಮಾತಾಡಿದೆ. ಅದರಲ್ಲಿಯ ಮೌನಕ್ಕೂ ಮಾತಿನ ಬೆಳಕಿರುವುದನ್ನು ಅರಿಯಬಹುದು.[೧೩] ಬೀದರ ಜಿಲ್ಲೆಯ 'ಆಧುನಿಕ ವಚನ ಸಾಹಿತ್ಯಕ್ಕೆ ಇದೊಂದು ವಿಶಿಷ್ಟ ಕೊಡುಗೆಯಾಗಿದೆ' ಎನ್ನಬಹುದು.

**೩.೬ ವೀರಶೆಟ್ಟಿ ಬಾವುಗೆ ಅವರ 'ಬೆಳಗಿನೊಳಗಣ ಬೆಳಗು' (೨೦೦೫)**

ಭಾಲ್ಕಿ ತಾಲೂಕಿನ ಧನ್ನೂರಾ ಗ್ರಾಮದಲ್ಲಿ ಜನಿಸಿದ ವೀರಶೆಟ್ಟಿಯವರು ಬಿ.ಎ. ಬಿ.ಇಡಿ. ಪದವೀದರರು. ೧೯೬೧ರ ಜೂನ ೧ ರಂದು ಜನಿಸಿದ ಇವರು ಪ್ರೌಢ ಶಾಲಾ ಸಹ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತ ಎಂ.ಇಡಿ. ಪದವಿ ಪಡೆದುಕೊಂಡಿದ್ದಾರೆ. ೨೦೦೪ರಲ್ಲಿ ಕರ್ನಾಟಕ ರಾಜ್ಯಮಟ್ಟದ ಉತ್ತಮ ಆದರ್ಶ ಶಿಕ್ಷಕ ಪಶಸ್ತಿ ಪಡೆದಿದ್ದಾರೆ. ಸರಳ, ಸಜ್ಜನಿಕೆ, ಶಿಸ್ತು, ಸಮಯಪಾಲನೆಗೆ ತಮ್ಮದೇ ಆದ ಹೆಸರುಗಳಿಸಿದ್ದಾರೆ. ವೃತ್ತಿಯಿಂದ ಶಿಕ್ಷಕರಾಗಿದ್ದರೂ ಪ್ರವೃತ್ತಿಯಿಂದ ಬೀದರ ಜಿಲ್ಲೆಯ ಶ್ರೇಷ್ಠ ಸಾಹಿತಿ ಎನಿಸಿದ್ದಾರೆ.

**'ವೀಪ್ರಬಾಧ'** 'ಕಾವ್ಯನಾಮ'ದ ಅಂದರೆ ವೀರಶೆಟ್ಟಿ ಪ್ರಭುಶೆಟ್ಟಿ ಬಾವುಗೆ ಧನ್ನೂರ ಇವರು ೧೯೮೭ ರಿಂದಲೇ ಸಾಹಿತ್ಯ ಸೃಷ್ಟಿಗೆ ಪ್ರವೇಶಿಸಿದ್ದಾರೆ. 'ಹೃದಯ ತರಂಗಗಳು' ಎಂಬ ಕೃತಿಯ ಪ್ರಕಟಣೆಯ ಮೂಲಕ ಸಾಹಿತ್ಯ ಮಾರ್ಗದಲ್ಲಿ ಕಾಲಿರಿಸಿದ ಇವರು ನಂತರದಲ್ಲಿ ವಚನ ಜ್ಯೋತಿ (ಸಂ) 'ನೊಂದು ಬೆಂದವರು (ಕವನ), 'ದಾಸೋಹದ ವಚನಗಳು'(ಸಂ), 'ವಚನಸಿರಿ'(ಸಂ), 'ವೈರಾಗ್ಯ ನಿಧಿ ಲಿಂಗಾಂಗಯೋಗಿ, ಶತಾಯುಷಿ ಡಾ. ಚನ್ನಬಸವ ಪಟ್ಟದ್ದೇವರು', 'ಕಲ್ಯಾಣಶ್ರೀ ಬೀದರ ಜಿಲ್ಲೆಯ ಉತ್ತಮ ಶಿಕ್ಷಕರು' 'ಶರಣರು ಮತ್ತು ದಾಸೋಹ' ಮೊದಲಾದ ಕೃತಿಗಳೊಂದಿಗೆ ೧೩ ಕೃತಿಗಳ ಸಂಪಾದನೆಯನ್ನೂ ಮಾಡಿದ್ದಾರೆ.

ಬೀದರ ಜಿಲ್ಲಾ ಮಟ್ಟದ 'ಉತ್ತಮ ಶಿಕ್ಷಕ ಪ್ರಶಸ್ತಿ' 'ಚಿತ್ತರಗಿ ಮಠದ ಬಸವಗುರು ಕಾರುಣ್ಯ ಪ್ರಶಸ್ತಿ' 'ಧರಿನಾಡು ಸಿರಿ ಪ್ರಶಸ್ತಿ' 'ಕನ್ನಡ ರತ್ನ ಪ್ರಶಸ್ತಿ' ಬೀದರ ಜಿಲ್ಲಾಡಳಿತದ 'ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ' 'ಯಲ್ಲಾಲಿಂಗೇಶ್ವರ ಪ್ರಶಸ್ತಿ'ಗಳೊಂದಿಗೆ, ಭಾಲ್ಕಿ ತಾಲೂಕಿನ ದ್ವಿತೀಯ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷತೆಯ ಗೌರವವೂ ದೊರೆತಿದೆ. ಬೀದರ ಉತ್ಸವ, ಗಡಿನಾಡು ಉತ್ಸವ, ಅಖಿಲ ಭಾರತ ಸಾಹಿತ್ಯ ಸಮ್ಮೇಳನ ಮಂಗಳೂರ ಮತ್ತು ವಿಜಯಪುರಗಳ ಸಾಹಿತ್ಯ ಸಮ್ಮೇಳನಗಳಲ್ಲಿ ಕಾವ್ಯ ವಾಚನ ಮಾಡಿದ ಕೀರ್ತಿ ಇವರಿಗಿದೆ.

ಆಕಾಶವಾಣಿಯಲ್ಲಿ ಕವನ ವಾಚನ, ಸಮ್ಮೇಳನದ ವರದಿವಾಚನ, ಶರಣ ಕುಂಬಾರ ಗುಂಡಯ್ಯನ ಕುರಿತು ಮಾತನಾಡಿದ್ದಾರೆ. ಅನೇಕ ಕನ್ನಡ ಪರ ಸಂಘ ಸಂಸ್ಥೆಗಳ ಪದಾಧಿಕಾರಿಯಾಗಿ ಭಾಲ್ಕಿ ತಾಲೂಕಿನಲ್ಲಿ ಸೇವೆ ಸಲ್ಲಿಸಿದ್ದಾರೆ. ೨೦೦೮ ರಿಂದ ೨೦೧೨ರ ವರೆಗೆ ಭಾಲ್ಕಿ ತಾಲೂಕಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ವಿಶ್ವಕಲ್ಯಾಣ, ಶಾಂತಿಕಿರಣ, ಪಬ್ಲಿಕ್, ಖಡ್ಕೆ, ಉತ್ತರ ಕರ್ನಾಟಕ,

ವಚನಕ್ರಾಂತಿ, ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ ಇವರ ಲೇಖನಗಳು ಪ್ರಕಟವಾಗಿವೆ. ಜಿಲ್ಲೆಯ ಉತ್ತಮ ಸಾಹಿತಿಗಳಲ್ಲಿ ಇವರು ಪ್ರಮುಖರಾಗಿರುವಂತೆ ಒಳ್ಳೆಯ ಆಧುನಿಕ ವಚನಕಾರರೂ ಆಗಿದ್ದಾರೆ.

೨೦೦೫ರಲ್ಲಿ ಪ್ರಕಟವಾಗಿರುವ ಇವರ **'ಬೆಳಗಿನೊಳಗಣ ಬೆಳಕು'** ಆಧುನಿಕ ವಚನ ಸಂಕಲನ. ೧೩೦ ವಚನಗಳನ್ನು ವೀರಶೆಟ್ಟಿಯವರು 'ವೀಪ್ರಬಾಧ ಪ್ರಿಯವರ ಗುರು ಬಸವೇಶ' ಎಂಬ ಅಂಕಿತದಲ್ಲಿ ರಚಿಸಿದ್ದಾರೆ. ಇಲ್ಲಿಯ ಪ್ರತಿಯೊಂದು ವಚನಕ್ಕೂ ಒಂದು ತಲೆಬರಹಯವನ್ನು ನೀಡಿ ವಚನ ರಚಿಸಿರುವುದು ವಿನೂತನ ಮಾರ್ಗವೆನ್ನಬಹುದು. 'ಕುಮಾರ ಕಕ್ಕಯ್ಯ ಪೋಳ'ರ ನಂತರ ಈ ಪದ್ಧತಿಯ ವಚನಗಳನ್ನು ವೀರಶೆಟ್ಟಿ ಬಾವುಗೆಯವರಲ್ಲಿ ಕಾಣುತ್ತೇವೆ.

ಅವರ ವಚನಗಳಲ್ಲಿ ಆಧುನಿಕ ಮಾನವರ ಕುರಿತು ಟೀಕೆ, ಟಿಪ್ಪಣಿ, ರೀತಿ ನೀತಿ, ಗುಣಾವಗುಣ ಮುಂತಾದ ವಿಷಯಗಳನ್ನೊಳಗೊಂಡ ಶರಣರ ಭಾವ, ಅನುಭಾವಗಳ ನೆಲೆಯಿದೆ. ಸಮಾಜದ ಸುಖ-ದುಃಖಗಳನ್ನು ಮನಗಂಡ ಅವರು ತಮ್ಮ ಅನುಭವವನ್ನು ತಮ್ಮದೇ ಆದ ನಿಲುವಿನಲ್ಲಿ ಹಿಡಿದಿಟ್ಟು ಆಧುನಿಕ ವಚನಗಳನ್ನು ರಚಿಸಿದ್ದು ಗಮನಾರ್ಹವೆನಿಸುತ್ತದೆ.[೧೪]

ಡಾ. ಸಿದ್ದಯ್ಯ ಪುರಾಣಿಕ ಹಾಗೂ ಮಹಾದೇವ ಬಣಕಾರರ ಆಧುನಿಕ ವಚನ ಸಾಹಿತ್ಯವನ್ನು ಅನುಸರಿಸಿ ನಡೆಯುತ್ತಿರುವ ಶರಣಜೀವಿ ಶ್ರೀ ವೀರಶೆಟ್ಟಿ ಬಾವುಗೆಯವರು ಹನ್ನೆರಡನೆಯ ಶತಮಾನದ ಶರಣ ಪಥದ ದಾರಿಯಲ್ಲಿಯೇ ಸಾಗಿರುವುದು ಅವರ ವಚನಗಳ ಗುಣವೆನ್ನಬಹುದು. ಅವರ ವಚನದ ಆಳವಾದ ಅಧ್ಯಯನ, ಆಧುನಿಕ ವಿಚಾರಗಳನ್ನು ಸೂಕ್ಷ್ಮವಾಗಿ ಗ್ರಹಿಸುವ ಗುಣ ಹೃದಯದಿಂದ ಜಗತ್ತನ್ನು ಗಮನಿಸುವ ರೀತಿ ಅವರ ವಚನಗಳಲ್ಲಿ ಎದ್ದು ಕಾಣುತ್ತದೆ. ಅನುಭವ ಪೂರ್ಣವಾದ ಬದುಕನ್ನು ಸಾಗಿಸುತ್ತಿರುವ ಅವರ ವಚನಗಳ ಶೈಲಿ ಸರಳವಾಗಿದ್ದು. ಅಲ್ಲಿ ನಿರರ್ಗಳವಾದ ಪದಪ್ರಯೋಗ, ಗಾದೆ ಮಾತುಗಳು ವಿಡಂಬನೆಗಳು ಬೇಕಾದಷ್ಟು ಕಾಣಸಿಗುತ್ತವೆ. ಆಧುನಿಕ ವಚನಕ್ಕೆ ಅವರ ಕೊಡುಗೆ ಸ್ಮರಣೀಯವಾಗಿದೆ.

**೩.೭ ದೇಶಾಂಶ ಹುಡಗಿಯವರ 'ದಿಗಂಬರ ವಚನಗಳು' (೨೦೦೬)**

'ದೇಶಾಂಶ ಹುಡಗಿ' ಕಾವ್ಯನಾಮದ ಶಾಂತಪ್ಪ ದೇವರಾಯ ಹುಡಗಿಯವರು ಬೀದರ ಜಿಲ್ಲೆಯ ಪ್ರಮುಖ ಆಧುನಿಕ ವಚನಕಾರರಲ್ಲಿ ಒಬ್ಬರು. ಸರಳ, ಸಾದಾ ಜೀವನಕ್ಕೆ ಹೆಸರಾಗಿರುವ ಉತ್ತಮ ಸಾಹಿತಿ. ಗದ್ಯ, ಪದ್ಯ, ತ್ರಿಪದಿ, ದ್ವಿಪದಿ, ಚೌಪದಿ, ರುಬಾಯಿಗಳಲ್ಲಿ ಕೃಷಿ ಮಾಡಿರುವ ಮಹಾಕವಿಯೂ ಹೌದು. ಅವರ 'ಚನ್ನಬಸವ ಚರಿತೆ' ಮಹಾಕಾವ್ಯವೆಂದು ಪರಿಗಣಿತವಾಗಿದೆ. ೮೦ ವರ್ಷದ ಶಾಂತಪ್ಪನವರು ಬರೆದಿರುವ ಮಹಾಕಾವ್ಯದ ನಾಯಕರು ಭಾಲ್ಕಿಯ ಚನ್ನಬಸವ ಪಟ್ಟದ್ದೇವರು. ಕನ್ನಡದ ಕಟ್ಟಾಳು, ಬಸವಾದಿ ಶರಣರ ಮಾರ್ಗದಲ್ಲಿ ನಡೆದು ಸ್ವಂತಃ ಶರಣರೇ ಆಗಿ ಬದುಕಿದವರು. ಇದೊಂದು ಕನ್ನಡದ ಕಟ್ಟಾಳನ್ನು ಕುರಿತ ನವೀನ ಮಹಾಕಾವ್ಯವಾಗಿದೆ ಎಂದಿದ್ದಾರೆ ಡಾ. ವೀರಣ್ಣ ದಂಡೆಯವರು.[೧೫]

ನಿಗರ್ವಿಗಳು, ಬಹುಮುಖ ಪ್ರತಿಭಾವಂತರು, ಕವಿಗಳು, ಹಾಡುಗಾರರು, ವಿಮರ್ಶಕರು, ಕನ್ನಡದ ಪರಿಸರದಲ್ಲಿ ಅಪರಿಚಿತರಾಗಿ ಉಳಿದವರು ದೇಶಾಂಶ ಹುಡಗಿಯವರು. ೧೯೩೬ರ ನವ್ಹೆಂಬರ ೬ ರಂದು ಹುಡಗಿ ಗ್ರಾಮದ ಶ್ರೀ ಶರಣಪ್ಪ ಹಾಗೂ ಭೀಮಾಬಾಯಿಯವರ ಹೊಟ್ಟೆಯಲ್ಲಿ ಜನಿಸಿದರು. ಬಿ.ಎ., ಬಿ.ಇಡಿ. ಪದವೀಧರರಾಗಿರುವ ಇವರು ಶಿಕ್ಷಕರಾಗಿ, ಶಾಲಾ ತನಿಖಾಧಿಕಾರಿಗಳಾಗಿ ಸೇವೆ ಸಲ್ಲಿಸಿ ೧೯೯೪ರಲ್ಲಿ ನಿವೃತ್ತರಾಗಿದ್ದಾರೆ.

೧೯೮೦ರಲ್ಲಿ 'ಗ್ರಾಮ ಶಿಲ್ಪಿಗಳು' ಎಂಬ ಕೃತಿಯನ್ನು ಪ್ರಕಟಿಸುವ ಮೂಲಕ ಸಾಹಿತ್ಯ ರಂಗವನ್ನು ಪ್ರವೇಶಿಸಿದರು ಬದುಕಿನ ಸುತ್ತ (೧೯೮೮) 'ಅಕ್ಷರ ಜ್ಯೋತಿ' (೧೯೯೫) ಬೀದರ ದೀಪ (ಸಂ) (೧೯೯೩) ಇವು ಕನ್ನಡ ಮರಾಠಿಯಲ್ಲಿ ೧-೨-೩ ಆಗಿ ಸಂಪಾದಿಸಿದ್ದಾರೆ. ಹಾಗೆಯೇ, ನವಚೇತನ (೧೯೯೩) 'ನಾನು ಕಂಡ ನನ್ನವರು (೧೯೯೫) 'ಬೀದರ ಜಿಲ್ಲೆಯ ಬರಹಗಾರರು (೧೯೯೮) ಧರಿ-ನಾಡ ಜನಪದ ಗಾದೆಗಳು, (೨೦೦೫) 'ದಿಗಂಬರ ಕರಿಬಸವೇಶ್ವರ', 'ಮಾಸ್ತರ ಮನೆ ಸಣ್ಣ ಕಥೆ' (೨೦೦೭) 'ಪುಸ್ತಕಗಳ ಸುತ್ತಮುತ್ತ' (೨೦೦೮) 'ಬೀದರ ಕನ್ನಡ ಕೋಶ' (೨೦೧೦) 'ಗಂಡೆದೆಯ ಗುರು ಚೆನ್ನಬಸವ' (೨೦೧೦) 'ದಿಗಂಬರ ಕರಿಬಸವ ಕಾವ್ಯ' **'ಚನ್ನಬಸವ ಚರಿತೆ ಮಹಾಕಾವ್ಯ'** (೨೦೧೪) ಮೊದಲಾದ ೪೬ ಕೃತಿಗಳನ್ನು ಪ್ರಕಟಿಸಿದ್ದಾರೆ.[೧೬] ಅವುಗಳಲ್ಲಿ ದೇಶಾಂಶರ 'ದಿಗಂಬರ ವಚನಗಳು' ಎಂಬುದು ಆಧುನಿಕ ವಚನಗಳ ಮಹತ್ವದ ಸಂಕಲನವಾಗಿದೆ.

ಬೀದರ ಜಿಲ್ಲಾ ಮಟ್ಟದ, ರಾಜ್ಯಮಟ್ಟದ ಹಲವು ಪ್ರಶಸ್ತಿಗಳಿಗೆ ಭಾಜನರಾಗಿರುವ ಇವರು, ೨೦೧೬ರ ಅನುಭವ ಮಂಟಪದ ಡಾ. ಚನ್ನಬಸವ ಪಟ್ಟದ್ದೇವರ ಪ್ರಶಸ್ತಿಗೂ ಪಾತ್ರರಾಗಿದ್ದಾರೆ. ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಸರ್ವಾಧ್ಯಕ್ಷತೆಯ ಗೌರವವನ್ನು ಪಡೆದಿದ್ದಾರೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗೆ ಎಲ್ಲ ರೀತಿಯಿಂದಲೂ ಅರ್ಹರಾಗಿರುವ ಇವರು ೨೦೦೬ರಲ್ಲಿ **'ದಿಗಂಬರ ವಚನಗಳು'** ಕೃತಿಯನ್ನು ಹೊರತಂದಿದ್ದಾರೆ.

೫೫೫ ವಚನಗಳನ್ನು ಒಳಗೊಂಡಿರುವ 'ದಿಗಂಬರ ವಚನಗಳು' ಕೃತಿ ಬೀದರನ ಧರಿನಾಡು ಸಂಘದಿಂದ ಪ್ರಕಟಿತವಾಗಿದೆ. **'ದಿಗಂಬರ ಕರಿಬಸವೇಶ್ವರ'** ಅಂಕಿತದ ಇಲ್ಲಿನ ವಚನಗಳು ಸರಳತೆ, ಸಹಜತೆ ಹಾಗೂ ನಿರೂಪಣೆಯ ದೃಷ್ಟಿಯಿಂದ ತುಂಬಾ ಗಮನಾರ್ಹವಾಗುತ್ತವೆ.

ಶರಣ ಸಾಹಿತ್ಯವನ್ನು ಆಳವಾಗಿ ಓದಿಕೊಂಡಿರುವ ದೇಶಾಂಶ ಹುಡಗಿಯವರಿಗೆ ೧೨ನೇಯ ಶತಮಾನದ ವಚನಕಾರರ ಪ್ರಭಾವಿವೆ. "ತಮ್ಮ ನಡೆ ನುಡಿಗಳನ್ನು ಒಂದಾಗಿಸಿಕೊಂಡವರು ಮಾತ್ರ ಸತ್ಯ ಶುದ್ಧ ಕಾಯಕ ಮಾಡುವವರು ಮಾತ್ರ, ಹೊರಗೊಂದು ಒಳಗೊಂದು ಇರದವರು ಮಾತ್ರ ವಚನಗಳನ್ನು ಬರೆಯಬೇಕು ಎಂಬ ಅನಿಸಿಕೆ ಕೆಲವು ಜನರದ್ದಾಗಿದೆ. ಆದರೆ ಬಹಳ ಮಂದಿ ಕವಿ ಸಾಹಿತಿಗಳು ಇದೊಂದು ಸಾಹಿತ್ಯ ಪ್ರಕಾರವೆಂದು ಭಾವಿಸಿ ಬರೆಯುತ್ತಿದ್ದಾರೆ. ಅಂಕಿತ ಬಂದ ಮಾತ್ರಕ್ಕೆ ಕಸ್ತೂರಿಯಲ್ಲಿ ಸುವರ್ಣವನ್ನು, ಸುವರ್ಣದಲ್ಲಿ ಸುವಾಸನೆಯನ್ನೂ ಹಾರೈಸಲಾಗುತ್ತದೇನು? ಕವಿಗಳಲ್ಲಿ ಗುಣಶಾಲಿತ್ವವನ್ನು ಆಧುನಿಕ ವಚನಕಾರರಲ್ಲಿ ಯಾಕೆ ಬಯಸಿ ಬಾಯಬೇಕು? ಶ್ರೀ ದೇಶಾಂಶರಿಗೆ ವಚನಗಳನ್ನು ಬರೆಯುವ ಪೂರ್ಣ ಅರ್ಹತೆ ಇದೆಯೆಂಬುದು ನನ್ನ ಅನಿಸಿಕೆ ಎಂದಿದ್ದಾರೆ ಪ್ರೊ. ಬಿ. ಮಹಾದೇವಪ್ಪನವರು.[೧೭]

ಪ್ರಚಲಿತ ಸಮಸ್ಯೆಗಳು, ಹೆಣ್ಣಿನ ಶೋಷಣೆ, ಆತ್ಮಹತ್ಯೆ, ರೈತರ ಅಸಹಾಯಕತೆ ಕೊಳಕು ಅಳಿಯಂದಿರ ಉಪಟಳಗಳು, ವಚನಾಂಕಿತ ತಿರುಚುವಿಕೆ, ಆಧುನಿಕ ಶಿಕ್ಷಣ ಪದ್ಧತಿಯ ಉಪದ್ವ್ಯಾಪ, ಸುಶೀಕ್ಷಿತರ ಸ್ವೇಚ್ಛಾಚಾರ, ರಾಜಕಾರಣಿಗಳ ಅವಿವೇಕತನ, ಲೂಟಿಗಾರಿಕೆ, ಕನ್ನಡದ ಕಾರ್ಯದಲ್ಲಿಯ ರಾಜಕೀಯ, ಪ್ರಜಾಪ್ರಭುತ್ವದ ಪ್ರಹಸನ, ಕಾರ್ಯಾಂಗ-ನ್ಯಾಯಾಂಗಗಳ ಹಣಾಹಣಿ, ಭ್ರಷ್ಟಚಾರಗಳಿಂದ ವಿಚಲಿತರಾಗಿರುವ ವಚನಕಾರರು. ಅವುಗಳ ಬಗೆಗಿನ ವಿಡಂಬನಾತ್ಮಕ ರೀತಿಯನ್ನು ಇಲ್ಲಿಯ ವಚನಗಳಲ್ಲಿ ಎರಕಹೊಯ್ದಿದ್ದಾರೆ. "ಇವುಗಳನ್ನು ಪ್ರತಿಭಟನೆಯಾಗಲಿ, ರೋಷವಾಗಲಿ, ಪರಿಹಾರವಾಗಲೀ ಎಂದು ಕರೆಯುವ ತಾವು, ಇದು ನನ್ನಿಂದ ಎಷ್ಟರ ಮಟ್ಟಿಗೆ ಸಾಧ್ಯವಾಗಿದೆ ಎಂಬುದನ್ನು ತಾವೇ ನಿರ್ಣಯಿಸಬೇಕು."[೧೮] ಎಂದಿರುವ ಹುಡಗಿಯವರು ಸಹೃದಯರಿಗೆ ಆ ವಚನಗಳನ್ನು ಓದಿ ನಿರ್ಣಯಿಸುವ ವಿನಮ್ರತೆಯನ್ನು ತೋರಿದ್ದಾರೆ. ತಮ್ಮ ಅನುಭಾವದ ದಿಗಂಬರತೆಯ

ಅಭಿವ್ಯಕ್ತಿಯನ್ನು ಈ ವಚನಗಳಲ್ಲಿ ಕವಿ ತೋರಿದ್ದಾರೆ. ಬೀದರ ಜಿಲ್ಲೆಯ ಪ್ರಮುಖ ಆಧುನಿಕ ವಚನಕಾರರೆನಿಸಿದ್ದಾರೆ.

**೩.೮ ಗಿರಿಜಾ ಧರ್ಮರೆಡ್ಡಿಯವರ 'ವಚನ ಪುಷ್ಪಾಂಜಲಿ' (೨೦೦೭) ಹಾಗೂ 'ನಾನೊಂದು ಹುಲ್ಲುಕಡ್ಡಿಯೆಂದು ಉದಾಸೀನವೇಕೆ?' (೨೦೧೦)**

ಬಸವಾದಿ ಪ್ರಮಥರ ಪರಂಪರೆಯನ್ನು ನಡೆ-ನುಡಿಗಳಲ್ಲಿ ಅಳವಡಿಸಿಕೊಂಡು ಅವರ ವಿಚಾರಧಾರೆಗಳಿಂದ ಗಾಢವಾಗಿ ಪ್ರಭಾವಿತರಾಗಿ ಬಸವಣ್ಣನವರನ್ನು ಅಪ್ಪಿಕೊಂಡವರು ಗಿರಿಜಾ ಧರ್ಮರಡ್ಡಿಯವರು. 'ಬಸವೋತ್ತರ ಯುಗದಲ್ಲಿ ಕರ್ನಾಟಕದ ವಿವಿಧ ಭಾಗಗಳಲ್ಲಿ ವಚನ ಸಾಹಿತ್ಯ ಸೃಷ್ಟಿಯಾಗಿದ್ದರೂ, ಈ ಭಾಗದಲ್ಲಿ ಆ ಕಾರ್ಯನಡೆದಿಲ್ಲವೆಂದೇ ಹೇಳುವ ಸಮಯದಲ್ಲಿ ೪-೫ ಜನರು ತಮ್ಮ ಕೃತಿಗಳನ್ನು ಪ್ರಕಟಿಸಿದರು. ಅವರಲ್ಲಿ ಗಿರಿಜಾ ಧರ್ಮರಡ್ಡಿಯವರೂ ಒಬ್ಬರು. ಬೀದರ ಜಿಲ್ಲೆಯ ಪ್ರಮುಖ ಆಧುನಿಕ ವಚನಕಾರ್ತಿ.

ತಂದೆ ಶ್ರೀ ಚನ್ನಬಸಪ್ಪ, ತಾಯಿ ಸೂಗಮ್ಮರ, ಮಗಳಾಗಿ ಜನಿಸಿರುವ ಗಿರಿಜಾ ಅವರು ಕಲಿತಿದ್ದು ೧೧ನೆಯ ತರಗತಿಯವರೆಗೆ ಮಾತ್ರ. ಮುಂದೆ ಓದಲು ಅನುಕೂಲವಿರದ ಪ್ರಸಂಗದಲ್ಲಿಯೂ ಅವರ ಪುಸ್ತಕ ಪ್ರೀತಿ ಅನುಪಮವಾಗಿತ್ತು. "ನನ್ನ ತಾಯಿ, ಗೆಳತಿ, ಗುರು, ಅನುಭಾವಿ, ಲೇಖಕಿ, ಭಾಷಣಕಾರ್ತಿ ಹಾಗೂ ವಚನಕಾರ್ತಿಯಾಗಿರುವ ಗಿರಿಜಾ ಧರ್ಮರಡ್ಡಿ ಅವರಿಗೆ ಪುಸ್ತಕಗಳೆಂದರೆ, ಪ್ರಾಣ, ಆಸ್ತಿ, ಆಪ್ತ ಸಂಗಾತಿಗಳು, ಸೀರೆ ಒಡವೆಗೆ ಆಸೆಪಟ್ಟವರಲ್ಲ, ಜ್ಞಾನಕ್ಕಾಗಿ ಹಾತೊರೆದವರು."[೧೯]

ಗಿರಿಜಾ ಧರ್ಮರಡ್ಡಿಯವರು ೨೦೦೭ರಲ್ಲಿ **'ವಚನ ಪುಷ್ಪಾಂಜಲಿ'**ಯನ್ನು ಹಾಗೂ ೨೦೧೦ರಲ್ಲಿ **'ನಾನೊಂದು ಹುಲ್ಲುಕಡ್ಡಿಯೆಂದು ಉದಾಸೀನವೇಕೆ?'** ಎಂಬ ಎರಡು ಮಹತ್ವದ ಆಧುನಿಕ ವಚನ ಸಂಕಲನಗಳನ್ನು ಹೊರತಂದಿದ್ದಾರೆ. ಅವರ 'ವಚನ ಪುಷ್ಪಾಂಜಲಿ'ಯಲ್ಲಿ ೧೨೫ ಆಧುನಿಕ ವಚನಗಳಿದ್ದರೆ 'ನಾನೊಂದು ಹುಲ್ಲು ಕಡ್ಡಿಯೆಂದು ಉದಾಸೀನವೇಕೆ?" ಎಂಬ ಕೃತಿಯಲ್ಲಿ ೨೨೫ ಆಧುನಿಕ ವಚನಗಳು, ಮೇಲೊಂದು 'ದೇವಮಾನವ' ಎಂಬ ಸ್ವರವಚನವೊಂದಿದೆ.

ಪುಟ್ಟ ಪುಸ್ತಕದ ೭೩ ಪುಟಗಳಲ್ಲಿ ಅರಳಿರುವ 'ವಸನ ಪುಷ್ಪಾಂಜಲಿ' ಹೆಸರಿಗೆ ತಕ್ಕ ಅನ್ವರ್ಥಕತೆಯನ್ನು ಪಡೆದಿದೆ. ಮನುಷ್ಯ ಜೀವನದ ಸಾಮಾಜಿಕ, ಆಧ್ಯಾತ್ಮಿಕ, ಸಾಂಸಾರಿಕ ಹಾಗೂ ಸಾಂಸ್ಕೃತಿಕ ರಂಗಗಳಲ್ಲಿ ನಡೆದುಕೊಳ್ಳಬೇಕಾದ ರೀತಿಯನ್ನು ಈ ಸಂಕಲನದ ಹೆಚ್ಚಿನ ವಚನಗಳು ನಿವೇದಿಸುತ್ತವೆ. ವಿದ್ಯೆಯ ಚಾತುರ್ಯದಿಂದ ಬರೆದ ವಚನಗಳಲ್ಲ, ಇವು ಅವರ ಜೀವನಾನುಭವದಿಂದ ಅರಳಿದ ಪುಷ್ಪಗಳು, ಅವಳ ಭಕ್ತಿ ಪರವಶಯ ಆಂತರ್ಯದಲ್ಲಿ ಮೂಡಿನಿಂತ ಸುಗಂಧವನ್ನು ಅವು ಪಸರಿಸುತ್ತವೆ.

"ವಚನ ಪುಷ್ಪಾಂಜಲಿಯಲ್ಲಿ ಬದುಕಿನ ಪ್ರೀತಿ, ಜೀವನ ಶ್ರದ್ಧೆ ಮತ್ತು ಭಕ್ತಿ ಎದ್ದು ಕಾಣುತ್ತವೆ. ಎಲ್ಲವೂ ಸರಳವಾದ ಭಾಷೆಯಲ್ಲಿದ್ದು, ಚನ್ನಾಗಿ ಅರ್ಥವಾಗುತ್ತವೆ. ಓದಿದ ಹಾಗೆಲ್ಲ ಇನ್ನೂ ಓದಬೇಕೆನಿಸುತ್ತವೆ. ನೊಂದ ಮನಸ್ಸಿಗೆ ತಂಪೆರೆಯುವ ಪುಸ್ತಕ, ಎಷ್ಟು ಓದಿದರೂ ಸಾಲದು ಎಂಬ ಅಭಿಪ್ರಾಯವೊಂದಿದೆ.[೨೦] ಕಾರಣವೆಂದರೆ ಗಿರಿಜಾ ಧರ್ಮರಡ್ಡಿ ಅವರು ಬಸವಾದಿ ಶಿವಶರಣರನ್ನು ಆದರ್ಶವಾಗಿಟ್ಟುಕೊಂಡು, ತಮ್ಮ ಜೀವನದಲ್ಲಿ 'ಬಸವ ಸೌರಭ'ವನ್ನು ತುಂಬಿಕೊಂಡು ನಡೆದಿದ್ದಾರೆ. ತಮ್ಮ ಅನುಭವಗಳನ್ನು ಇತರರಿಗೆ ತಿಳಿಯುವಂತೆ ವಚನಗಳಲ್ಲಿ ಬದುಕಿನ ವಾಸ್ತವಿಕತೆಯನ್ನು ಪರಿಚಯಿಸಿದ್ದಾರೆ. ನೇರ, ದಿಟ್ಟ, ಆತ್ಮಾವಲೋಕನ, ಆತ್ಮವಿಶ್ವಾಸದಿಂದ ಮುನ್ನುಗ್ಗಿ

ಗುರಿಯನ್ನು ತಲುಪುವ, ಜೀವನಕ್ಕೆ ಬೇಕಾಗುವ ಉತ್ಸಾಹ, ಸ್ಫೂರ್ತಿಯ ಸೆಲೆಗಳ ನೆಲೆಯನ್ನು ತಿಳಿಸುವಲ್ಲಿ ಯಶಸ್ವಿಯಾಗಿದ್ದಾರೆ. 'ಸತ್ಯಶರಣರನು ನಿತ್ಯ ನೆನೆಯಬಲ್ಲಡೆ, ಮಿಥ್ಯವಳಿದು, ಕರ್ತೃ ಬಳಿಯಲ್ಲಿಹನು ಬಸವಲಿಂಗ' ಎಂಬ 'ಶರಣ ಸಾಂಗತ್ಯ'ವನ್ನು ತಿಳಿಹೇಳಬಲ್ಲ ಅನುಭವ ಅವರಿಗಿರುವುದನ್ನು ಇಲ್ಲಿ ಕಾಣಬಹುದು.

"ನಾನೊಂದು ಹುಲ್ಲು ಕಡ್ಡಿಯೆಂದು ಉದಾಸೀನವೇಕೆ?" ಎಂಬ ಅವರ ಎರಡನೇಯ ಆಧುನಿಕ ವಚನ ಸಂಕಲನವು ಇನ್ನಷ್ಟು ಪರಿಪಕ್ವವಾಗಿ ಹೊರಹೊಮ್ಮಿರುವುದನ್ನು ಅರಿಯಬಹುದು. ೨೫೫ ವಚನಗಳ ಈ ಸಂಕಲನ ವಾಸ್ತವ ಬದುಕಿನ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಬಹುಮುಖ್ಯವಾಗುತ್ತದೆ.[೨೧] ಶರಣರ ವಚನಗಳನ್ನಲ್ಲದೆ ಬೇರೆಯವರ ವೈಚಾರಿಕ ಸಾಹಿತ್ಯವನ್ನು ಓದುವುದು, ಅದನ್ನು ಕುರಿತು ಆಳವಾಗಿ ಚಿಂತಿಸಿ, ಮಾತನಾಡುವುದು 'ಗಿರಿಜಾ ಧರ್ಮರಡ್ಡಿ'ಯವರ ಆಸಕ್ತಿ ಕ್ಷೇತ್ರ. ಆಧ್ಯಾತ್ಮ-ಧಾರ್ಮಿಕತೆಯಲ್ಲಿ ಆಸಕ್ತಿ ಹೊಂದಿದ್ದ ಅವರು ಜೀವನವನ್ನು ವೈಚಾರಿಕ ದೃಷ್ಟಿಯಿಂದ ಕಂಡು ಇಲ್ಲಿ ಅವರು ವಚನಗಳನ್ನು ಬರೆದಿದ್ದಾರೆ.

'ನಾನೊಂದು ಹುಲ್ಲುಕಡ್ಡಿಯೆಂಬ ಉದಾಸೀನವೇಕೆ?' ಎಂಬ ಶಿರ್ಷಿಕೆಯು ವಿಶೇಷವಾದ ಅರ್ಥವನ್ನು ಹೊಂದಿದೆ. ಈ ಶಿರ್ಷಿಕೆಯ ಅರ್ಥದಂತೆ, ವಚನ ಕಾರ್ತಿಯು ತಮ್ಮನ್ನು ಎಂದೂ ಸಣ್ಣವರು ಅಥವಾ ಕಡಿಮೆ ಎಂದು ಭಾವಿಸಿದವರಲ್ಲ. ನನ್ನಿಂದ ಏನೂ ಆಗದೆಂಬ ನಿರಾಶ ಭಾವನೆಯನೆಂದೂ ತಾಳಿದವರಲ್ಲ. ಬೇರೆಯವರ ಸಹಕಾರ ಹೆಣ್ಣುಮಕ್ಕಳಿಗಿಲ್ಲದಿದ್ದಾಗಲೂ, ತಾವು ತಮಗನಿಸಿದ್ದನ್ನು ಮಾಡಬಹುದೆಂದು ಆತ್ಮವಿಶ್ವಾಸ ಹೊಂದಿದವರು. ಅವರು ನಂಬಿರುವ ಆ 'ಬಸವಶಕ್ತಿ' ಅಂತಹದ್ದೆಂದು ಅವರು ಹೇಳುತ್ತಾರೆ. ಆ ಮೂಲಕ ಹೆಣ್ಣು ಮಕ್ಕಳು ಸ್ವಾವಲಂಬನೆಯನ್ನು ಇಷ್ಟಪಡಬೇಕೆಂದೂ ಅವರು ಆಶಿಸುತ್ತಾರೆ.

ಅವರ ಇಲ್ಲಿಯ ವಚನಗಳಲ್ಲಿ ಸಾರ್ವಕಾಲಿಕ ಸತ್ಯವನ್ನು ಗರ್ಭಿಸಿಕೊಂಡ ಚಿಂತನೆಗಳಿವೆ. ದೈನಂದಿನ ಜೀವನದಿಂದ ಆಯುಕೊಂಡ ಉಪಮೆ, ಗಾದೆಮಾತು, ಹೋಲಿಕೆಗಳಿವೆ. ಹೃದಯದಿಂದ ಹೃದಯಕ್ಕೆ ತಲುಪುವ ಸರಳವಾದ ಶೈಲಿಯಿದೆ. ಶರಣರ ಪೂರ್ಣ ಜೀವನದ ಪಾಠಗಳ ವಿವೇಚನೆ ಇವರ ವಚನಗಳಲ್ಲಿದೆ. ಸ್ವಂತ ಅನುಭವದ ಹಿನ್ನೆಲೆಯಲ್ಲಿ ಒಡಮೂಡಿರುವ ಗಿರಿಜಾ ಧರ್ಮರಡ್ಡಿ ಅವರ ವಚನಗಳಿಗೆ ಕನ್ನಡ ಸಾಹಿತ್ಯದಲ್ಲಿ ಮಹತ್ವದ ಸ್ಥಾನವಿದೆ ಎನ್ನಬಹುದು.

**೩.೯ ಜಗದೇವಿ ದುಬಲಗುಂಡೆಯವರ – 'ವಚನ ಕುಸುಮ (೨೦೦೮) ಹಾಗೂ ವಚನ ಸುಗಂಧ' (೨೦೧೬)**

ಜಗದೇವಿ ದುಬಲಗುಂಡೆಯವರು ಶರಣ ಜೀವಗಳು, ಕವಿಗಳು, ಬೀದರ ಜಿಲ್ಲೆಯ ಪ್ರಮುಖ ವಚನಕಾರರಲ್ಲಿ ಒಬ್ಬರು. ಬಸವಕಲ್ಯಾಣದ ಮೆಟಗೆ ದಂಪತಿಗಳಾದ ಶ್ರೀ ಗುರುಪಾದಪ್ಪ ಮತ್ತು ಭಾಗಿರಥಿಬಾಯಿ ದಂಪತಿಗಳ ಮಗಳು. ೧೯೪೯ರ ಜೂನ್ ೯ ರಂದು ಜನ್ಮವೆತ್ತಿರುವ ಇವರು ೧೦ನೇಯ ತರಗತಿಯವರೆಗೆ ಶಿಕ್ಷಣ ಪಡೆದು, ಬೀದರ ಜಿಲ್ಲೆಯ ತೋಟಗಾರಿಕೆ ಇಲಾಖೆಯಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸಿ ನಿವೃತ್ತರಾಗಿದ್ದಾರೆ. ಪ್ರವೃತ್ತಿಯಲ್ಲಿ ಲೇಖಕರಾಗಿರುವ ಇವರು ಈಗಾಗಲೇ 'ಅಪರೂಪದ ಅಪ್ಪ', 'ಸಂಸ್ಕೃತಿ ಚಿಂತನ' 'ಕಾವ್ಯ ತೋರಣ' 'ವಚನ ಕುಸಮ' ಹಾಗೂ 'ವಚನ ಸುಗಂಧ' ಎಂಬಂತಹ ಕೃತಿಗಳನ್ನು ಪ್ರಕಟಿಸಿ ಬೀದರ ಜಿಲ್ಲೆಯ ಪ್ರಮುಖ ಸಾಹಿತಿಗಳ ಸಾಲಿನಲ್ಲಿ ನಿಂತಿದ್ದಾರೆ.

ಬಾಲ್ಯದಿಂದಲೇ ಓದು-ಬಹಗಳಲ್ಲಿ ಆಸಕ್ತಿ ಹೊಂದಿದ್ದ ಜಗದೇವಿಯವರು ಮೊದಲಿನಿಂದಲೂ ಕಥೆ, ಕವನ ಬರೆದು ಅಲ್ಲಲ್ಲಿ ಪ್ರಕಟಿಸುವುದರೊಂದಿಗೆ, ಪೂಜ್ಯ ಲಿಂಗಾನಂದ ಸ್ವಾಮಿಗಳು ಹಾಗೂ ಮಾತೆ

ಮಹಾದೇವವಿಯವರ ಪ್ರಭಾವಕ್ಕೊಳಗಾಗಿ ಬಸವಧರ್ಮ ತತ್ವಾಚರಣೆಯಲ್ಲಿ ಬೆಳೆದು ಬಂದಿದ್ದಾರೆ. ಹೀಗಾಗಿ ಬೀದರದಲ್ಲಿ ಅವರನ್ನು ಸದ್ಗೃಹಿಣಿಯಾಗಿ, ಶರಣೆ ಸಾಧ್ವಿಯಾಗಿಯೇ ಗುರುತಿಸಲಾಗುತ್ತದೆ. ತಮ್ಮ ಆದರ್ಶ ದಾಂಪತ್ಯ ಜೀವನದೊಂದಿಗ ಸಾಮಾಜಿಕ ಬದುಕಿನಲ್ಲಿ ಬೆರೆಯುತ್ತಿರುವ ದುಬಲಗುಂಡೆಯವರು ಸಭೆ, ಸಮಾರಂಭ, ಗೋಷ್ಠಿಗಳಲ್ಲಿ ತಮ್ಮ ಕವನ, ಕಥೆ, ಆಧುನಿಕ ವಚನಗಳನ್ನು ವಾಚಿಸಿ, ಪ್ರಶಸ್ತಿ, ಗೌರವ ಮೆಚ್ಚುಗೆಯನ್ನು ಪಡೆದಿದ್ದಾರೆ. ಜಿಲ್ಲಾಮಟ್ಟದ ಪ್ರಶಸ್ತಿ, ಬಸವಕಲ್ಯಾಣದ ಅನುಭವ ಮಂಟಪ ಪುಸ್ತಕ ಪ್ರಶಸ್ತಿ, ಬೀದರ ಜಿಲ್ಲೆಯ ೨ನೆಯ 'ಆಧುನಿಕ ವಚನ ಸಾಹಿತ್ಯ' ಸಮ್ಮೇಳನದ ಗೌರವಾಧ್ಯಕ್ಷತೆಯು ಅವರಿಗೆ ದೊರಕಿದೆ.

ಕಾಯಕ-ದಾಸೋಹ ತತ್ವಗಳನ್ನು ಅನುಕರಿಸಿಕೊಂಡು ನಡೆಯುತ್ತಿರುವ ಜಗದೇವಿಯವರ ಆಧುನಿಕ ವಚನಗಳು ಜನಮನ್ನಣೆ ಪಡೆದಿವೆ. ಅವರ **'ವಚನ ಕುಸುಮ'** ೨೦೦೮ರಲ್ಲಿ ಪ್ರಕಟವಾಗಿದ್ದು, ಅದರಲ್ಲಿ ೨೯೯ ವಚನಗಳಿವೆ. "**ಸಿದ್ಧರಾಮ ಪ್ರಿಯ ಬಸವ ಶಿಶುವಿನ ಪರಮಗುರು**"ವೆಂಬ ಅಂಕಿತನಾಮದಲ್ಲಿ ಇಲ್ಲಿಯ ಆಧುನಿಕ ವಚನಗಳನ್ನು ಬರೆಯಲಾಗಿದೆ." ಅವುಗಳಲ್ಲಿ ಮಾನವ ಬದುಕಿನ ಮೌಲಿಕ ಮಾರ್ಗದರ್ಶಕ ಸೂತ್ರಗಳುಂಟು. ಒಂದಕ್ಕಿಂತ ಒಂದರಲ್ಲಿ ಮನ ಮಧುರಗೊಳಿಸುವ ಭಾವ ಮಾಧುರ್ಯ, ಅರಿವಿನ ಆಗರ, ಆಚಾರದ ಸತ್‌ಪಥ, ಭಾವ ತೃಪ್ತಿಯ ತತ್ವಮಂಥನವಿವೆ. ಸಾಮಾನ್ಯ ಮಾನವರಿಗೆಲ್ಲ ಸುಲಭದಲ್ಲಿ ಬಸವಾದಿ ಶರಣರ ಸಂದೇಶವನ್ನರಿವ ಶಿವಸೂತ್ರ, ಸಚಾಚಾರ ಸನ್ಮಾರ್ಗ, ಸತ್ಯ ಶುದ್ಧ ಕಾಯಕ, ದಾಸೋಹ, ಶಿವಯೋಗದ ಸಂತೃಪ್ತಿಯನರಿವ ಕಲೆ. ಕಪಟ, ಮೋಸ, ವಂಚನೆಯ ಖಂಡನೆ, ಜಾತ್ಯಾಂಧತೆ, ಧರ್ಮಾಂಧತೆಯ ಅಪಾಯಕರಿಗೆ ಸದ್‌ಭೋಧೆಗಳಿವೆ. ತಮ್ಮ ಬಾಳಿನಲ್ಲಿ ಅನೇಕ ಸಿಹಿ, ಕಹಿ ಅನುಭವಗಳನ್ನುಂಡ ಜಗದೇವಿ ತಾಯಿಯವರು, ಅಪ್ಪಟ ಮಹಾಗುರು ಬಸವತಂದೆಗೆ ತಮ್ಮ ಬಾಳನೆಲ್ಲ ಸಮರ್ಪಿಸಿದವರು[೨೨] ಎಂಬುದು ತಿಳಿಯುತ್ತದೆ.

**"ವಚನ ಸುಗಂಧ"** ೨೦೧೬ರಲ್ಲಿ ಪ್ರಕಟಗೊಂಡಿರುವ ಜಗದೇವಿಯವರ ಎರಡನೇಯ ಆಧುನಿಕ ವಚನ ಸಂಕಲನ. ಬೀದರ 'ಬಸವ ಪ್ರಸಾದ ಪ್ರಕಾಶನ'ದ ಅಡಿಯಲ್ಲಿ ಪ್ರಕಟಗೊಂಡಿರುವ ಇದರಲ್ಲಿ ೨೧೨ ವಚನಗಳಿಗೆ. "ಜಗದೇವಿ ಯವರ ಇಲ್ಲಿಯ ಒಂದೊಂದು ವಚನವೂ ಜೀವನಾನುಭವವನ್ನು ಉಣಬಡಿಸುತ್ತವೆ. ಕವಿಗಳಾದವರಿಗೆ ಇಂತಹ ರಚನೆಗಳು ಸಿದ್ಧಿಸುತ್ತವೆಯೇನೋ ಎಂಬಂತೆ ಇವರ ವಚನಗಳ ಬರವಣಿಗೆ ಗಟ್ಟಿಯಾಗಿದೆ ಎಂಬ ಅಭಿಪ್ರಾಯವೊಂದಿದೆ.[೨೩]

ಜಗದೇವಿಯವರ ಇಲ್ಲಿನ ವಚನಗಳಲ್ಲಿ ಭಕ್ತಿ, ಶ್ರದ್ಧೆ, ಕರುಣೆ, ಮಮತೆ, ಆತ್ಮನಿವೇದನೆಯಂತಹ ಗುಣಗಳನ್ನು ಅಭಿವ್ಯಕ್ತಿಸಲಾಗಿದೆ. ಶರಣ ಭಾವ ಎಲ್ಲ ವಚನಗಳ ಆಂತರ್ಯವಾಗಿದ್ದು, ವಾಸ್ತವಿಕ ನೆಲೆಯ ಹಿನ್ನೆಲೆಯಲ್ಲಿ ಆ ಭಾವಗಳಿಗೆ ಸ್ಪಂದಿಸುವ ಶೈಲಿ ಆತ್ಮೀಯವಾಗಿ ಮೂಡಿದೆ. ವಚನಗಳ ಲಾಲಿತ್ಯ ಹಾಗೂ ಗೇಯಗುಣವನ್ನು ಒಡಮೂಡಿಸಿಕೊಳ್ಳಲು ಪ್ರಯತ್ನಿಸಿರುವ ಸಂಗತಿಗಳು ಹಲವು ವಚನಗಳಲ್ಲಿವೆ. ಈ ಸಂಕಲನದ ಮೂಲಕ ಬೀದರ ಜಿಲ್ಲೆಯ 'ಆಧುನಿಕ ವಚನ' ಸಾಹಿತ್ಯಕ್ಕೆ ಒಂದು ಘನತೆ ಮೂಡಿದೆ ಎನ್ನಬಹುದು.

**೩.೧೦ ಪುಷ್ಪಾ ಜಿ. ಕನಕಾ ಅವರ 'ವಚನಸುಮ' (೨೦೦೮)**

ಪುಷ್ಪ ಜಿ. ಕನಕಾ ಅವರು ಬೀದರ ಜಿಲ್ಲೆಯ ಇನ್ನೋರ್ವ ಕವಿ ಹಾಗೂ ಆಧುನಿಕ ವಚನಕಾರ್ತಿ. ಬೀದರ ಜಿಲ್ಲೆಯ ಹಳ್ಳಿಖೇಡ (ಬಿ) ಗ್ರಾಮದಲ್ಲಿ ೧೯೬೩ರ ಜುಲೈ ೫ ರಂದು ಜನಿಸಿದರು. ಇವರ ತಂದೆಯ ಹೆಸರು ಸಿದ್ಧಪ್ಪ ಮತ್ತು ತಾಯಿ ಶಾಂತಾಬಾಯಿ ಭುನ್ನಾ. ಬಿ.ಎ., ಬಿ.ಇಡಿ. ಪದವೀಧರರಾಗಿರುವ ಇವರು ಸರಕಾರಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಜಿಲ್ಲೆಯ ಅತಿವಾಳ ಗ್ರಾಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ವಿದ್ಯಾರ್ಥಿ ದೆಸೆಯಿಂದಲೇ ಪ್ರತಿಭಾನ್ವಿತರಾಗಿರುವ ಇವರು ಶಿಶುಗೀತೆ, ಚುಟುಕು, ಸಣ್ಣಕಥೆ ಹಾಗೂ ಆಧುನಿಕ ವಚನಗಳನ್ನು ರಚಿಸುತ್ತಿದ್ದಾರೆ. ೨೦೦೮ರಲ್ಲಿ ಇವರು ತಮ್ಮ ಕಾಳೂರಲಿಂಗೇಶ್ವರ ವಚನಗಳನ್ನು "ವಚನ ಸುಮ" ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಿಸಿದ್ದಾರೆ. ರಾಜೇಶ್ವರ ಗ್ರಾಮದ ಅಂಚೆ ಇಲಾಖೆಯ ಉದ್ಯೋಗಿಯಾಗಿರುವ 'ಗುಂಡಪ್ಪಾ ಕನಕಾ' ಅವರನ್ನು ಮದುವೆಯಾಗಿರುವ ಪುಷ್ಪಾ ಅವರು ಪ್ರವೃತ್ತಿಯಿಂದ ಸಾಹಿತಿಗಳಾಗಿದ್ದಾರೆ.

ಪುಷ್ಪಾ ಅವರೇ ಹೇಳಿಕೊಂಡಿರುವಂತೆ "ಒಂಬತ್ತನೆಯ ತರಗತಿಯಲ್ಲಿ ಓದುತ್ತಿರುವಾಗಲೇ ಅವರು ಬಸವಣ್ಣನನ್ನು ಕುರಿತು ಎರಡು ಕವನಗಳನ್ನು ಬರೆದು ಡಾ. ಮಾಣಿಕರಾವ ಧನಾಶ್ರೀಯವರಿಗೆ ತೋರಿಸಿದರಂತೆ. ಅವರು ನನ್ನ ರಚನೆಗಳನ್ನು ಮೆಚ್ಚಿ 'ಹೀಗೆಯೇ ಬರೆಯುತ್ತಾ ಹೋಗಮ್ಮಾ' ಎಂದು ಪ್ರೋತ್ಸಾಹಿಸಿದರು. ಅಂದಿನಿಂದ ನನ್ನ ಬರವಣಿಗೆ ತುಸು ಚುರುಕುಗೊಂಡಿತು. ಕವನ ಹಾಗೂ ಚುಟುಕುಗಳನ್ನು ಬರೆದು ಸಂಗ್ರಹಿಸತೊಡಗಿದೆ"[೨೪] ಎಂದಿರುವುದನ್ನು ಗಮನಿಸಬಹುದು.

ನಂತರದ ದಿನಗಳಲ್ಲಿ ಬೀದರ ಜಿಲ್ಲೆಯ ಸಾಹಿತಿಗಳೆನಿಸಿದ್ದ ದೇಶಾಂಶ ಹುಡಗಿ, ಇಂದುಮತಿ ಭಂಡಿ, ಶಿರೋಮಣಿ ತಾರೆ, ಯಶೋದಮ್ಮ ಸಿದ್ಬಟ್ಟೆ, ಚಂಪಾ ಮೊದಲಾದವರ ಪ್ರೋತ್ಸಾಹ ಹಾಗೂ ಸಂಬಂಧಿಕರ ಬೆಂಬಲದಿಂದ ತಾವು ರಚಿಸಿರುವ ವಚನಗಳನ್ನು ಪ್ರಕಟಪಡಿಸಿದರು. **"ಕಾಳೂರಲಿಂಗಯ್ಯ"** ಎಂಬ ಅಂಕಿತದ ಅವರ 'ವಚನಸುಮ'ದಲ್ಲಿ ಒಟ್ಟು ೨೦೧ ವಚನಗಳಿವೆ.

ತಮ್ಮ "ಶಿಕ್ಷಕ ವೃತ್ತಿಯೊಂದಿಗೆ ಬರಹಗಾರಿಕೆಯನ್ನು ರೂಢಿಸಿಕೊಂಡ ಪುಷ್ಪಾ ಅವರು ಸಮಾಜದಲ್ಲಿಯ ಈಗಿನ ವಿದ್ಯಮಾನಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿ, ಅವುಗಳನ್ನು ಕುರಿತು ತಮ್ಮ ವಚನಗಳಲ್ಲಿ ಸ್ಪಂದಿಸಿದ್ದಾರೆ. ಕೆಟ್ಟದ್ದು ಮತ್ತು ಒಳ್ಳೆಯದೆಂಬುವುಗಳು ಒಂದೇ ಗುಲಾಬಿಯ ಮುಳ್ಳು ಮತ್ತು ಹೂಗಳಿದ್ದಂತೆ ಎಂದು, ಅವರು ಒಳ್ಳೆಯವರನ್ನು ಮತ್ತು ಕೆಟ್ಟವರನ್ನು ಸಲುಹಲು ದೇವರೊಬ್ಬನೇ ಇದ್ದಾನೆ ಎನ್ನುತ್ತಾರೆ. ನಾವೆಲ್ಲರು ಪರಮಾತ್ಮನ ಲೀಲೆಯಲ್ಲಿ ಮಕ್ಕಳಂತೆ ಮುಗ್ಧರಾಗಿದ್ದೇವೆ. ಅಳುವುದು ಮತ್ತು ನಗುವುದನ್ನು ರೂಢಿಸಿಕೊಂಡ ನಾವು ಪಾಪ. ಪುಣ್ಯ ಪ್ರಜ್ಞೆಯಿಂದ ದೂರಾತಿದೂರರು. ಕರುಣೆದೋರಿ ಕಾಪಾಡುವುದು ಕಾಳೂರಲಿಂಗನಿಗೆ ಸೇರಿದ್ದು ಎಂದು ನಿಶ್ಚಿಂತರಾಗಿರುತ್ತಾರೆ.[೨೫]

ನಿವೇದನೆ, ವೈಚಾರಿಕತೆ, ಲೌಕಿಕಾನುಭವ ಹಾಗೂ ಭಕ್ತಿಯ ಗುಣಗಳನ್ನು ಹೊರಸೂಸುವ ಪುಷ್ಪಾ. ಕನಕಾ ಅವರ ವಚನಗಳಿಗೆ ನಾಲ್ಕು ಪಾದಗಳ ಒಂದು ಚೌಕಟ್ಟಿದೆ. ಆ ಚೌಕಟ್ಟಿನಲ್ಲಿಯೇ ತಮ್ಮ ಅನುಭವವನ್ನು ಬಂಧಿಸಿಟ್ಟಿದ್ದಾರೆ. 'ಅನುಭವ ಮತ್ತು ವಿಚಾರ ನಿವೇದನೆಯಲ್ಲಿ ಅವರದೇ ಆದ ಶೈಲಿ ಇದೆ. ಆಧುನಿಕ ವಚನಕಾರರಲ್ಲಿ ಹಲವರು "ಅಯ್ಯ" ಪದದ ಬಳಕೆ ಮಾಡುತ್ತಾ ಬಂದಿದ್ದಾರೆ, ಕನಕಾ ಅವರ ವೈಶಿಷ್ಟ್ಯವೇ ಬೇರೆ. ಮೊದಲನೆಯ-ಎರಡನೆಯ ಹಾಗೂ ನಾಲ್ಕನೇಯ ಸಾಲಿನಲ್ಲಿ ಇವರು ತಪ್ಪದೆ "ಅಯ್ಯ" ಪದ ಬಳಸಿ ತಮ್ಮ ರೀತಿಯನ್ನು ಬಿಂಬಿಸಿದ್ದಾರೆ.[೨೬] ಒಟ್ಟಿನಲ್ಲಿ ಸಾತ್ವಿಕ ಜೀವಿಗಳು,ಮೂಢನಂಬಿಕೆ ತಿರಸ್ಕರಿಸಿದವರು, ಶರಣ ಮಾರ್ಗದಲ್ಲಿ ನಂಬಿಕೆಯಿಟ್ಟವರು ಪುಷ್ಪ ಜಿ. ಕನಕಾ ಅವರು. ಕಾಯಕವನ್ನೇ ಕೈಲಾಸವೆಂದು ನಂಬಿರುವ ಇವರು ನಡೆ-ನುಡಿಯಲ್ಲಿ ಸಮನ್ವಯತೆ ಸಾಧಿಸಿದ್ದಾರೆ. ಬೀದರ ಜಿಲ್ಲೆಯ ಪ್ರಮುಖ ವಚನಕಾರರಲ್ಲಿ ಇವರೂ ಒಬ್ಬರಾಗಿದ್ದಾರೆ.

### ೩.೧೧ ಎಂ. ಮುಕ್ತುಂಬಿಯವರ "ನನ್ನಶಿವ (೨೦೦೮) ಮತ್ತು ಭಾಲ್ಕಿಚಂದ್ರನ ಮಹಾಬೆಳಗು (೨೦೧೫)

ಎಂ. ಮುಕ್ತುಂಬಿಯವರು ಮುಸ್ಲಿಂ ಸಮುದಾಯದಿಂದ ಬಂದ ಕನ್ನಡದ ಮೊದಲ ವಚನಕಾರ್ತಿ. ಅವರ 'ನನ್ನಶಿವ' ಮಧುರ ಭಕ್ತಿಯ ಮಹತ್ವವನ್ನು ಸಾರುವ ಆಧುನಿಕ ವಚನ ಸಂಕಲನ[೨೭] ಗಡಿನಾಡಾದ ಬೀದರ ಜಿಲ್ಲೆಯ ಭಾಲ್ಕಿಯಲ್ಲಿ ೧೯೭೪ರ ಜೂನ್ ೨೦ನೇಯ ತಾರೀಕಿನಂದು ಜನಿಸಿರುವ ಇವರು ಎಂ.ಎ., ಬಿ.ಇಡಿ. ಹಾಗೂ ಪಿಹೆಚ್.ಡಿ. ಪದವೀಧರರು ಕನ್ನಡ ವಿಷಯದಲ್ಲಿ ಸ್ನಾತಕ್ಕೋತ್ತರ ಪದವಿ ಪಡೆದು, 'ಶರಣರ ವಚನಗಳಲ್ಲಿ ಸೌಂದರ್ಯ ಮೀಮಾಂಸೆ' ಕುರಿತು ಮಹಾಪ್ರಬಂಧ ಬರೆದು ಗುಲಬರ್ಗಾ ವಿಶ್ವವಿದ್ಯಾಲಯದಿಂದ ಡಾಕ್ಟರೇಟ ಪದವಿ ಗಳಿಸಿದ್ದಾರೆ. ಓದುವಾಗಿನಿಂದಲೇ ಕವನ, ಕಥೆ ಬರೆಯುವ ಹವ್ಯಾಸವಿತ್ತು. ಆದರೆ ಅವು ಯಾವವು ಪ್ರಕಟಗೊಳ್ಳಲಿಲ್ಲ.

ಮೊದಲು ಇವರು ತಮ್ಮ ಕವಿತೆಗಳನ್ನು 'ಹೃತ್ಕಿರಣಗಳು' ಎಂಬ ಕೃತಿಯಲ್ಲಿ ಪ್ರಕಟಿಸಿದರು. ಅದನ್ನು ಕುರಿತು ಎಲ್ ಬಸವರಾಜ ಅವರು – 'ಮೊನ್ನೆ ತಾನೇ ಪ್ರಕಟವಾಗಿರುವ ಒಂದು ಕವನ ಸಂಕಲವನ್ನು ಕಂಡೆ! ಕಂಡೆನೆಂದರೆ, ಆ ವಿಧವಾದ ಶುಭ ನುಡಿಯ ಮತ್ತು ರೋಮಾಂಚನ ಸಿಂಚಿತ ಸುವರ್ಣ ಸೂಕ್ತ ಸುಮನಗಳನ್ನು ಇತ್ತೀಚೆಗೆ ನಾನು ಮತ್ತೆಲ್ಲಿಯೂ ಕಂಡಿಲ್ಲ. ಕನ್ನಡ ನಾಡಿನ ಶ್ರೀಮತಿ ಮುಕ್ತಂಬಿಯವರ ಈ ಕವನ ಕೃತಿ ಕನ್ನಡ ಕನ್ಯೆಗೆ ಶರಣರು ಕಟ್ಟಿದ ವಚನ ಮಾಂಗಲ್ಯಕ್ಕೆ ತಾಯಿ ಜೋಡಿಸಿದ ಕವನ ಕಂಠೀ ಹಾರದಂತಿದೆ[೨೮] ಎಂದು ಹೊಗಳಿದ್ದಾರೆ.

ಎಂ. ಮುಕ್ತುಂಬಿಯವರು ಹಲವಾರು ವರ್ಷಗಳಿಂದ ಕವನಗಳನ್ನು ಬರೆಯುತ್ತಿದ್ದರು. "ಅವುಗಳ ಮಧ್ಯದಲ್ಲಿ ಕಿರುಗಾತ್ರದ ಬಿಡಿ ಪದ್ಯಗಳನ್ನು ರಚನೆ ಮಾಡಿದ್ದುಂಟು. ಅವುಗಳನ್ನು ಹಿರಿಯ ಸಾಹಿತಿಗಳಿಗೆ ತೋರಿಸಿದಾಗ, ಅವರು ಇವು ಒಳ್ಳೆಯ ವಚನಗಳಂತಿವೆ ಎಂದು ಕರೆದರು. ಈಗಾಗಲೇ ಜಿಲ್ಲೆಯಲ್ಲಿ ಹಲವು ಲೇಖಕರು ಆಧುನಿಕ ವಚನಗಳನ್ನು ಬರೆಯುತ್ತಿದ್ದುದು ಗಮನಕ್ಕೆ ಬಂತು. ಆ ಪರಂಪರೆಯಲ್ಲಿ ನನ್ನದು ಒಂದು ಕೃತಿ ಇರಲೆಂಬ ಕಾರಣದಿಂದ ಅಲ್ಲಲ್ಲಿ ಅವಿತು ಹೋಗಿದ್ದ ವಚನಗಳನ್ನು ಈಗ ಒಂದೆಡೆಯಲ್ಲಿ "ನನ್ನಶಿವ" ಎಂಬ ಹೆಸರಿನಲ್ಲಿ ಸಂಗ್ರಹಿಸಿ ಕೊಟ್ಟಿದ್ದೇನೆ.[೨೯] ಎಂದು ತಾವು ಆಧುನಿಕ ವಚನ ರಚನೆಗೆ ಕೈ ಹಾಕಿದ ಹಿನ್ನೆಲೆಯನ್ನು ತಿಳಿಸಿದ್ದಾರೆ.

"ನನ್ನಶಿವ" ಎಂಬ ವಚನಕೃತಿಯಲ್ಲಿ 'ಪ್ರಾಣೇಶ್ವರ' ಎಂಬ ಅಂಕಿತದ ೭೭ ಆಧುನಿಕ ವಚನಗಳಿವೆ. ಇಲ್ಲಿನ ಹೆಚ್ಚು ವಚನಗಳು ಅನ್ಯವಿಷಯವನ್ನು ಪ್ರತಿಪಾದಿಸುವುದಕ್ಕಿಂತ ಹೆಚ್ಚಾಗಿ ಶಿವಭಕ್ತಿ, ಶಿವತತ್ವದೆಡೆಗೆ ಮುಖ ಮಾಡಿ ನಿಂತಂತೆ ಕಾಣುತ್ತವೆ. ಮುಕ್ತುಂಬಿಯ ಶಿವನು ಸರ್ವಧರ್ಮಗಳ ದೇವರಾಗಿದ್ದಾನೆ. ದೇವರು ಒಬ್ಬನೇ ಅವನನ್ನು ಪವಿತ್ರ ಭಾವದಿಂದ ಯಾವುದೇ ಹೆಸರಿನಿಂದ ಕರೆದರೂ ಓ ಎನ್ನುತ್ತಾನೆ. ಎಂಬ ದೃಢ ನಂಬಿಕೆ ಅವರದು. ತನ್ನೊಂದಿಗಿರುವ, ತನ್ನೊಳಗಿನ ಶಿವನ ಜೊತೆ ಆನಂದಮಯವಾಗಿ ಇರುವಲ್ಲಿ ಆ ವಚನಕಾರ್ತಿಗೆ ಯಾವುದೇ ಮೂಲಭೂತವಾದಿಗಳ, ಕೋಮುವಾದಿಗಳ ಮತ್ತು ಭಯೋತ್ಪಾದಕರ ಭಯ ಕಾಡುವುದಿಲ್ಲ.

ಮುಕ್ತುಂಬಿಯ ವಚನಗಳಲ್ಲಿ ಮಾನವೀಯ ಸಂಬಂಧ, ಜಾತ್ಯಾತೀತ ಬದುಕು, ಸರ್ವಧರ್ಮಸಮನ್ವಯತೆ 'ಶಿವತತ್ವ'ದ ಹಿನ್ನೆಲೆಯಲ್ಲಿ ಸಹಜವಾಗಿ ವ್ಯಕ್ತವಾಗಿದ್ದನ್ನು ಅರಿಯಬಹುದು.

'ಭಾಲ್ಕಿ ಚಂದ್ರನ ಮಹಾಬೆಳಗು' ೨೦೧೫ರಲ್ಲಿ ಪ್ರಕಟಗೊಂಡಿರುವ ಇನ್ನೊಂದು ಆಧುನಿಕ ವಚನ ಸಂಕಲನ. 'ಪ್ರಾಣೇಶ್ವರ' ಅಂಕಿತದ ೨೦೦ ವಚನಗಳು ಇದರಲ್ಲಿವೆ. ಭಾಲ್ಕಿ ಹಿರೇಮಠದ ಪೂಜ್ಯ ಡಾ. ಮ.ಘ.ಚ.

ಬಸವಲಿಂಗ ಪಟ್ಟದ್ದೇವರನ್ನು ಮಹಾಬೆಳಕಾಗಿ ಕಂಡವರು ವಚನಕಾರ್ತಿ. ಡಾ. ಚನ್ನಬಸವ ಪಟ್ಟದ್ದೇವರ ಕರುಣೆಯ ಕಂದನಾಗಿರುವ ಡಾ. ಬಸವಲಿಂಗ ಪಟ್ಟದ್ದೇವರು ತಮ್ಮ ಗುರುವಿನ ಕಾರ್ಯವನ್ನು ಮುಂದುವರೆಸಿಕೊಂಡು ನಡೆದಿದ್ದಾರೆ.

ದೀನರಲ್ಲಿ, ದಲಿತರಲ್ಲಿ, ಅನಾಥರಲ್ಲಿ, ಸ್ತ್ರೀಯರಲ್ಲಿ, ನಿರ್ಗತಿಕರಲ್ಲಿ, ವಚನಕಾರರಲ್ಲಿ, ಸುಳ್ಳುಗಾರರಲ್ಲಿ ಬಸವಣ್ಣನನ್ನು ಕಂಡು ಬಸವಸ್ವರೂಪಿಗಳಾಗಿದ್ದಾರೆ 'ಬಸವಲಿಂಗ ಪಟ್ಟದ್ದೇವರು.' ಅವರು ಗುರುಗಳ ಕನ್ನಡ ಪ್ರೀತಿ, ಶರಣ ನಡೆಯನ್ನು ಇಂದಿನ ಕಲ್ಯಾಣ ಕರ್ನಾಟಕದಲ್ಲಷ್ಟೇ ಅಲ್ಲ; ನಾಡಿನ ತುಂಬಾ ಮಹಾರಾಷ್ಟ್ರ, ಆಂಧ್ರಪ್ರದೇಶದಾದ್ಯಂತ ಪಸರಿಸುವಂತೆ ಕಾರ್ಯೋನ್ಮುಖರಾಗಿದ್ದಾರೆ. "ಚೆನ್ನಬಸವ ಗುರುಕುಲ, ಚೆನ್ನಬಸವಾಶ್ರಮ, ಅನುಭವ ಮಂಟಪ, ಗುರುಪ್ರಸಾದ ನಿಲಯ, ಅನಾಥಾಶ್ರಮ, ಶಿಶುವಿಹಾರ, ಪ್ರಾಥಮಿಕ ಶಾಲೆಗಳು, ಪ್ರೌಢ ಶಾಲೆಗಳು, ಪದವೀ ಪೂರ್ವ ಕಾಲೇಜು, ಡಿ.ಇಡಿ.. ಬಿ.ಇಡಿ. ಕಾಲೇಜು ಕೈಗಾರಿಕೆ ತರಬೇತಿ ಕೇಂದ್ರಗಳು, ಬಸವಧರ್ಮ ಪ್ರಸಾದ ಸಂಸ್ಥೆ, ನೀಲಾಂಬಿಕಾ ಸಂಗೀತ ವಿದ್ಯಾಲಯ, ಮಹಾರಾಷ್ಟ್ರ ಬಸವ ಪರಿಷತ್ತು, ಆಂದ್ರ ಬಸವ ಪರಿಷತ್ತು, ಬಸವ ಭಾರತಿ ಹಿಂದೀ ಪ್ರತಿಷ್ಠಾನ ಮೊದಲಾದವುಗಳ ರೂವಾರಿಯಾಗಿ ಕಾರ್ಯಗೈದಿರುವುದನ್ನು (ವಚನ ೯೪ ರಿಂದ ೧೦೦) ಕಾಣಬಹುದಾಗಿದೆ."[೨೯]

ಈ ಎರಡೂ ಕೃತಿಗಳ ಮೂಲಕ ಆಧುನಿಕ ವಚನ ಸಾಹಿತ್ಯಕ್ಕೆ ಸರಳತೆ, ಸಹಜತೆ, ಮಾನವೀಯತೆಯ ನೆಲೆಯನ್ನು ತಂದು ತೋರಿರುವ ಮುಕ್ತುಂಬಿಯವರು, ಸರ್ವಧರ್ಮಗಳನ್ನು ಗೌರವಿಸುವ ನೆಲೆಯಲ್ಲಿ, ಸಾಮರಸ್ಯದ ತತ್ವಗಳನ್ನು ಅಳವಡಿಸಿಕೊಂಡು ವಿಶ್ವಮಾನವನಾಗಬೇಕೆಂಬ ಸಂದೇಶ ನೀಡುತ್ತಿರುವುದನ್ನು ಮನಗಾಣಬಹುದು.

**೩.೧೨ ಶ್ರೀ ಚೆನ್ನಪ್ಪ ಮೋರ್ಗೆ ಅವರ ಗುರುಪ್ರಸಾದ (೨೦೦೯)**

ಶ್ರೀ ಚೆನ್ನಪ್ಪ ಮೋರ್ಗೆಯವರು ಬೀದರ ಜಿಲ್ಲೆಯ ಇನ್ನೋರ್ವ ಆಧುನಿಕ ವಚನ ರಚನೆಕಾರ. ಭಾಲ್ಕಿಯ ಪ್ರಸಿದ್ಧವಾದ ಹಿರೇಮಠ ಸಂಸ್ಥಾನದ ಅಧಿಪತಿಗಳಾಗಿದ್ದ ಲಿಂ.ಡಾ. ಚನ್ನಬಸವ ಪಟ್ಟದ್ದೇವರು ಹಾಗೂ ಈಗಿನ ಶ್ರೀಗಳಾದ ಡಾ. ಬಸವಲಿಂಗ ಪಟ್ಟದ್ದೇವರ ಕೃಪಾಶೀರ್ವಾದದ ಪ್ರಭಾವದಲ್ಲಿಯೇ ಬೆಳೆದವರು. ಔರಾದ ತಾಲೂಕಿನ ಖಾನಾಪುರ ಚೆನ್ನಪ್ಪನವರು ಕಾಲೇಜು ಕಟ್ಟೆ ಏರಿದವರಲ್ಲ ವಿಶ್ವವಿದ್ಯಾಲಯಗಳ ಪದವಿ ಪಡೆದವರಲ್ಲ. ಸ್ವಂತ ಅನುಭವದ ನೆಲೆಯಲ್ಲಿ ತಾವು ಕಲಿತ ಕನ್ನಡ ಅಕ್ಷರದಲ್ಲಿ ವಚನಗಳನ್ನು ರಚಿಸಿದ್ದಾರೆ.

ಸರಳರು, ಸಾತ್ವಿಕರೂ, ಉತ್ಸಾಹಿಗಳಾದ ಮೋರ್ಗೆಯವರು ತಮ್ಮ ಇಳಿವಯಸ್ಸಿನಲ್ಲೂ ಯುವಕರಂತೆ ತಿರುಗಾಡುತ್ತಾರೆ. ಸದಾ ಚಟುವಟಿಕೆಯುಳ್ಳವರಾಗಿರುವ ಇವರು ತುಂಬಾ ಕ್ರಿಯಾಶೀಲ ವ್ಯಕ್ತಿಯಾಗಿದ್ದಾರೆ. ಲಿಂ.ಡಾ.ಚನ್ನಬಸವ ಪಟ್ಟದ್ದೇವರ ಬಗ್ಗೆ ಅಪಾರ ಭಕ್ತಿ ಹೊಂದಿರುವ ಅವರು ತಮ್ಮ ಹೃದಯದ ತುಂಬ 'ಗುರುನಿಷ್ಠೆ' ತುಂಬಿಕೊಂಡಿದ್ದಾರೆ. "ಎಡದ ಕೈಯಲ್ಲಿ ಲಿಂಗ ಪೂಜೆ, ಬಲದ ಕೈಯಲ್ಲಿ ಜಂಗಮ (ಸಮಾಜ) ಸೇವೆ ಎಂಬ ಅಪ್ಪ ಬಸವಗುರುವಿನ ವಾಣಿಯನ್ನು ಆಚರಣೆಯಲ್ಲಿ ಇಟ್ಟುಕೊಂಡವರು. ಬಡವರ ಬಗ್ಗೆ, ದೀನ ದಲಿತರ ಬಗ್ಗೆ ಕಾಳಜಿಯುಳ್ಳವರು. ಪ್ರಾಮಾಣಿಕತೆಗೆ ಹೆಸರಾದವರು.[೩೦]

ಜೀವನವನ್ನು ಹಾಗೂ ತಮ್ಮ ಗುರುವಿನ ಮಹಾಂತಃಕರುಣೆಯನ್ನು ಕಣ್ಣಾರೆ ಕಂಡಿರುವ ಚೆನ್ನಪ್ಪ ಮೋರ್ಗಿಯವರು ಆ ಅನುಭವಗಳನ್ನು ತಮ್ಮದೇ ಆದ ಆಡುನುಡಿಯಲ್ಲಿ ಸೊಗಸಾಗಿ ಹಿಡಿದಿಟ್ಟಿದ್ದಾರೆ. '**ಗುರು**

**ಚನ್ನಬಸವಾ'** ಅಂಕಿತದಲ್ಲಿ ಅವರು ಬರೆದಿರುವ ೧೪೭ ವಚನಗಳು, 'ಗುರುಪ್ರಸಾದ' ಎಂಬ ಶಿರ್ಷಿಕೆಯಲ್ಲಿ ಪ್ರಕಟವಾಗಿವೆ. ಜನ್ಮತಃ ರೈತರಾಗಿರುವ ಶ್ರೀ ಚನ್ನಪ್ಪನವರ ಬಹುಮುಖಿ ವ್ಯಕ್ತಿತ್ವ

ಒಟ್ಟಿನಲ್ಲಿ ಚನ್ನಪ್ಪನವರು ಅವರ ಗುರುಗಳಾದ ಚನ್ನಬಸವರ ಅಂಕಿತವನ್ನಿಟ್ಟುಕೊಂಡು ಚನ್ನಾಗಿರುವ ವಿಷಯಗಳನ್ನಾಯ್ದುಕೊಂಡು ಚನ್ನಾಗಿಯೇ ವಚನ ರಚಿಸಿದ್ದಾರೆ. ಇಲ್ಲಿ ಹಲವಾರು ಚೆನ್ನಗಳ ಕೂಡಲಸಂಗಮವಿದೆ ಎಂಬ ವಿದ್ವಾಂಸರ ಮಾತು[೩೧] ಯಥಾರ್ಥವಾಗಿದೆ ಎನ್ನಬಹುದು.

**೩.೧೩ ಎಂ.ಜಿ. ದೇಶಪಾಂಡೆ ಅವರ 'ವಚನ ಚಂದ್ರಿಕೆ' (೨೦೦೯)**

ಬೀದರ ಜಿಲ್ಲೆಯ ಹಿರಿಯ ಕವಿ ಹಾಗೂ ಸಾಹಿತಿಗಳಲ್ಲಿ ಒಬ್ಬರಾಗಿರುವ ಎಂ.ಜಿ. ದೇಶಪಾಂಡೆಯವರು ಆಧುನಿಕ ವಚನ ರಚನೆಕಾರರೂ ಹೌದು. ಇವರ ಕಾವ್ಯನಾಮ **'ಲಕ್ಷ್ಮೀಸುತ'** ಇವರ ತಂದೆ ಗೋವಿಂದರಾವ ತಾಯಿ ಲಕ್ಷ್ಮೀಬಾಯಿ. ೧೯೩೨ರ ಮಾರ್ಚ ೨೧ ರಂದು ಬೀದರದಲ್ಲಿ ಜನಿಸಿರುವ ಇವರು ಬಾಲ್ಯದಿಂದಲೂ ಪ್ರತಿಭಾನ್ವಿತರು. ಬಿ.ಎ. ಪದವೀಧರರಾಗಿರುವ ಇವರು ಬೀದರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನಲ್ಲಿ ಸಹಾಯಕರಾಗಿ ಸೇರಿಕೊಂಡು, ಆ ಬ್ಯಾಂಕಿನಲ್ಲಿ ವಿವಿಧ ಹುದ್ದೆಗಳನ್ನು ಅಲಂಕರಿಸುತ್ತ, ಉತ್ತಮ ಶ್ರೇಣಿಯ ಉಪಪ್ರಧಾನ ವ್ಯವಸ್ಥಾಪಕ ಹುದ್ದೆಯನ್ನು ಪಡೆದು, ಅದನ್ನು ಸಮರ್ಥವಾಗಿ ನಿರ್ವಹಿಸಿ ನಿವೃತ್ತಿಯನ್ನು ಹೊಂದಿದ್ದಾರೆ.

ವೃತ್ತಿಯಲ್ಲಿ ಬ್ಯಾಂಕ ಸೇವೆ ಯಾಗಿದ್ದರೂ ಅವರ ಪ್ರವೃತ್ತಿ ಸಾಹಿತಿಯದಾಗಿತ್ತು. ಆ ಸೇವೆಯ ಸಂದರ್ಭದಲ್ಲಿಯೇ ಬೇಂದ್ರೆಯವರ ಪ್ರಭಾವಕ್ಕೊಳಗಾಗಿ ಅವರ **'ಅಂಬಿಕಾತನಯದತ್ತ'** ಎಂಬ ಕಾವ್ಯನಾಮದಂತೆ 'ಲಕ್ಷ್ಮೀಸುತ; ಎಂದು ಮಾಣಿಕರಾವ ದೇಶಪಾಂಡೆಯವರು ತಮ್ಮ ಕಾವ್ಯ ನಾಮವನ್ನಾಗಿಸಿಕೊಂಡು ಕವನಗಳನ್ನು ಬರೆಯತೊಡಗಿದರು. 'ಪ್ರಕಾಶ ಜ್ಯೋತಿ, ಹೂ ಬಾಡಿದಾಗ, ಭ್ರಮೆ, ಅನ್ವೇಷಣೆ, ಒಲವಿನ ಚಿತ್ತಾರಗಳು, ಪಾರಿಜಾತ, ಗೀತ ಮಾನಸ, ಭಕ್ತಿ ಕುಸುಮಾಂಜಲಿ, ಮನಃಸಾಕ್ಷಿ, ಕಾವ್ಯ ಚಿತ್ರಾಂಜಲಿ, ಚಿಂತನ ಮಂದಾರ, ಇಂಚರ, ಶ್ರಾವಣಿ, ಆಶಾಕಿರಣ ಮೊದಲಾದ ೨೪ಕ್ಕಿಂತ ಹೆಚ್ಚು ಕೃತಿಗಳನ್ನು ಕನ್ನಡ ಸಾಹಿತ್ಯಕ್ಷೇತ್ರಕ್ಕೆ ನೀಡಿದ್ದಾರೆ.

೧೯೭೪ರಿಂದಲೇ ಆರಂಭವಾಗಿರುವ ಅವರ ಸಾಹಿತ್ಯ ರಚನೆ ಇನ್ನೂ ದಾಪುಗಾಲಿರಿಸುತ್ತಾ ಸಾಗಿದೆ. ಜಿಲ್ಲೆ, ರಾಜ್ಯಮಟ್ಟದ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ. ಹಲವು ಕನ್ನಡ ಪರ ಸಂಘಟನೆಗಳಲ್ಲಿ ಪದಾಧಿಕಾರಿಗಳಾಗಿ ಸೇವೆ ಮಾಡಿದ್ದಾರೆ. ಸ್ವತಃ ದೇಶಪಾಂಡೆ ಪ್ರತಿಷ್ಠಾನವನ್ನು ಸಂಸ್ಥಾಪಿಸಕೊಂಡು ಅದರ ಅಧ್ಯಕ್ಷರಾಗಿದ್ದುಕೊಂಡು

ನೂರಾರು ಸಾಹಿತಿ, ಕಲಾವಿದರಿಗೆ ಗುರುತಿಸಿ ಪ್ರಶಸ್ತಿ ನೀಡಿ ಶುಭ ಹಾರೈಸಿದ್ದಾರೆ. ಎಲ್ಲರನ್ನು ಪ್ರೀತಿಸುವ ಗುಣವಿರುವ ಎಂ.ಜಿ. ದೇಶಪಾಮಡೆಯವರು ೨೦೧೦ರಲ್ಲಿ **'ವಚನ ಚಂದ್ರಿಕೆ'** ಎಂಬ ಕೃತಿಯನ್ನು ಹೊರತರುವ ಮೂಲಕ ಆಧುನಿಕ ವಚನಕಾರರಾಗಿಯೂ ಹೊರಹೊಮ್ಮಿರುವುದು ಜಿಲ್ಲೆಗೆ ಒಂದು ಶ್ರೇಯಸ್ಸು ಎನ್ನಬಹುದು.

ಕಥೆ, ನಾಟಕ, ಪ್ರಬಂಧ, ಕಾದಂಬರಿ ಸಂಪಾದನೆ, ಕಾವ್ಯ ರಚನಾಕಾರರಾಗಿ, ಅನುವಾದಕರಾಗಿ ಹೆಸಸರುವಾಸಿಯಾಗಿರುವ ಮಾಣಿಕರಾವ ಅವರು ಬಹುಮುಖ ಪ್ರತಿಭೆಯ ಲೇಖಕರಾಗಿದ್ದಾರೆ. 'ಕನ್ನಡಾಂಬೆ' 'ಖ್ಯಾತಿ' ಮುಂತಾದ ಪತ್ರಿಕೆಗಳನ್ನು ಪ್ರಾರಂಭಿಸಿದ್ದಲ್ಲದೆ, ನಾಡಿನ ಪ್ರಮುಖ ಪತ್ರಿಕೆಗಳಾದ ವಿಕ್ರಮ, ತರಂಗ, ಪಂಚಾಮೃತ, ತುಷಾರ, ಮಲ್ಲಿಗೆ, ಸಂಯುಕ್ತ ಕರ್ನಾಟಕ, ಮಯೂರ, ಸಂಕ್ರಮಣ ಮೊದಲಾದ ಪತ್ರಿಕೆಗಳಿಗೆ ಕವನ, ಲೇಖನ ಕಳಿಸಿ ಪ್ರಕಟಿಸಿದ್ದಾರೆ. ನೂರಾರು ಸಭೆ, ಸಮಾರಂಭಗಳಲ್ಲಿ ಅತಿಥಿಗಳಾಗಿ, ಉಪನ್ಯಾಸಕರಾಗಿ

ಭಾಗವಹಿಸಿದ್ದಾರೆ. ಬಾಪು ಪ್ರಶಸ್ತಿ, ಸಂಕ್ರಮಣ ಪ್ರಶಸ್ತಿ, ಜಿಲ್ಲಾ ಮಟ್ಟದ ರಾಜ್ಯೋತ್ಸವ ಪ್ರಶಸ್ತಿ ಪಡೆದಿದ್ದಾರೆ. 'ಮಾಣಿಕ್ಯ ವಿಠ್ಠಲ' ಅಂಕಿತನಾಮದಲ್ಲಿ ಆಧುನಿಕ ವಚನಗಳನ್ನು ರಚಿಸಿದ್ದಾರೆ.

ಇವರ ವಚನ ಚಂದ್ರಿಕೆಯಲ್ಲಿ ಒಟ್ಟು ೧೯೮ ಆಧುನಿಕ ವಚನಗಳಿವೆ. ಬೀದರ ನೆಲ ಬಸವಾದಿ ಶರಣರ ವಚನಗಳಿಂದ ಕರ್ನಾಟಕದ ಇತಿಹಾಸಕ್ಕೆ ಹೊಸ ಭಾಷ್ಯ ಬರೆಯಿತು. ಅದರ ಪ್ರಭಾವಕ್ಕೊಳಗಾಗದ ಕವಿ, ಲೇಖಕ, ಕಥೆಗಾರರು ಈ ಪ್ರದೇಶದಲಿಲ್ಲ. ಅದಕ್ಕೆ ಎಂ.ಜಿ. ದೇಶಪಾಂಡೆಯವರೂ ಹೊರತಾಗಿಲ್ಲವೆನ್ನಬಹುದು. ಆ ಶರಣರ ಅನುಭವದ ನುಡಿಗಳು ಚೈತನ್ಯಗಂಗೆ, ಅಮೃತಮಯ ಚಿಲುಮೆಯಾಗಿವೆ. ಆ ನಿಮಿತ್ತವಾಗಿ ಈ ನೆಲದಲ್ಲಿ ಮತ್ತೊಮ್ಮೆ ವಚನ ಗಂಗೆ ಉಕ್ಕಲು ಕಾರಣವಾಗಿದೆ ಎನ್ನುವ ದೇಶಪಾಂಡೆಯವರು ತಾವೂ ಅದರಿಂದ ಪ್ರಭಾವಿತರಾಗಿ ವಚನ ರಚಿಸಿದ್ದಾಗಿ ಹೇಳಿದ್ದಾರೆ.[೩೨]

'ಮಾಣಿಕ್ಯ ವಿಠ್ಠಲ' ತಮ್ಮ ದೈವದ ಮೇಲಿನ ನಂಬಿಕೆಯಿಂದ ಹಾಗೂ ಆ ಕೃಪೆಯಿಂದ ವಚನಾಂಕಿತ ದೊರೆತು ಈ ನೆಲೆಯಲ್ಲಿ ಹೆಚ್ಚಿನ ವಚನಗಳನ್ನು ಬರೆಯಲು ಸಾಧ್ಯವಾಯಿತು, ಎನ್ನುತ್ತಾರೆ. ಇಲ್ಲಿ ನಿತ್ಯ ಬದುಕಿನ ಮೌಲ್ಯಗಳನ್ನಾಧರಿಸಿ ಶೋಷಣೆ, ಸತ್ಯ, ನಡೆ–ನುಡಿ ಮುಂತಾದ ವಿಷಯಗಳ ಕುರಿತಂತೆ ಇಲ್ಲಿ ವಚನಗಳಿವೆ.

ಸರಳವಾಗಿ, ಆಡು ಮಾತಿನಲ್ಲಿ, ಓದುಗರಿಗೆ ಅತಿ ಸಹಜವಾಗಿ ಅರ್ಥವಾಗುವಂತೆ ಹಾಗೂ ತಮ್ಮ ಸಂದೇಶಗಳನ್ನು ಅವರು ತಿಳಿದುಕೊಳ್ಳುವಂತೆ ವಚನಗಳನ್ನು ರಚಿಸಿರುವ ದೇಶಪಾಂಡೆಯವರು ಬೀದರ ಜಿಲ್ಲೆಯ ಆಧುನಿಕ ವಚನ ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ ಎನ್ನಬಹುದು.

**೩.೧೪ ಬಸವರಾಜ ಹದನೂರ ಜನವಾಡಕರ ಅವರ**

**ಗಿರಿ ಸಿದ್ಧಲಿಂಗನ ಪರಮಾನಂದದ ಪಂಚಪದಿಗಳು (೨೦೧೧)**

'ಗಿರಿಸಿದ್ಧಲಿಂಗನ ಪರಮಾನಂದದ ಪಂಚಪದಿಗಳು' ಎಂಬ ಪುಸ್ತಕದ ಕರ್ತೃ ಬಸವರಾಜ ಅಡಿವೆಪ್ಪ ಹದನೂರವರು. ಜಹಿರಾಬಾದ ತಾಲೂಕಿನ ಹದನೂರು ಎಂಬ ಊರು ಬಿಟ್ಟು ಅವರ ಪೂರ್ವಜರು ಬೀದರ ಜಿಲ್ಲೆಯ ಜನವಾಡಕ್ಕೆ ಬಂದು ನೆಲೆಸಿದ ಕಾರಣ ಇವರ ಅಡ್ಡಹೆಸರು. 'ಹದನೂರ' ಎಂಬುದಾಗಿದೆ. ಕಡುಬಡತನದಲ್ಲಿ ಬೆಳೆದ ಬಸವರಾಜ ಅವರು ೧೯೫೫ರಲ್ಲಿ ಬೀದರನಲ್ಲಿ ಎಂ.ಪಿ.ಎಚ್.ಎಸ್.ಸಿ. ಪಾಸಾದರು. ಮುಂದೆ ಬಿ.ಎ. ಪರಿಕ್ಷೆಯಲ್ಲಿ ಫೇಲಾದ್ದರಿಂದ ವಿದ್ಯಭ್ಯಾಸಕ್ಕೆ ಶರಣು ಹೊಡೆದು ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಸೇವೆ ಸಲ್ಲಿಸಿ, ಚಂದಾಪುರ ಶಾಲೆಯಲ್ಲಿಯೇ ನಿವೃತ್ತರಾದರು.

ಕನ್ನಡ, ಹಿಂದಿ, ಮರಾಠಿ ಹಾಗೂ ಇಂಗ್ಲೀಷ ಭಾಷೆಗಳ ಸಂಪರ್ಕವುಳ್ಳ ಬಸವರಾಜ ಅವರು, ಕನ್ನಡ ಹಾಗೂ ಮರಾಠಿ ಭಾಷೆಯಲ್ಲಿ ಸಾಧನೆಯನ್ನು ಹೆಚ್ಚಾಗಿ ಮಾಡಿದ್ದಾರೆ. "ಭಾಲ್ಕಿ ತಾಲೂಕಿನ ನಾವದಗಿ ಗ್ರಾಮದ ಪೂಜ್ಯ ರೇವಪ್ಪಯ್ಯನವರನ್ನು ಕುರಿತು ಬ್ರಹ್ಮಚರಿತ್ರೆಯನ್ನು ರಚಿಸಿದ್ದಾರೆ." ಸಾನೆ ಗುರೂಜಿಯವರ 'ಶಾಮಚಿ ಆಯಿ' ಮರಾಠಿ ಪುಸ್ತಕ ಓದಿದ ಮೇಲೆ, ಅವರಿಗೆ ಮರಾಠಿ ಭಾಷೆಯ ಸಾಹಿತ್ಯದ ರುಚಿ ಹೆಚ್ಚಾಯಿತು. ಆಗ ಅವರು ಮರಾಠಿಯಲ್ಲಿ ಸಾಹಿತ್ಯ ರಚಿಸಲು ತೊಡಗಿದರು. ಮರಾಠಿಯಲ್ಲಿ ಸುಮಾರು ೮೦೦ ಅಭಂಗಗಳನ್ನು ರಚಿಸಿದರು. 'ಅಸ್ಮಿತಾ' ಎಂಬ ಸ್ಥಳಿಯ ಮರಾಠಿ ಪತ್ರಿಕೆಯಲ್ಲಿ ಅವರ ಮರಾಠಿ ಕವನಗಳು ಪ್ರಕಟಗೊಂಡಿವೆ.[೩೩]

ಇಂಗ್ಲೀಷಿನಲ್ಲಿ ಕವನ ರಚಿಸಿದ್ದಾರೆ. ಹಿಂದಿಯಿಂದ ಪ್ರೇಮಚಂದರ 'ಗೋರಾ' ಕಾದಂಬರಿ, ರಹೀಂ, ಮೀರಾ ಹಾಗೂ ಕಬೀರರ ಅನೇಕ ಕವನಗಳನ್ನು ಓದಿ ಹಿಂದಿಯಲ್ಲಿ ಕವನಗಳನ್ನು ರಚಿಸಿದ್ದಾರೆ. ಹಾಗೆಯೇ ಕನ್ನಡದ ಅತ್ಯುತ್ತಮ ಆಧುನಿಕ ವಚನಕಾರರಾಗಿಯೂ ಜಿಲ್ಲೆಯಲ್ಲಿ ಗಮನ ಸೆಳೆದಿರುವ ಸಾಹಿತಿ ಎನಿಸಿದ್ದಾರೆ.

ಪಂಚ (ಐದು) ಪಾದಗಳಿಂದ ಕೂಡಿರುವ ಬಸವರಾಜ 'ಗಿರಿಸಿದ್ಧಲಿಂಗನ ಪಂಚಪದಿಗಳು' (ಆಧುನಿಕ ವಚನಗಳು) ಮೊದಲು ಬೀದರನ ವಚನ ಕ್ರಾಂತಿ ದಿನ ಪತ್ರಿಕೆಯಲ್ಲಿ ಧಾರಾವಾಹಿಯಂತೆ ಪ್ರಕಟವಾದವು. ಸುಮಾರು ೧೫೦೦ಕ್ಕಿಂತ ಹೆಚ್ಚಿನ ಇಂಥ ವಚನಗಳನ್ನು ರಚಿಸಿರುವ ಬಸವರಾಜ ಅವರು ಮೊದಲ ಬಾರಿಗೆ ೨೦೧೦ರಲ್ಲಿ ಅವುಗಳಲ್ಲಿಯ ೫೦೦ ವಚನಗಳನ್ನು ಆರಿಸಿಕೊಂಡು 'ಪಂಚಪದಿಗಳು' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ.

ಐದು ಸಾಲಿನ ಇಲ್ಲಿಯ ವಚನಗಳು 'ಗಿರಿಸಿದ್ಧಲಿಂಗ' ಎಂಬ ಅಂಕಿತನಾಮದಲ್ಲಿ ರಚಿತವಾಗಿದ್ದು, ಹನ್ನೆರಡನೆಯ ಶತಮಾನದ ಶರಣರ ವಚನಗಳಿಂದ ಪ್ರಭಾವಿತಗೊಂಡಿರುವುದನ್ನು ಗಮನಿಸಬಹುದು.

ಜೀವನವನ್ನು ವಿಶಾಲ ದೃಷ್ಟಿಯಿಂದ ನೋಡುತ್ತಿರುವ ಈ ವಚನಕಾರರಿಗೆ ಲೌಕಿಕ ಹಾಗೂ ಅಲೌಕಿಕ ಜ್ಞಾನ ಪರಂಪರೆಯ ತಿಳುವಳಿಕೆಯಿದೆ. ಬಹುಮುಖಿ ಪ್ರತಿಭಾವಂತರಾದ ಇವರು ತಮ್ಮ ವಚನಗಳಲ್ಲಿ ವೃದ್ಧತನ, ಆಧ್ಯಾತ್ಮಿಕ ಅನುಸಂಧಾನ, ಶೂನ್ಯ, ನಿಶೂನ್ಯ ಕುರಿತ ಚಿಂತನೆ, ಹಲವು ಕಾಯಕ ಹಾಗೂ ವೃತ್ತಿಗಳ ಪರಿಚಯ ಹೊಂದಿದ್ದಾರೆ. ಆ ಅನುಭವಗಳನ್ನು ಆದಿ ಪ್ರಾಸ, ಅಂತ್ಯ ಪ್ರಾಸ, ಮಧ್ಯ ಪ್ರಾಸಗಳಲ್ಲಿ ಕಟ್ಟಿ, ವಚನ ಮಾಧುರ್ಯದ ನಾದದಲ್ಲಿ ಅವುಗಳನ್ನು ದುಡಿಸಿ, ಉಪಮೆ, ರೂಪಕ, ಸದೃಶ್ಯಗಳಲ್ಲಿ ಓದುಗರ ಮುಂದೆ ಇರಿಸಿದ್ದಾರೆ. ಜಿಲ್ಲೆಯ ಪ್ರತಿಭಾವಂತ ಆಧುನಿಕ ವಚನಕಾರರೆನಿಸಿದ್ದಾರೆ.

**೩.೧೫ ಶ್ರೀಮತಿ ಮಹೇಶ್ವರಿ ಹೇಡೆಯವರ 'ಭಾವ ಬಯಲಾದಾಗ' (೨೦೧೨)**



ಬೀದರ ಜಿಲ್ಲೆಯ ಔರಾದ ತಾಲೂಕಿನ ಸಂತಪುರ ಮಹೇಶ್ವರಿ ಹೇಡೆಯವರ ಊರು, ಚಿಕ್ಕವಳಿದ್ದಾಗಲೇ ತಂದೆಯನ್ನು ಕಳೆದುಕೊಂಡ ಮಹೇಶ್ವರಿ ಅವರ ತಾತ ವೀರಶೆಟ್ಟಿ ಪಾಟೀಲರ ಪ್ರೀತಿಯಲ್ಲಿ ಬೆಳೆದಳು. ತಾಯಿ ಮಹಾದೇವಿ ಪಾಟೀಲ ತಂದೆ ರಾಜೇಂದ್ರ ಪಾಟೀಲರು. ಅವಳು ಜಿಲ್ಲೆಯಲ್ಲಿಯೇ ಬಿ.ಎ. ಪದವೀಧರಳಾಗಿ, ಶಿವಲಿಂಗ ಹೇಡೆಯವರ ಕೈಹಿಡಿದಳು "೨೦೦೭ರಲ್ಲಿಯೇ 'ಕನಸುಗಳೆಷ್ಟಿದ್ದರೇನು...?' ಎಂಬ ಕವನ ಸಂಕಲನದ ಮೂಲಕ ಸಾಹಿತ್ಯ ಲೋಕವನ್ನು ಪ್ರವೇಶ ಮಾಡಿರುವ ಮಹೇಶ್ವರಿ ಎಸ್. ಹೇಡೆಯವರು ೨೦೧೨ರಲ್ಲಿ 'ಭಾವ ಬಯಲಾದಾಗ' ಎಂಬ ಮುಕ್ತಕ ರೂಪದ ಆಧುನಿಕ ವಚನ ರಚನೆಗಳನ್ನು ಬರೆದಿದ್ದಾರೆ.[೩೪]

ಮೃದು ಸ್ವಭಾವದ ಸರಳ ವ್ಯಕ್ತಿತ್ವದ ವಿದ್ಯಾರ್ಥಿ ಜೀವನದಿಂದಲೇ ಓದುವ ಗೀಳು ಹಚ್ಚಿಕೊಂಡಿರುವ ಮಹೇಶ್ವರಿ ಅವಿಭಕ್ತ ಕುಟುಂಬದಲ್ಲಿ ಬೆಳೆದವಳು. ಅತ್ತೆ, ಮಾವ, ಭಾವ, ನಾದಿನಿ, ಗಂಡ, ತಮ್ಮಂದಿರು, ಅತ್ತಿಗೆ, ತಾತ ಮೊದಲಾದವರ ಪ್ರೀತಿಯಲ್ಲಿ ಪ್ರತಿಭೆಯನ್ನು ಅರಳಿಸಿಕೊಂಡವಳು. ಸಹೃದಯದ ಮಹೇಶ್ವರಿಗೆ ಶರಣರ ವಚನಗಳೆಂದರೆ ಅಚ್ಚುಮೆಚ್ಚು. ಅವುಗಳನ್ನು ಆಳವಾಗಿ ಅಧ್ಯಾಯನ ಮಾಡಲು ಪ್ರಯತ್ನಿಸಿದ್ದಾಳೆ. ಅನುಭವ ಮತ್ತು ಅನುಭಾವಗಳ ಸುಮಧುರ ಸಂಯೋಗದಿಂದ ಶಿವಶರಣರ ವಚನಗಳು ಜನ್ಮ ತಳೆದಿವೆ ಎಂಬುದನ್ನು ಅರಿತಿದ್ದಾಳೆ. ತನ್ನ ಆಧುನಿಕ ವಚನ ರಚನೆಗಳ ಹಿಂದೆ ಈ ಎಲ್ಲ ವಿಶೇಷವಾಗಿ ಶಿವಶರಣರ ವಚನಗಳ ಸ್ಫೂರ್ತಿ ಇರುವುದನ್ನು ಹೇಳಿಕೊಂಡಿದ್ದಾಳೆ.

'ಈಶ್ವರೀ ಪ್ರಿಯ ಶಿವಲಿಂಗ' ಅಂಕಿತದಲ್ಲಿ ಬರೆದ ೮೨ ವಚನಗಳು 'ಭಾವ ಬಯಲಾದಾಗ; ಕೃತಿಯಲ್ಲಿವೆ. ಬಸವಾದಿ ಶರಣರ ತಾತ್ವಿಕ ನಿಲುವನ್ನು ಅರ್ಥೈಸಿಕೊಂಡಿರುವ ಮಹೇಶ್ವರಿಗೆ ಅವರ ಆಧುನಿಕ ವಚನಗಳ ಮೇಲೆ ಸಹಜವಗಿಯೇ ವಚನಕಾರರ ದಟ್ಟವಾದ ಪ್ರಭಾವವಾಗಿರುವುದನ್ನು ಗುರುತಿಸಬಹುದು.

ಒಟ್ಟಿನಲ್ಲಿ ವಚನಕಾರ್ತಿ ಹೇಳಿರುವಂತೆ "ವಚನಗಳು ಅನುಭಾವದ ಗಣಿಗಳೆಂತೋ, ಸಾಹಿತ್ಯದ ಒಂದು ಪ್ರಕಾರವೂ ಹೌದು. ಇಲ್ಲಿ ಸಾಹಿತ್ಯ ಒಂದು ಪ್ರಕಾರವಾಗಿಯೇ ಅದನ್ನು ನನ್ನಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸಿದ್ದೇನೆ. ವಚನ ರಚನೆ ಅತ್ಯಂತ ಸರಳವಾಗಿದ್ದು, ಗದ್ಯದ ಭಾವ, ಪದ್ಯದ ಲಯ ಒಳಗೊಂಡಿದ್ದು ಸುಲಭವಾಗಿ ಎಲ್ಲರನ್ನೂ ಸೆಳೆಯುತ್ತದೆ. ಎಲ್ಲರಿಗೂ ಅರ್ಥವಾಗುತ್ತದೆ. ಬದುಕು ಯಾಂತ್ರಿಕಗೊಳ್ಳುತ್ತಿರುವ ಇಂದಿನ ದಿನಗಳಲ್ಲಿ ಆಧ್ಯಾತ್ಮಿಕ ಮತ್ತು ಮೌಲ್ಯ ಶಿಕ್ಷಣ ಅತ್ಯಂತ ಅವಶ್ಯವಾಗಿದ್ದು, ಶರಣರ ವಚನಗಳು ಎಲ್ಲರಿಗೂ ತಲುಪಬೇಕಾಗಿದೆ. ಅದರ ಜೊತೆಗೆ ಇಂದಿನ ಕಾಲಮಾನಕ್ಕೆ ತಕ್ಕಂತೆ ಮೌಲ್ಯಗಳನ್ನು ನಿರೂಪಿಸಬೇಕಾಗಿದೆ. ಇಂದಿನ ಪರಿಸ್ಥಿತಿಗೆ, ವ್ಯವಸ್ಥೆಗೆ ಸ್ಪಂದಿಸಿದ ನನ್ನ ಮನ, ತನ್ನಲ್ಲುಂಟಾದ ತಲ್ಲಣಗಳನ್ನು ಹೊರಹಾಕಿದೆ. ಇದಕ್ಕೆ ನಾನು ಬಳಸಿದ ಅಭಿವ್ಯಕ್ತಿ ಮಾಧ್ಯಮವೇ ಈ ವಚನಗಳು. ನಾನು ಬರೆದಿರುವುದು ಶಿವಶರಣರಿಗೆ ಸಮಾನವಾದ ವಚನ ರಚನೆ ಎಂಬ ಧಾರ್ಷ್ಟತೆ ತೋರಲಾರೆ. ನನ್ನ ಭಾವ ಮತ್ತೊಬ್ಬರಿಗೆ ಸರಳವಾಗಿ ಮುಟ್ಟಿದರೆ ಸಾಕೆಂಬ ತುಡಿತ"[೩೫] ಇಲ್ಲಿದೆ ಎಂದಿರುವುದನ್ನು ಮನಗಾಣಬಹುದು.

**೩.೧೬ ಶಾಂತಲಿಂಗ ಸ್ವಾಮಿಯವರ "ವಚನಾಮೃತ" (೨೦೧೨)**

ಕಲ್ಯಾಣ ನಾಡಾದ ಬೀದರ ಜಿಲ್ಲೆಯಲ್ಲಿ ಆಗಿ ಹೋದ ಆಧುನಿಕ ವಚನಕಾರರಲ್ಲಿ ಲಿಂಗೈಕ್ಯ ಶಾಂತಲಿಂಗ ಸ್ವಾಮಿಗಳು ಒಬ್ಬರು. ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಸಾಹಿತಿಗಳಲ್ಲಿ ಒಬ್ಬರೆನಿಸಿರುವ ಇವರು ಸು. ೧೮ ಕೃತಿಗಳನ್ನು ರಚಿಸಿರುವುದಾಗಿ ತಿಳಿಯುತ್ತದೆ. 'ವೀರಸಂಗಯ್ಯನ ಭಜನೆಗಳು' 'ಮೊದಲು ಮಾನವನಾಗು' 'ಆರೋಗ್ಯ ಪ್ರಕಾಶ' 'ನೀವು ಒಂದಾಗಿರಿ' 'ಅಮೃತ ಹನಿಗಳು' 'ಅಮೃತವಾಣಿ' 'ಭಕ್ತಿ ಗೀತೆಗಳು' 'ಹೊಸ ಬೆಳಕು' 'ಒಂದು ಕಿವಿಮಾತು' 'ಜ್ಞಾನ ಪ್ರಸಾದ, 'ನನ್ನ ಚಿಂತನೆಗಳು' 'ಸಾಧನೆಯ ಗುರು' 'ಮಾನವತೆಯ ಮೌಲ್ಯ' ಮೊದಲಾದವುಗಳು ಅವರ ಪ್ರಕಟಿತ ಕೃತಿಗಳು.

ಶ್ರೀ ಶಾಂತಲಿಂಗೇಶ್ವರಾ ಅಂಕಿತದಲ್ಲಿ ಇವರು ೨೫೯೧ ಆಧುನಿಕ ವಚನಗಳನ್ನು ರಚಿಸಿದ್ದು ಅವು ೨೦೧೨ರಲ್ಲಿ 'ವಚನಾಮೃತ'ದ ಹೆಸರಿನಲ್ಲಿ ಕನ್ನಡಾಂಬೆ ಪ್ರಕಾಶನ ಬೀದರದಿಂದ ಪ್ರಕಟವಾಗಿವೆ. ೧೯೪೨ರಲ್ಲಿ ಹುಮನಾಬಾದ ತಾಲೂಕಿನ ಬೆಳಕೇರಿ ಗ್ರಾಮದಲ್ಲಿ ಜನಿದಿರುವ 'ಶಾಂತಲಿಂಗ'ರು ೧೯೫೩ ರಂದು ಬೀದರಗೆ ಆಗಮಿಸಿ ಲಾಡಗೇರಿಯಲ್ಲಿ ಉಳಿದರು. ನಂತರ ೧೯೬೨ರಲ್ಲಿ ಮೇಹಕರ ರಾಚೋಟೇಶ್ವರರ ಆದೇಶದಂತೆ ಆಳಂದ ತಾಲೂಕಿನ ವಿ.ಕೆ. ಸಲಗರದ ಸಾಂಬ ಸ್ವಾಮಿ ಮಠದ ಶ್ರೀ ಬಸವೇಶ್ವರ ಮಂದಿರಕ್ಕೆ ತೆರಳಿದರು. ಅಲ್ಲಿ ಧ್ಯಾನ, ತಪಸ್ಸನ್ನಾಚರಿಸಿ, ಪದ್ಯ, ಅಮೃತ ಹನಿಗಳನ್ನು ಬರೆಯಲಾರಂಭಿಸಿದ್ದಾಗಿ ತಿಳಿಯುತ್ತದೆ.[೩೬]

೧೬-೦೫-೧೯೬೭ರಲ್ಲಿ ಬೀದರನ ಸುಭದ್ರಾದೇವಿಯೊಂದಿಗೆ ಮದುವೆಯಾಗಿ ಕೆಲಕಾಲ ಬೀದರನಲ್ಲಿಯೇ ನೆಲೆಯಾಗಿ ನಿಂತರು. ಸಂಸಾರದ ಒತ್ತಡದಲ್ಲಿದ್ದಾಗಲೂ ಆಧ್ಯಾತ್ಮಿಕ ತುಡಿತದಿಂದಾಗಿ, ಬೀದರನ ಹೊರವಲಯದಲ್ಲಿರುವ ಕೋಟೆಯಲ್ಲಿನ 'ವೀರಸಂಗಯ್ಯನ ಗುಡಿಗೆ ಆಗಾಗ ಹೋಗಿ ಬರುತ್ತಿದ್ದರು. ಆಗ ಅವರು ಬಸವಣ್ಣನವರ ವಚನಗಳು, ವಿವೇಕಾನಂದರ 'ವಿವೇಕವಾಣಿ' ಶ್ರೀ ರಾಮಕೃಷ್ಣರ 'ಉಪದೇಶಾಮೃತ' ಸರ್ವಜ್ಞನ ವಚನಗಳನ್ನು ಓದುತ್ತ ಬಂದು ಅವುಗಳ ಪ್ರಭಾವಕ್ಕೊಳಗಾದರು. ಆಗಿನಿಂದ ನಂತರ ಅವಧಿಯಲ್ಲಿ ಅವರ ಲೇಖನಿಯಿಂದ ಹಲವು ಕೃತಿಗಳು ಮೂಡಿಬಂದವು.

ನಾಟಕ, ಭಜನೆ ಪದ, ತತ್ವಪದ, ಜಾನಪದ ಗೀತೆ, ನಾಮಾವಳಿ, ಸ್ತೋತ್ರಗಳು ವಿಭಾಗದಲ್ಲಿ ಕೃಷಿಗೈದಿರುವ ಇವರ ಪ್ರಮುಖ ಸಾಹಿತ್ಯವೆಂದರೆ 'ಆಧುನಿಕ ವಚನಗಳು' ೨೦೧೨ರಲ್ಲಿ 'ಶಾಂತಲಿಂಗ' ಸ್ವಾಮಿಗಳು

ಲಿಂಗೈಕ್ಯರಾದ ಮೇಲೆ, ವಿದ್ಯಾದೇವಿ ಎಸ್. ಹಿರೇಮಠ ಅವರು ಇವರ ವಚನಗಳನ್ನು 'ವಚನಾಮೃತ'ದ ಹೆಸರಿನಲ್ಲಿ ಸಂಪಾದಿಸಿಕೊಟ್ಟಿದ್ದಾರೆ. ಈ ಮೊದಲು ೨೦೦೬ ಮತ್ತು ೨೦೦೭ರಲ್ಲಿ ಬೀದರನ ಶಾರದಾ ಬುಕ್ ಡೀಪೋದವರು ಶಾಂತಲಿಂಗ ಸ್ವಾಮಿಗಳ ಆಧುನಿಕ ವಚನಗಳ ಎರಡು ಕಿರುಹೊತ್ತಿಗೆಯನ್ನು ತರುವ ಮೂಲಕ ಇವರೊಬ್ಬ ಬೀದರನ ಆಧುನಿಕ ವಚನಕಾರರೆಂದು ಪರಿಚಯಿಸಿಕೊಟ್ಟಿದ್ದಾರೆ.[೩೭] ಶಾಂತಲಿಂಗ ಸ್ವಾಮಿಗಳು ಬೀದರ ಜಿಲ್ಲೆಯ ಶ್ರೇಷ್ಠ ಆಧುನಿಕ ವಚನಕಾರರೆಂಬುದನ್ನು ಇಲ್ಲಿ ಗಮನಿಸಬಹುದು.

'ವಚನಾಮೃತ' ೨೫೯೧ ಆಧುನಿಕ ವಚನಗಳ ಸಂಕಲನ. ಭಕ್ತಿ, ಧ್ಯಾನ ಮತ್ತು ಆಧ್ಯಾತ್ಮ ಜೀವನದ ಭಾವಗಳನ್ನು ಪ್ರಕಟಿಸುವ ಇಲ್ಲಿನ ವಚನಗಳು ಪೂರ್ಣ ಗದ್ಯಸ್ವರೂಪದಂತೆಯೇ ತೋರುತ್ತವೆ. ಕೆಲವು ಸಣ್ಣ ಸಣ್ಣ ಸಾಲುಗಳ ಅಭಿವ್ಯಕ್ತಿಗಳಾಗಿದ್ದರೆ. ಹಲವು ದೀರ್ಘ ವಚನಗಳಾಗಿವೆ. "ಆಧುನಿಕ ವಚನಕಾರರು ೧೨ನೇಯ ಶತಮಾನ ವಚನಕಾರರಂತೆ ಶರಣರಲ್ಲ ಇವರು ಕೇವಲ ವಚನ ರಚನೆಕಾರರು. ನಡೆನುಡಿಯೊಂದಾಗಿಸಿಕೊಂಡು ಇಂದಿನ ಸಾಹಿತ್ಯ ಮೂಡಿ ಬರುತ್ತಿಲ್ಲ..... ಎನ್ನುವ ಹೇಳಿಕೆಗಳೆಲ್ಲವನ್ನು"[೩೮] ಮೆಟ್ಟಿ ನಿಂತು ಬರೆದ ಶಾಂತಲಿಂಗರು ಅಪ್ಪಟ ಶರಣ ಜೀವಿಗಳಾಗಿದ್ದಾರೆ. ಅವರ ಬದುಕು-ಬರಹ ಒಂದೇ ಮೌಲ್ಯಿಕತೆ ಪಡೆದಿದೆ.

**೩.೧೭ ಸೋಮನಾಥ ಯಾಳವಾರರ "ಆನು ಒಲಿದಂತೆ ಹಾಡುವೆ" (೨೦೧೩)**

ಸರಳತೆ ಸದುವಿನಯದ ಖಣೀಯಾಗಿರುವ ಬಹುಮುಖ ಪ್ರತಿಭೆಯುಳ್ಳ ಡಾ. ಸೋಮನಾಥ ಯಾಳವಾರ ಹೈದ್ರಾಬಾದ ಕರ್ನಾಟಕದ ಮಹತ್ವದ ಲೇಖಕರು. ಹೊಸಗನ್ನಡ ಸಾಹಿತ್ಯದ ಪ್ರಯೋಗಶೀಲತೆಗಳಿಂದ ಒಡ್ಡಿಕೊಂಡ ಇವರು ಕಾವ್ಯ, ವಿಮರ್ಶೆ ಸಂಪಾದನೆ, ಸಂಶೋಧನೆ ಕ್ಷೇತ್ರದಲ್ಲಿ ಹೆಸರಾದವರು. ಅವರು ಮನದೆರೆದು ಮಾತನಾಡಿದರೆ ಲಿಂಗವ ಕಾಣುವಂತೆ ವ್ಯಕ್ತಿತ್ವವನ್ನು ಬೆಳಗಿಸಿಕೊಂಡು ಎಲ್ಲರೊಂದಿಗೆ ಬೆರೆಯುವ, ಎಲ್ಲರನ್ನೂ ಪ್ರೀತಿಸುವ ಸಹಜ ಸ್ವಭಾವದಿಂದಾಗಿ ಅಜಾತ ಶತ್ರುವಾಗಿರುವರು. ಬಹುಜನ ವಿದ್ಯಾರ್ಥಿಗಳ ಪ್ರೀತಿಗೆ ಪಾತ್ರರಾಗಿರುವುದರೊಂದಿಗೆ ಉತ್ತಮ ವಾಗ್ಮಿಯಾಗಿ ಮತ್ತು ಭಾಷಣಕಾರರಾಗಿಯೂ ಪ್ರಸಿದ್ಧರಾಗಿದ್ದಾರೆ. ಅವರ ಅಧ್ಯಯನದ ಆಸಕ್ತಿ ಕ್ಷೇತ್ರ 'ವಚನ ಸಾಹಿತ್ಯ' ಆಗಿರುವುದರಿಂದ ಸಹಜವಾಗಿಯೇ ವೈಚಾರಿಕತೆ ವೈಜ್ಞಾನಿಕ ವಿಚಾರಗಳನ್ನು ಮೈಗೂಡಿಸಿಕೊಂಡು ಮೌಢ್ಯತೆ, ಅಜ್ಞಾನ, ಕಂದಾಚಾರಗಳ ವಿರುದ್ಧ ಬಂಡೇಳುವುದು ಅವರ ಒಟ್ಟು ಬದುಕುಬರಹದ ನಿಲುವಾಗಿದೆ.[೩೯]

ಇವರ ಜನ್ಮ ಭೂಮಿ ವಿಜಯಪುರ ಜಿಲ್ಲೆಯ ಆಲಮಟ್ಟಿಯಾಗಿದ್ದೂ, ಅವರ ಕಾಯಕಕ್ಷೇತ್ರ ಬೀದರ ಜಿಲ್ಲೆಯ ಹುಮನಾಬಾದ ಆಗಿದೆ. ೦೧-೦೫-೧೯೫೩ರಲ್ಲಿ ಜನಿಸಿರುವ ಇವರು ೧೯೭೬ರಲ್ಲಿ ಎಂ.ಎ. ಕನ್ನಡ ಪದವಿಯನ್ನು, ಭಾಷಾಶಾಸ್ತ್ರದಲ್ಲಿ ಡಿಪ್ಲೋಮಾ ಪದವಿಯನ್ನು ಕರ್ನಾಟಕ ವಿಶ್ವವಿದ್ಯಾಲಯದಿಂದ ಗಳಿಸಿದರು. ೦೧-೦೮-೧೯೭೭ ರಿಂದ ಹುಮನಾಬಾದನ ಶ್ರೀ ಬಸವತೀರ್ಥ ಚನ್ನಬಸವ ಸ್ವಾಮಿ ಕಲಾ, ಶ್ರೀ ವೀರಭದ್ರೇಶ್ವರ ವಾಣಿಜ್ಯ ಹಾಗೂ ವಿಜ್ಞಾನ ಮಹಾವಿದ್ಯಾಲಯದಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ, ಕಾಲೇಜಿನ ಉಪಪ್ರಾಚಾರ್ಯರಾಗಿ, ಸಂಸ್ಥೆಯ ಗೌರವ ಆಡಳಿತಾಧಿಕಾರಿಯಾಗಿ ಸೇವೆಸಲ್ಲಿಸಿ ವಿಶ್ರಾಂತ ಬದುಕನ್ನು ಅನುಭವಿಸುತ್ತಿರುವರು.

ಕರ್ನಾಟಕ ಕಾಲೇಜ ಬೀದರನ 'ಕನ್ನಡ ಸ್ನಾತಕೋತ್ತರ ಅಧ್ಯಯನ ಹಾಗೂ ಸಂಶೋಧನ ಕೇಂದ್ರದಲ್ಲಿ ಗೌರವ ಪ್ರಾಧ್ಯಾಪಕರಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಕಲಬುರ್ಗಿ ಹಾಗೂ ಹಂಪಿ ವಿಶ್ವವಿದ್ಯಾಲಯಗಳ ಎಂಫಿಲ್ ಹಾಗೂ ಪಿಹೆಚ್.ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿ ಸೇವೆ ಸಲ್ಲಿಸಿದ್ದಾರೆ. ಕನ್ನಡ ಸಾಹಿತ್ಯದ

ಹಲವು ಪ್ರಕಾರಗಳಲ್ಲಿ ಕೃಷಿಗೈದಿದ್ದಾರೆ. "ಗ್ರಾಮೀಣ ಪ್ರದೇಶದಲ್ಲಿದ್ದುಕೊಂಡು ಕನ್ನಡದ ಆಸಕ್ತಿ ಬೆಳೆಸಿದವರು. ವಿದ್ಯಾರ್ಥಿಗಳಲ್ಲಿ ಕನ್ನಡ ಪ್ರೇಮ ಬಿತ್ತಿದವರು. ಅನೇಕ ವಿದ್ಯಾರ್ಥಿಗಳಿಗೆ ಐಚ್ಛಿಕ ಕನ್ನಡದಲ್ಲಿ ಆಸಕ್ತಿಯುಂಟಾಗುವಂತೆ ಮಾಡಿದ್ದಾರೆ. ಅವರ ಉನ್ನತ ವ್ಯಾಸಂಗಕ್ಕೆ ಪ್ರೇರಣೆ, ಪ್ರೋತ್ಸಾಹ ನೀಡಿದ್ದಾರೆ. ವಿದ್ಯಾರ್ಥಿಗಳಿಗೆ ಸದಾ ಮಾರ್ಗದರ್ಶನ ಮಾಡುವ ಗುರುವಾಗಿ ಯಾಳವಾರರು ಕಂಡಿದ್ದಾರೆ."[೪೦] ೧೯೭೫ ರಿಂದಲೇ ಇವರು ಲೇಖನ, ಕವನಗಳನ್ನು ಬರೆಯುವುದನ್ನು ರೂಢಿಸಿಕೊಂಡಿದ್ದರೂ, ಇವರ ಮೊದಲ ಲೇಖನ ೧೯೭೭ ರಲ್ಲಿ 'ಮಂಗಳ ಕ್ಷೇತ್ರ ಇಂಗಳೇಶ್ವರ'

ಧಾರವಾಡದ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟವಾಗಿದೆ. ೧೯೮೬ರಲ್ಲಿ ಐ.ಬಿ.ಎಚ್. ಬೆಂಗಳೂರಿನ ಪ್ರಕಾಶನದ ಮೂಲಕ 'ಹುಮನಾಬಾದ ತಾಲ್ಲೂಕು ದರ್ಶನ' ಕೃತಿಯನ್ನು ಮೊದಲು ಪ್ರಕಟಿಸಿದರು. ವಿಮರ್ಶೆ, ಸಂಶೋಧನೆ, ಜೀವನಚರಿತ್ರೆ, ಕಾವ್ಯ, ಸಂಪಾದನೆ ಹಾಗೂ ಆಧುನಿಕ ವಚನ ಸಾಹಿತ್ಯ ಕ್ಷೇತ್ರದಲ್ಲಿ ಸ್ಮರಣೀಯವಾದ ಕಾರ್ಯ ಮಾಡಿದ್ದಾರೆ.

ವಚನ ಸಾಹಿತ್ಯ ಹಾಗೂ ಜನಪದ ಸಾಹಿತ್ಯ ಕ್ಷೇತ್ರದಲ್ಲಿ ವಿಶೇಷ ಆಸಕ್ತಿ ಹೊಂದಿರುವ ಇವರು ಶರಣ ಸಾಹಿತಿಗಳೆಂದೇ ಜನಪ್ರಿಯರಾಗಿದ್ದಾರೆ. ೧೯೯೫ರಲ್ಲಿ 'ಆದಯ್ಯ ಒಂದು ಅಧ್ಯಾಯನ' ಎಂಬ ಮಹಾಪ್ರಬಂಧ ಸಲ್ಲಿಸಿ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಡಾಕ್ಟರೇಟ ಪಡೆದಿದ್ದಾರೆ. 'ಹರಿಶ್ಚಂದ್ರ ಕಾವ್ಯ ಮತ್ತು ಮೌಲ್ಯಗಳು, ಗಿರಿಜಾ ಕಲ್ಯಾಣ. ಉರಿಲಿಂಗಪೆದ್ದಿ, ಬೀದರ ಜಿಲ್ಲೆಯ ಶರಣ ಸ್ಮಾರಕಗಳು, ಪುಲಿಗೆರೆಯ ಆದಯ್ಯ', 'ಕರಕನಳ್ಳಿ ಬಕ್ಕಪ್ರಭು, ಕುಂಬಾರ ಗುಂಡಯ್ಯ' 'ಹುಮನಾಬಾದ ಶ್ರೀ ವೀರಭದ್ರೇಶ್ವರ' 'ಕುಮಾರವ್ಯಾಸ' 'ಮಾಣಿಕಪ್ರಭುಗಳು' 'ವಚನದಲ್ಲಿ ನಾಮಾಮೃತ' 'ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಚಿಂತನೆ' 'ಚನ್ನ ಬಸವಣ್ಣನವರು' 'ವಚನ ಸಾಹಿತ್ಯದ ಸಾಮರಸ್ಯದ ನೆಲೆಗಳು' ಬಯಲೊಳಗಣ ಬಿಸಿ' 'ಆನು ಒಲಿದಂತೆ ಹಾಡುವೆ' ಮೊದಲಾದ ೩೫ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ಕಾಣಿಕೆಯಾಗಿ ನೀಡಿದ್ದಾರೆ.

೨೦೧೩ರಲ್ಲಿ ಪ್ರಕಟವಾಗಿರುವ 'ಆನು ಒಲಿದಂತೆ ಹಾಡುವೆ' ಎಂಬುದು ಡಾ. ಸೋಮನಾಥ ಯಾಳವಾರ ಅವರ ಆಧುನಿಕ ವಚನ ರಚನೆಗಳ ಸಂಕಲನ. ೧೨೮ ವಚನಗಳು ಇದರಲ್ಲಿವೆ. "ವರ್ತಮಾನ ನೋವು, ವಿಷಾದಗಳನ್ನು ಗುರುತಿಸುವಲ್ಲಿ ಮತ್ತು ಕನಸುಗಳನ್ನು ಕಟ್ಟಿಕೊಳ್ಳುವಲ್ಲಿ ಹನ್ನೆರಡನೆಯ ಶತಮಾನದ ವಚನಕಾರರ ಚಿಂತನೆಗಳು ದಾರಿ ತೋರಿಸುವ ಸಾಮರ್ಥ್ಯವನ್ನು ಹೊಂದಿವೆ. ಈ ಕಾರಣದಿಂದಲೇ ಅವರ ವಚನಗಳು ಇಂದು ಹಿಂದೆಂದಿಗಿಂತಲೂ ಹೆಚ್ಚು ಪ್ರಸ್ತುತವಾಗಿವೆ. ಸಾಮಾಜಿಕ ಕಳಕಳಿಯ ಅಭಿವ್ಯಕ್ತಿಗಾಗಿ ಡಾ. ಸೋಮನಾಥ ಅವರು **'ಸೋಮಲೋಚನ ಪ್ರಿಯ ಬಸವಣ್ಣ'** ವಚನಾಂಕಿತದ ಮೂಲಕ ವಚನ ಮಾರ್ಗ ಹಿಡಿದದ್ದು ಅಭಿನಂದನಾರ್ಹವಾಗಿದೆ. ಮಿತ್ರ ಸೋಮನಾಥ ಯಾಳವಾರ ಅವರು 'ಆನು ಒಲಿದಂತೆ ಹಾಡುವೆ' ವಚನ ಸಂಕಲನದ ಮೂಲಕ ಆಧುನಿಕ ವಚನಕಾರರ ಸಾಲಿಗೆ ಸೇರಿದ್ದಾರೆ."[೪೧] ಎಂಬ ವಿದ್ವಾಂಸರ ಮಾತು ಯಥೋಚಿತವಾಗಿದೆ.

"ಆನು ಒಲಿದಂತೆ ಹಾಡುವೆ" ಗ್ರಂಥದಲ್ಲಿನ ಆಧೂನಿಕ ವಚನಗಳು ವರ್ತಮಾನಕಾಲ ಗರ್ಭದ ನಾಟಕೀಯ ಸೋಗಲಾಡಿತನವನ್ನು ಪರಿಚಯಿಸುತ್ತ ಹೋಗುತ್ತವೆ. ವ್ಯಂಗ್ಯ, ವಿಡಂಬನೆ ಹಾಗೂ ಸಾಮಾಜಿಕ ಕಾಳಜಿಯನ್ನು ನಿರೂಪಿಸುತ್ತವೆ. ವಚನ ಸಾಹಿತ್ಯವನ್ನು ವೈಚಾರಿಕತೆಯ ನೆಲೆಗಟ್ಟಿಗೆ ಸಮೀಕರಿಸಿ ಆಳ ಅಂತರಾಳವನ್ನು ಪರಿಶೋಧಿಸಿ, ಅದಕ್ಕೆ ಸಾಕ್ಷಿ ಪ್ರಜ್ಞೆ ಎಂಬಂತೆ ಆಧುನಿಕ ವಚನಗಳನ್ನು ಬರೆದವರು ಡಾ.

ಯಾಳವಾರರು. ಇಂದಿನ ಜಾಗತೀಕರಣದ ಸಮಾಜದಲ್ಲಿ ಜಾಗ್ರತಿಯ ಗಂಟೆ ಬಾರಿಸುತ್ತ, ಮುಖವಾಡಧಾರಿಗಳಿಗೆ ಮುಖಾಮುಖಿಯಾಗುತ್ತವೆ. ಆಧುನಿಕ ವಚನಗಳ ರಚನೆಗೆ ಗಂಭೀರತೆಯ ಸೇಫ್ ಕೊಡುವಲ್ಲಿ ಡಾ. ಯಾಳವಾರರು ಯಶಸ್ವಿಯಾಗಿದ್ದಾರೆ. ವಚನ ಬರೆಯುವ ಇಂದಿನ ಯುವಕರು ಈ ಪುಸ್ತಕ ಓದಲೇಬೇಕು.[೪೨] ಎಂದು ಡಾ. ಜಗನ್ನಾಥ ಹೆಬ್ಬಾಳೆಯವರು ಅಭಿಪ್ರಯಪಟ್ಟಿದ್ದು ಸರಿಯಾದ ಹೇಳಿಕೆ ಎನ್ನಬಹುದು. ಒಟ್ಟಿನಲ್ಲಿ ಜಿಲ್ಲೆಯ ಆಧುನಿಕ ವಚನ ಸಾಹಿತ್ಯಕ್ಕೆ ಡಾ. ಯಾಳವಾರರದು ಒಂದು ಅಪರೂಪದ ಕೊಡುಗೆ ಎನ್ನಬಹುದು.

**೩.೧೮ ವಿ. ಸಿದ್ಧರಾಮಣ್ಣರ ವಚನಗಳು (೨೦೧೩)**

ಲಿಂಗಾನುಭಾವಿಗಳು, ಬಾಳಿನುದ್ದಕ್ಕೂ ಬಸವ ತತ್ವವನ್ನೇ ಹಾಸಿಕೊಂಡು ಹೊದ್ದುಕೊಂಡು ಬೆಳಗಿದವರು ವಿ. ಸಿದ್ಧರಾಮಣ್ಣ. ಬಾಲ್ಯದಿಂದಲೇ ಸಂಗೀತ, ನಟನೆ, ರಂಗನಿರ್ದೇಶಕರಾಗಿ, ನಾಟಕ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತ ಬಂದು ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡವರು. ಬೀದರ ಜಿಲ್ಲೆಯ ಬಸವಕಲ್ಯಾಣದ ನೂತನ ಅನುಭವ ಮಂಟಪದ ಸಂಯೋಜಕರಾಗಿದ್ದುಕೊಂಡು ಬಸವತತ್ವದ ಪ್ರಸಾರದಲ್ಲಿ ಹಗಲಿರುಳು ತೊಡಗಿಕೊಂಡವರು.

ಕನ್ನಡ ಐದನೆಯ ಕಲಿತು ನೇಗಿಲ ಹಿಡಿದ ಒಬ್ಬ ಒಕ್ಕಲಿಗನು ಕೈಯಲ್ಲಿ ಲೆಕ್ಕಣಿಕೆ ಹಿಡಿದು ಸಾಹಿತ್ಯರಚನೆ ಮಾಡಿರುವನೆಂದರೆ ಯಾರಿಗೆ ಅಚ್ಚರಿಯಾಗಲಿಕ್ಕಿಲ್ಲ? 'ತಾಳ ಸಮಾನ ಸರಿಸವನರಿಯೆ, ಓಜೆ ಬಜಾವಣೆಯ ಲೆಕ್ಕವನರಿಯೆ....... ಕೂಡಲ ಸಂಗಮದೇವಾ ನಿಮಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂಬ ವಿಶ್ವಗುರು ಬಸವ ತಂದೆಯವರ ಅಭಯವಾಣಿಯಂತೆ ಮುಂದುವರೆದೆ. ನಾನೊಬ್ಬ ಬಚ್ಚಬರಿಯ ಬಸವ ಭಕ್ತ ಅಷ್ಟೇ ಎಂದು ವಿನಮ್ರವಾಗಿ ನುಡಿದಿರುವ ವಿ. ಸಿದ್ಧರಾಮಣ್ಣ ಶರಣರು[೪೩] ತಮ್ಮ ಅನುಭಾವದ ಮೂಲಕ ಸಾಹಿತ್ಯ ರಚನೆ ಮಾಡಿದ್ದಾರೆ.

ಪೂಜ್ಯ ವಿ. ಸಿದ್ಧರಾಮಣ್ಣ ಶರಣರು ಮೂಲತಃ ಬಳ್ಳಾರಿ ಜಿಲ್ಲೆಯ (ಇಂದಿನ ದಾವಣಗೇರಿ) ಹರಪನಹಳ್ಳಿ ತಾಲೂಕಿನ ಮತ್ತಿಹಳ್ಳಿ ಗ್ರಾಮದವರು. ೧೯೨೫ ಜನವರಿ ೧೪ ರಂದು ಶರಣ ಸಂಸ್ಕೃತಿಯ ಕೃಷಿ ಕಾಯಕ ಮನೆತನದಲ್ಲಿ ಜನಿಸಿದ್ದಾರೆ. ಸದ್ಗೃಹಸ್ಥ ಶರಣ ಜೀವನ ನಡೆಸುತ್ತಾ ಸಂಗೀತ, ಸಾಹಿತ್ಯ-ನಾಟಕ, ಪ್ರವಚನಗಳ ಮೂಲಕ ನಾಡಿಗೆ ಚಿರಪರಿಚಿತರಾದವರು. ೨೦ನೆಯ ಶತಮಾನದ ಯುಗಪುರುಷ, ನೂತನ ಅನುಭವ ಮಂಟಪದ ರೂವಾರಿ, ಶತಾಯುಷಿ ಪೂಜ್ಯ ಡಾ. ಚನ್ನಬಸವ ಪಟ್ಟದ್ದೇವರು ಇಚ್ಛಿಸಿದಂತೆ ಕಳೆದ ೪೦ ವರ್ಷಗಳ ಹಿಂದೆ ಕಲ್ಯಾಣದ 'ಅನುಭವ ಮಂಟಪದ ಸಂಚಾಲಕ'ರಾಗಿ ಅನುಪಮ ಕಾರ್ಯ ನಿರ್ವಹಿಸಿದ್ದಾರೆ.

ತಮ್ಮ ಈಗಿನ ೯೦ ವರ್ಷಗಳ ವೃದ್ಧಾಪ್ಯದಲ್ಲಿಯೂ ಸಹ ಪಾದರಸದಂತೆ ಕ್ರಿಯಾಶೀಲ ಚರಜಂಗಮವಾಗಿ ಕರ್ನಾಟಕ-ಆಂಧ್ರ-ಮಹಾರಾಷ್ಟ್ರ-ದಿಲ್ಲಿಯವರೆಗೂ ಬಸವ ಭಕ್ತರ ಕರೆಗೆ ಓಗೊಟ್ಟು ಸಂಚರಿಸುತ್ತ ಬಸವತತ್ವ ಪ್ರಸಾರ ಹಾಗೂ ಪ್ರಚಾರದ ಮಣಿಹ ಪೂರೈಸುತ್ತಿರುವರು. ಇವರನ್ನು ಕುರಿತು ೪೫ ಜನ ಆಧುನಿಕ ವಚನಕಾರರು ವಚನಗಳನ್ನು ರಚಿಸಿ, ಹಾಡಿ ಹೊಗಳಿದ್ದಾರೆ. ಅವರ ಬದುಕು-ಬರಹ ಒಂದೇ ಆಗಿರುವ ಆಧುನಿಕ ಶರಣರಿವರು.

ಎಲ್ಲೆಗೌಡ ಬೆಸಗರಹಳ್ಳಿ ವಚನಕಾರರು ಅವರ ಬದುಕು ಬರಹವನ್ನು ತಮ್ಮ ವಚನವೊಂದರಲ್ಲಿ ಕಂಡಿರಿಸಿದ್ದಾರೆ. ಬಸವ ಭಕ್ತಿಯ ಪಡಿಯಚ್ಚು, ಶರಣ ಮಾರ್ಗದರ್ಶಿ, ಆಧುನಿಕ ಪ್ರಪಂಚದ ಶರಣ ಬಸವ ಕಿರಣದರ್ಶಿ, ಹೃದಯ ಸ್ಪರ್ಶಿ ಸಿದ್ಧರಾಮಣ್ಣನವರು ಸಹಜ ಬದುಕನ್ನು ಬದುಕಿದವರು ಅನುಭಾವಿ ಕವಿ, ತತ್ವಪದ

ರಚನೆಕಾರ, ನಾಟಕಕಾರ, ಗದ್ಯ ಲೇಖಕ, ಶರಣ ಸಾಹಿತಿಗಳಾಗಿ ಪ್ರಸಿದ್ಧರಾಗಿರುವಂತೆ ಆಧುನಿಕ ವಚನಕಾರರಾಗಿಯೂ ಜನಪ್ರಿಯರಾಗಿದ್ದಾರೆ.

ಬಸವಾದಿ ಶರಣರನ್ನು ಕುರಿತು ೧೯ ನಾಟಕಗಳನ್ನು, ೩ ಕಾವ್ಯಗಳನ್ನು, ೯ ತಾತ್ವಿಕ ಗ್ರಂಥಗಳನ್ನು ಬರೆದಿದ್ದಾರೆ. ಇವರ ಸಾಧನೆ ಗುರುತಿಸಿ, ವಿಜಯಪುರದ ಶರಣ ಕಕ್ಕಯ್ಯ ಪ್ರಶಸ್ತಿ ಭಾಲ್ಕಿಯ ಚನ್ನಬಸವ ಪ್ರಶಸ್ತಿ, ಇಳಕಲ್ಲದ ಬಸವಗುರು ಕಾರುಣ್ಯ ಪ್ರಶಸ್ತಿ, ಬಸವಕಲ್ಯಾಣದ ಅನುಭವ ಮಂಟಪ ಪ್ರಶಸ್ತಿ, ಮಹಾರಾಷ್ಟ್ರದ ಬಸವ ತತ್ವಶ್ರೀ ಪ್ರಶಸ್ತಿಗಳು ಲಭಿಸಿವೆ.[೪೪]

ಸದುವಿನಯ, ಸದಾಚಾರ, ಸಂಪನ್ನತೆಯ ವ್ಯಕ್ತಿತ್ವವುಳ್ಳ ಇವರು **'ಲೋಕ ಗುರುಬಸವ ಪ್ರಭುವೆ'** ಅಂಕಿತದಲ್ಲಿ ೮೭ ವಚನಗಳನ್ನು 'ವಿ. ಸಿದ್ಧರಾಮಣ್ಣ ಶರಣರ ವಚನಗಳು' ಎಂದು ಪ್ರಕಟಿಸಿದ್ದಾರೆ. ಪ್ರತಿ ವಚನಕ್ಕೂ ಒಂದು ಶೀರ್ಷಿಕೆ ಕೊಟ್ಟು ವಚನಗಳನ್ನು ರಚಿಸಿರುವುದು ಇವರ ವೈಶಿಷ್ಟ್ಯವೆನ್ನಬಹುದು. ಭಕ್ತನ ನಿಲುವು, ಭವಿ-ಭಕ್ತರ ಅಂತರ, ಲಿಂಗಪ್ರಜ್ಞೆ, ನಿನ್ನ ಸ್ವರೂಪದತ್ತ ಲಕ್ಷ್ಯವಿರಲಿ, 'ಭಾವ ಲಿಂಗಿಯ ನಿಲುವು' 'ಶರಣ ಸಂಗದಲ್ಲಿರಿಸು' 'ಆತ್ಮೀಯ ಪ್ರೇಮ' 'ಇದು ನಿಜದರಿವು' ಸ್ವಯಂ ಲಿಂಗಪೂಜೆ' 'ಕೀಳು ದೈವದ ಪೂಜೆ ಏಕೆ?' 'ಲಿಂಗಲೀಲೆ' 'ನಿಜಪೂಜೆ'ಯಂತಹ ವಿಷಯಗಳನ್ನು ಕುರಿತು ವಚನ ರಚಿಸಿದ್ದಾರೆ.

ನಿಜದ ಅರಿವು ಇದೇ ಎಂಬುದನ್ನು ತಿಳಿಸುವ ವಚನವಿದು. ಬಸವಣ್ಣನವರ ವಚನ ತತ್ವಸಿದ್ಧಾಂತವನ್ನು ಅರಿತು ಆಚರಿಸುತ್ತಿರುವ ಲೇಖಕರು ಇಲ್ಲಿ ಸುಜ್ಞಾನದ ತಿಳಿವನ್ನು ಹೇಳುತ್ತಾರೆ. ಎಲ್ಲೆಲ್ಲೂ ದೇವರನ್ನು ಹುಡುಕದೆ ನಿನ್ನಲ್ಲಿಯೇ ಅರಸು ಎಂಬ ಶರಣರ ವಿಚಾರವನ್ನು ಸರಳವಾಗಿ ವಚನಕಾರ ಇಲ್ಲಿ ನಿರೂಪಿಸಿದ್ದಾರೆ ಎನ್ನಬಹುದು.

'ಲಿಂಗೈಕ್ಯ' ಪದದ ಅನರ್ಥ ವಿವರಣೆಯನ್ನು ಗಮನಿಸಿರುವ ಸಿದ್ಧರಾಮಣ್ಣ ಆ ಪದವನ್ನು ಜನಸಾಮಾನ್ಯರಿಗೆ ಅರ್ಥವಾಗುವಂತೆ ಹೇಳಿರುವ ಪರಿ ಇಲ್ಲಿದೆ – ಲಿಂಗೈಕ್ಯವೆಂದರೆ ದೇಹದಿಂದ ಜೀವ ತೊಲಗುವುದಲ್ಲ. ಜೀವಗುಣಗಳಾದ ಆಶೆ ಆಮಿಷ-ರೋಷಗಳು ನಾಶವಾಗುವುದು. ಕಾಮಾದಿ ದುರ್ಗುಣಗಳಿಂದ ನಿರ್ಲಿಪ್ತವಾಗುವುದು. ಜೀವಾತ್ಮನು ಸಂಕುಚಿತ ಚೌಕಟ್ಟಿನಿಂದ ವಿಕಾಸ ಹೊಂದುತ್ತ, ತನ್ನ ಸ್ವರೂಪದಲ್ಲಿ ಲೀನತೆ ಪಡೆದು ಆನಂದಿಸುವುದೇ 'ಲಿಂಗೈಕ್ಯ'ವೆಂದು ತುಂಬಾ ಅನುಭಾವಾತ್ಮಕವಾಗಿ ತಿಳಿಸುವುದನ್ನು ಅರಿಯಬಹುದು. ಧರ್ಮದ ಬಗೆಗೆ ಹೇಳುತ್ತ, ಲಿಂಗಾಯತವು ಜಾತಿ ರಹಿತ ಧರ್ಮ, ಇಷ್ಟಲಿಂಗವು ಮಹಾಮಂತ್ರ ಸೂತ್ರ, ತ್ರಿವಿಧ ಲಿಂಗ ಪೂಜೆಗಳ ಕುರಿತ ವಚನಗಳಿವೆ.

ಮೂಢ ನಂಬಿಕೆ, ಶರಣ ಸ್ಮಾರಕಗಳ ಅಭಿವೃದ್ಧಿ, ಸದ್ಭಕ್ತ, ಲಿಂಗಾಯತರ ವೀರಭದ್ರ, ಅರಿವು-ಆಚಾರ, ಸಾಮಾಜಿಕ ಕಾಳಜಿ, ಡಾಂಭಿಕತನದ ಖಂಡನೆಯಂತಹ ವಚನಗಳೂ ಈ ಕೃತಿಯಲ್ಲಿವೆ. ಬಹುಮುಖ ಪ್ರತಿಭಾವಂತರಾಗಿರುವ ವಿ.ಸಿದ್ಧರಾಮಣ್ಣನವರ ವಚನಗಳು ಅವರ ಬಸವಾನುಭವದ ಯೋಗ್ಯ ನಿಲುವಿಗೆ ಹಿಡಿದ ಕನ್ನಡಿಯಾಗಿವೆ. ಬಹುದೊಡ್ಡ ಮಠಾಧೀಶರು, ಜಗದ್ಗುರುಗಳಿಗಿಂತ ಬಸವತತ್ವವನ್ನು ಕೆಳಮಟ್ಟದಿಂದ ಮೇಲ್ಮಟ್ಟಕ್ಕೆ ಕೊಂಡೊಯ್ದು ಅಚ್ಚ ನಿಜ ಶರಣ ಎನ್ನಬಹುದು.[೪೫] ಎಂಬ ಅಭಿಪ್ರಾಯ ಸರಿಯಾದುದೆನಿಸುತ್ತದೆ. ಬೀದರ ಜಿಲ್ಲೆಯ ಆಧುನಿಕ ವಚನ ಸಾಹಿತ್ಯಕ್ಕೆ ವ್ಹಿ. ಸಿದ್ಧರಾಮಣ್ಣನವರ ವಚನಗಳು ಶ್ರೇಷ್ಠ ಕೊಡುಗೆ ನೀಡಿವೆ ಎನ್ನಬಹುದು.

**೩.೧೯ ಶೋಭಾ ಔರಾದೆಯವರ 'ವಚನ ಸಿರಿ' (೨೦೧೩)**

ಬೀದರ ಜಿಲ್ಲೆಯ ಹುಮನಾಬಾದನ ಶೊಭಾ ಔರಾದೆಯವರು ಬಿ.ಎ., ಬಿ.ಇಡಿ. ಪದವೀಧರ ಶಿಕ್ಷಕರು. ಸರಕಾರಿ ಮಾಧ್ಯಮಿಕ ಶಾಲೆ ರಾಜೇಶ್ವರದಲ್ಲಿ ಸೇವೆ ಸಲ್ಲಿಸುತ್ತಿರುವ ಇವರು ೦೧-೦೮-೧೯೬೫ರಲ್ಲಿ ಜಿಲ್ಲೆಯ

ಹುಣಸಿಗೇರಾದಲ್ಲಿ ಜನಿಸಿರುವರು. ವಚನಗಳನ್ನು ಓದುವದು ಬರೆಯುವುದು ಇವರ ಹವ್ಯಾಸ. ಸಂಗೀತ ಕೇಳುವುದು, ಶರಣ ಗೋಷ್ಠಿಗಳಲ್ಲಿ ಭಾಗವಹಿಸುವುದು ಇವರ ಪ್ರಮುಖ ಹವ್ಯಾಸಗಳು.

ಬಸವತತ್ವವನ್ನು ಗಟ್ಟಿಯಾಗಿ ಅನುಸರಿಸಿಕೊಂಡು ಜೀವನ ಸಾಗಿಸುತ್ತಿರುವ ಶೋಭಾ ಅವರು ಈಗಾಗಲೇ 'ಬಯಲು ಬಯಲನೆ ಬಿತ್ತಿ' ಎಂಬ ಕೃತಿಯನ್ನು ರಚಿಸುವ ಮೂಲಕ ಕನ್ನಡ ಸಾರಸ್ವತ ಲೋಕದಲ್ಲಿ ಕಾಲಿರಿಸಿದ್ದಾರೆ. ವೃತ್ತಿಯಲ್ಲಿ ಆದರ್ಶ ಶಿಕ್ಷಕಿಯಾಗಿ, ಪ್ರವೃತ್ತಿಯಲ್ಲಿ ಲೇಖಕಿಯಾಗಿರುವ ಇವರೂ ಜಿಲ್ಲೆಯ ಆಧುನಿಕ ವಚನಕಾರರಾಗಿಯೂ ಗಮನಸೆಳೆದಿದ್ದಾರೆ.

"ವೈಚಾರಿಕ ಸ್ವಭಾವದ ಅಪ್ಪಟ ಬಸವತತ್ವಾಭಿಮಾನಿಯಾಗಿರುವ ಶೋಭಾ ಅವರು ಬಸವ ಸೇವಾ ಪ್ರತಿಷ್ಠಾನ ಬೀದರನ ಅಕ್ಕ ಅನ್ನಪೂರ್ಣ ಅವರ ಗಾರುಡಿಯಲ್ಲಿ ಬೆಳೆದವರು. ಈಗಾಗಲೇ ನೂರಾರು ಶರಣರ ವಚನಗಳನ್ನು ಓದಿಕೊಂಡು ಗ್ರಹಿಸಿದವರು. ವಚನ ರಚನೆಯ ಪರಿ ಅರಿತಿದ್ದಾರೆ. ಸಕ್ಕರೆಯ ಮರಳಂತಹ ವಚನಗಳ ಒಡನಾಟ, ಅಕ್ಕರೆಯ ಸೇವಾ ಪ್ರತಿಷ್ಠಾನದ ಜೊತೆಗಿನ ಪಾಠ ಜೀವನದ ಕಹಿ ನೆನಪುಗಳ ಕಹಿನೋಟ, ಎಲ್ಲಕ್ಕಿಂತ ಹೆಚ್ಚಾಗಿ ಬಸವಾದಿ ಶರಣರನ್ನು ನಂಬಿನಡೆದಿರುವ ಅವರ ಬದುಕಿನ ಅನುಭವದೂಟ ಶೋಭಾಳನ್ನು ವಚನಕಾರಳನ್ನಾಗಿಸಿದೆ ಎನ್ನಬಹುದು.[೪೩] ಎಂದು ಅವರು ವಚನಕಾರರಾಗಿರುವ ಬಗೆಯನ್ನು ವಿದ್ವಾಂಸರು ತಿಳಿಸಿದ್ದಾರೆ. ಡಾ. ಯಾಳವಾರರ ಶಿಷ್ಯಯಾಗಿರುವ ಶೋಭಾ ಅವರ ಬಗ್ಗೆ ಎಲ್ಲವನ್ನೂ ಅರಿತಿರುವ ಅವರು ಶೋಭಾ ಅವರನ್ನು ಸರಳ ಸಜ್ಜನಿಕೆಯ ಶರಣೆಯೆಂದು ಕರೆದಿದ್ದಾರೆ.

"ಆಚಾರ ಪ್ರಿಯ ಬಸವಲಿಂಗ" ಅಂಕಿತದಲ್ಲಿ ಅವರು ಸುಮಾರು ೩೦೦ಕ್ಕಿಂತಲೂ ಹೆಚ್ಚು ಆಧುನಿಕ ವಚನಗಳನ್ನು ರಚಿಸಿರುವರು. ಆದರೆ ೨೦೧೩ರಲ್ಲಿ **'ವಚನಸಿರಿ'** ಎಂಬ ಹೆಸರಿನಲ್ಲಿ ೨೦೫ ವಚನಗಳನ್ನು ಮಾತ್ರ ಅವರು ಪ್ರಕಟಿಸಿದ್ದಾರೆ. ಶರಣರು ಕಟ್ಟಬಯಸಿದ ಸಮಾಜದ ಪರಿಕಲ್ಪನೆ, ಇಂದಿನ ರಾಜಕಾರಣದ ಕುತಂತ್ರ, ಭ್ರಷ್ಟಾಚಾರದ ಬದುಕು, ಒಂಟಿತನದ ಕುಟುಂಬ ಪದ್ಧತಿ, ಅತಿಯಾಸೆಯ ಕ್ರೂರತನ, ಹೆಣ್ಣುಮಕ್ಕಳಿಗಾಗುವ ನೋವು–ನಲಿವುಗಳ ಚಿತ್ರಣ, ವೈಯಕ್ತಿಕ ಬದುಕಿನ ಹಲವು ಸಮಸ್ಯೆಯ ಚಿಂತನೆಗಳು ಇಲ್ಲಿಯ ವಚನಗಳಲ್ಲಿ ಅಭಿವ್ಯಕ್ತಗೊಂಡಿವೆ.

ಒಟ್ಟಿನಲ್ಲಿ ಬಸವತತ್ವ ಬದುಕುತ್ತಿರುವ ಶೋಭಾ ಅವರ ವಚನಗಳು ಸೊಗಸಾಗಿದ್ದು, ಅರ್ಥಪೂರ್ಣವಾಗಿವೆ. ಆಧುನಿಕ ವಚನ ಸಾಹಿತ್ಯ ಸಾಗರಕ್ಕೆ ಇವರು ತಮ್ಮ ಅನುಭಾವ ವಚನಗಳನ್ನು ನೀಡಿದ್ದಾರೆ ಎನ್ನಬಹುದು.

**೩.೨೦ ಡಾ. ವಜ್ರಾ ಪಾಟೀಲರ 'ವಜ್ರೇಶ್ವರಿಯ ವಚನಗಳು' (೨೦೧೩)**

ಬೀದರದ ಅನೇಕ ಮಹಿಳಾ ಲೇಖಕಿಯರಲ್ಲಿ ಒಬ್ಬರಾದ ಡಾ. ವಜ್ರಾ ಪಾಟೀಲರು ಕವಯಿತ್ರಿ ಹಾಗೂ ಆಧುನಿಕ ವಚನಕಾರ್ತಿ. ಹುಟ್ಟಿ ಬೆಳೆದದ್ದು ಧಾರವಾಡ ಜಿಲ್ಲೆಯಲ್ಲಿ. ರೊಟ್ಟಿಗ್ವಾಡ ಗ್ರಾಮದ ವಿರುಪಾಕ್ಷಗೌಡ ಹಾಗೂ ಪಾರ್ವತಿದೇವಿಯರ ಉದರದಲ್ಲಿ ಜನಿಸಿದವರು. ಎಂ.ಎ., ಎಂ.ಫಿಲ್. ಪದವಿಯನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಪಡೆದ ಇವರು ಬೀದರ ಅಕ್ಕ ಮಹಾದೇವಿ ಮಹಿಳಾ ಕಾಲೇಜಿನಲ್ಲಿ ಮನಃಶಾಸ್ತ್ರದ ಅಧ್ಯಾಪಕರಾಗಿ, ಮುಖ್ಯಸ್ಥರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಗುಲಬರ್ಗಾ ಜಿಲ್ಲೆಯ ನಾಗಇದಲಾಯಿ ಗ್ರಾಮದ ನ್ಯಾಯವಾದಿ ಕೈಲಾಸ ಪಾಟೀಲರ ಆದರ್ಶ ಪತ್ನಿಯಾಗಿ ಬದುಕ ಕಟ್ಟಿಕೊಂಡದ್ದು ಬೀದರದಲ್ಲಿ ೨೦೧೦ರಲ್ಲಿ ಕರ್ನಾಟಕ ವಿಶ್ವ ವಿದ್ಯಾಲಯದಿಂದ ಡಾಕ್ಟರೇಟ ಪದವಿಯನ್ನು ಪಡೆದಿದ್ದಾರೆ.

ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ವಿವಿಧ ಸಂಘ ಸಂಸ್ಥೆಗಳ ಅಧ್ಯಕ್ಷರಾಗಿ, ಸದಸ್ಯರಾಗಿ ಕರ್ತವ್ಯ ನಿರ್ವಹಿಸುತ್ತ, ತಮ್ಮ ಕ್ರಿಯಾಶೀಲ ಚಟುವಟಿಕೆ ಹಾಗೂ ಸೇವೆಯಿಂದ ಜನಪ್ರಿಯರಾಗಿದ್ದಾರೆ. ಸುಸಂಸ್ಕೃತ, ಸುಶೀಲ, ವಿದ್ಯಾವಂತ ಮನೆತನದಲ್ಲಿ ಬೆಳೆದು ಬಂದಿರುವ ಇವರು ಕನ್ನಡ, ಹಿಂದಿ, ಇಂಗ್ಲೀಷ ಭಾಷೆಯಲ್ಲಿ ಪ್ರವೀಣರಾಗಿದ್ದಾರೆ. ಇವರ ತಾಯಿಯವರು ನಾಲ್ಕು ಭಾಷೆಗಳಲ್ಲಿ ಪ್ರವೀಣರಾಗಿದ್ದಂತೆ. ಗಣಿತ, ವಿಜ್ಞಾನ ಮತ್ತು ಇತಿಹಾಸವು ಅವರಿಗೆ ನೀರು ಕುಡಿದಷ್ಟು ಸಲೀಸವಾಗಿದ್ದವು. ಅವರ ಸಂಸ್ಕಾರದಲ್ಲಿ ಬೆಳೆದು ಬಂದಿರುವ ವಜ್ರಾ ಪಾಟೀಲರು ಕವಿಯಾಗಿ ಹಾಗೂ ಆಧುನಿಕ ವಚನಕಾರ್ತಿಯಾಗಿ ಗಮನ ಸೆಳೆದಿದ್ದಾರೆ.

ಡಾ. ವಜ್ರಾ ಪಾಟೀಲರು 'ಮರ'(೧೯೯೪), 'ಮನದಾಳ'(೧೯೯೯), 'ಚೈತ್ರ'(೨೦೦೪, 'ಚೈತನ್ಯ'(೨೦೧೧) ಎಂಬ ನಾಲ್ಕು ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಸರಳ, ಸುಂದರ ಭಾವನೆಗಳನ್ನು ಅಡಕಗೊಳಿಸಿ ಹೇಳುವುದು ಅವರ ಕಾವ್ಯದ ವೈಶಿಷ್ಟ್ಯವಾಗಿದೆ. 'ಸಿದ್ಧಾರೂಢ' ಎಂಬ ಅಂಕಿತದಲ್ಲಿ ಇವರು ೨೧೦ ವಚನಗಳನ್ನು, 'ವಜ್ರೇಶ್ವರಿಯ ವಚನಗಳು' ಎಂಬ ಕೃತಿಯ ಮೂಲಕ ೨೦೧೩ರಲ್ಲಿ ಪ್ರಕಟಿಸಿದ್ದಾರೆ. ಮನಶಾಸ್ತ್ರದ ವಿದ್ಯಾರ್ಥಿಯಾಗಿರುವ ಇವರ ಸಾಹಿತ್ಯಿಕ ಶೈಲಿ, ಸಾಹಿತ್ಯ ಹಾಗೂ ಮನಶಾಸ್ತ್ರಕ್ಕಿರುವ ಅವಿನಾಭಾವ ಸಂಬಂಧವನ್ನು ತೋರುತ್ತದೆ. ವಸ್ತು, ವಿನ್ಯಾಸ, ಕ್ರಮಾಧಾರಿತ ಸಂಗತಿಗಳಗನುಗುಣವಾಗಿ ತಮ್ಮನ್ನು ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಂಡಿರುವ ವಜ್ರಾ ಪಾಟೀಲರು ಸಕಾಲಿಕವಾದ ಸಂಗತಿಗಳ ಮೂಲಕ ವಚನ ರಚಿನೆಗೈದಿದ್ದಾರೆ.

ಈ ವಚನಕಾರ್ತಿ ಸರಳವಾಗಿ, ಸಹಜವಾಗಿ ಅಭಿವ್ಯಕ್ತಗೊಂಡಿರುವ ವಜ್ರಾಪಾಟೀಲರ ವಚನಗಳು ಗಾತ್ರದಲ್ಲಿ ಕಿರಿದಾಗಿದ್ದು, ಸರಳವಾಗಿ ಓದಿಸಿಕೊಂಡು ಹೋಗುತ್ತವೆ. ನೀತಿ ಪ್ರಧಾನವಾಗಿರುವ ಇಲ್ಲಿಯ ವಚನಗಳು ಸಾಮಾಜಿಕ ಜೀವನದತ್ತಲೂ ಮುಖ ಮಾಡಿರುವುದನ್ನು ಅರಿಯಬಹುದು.

**೩.೨೧ ವಿಶ್ವನಾಥ ಬಿರಾದಾರರ 'ಆದಿನಾಥನ ಗಾನಲಹರಿ' (೨೦೧೪)**

ವಿನಯ ಪ್ರಕಾಶನ ಬೀದರದಿಂದ ಪ್ರಕಟಿಸಲಾಗಿರುವ 'ಆದಿನಾಥನ ಗಾನ ಲಹರಿ'ಯ ಕರ್ತೃ ವಿಶ್ವನಾಥ ಬಿರಾದಾರ ಅವರು. ಹುಮನಾಬಾದ ತಾಲೂಕಿನ ನಾಗನಕೇರಿಯಲ್ಲಿ ೧೯೮೩ರ ಜೂನ ೨ ರಂದು ಜನಿಸಿರುವ ವಿಶ್ವನಾಥರು ಬೀದರ ಜಿಲ್ಲೆಯ ಆಧುನಿಕ ವಚನಕಾರರಲ್ಲಿ ಒಬ್ಬರೆನಿಸದ್ದಾರೆ. ತಂದೆ ಶಿವರಾಜಪ್ಪ, ತಾಯಿ ನರ್ಮದಾಬಾಯಿ, ಸುಸಂಸ್ಕೃತ ಮನೆತನ. ಕೇವಲ ಮೆಟ್ರಿಕ್ ಪಾಸಾಗಿರುವ ಬಿರಾದಾರ ಅವರು ಆಧ್ಯಾತ್ಮದತ್ತ ವಾಲಿದ್ದರೂ, ಹೇಗೋ ಏನೋ ಒಲಿದು ಬಂದ ಪೊಲೀಸ ನೌಕರಿಗೆ ಸೇರಿದ್ದಾರೆ. ಆದರೂ ಅವರ ಮನಸ್ಸು ಸದಾ ಹಗಲಿರುಳು ಭಕ್ತಿ ಪಥದಲ್ಲಿಯೇ ಸಾಗುತ್ತಿರುವುದರಿಂದ ಅದರ ಪರಿಣಾಮದ ಗಾನ ಲಹರಿ ತೊರೆಯಾಗಿ ಹೊರ ಹೊಮ್ಮಿದೆ. ಆ ಮೂಲಕ ಹೊರಹೊಮ್ಮಿರುವ ಗಾನಲಹರಿಯೇ ಈ 'ಆದಿನಾಥನ ಗಾನಲಹರಿ' ಕೃತಿಪುಷ್ಪ.

ಇಲ್ಲಿಯ ವಚನಗಳು ಮೂಡಿಬರಲು ಕಾರಣವಾಗಿರುವ ಸಂಗತಿಗಳನ್ನು ಲೇಖಕರಾಗಿರುವ ವಿಶ್ವನಾಥ ಅವರು ಹೇಳಿರುವಂತೆ "ಅವರ ಹೆತ್ತವರ ವಾತ್ಸಲ್ಯ ಹಾಗೂ ಸಹೋದರ, ಸಹೋದರಿಯರ ಪ್ರೀತಿಯೊಂದಿಗೆ ತುಂಬಾ ಸುಖದಿಂದ ಬೆಳೆಯುತ್ತಿರುವಾಗ, ತಂದೆಯವರಿಂದ ಧಾರ್ಮಿಕ ಆಚರಣೆಯ ಶಿಷ್ಟಾಚಾರ, ತಾಯಿಯವರಿಂದ ಪ್ರೀತಿ, ವಾತ್ಸಲ್ಯ, ಕರುಣೆ, ತಾಳ್ಮೆಗಳನ್ನು ಕಲಿತರು. ಎಲ್ಲರಂತೆ ಶಿಕ್ಷಣದಲ್ಲಿ ತುಂಬಾ ಸಾಧನೆ ಮಾಡುವ ಆಸೆ ಹೊಂದಿದ್ದ ಅವರಿಗೆ ಆರೋಗ್ಯದಲ್ಲಿ ಕಂಡು ಬಂದ ಅಸ್ವಸ್ಥತೆಯ ಕಾರಣದಿಂದ ಓದನ್ನು ಕೇವಲ ಮೆಟ್ರಿಕ್ ಪರೀಕ್ಷೆಗೆ ನಿಲ್ಲಿಸಬೇಕಾಯಿತು. ಜಿಲ್ಲಾ ಸಶಸ್ತ್ರ ಮೀಸಲು ಪಡೆಯಲ್ಲಿ ಪೊಲೀಸ ಪೇದೆಯಾಗಿ ನೌಕರಿ ಸಿಕ್ಕ ಮೇಲೆ ಒಬ್ಬಂಟಿಗನಾಗಿ ಇರುವಾಗ, ದೇವರಲ್ಲಿ ಅತಿಯಾದ ಭಕ್ತಿಭಾವ ಮೂಡುತ್ತಿತ್ತು. ಈ ಏಕಾಂಗಿತನ

ಧ್ಯಾನಮಗ್ನನಾಗಲು ತುಂಬಾ ಅನುಕೂಲ ಒದಗಿಸಿತು. ನೌಕರಿಗೆ ಬಿಡುವಿದ್ದಾಗ ಅನೇಕ ಸಾಧು, ಸಂತರ, ಮಹಾತ್ಮರ ಬೆಟ್ಟಿ ಮಾಡುತ್ತಿದ್ದುದರಿಂದ ಗುರುಭಕ್ತಿಯ ಆಸಕ್ತಿ ಅಪಾರವಾಯಿತು. ಆ ಭಕ್ತಿಯ ಪರಿಣಾಮವೇ ಈ 'ಆದಿನಾಥನ ಗಾನ ಲಹರಿ ಮೂಡಿ ಬರಲು ಸಾಧ್ಯವಾಯಿತು''[೪೭] ಎಂಬುದು ಗಮನಾರ್ಹ.

೨೦೧೪ರಲ್ಲಿ ಪ್ರಕಟವಾಗಿರುವ **'ಆದಿ ಗುರುನಾಥ'** ಅಂಕಿತದಲ್ಲಿಯ ಈ ಕೃತಿಯಲ್ಲಿ ಒಟ್ಟು ಏಳು ಭಾಗಗಳಿವೆ. ಅವುಗಳೆಂದರೆ 'ಗುರು ದತ್ತಾತ್ರೆಯನ ಮಹಿಮೆಯ ಸ್ತೋತ್ರ' 'ಮೋಹ ಹರಣಸ್ತೋತ್ರ' 'ಶ್ರೀ ದತ್ತ ಸ್ತೋತ್ರ' 'ಜ್ಞಾನೋಕ್ತಿಗಳು' 'ಸಾಂಖ್ಯಜ್ಞಾನ' 'ನೂತನ ವಚನಗಳು' 'ಆದಿ ಶೊಧ' ಈ ಏಳು ಭಾಗದಲ್ಲಿ ಕರ್ತೃ ವಿಶ್ವನಾಥನ ವಿವಿಧ ರಾಗದ ಭಕ್ತಿಯ ಗಾನವು ಭಾಗಶಃ ಕಾವ್ಯವಾಗಿ, ಕೆಲವು ಕಾವ್ಯಗಳಾಗಿ, ಕೆಲವು ವಚನಗಳಾಗಿ, ತತ್ವನಿರೂಪಣೆಗಳಾಗಿ ಮೂಡಿಬಂದಿವೆ. ಆದರೂ ಅವರ ಈ ರಚನೆಗಳ ಮೇಲೆ ಬಸವಾದಿ ಶರಣರ ಪ್ರಭಾವದ ಛಾಯೆಯನ್ನು ಅಪ್ಪಟ ಶರಣ ಮಾರ್ಗದ ವಿಶ್ವನಾಥ ಬಿರಾದಾರ ಅವರು, ಶರಣರ ವಚನಗಳನ್ನು ಅಧ್ಯಾಯನ ಮಾಡಿ ಪ್ರಭಾವಿತರಾಗಿ, 'ಆದಿನಾಥನನ್ನು' ಗುರುವಾಗಿರಿಸಿಕೊಂಡು ಸರಳವಾದ, ಅಷ್ಟೇ ಅರ್ಥಪೂರ್ಣವಾದ ಓದುಗರು ಮೆಚ್ಚುವಂತಹ ವಚನಗಳನ್ನು ರಚಿಸುವಲ್ಲಿ ಯಶಸ್ವಿಯಾಗಿದ್ದಾರೆ. ಆಧುನಿಕ ವಚನ ಪರಂಪರೆಗೆ ತಮ್ಮದೇ ಆದ ಕಾಣಿಕೆ ನೀಡಿದ್ದಾರೆ ಎನ್ನಬಹುದು.

**೩.೨೨ ಚಂದ್ರಪ್ಪ ಹೆಬ್ಬಾಳಕರ್ ಅವರ 'ಚಂದ್ರಣ್ಣನ ವಚನಗಳು' (೨೦೧೪)**

'ಚಂದ್ರಣ್ಣನ ವಚನಗಳು' ೨೦೧೪ರಲ್ಲಿ ಪ್ರಕಟವಾಗಿರುವ ಚಂದ್ರಪ್ಪ ಹೆಬ್ಬಾಳಕರ್ ಅವರ ಆಧುನಿಕ ವಚನ ಸಂಕಲನ. 'ಚಂದ್ರಣ್ಣ' ಎಂಬ ಅಂಕಿತನಾಮದಲ್ಲಿ ಇವರು ವಚನಗಳನ್ನು ರಚಿಸಿದ್ದಾರೆ. ಬೀದರ ಜಿಲ್ಲೆಯ ಹುಮನಾಬಾ ತಾಲೂಕಿನ ಬೇಮಳಖೇಡ ಗ್ರಾಮದಲ್ಲಿ ೧೪-೦೪-೧೯೪೦ ರಂದು ಜನಿಸಿದರು. ಇವರ ತಂದೆಯ ಹೆಸರು ಅಡಿವೆಪ್ಪ. ತಾಯಿ ಶಿವಮ್ಮ, ಬಿ.ಎ., ಬಿ.ಇಡಿ. ಪದವೀಧರರಾದ ಇವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿ, ವಿಷಯ ಪರಿವೀಕ್ಷಕರಾಗಿ, ಪ್ರೌಢ ಶಾಲಾ ಮುಖ್ಯಗುರುಗಳಾಗಿ, ಕ್ಷೇತ್ರ ಶಿಕ್ಷಣಾಧಿಕಾರಿಯಾಗಿ, ಶಿಕ್ಷಕರ ತರಬೇತಿ ಸಂಸ್ಥೆ ಬೀದರನಲ್ಲಿ ಉಪನ್ಯಾಸಕರಾಗಿ ಕಾರ್ಯನಿರ್ವಹಿಸಿ ನಿವೃತ್ತ ಹೊಂದಿದ್ದಾರೆ.

ಅನೇಕ ಸಂಘ ಸಂಸ್ಥೆಗಳಿಂದ ಗೌರವ ಸನ್ಮಾನ ಪ್ರಶಸ್ತಿ ಪಡೆದಿದ್ದಾರೆ. ಸಮಾಜಸೇವೆಯ ಪ್ರಶಸ್ತಿ, ಶಿಕ್ಷಣ ಪ್ರಶಸ್ತಿ, ರಂಗಮಲ್ಲಿಗೆ ಪ್ರಶಸ್ತಿ, ಜನಪದ ಕಲಾ ಪ್ರಶಸ್ತಿ, ಸುವರ್ಣ ಕನ್ನಡಿಗ ಪ್ರಶಸ್ತಿ, ಉರಿಲಿಂಗ ಪೆದ್ದಿ ಪ್ರಶಸ್ತಿ, ಸಾಹಿತ್ಯ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಪ್ರಶಸ್ತಿ ಹಾಗೂ ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ, ಬೀದರ ಜಿಲ್ಲಾ ಪ್ರಥಮ ಜಾನಪದ ಸಮ್ಮೇಳನದ ಸರ್ವಾಧ್ಯಕ್ಷತೆಯ ಗೌರವ ಇವರಿಗೆ ದೊರಕಿದೆ. ಬೀದರ ಜಿಲ್ಲಾ ಸಾಹಿತಿಗಳ ವತಿಯಿಂದ 'ಚಿಂತನ ಚಂದ್ರ' ಎಂಬ ಅಭಿನಂದನ ಗ್ರಂಥವನ್ನು ಸಮರ್ಪಿಸಲಾಗಿದೆ.

ಇವರು ಕಥೆ, ಕಾದಂಬರಿ, ಕವನ, ಚುಟುಕು ಕವನ, ಹಾಗೂ ಜೀವನ ಚರಿತ್ರೆಗಳನ್ನು ಬರೆದಿರುವಂತೆ 'ಚಂದ್ರಣ್ಣ' ಎಂಬ ಅಂಕಿತದಲ್ಲಿ ಆಧುನಿಕ ವಚನಗಳನ್ನೂ ರಚಿಸಿದ್ದಾರೆ. 'ಚಿಂತನ ಲಹರಿ, ಪ್ರೀತಿ, ಬೀದರ ಜಿಲ್ಲೆಯ ಮೋಹರಂ ಹಾಡುಗಳು' 'ಬೀದರ ಜಿಲ್ಲೆಯ ದಲಿತ ಸಾಹಿತಿಗಳು' 'ಬೀದರ ಜಿಲ್ಲೆಯ ಜಾನಪದ ಸೊಗಡು' 'ಉರಿಲಿಂಗ ಪೆದ್ದಿ ಚರಿತ್ರೆ' 'ಸತ್ಯಕಥೆಗಳು' ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಇಲ್ಲೆಲ್ಲ ಸಂಶೋಧನಾ ದೃಷ್ಟಿ, ಖಚಿತ ಅಭಿಪ್ರಾಯ. ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ಕೃತಿಗಳನ್ನು ಬರೆದಿರುವುದು ಎದ್ದು

ಕಾಣುತ್ತದೆ. ಸ್ವತಃ ಜನಪದ ಹಾಡುಗಾರರಾಗಿರುವ ಚಂದ್ರಪ್ಪರ ಆಸಕ್ತಿ ಕ್ಷೇತ್ರ 'ಮೋಹರಂ ಹಾಡು'ಗಳ ಕುರಿತ ಅಧ್ಯಯನವಾಗಿದೆ.

ಅನ್ನದಾನ, ಚಿನ್ನದಾನಕ್ಕಿಂತ ವಿದ್ಯಾದಾನ ಮಹತ್ವದ್ದೆನ್ನುವ ಚಂದ್ರಪ್ಪನವರ ಅಭಿಪ್ರಾಯ ಸರಿಯಾಗಿದೆ. ವಿದ್ಯೆ ಇದ್ದವನ್ನು ಅನ್ನ ಚಿನ್ನವನ್ನು ಸಂಪಾದಿಸಿಕೊಳ್ಳುತ್ತಾನೆ. ಆದರೆ ಅನ್ನ, ಚಿನ್ನದ ಶ್ರೀಮಂತರಾದ ಎಷ್ಟೋ ಜನರಿಗೆ ವಿದ್ಯೆಯೇ ಇಲ್ಲದಿದ್ದುದನ್ನು ಅವರು ಕಂಡಿದ್ದಾರೆ. ಜೀವನದ ಅನೇಕ ಮೌಲ್ಯಗಳನ್ನು ಕುರಿತು ಮಾತನಾಡುತ್ತಿರುವ ಚಂದ್ರಣ್ಣನ ವಚನಗಳಿಗೆ ಸರಳತೆಯಿದೆ, ಬದುಕನ್ನು ಕಟ್ಟಿಕೊಳ್ಳಬೇಕಾಗಿರುವ ವಿವೇಚನೆಯ ಅಪೇಕ್ಷೆ ಇರುವುದನ್ನು ಕಾಣಬಹುದು. ಸತ್ಯ-ಶಾಂತಿ, ಅಹಿಂಸೆಯ ಮಾರ್ಗದಿಂದ ನಡೆಯಬೇಕಾಗಿರುವ ಮನುಷ್ಯ, ಜಾತಿ, ಧರ್ಮದ ಅಡ್ಡ ಗೋಡೆಗಳನ್ನು ಕೆಡುವಬೇಕಾಗಿದೆ. ಪ್ರಾಮಾಣಿಕ ಕರ್ತವ್ಯ ಪ್ರಜ್ಞೆಯಿಂದ ದುಡಿದು ದೇಶದ ಪ್ರಗತಿಗೆ ತನ್ನದೆ ಆದ ಕಾಣಿಕೆ ನೀಡಬೇಕಾಗಿದೆ. ಮನುಷ್ಯ ತನ್ನ ಸುಖ ಜೀವನದೊಂದಿಗೆ ಸಮಾಜ, ಗ್ರಾಮ ಹಾಗೂ ದೇಶದ ಸಂತೃಪ್ತಿಯನ್ನು ಗಮನಿಸಬೇಕೆಂಬ ಹಲವಾರು ವಿಷಯ ಸಂಗತಿಗಳು ಇವರ ವಚನದಲ್ಲಿ ಅಭಿವ್ಯಕ್ತವಾಗಿವೆ.

ಬಸವಾದಿ ಶಿವಶರಣರ ನಾಡಿನಲ್ಲಿ ಹುಟ್ಟಿ ಬೆಳೆದ ಈ ಕವಿಯು ಅದೇ ಪರಿಸರದ ಅನುಭವಗಳನ್ನು ಸಮಾಜಕ್ಕೆ ಸಹಜ ಹಾಗೂ ಸರಳವಾಗಿ ನೀಡುವುದರೊಂದಿಗೆ ಬೀದರ ಜಿಲ್ಲೆಯ ಆಧುನಿಕ ವಚನ ಸಾಹಿತ್ಯಕ್ಕೆ ತಮ್ಮದೇ ಆದ ಒಂದು ಕೊಡುಗೆ ನೀಡಿದ್ದಾರೆ ಎನ್ನಬಹುದು.

**೩.೨೩. ಹಂಶಕವಿಯ 'ದತ್ತ ದಿಗಂಬರ ವಚನಗಳು' (೨೦೧೪)**

೨೦೧೪ರಲ್ಲಿ ಪ್ರಕಟವಾಗಿರುವ 'ದತ್ತ ದಿಗಂಬರ ವಚನಗಳು' ಬೀದರ ಜಿಲ್ಲೆಯ ಆಧುನಿಕ ವಚನಗಳ ಇನ್ನೊಂದು ಸಂಕಲನ, ಇದರ ಕರ್ತೃ ಹಂಶಕವಿ. 'ಹಂಶಕವಿ' ಎಂಬುದು ಹನುಮಂತಪ್ಪ ಶಂಕ್ರೆಪ್ಪಾ ವಲ್ಲೇಪುರೆಯವರ ಕಾವ್ಯನಾಮ. ಬೀದರ ಜಿಲ್ಲೆಯ ಔರಾದ ತಾಲೂಕಿನ ನಾಗೂರ (ಬಿ) ಗ್ರಾಮದಲ್ಲಿ ಇವರು ೧೯೬೫ರ ಮೇ ಒಂದರಂದು ಜನಿಸಿದರು. ಬಿ.ಎ., ಬಿ.ಇಡಿ. ಪಡೆದು ಕನ್ನಡ ರತ್ನ ಪರೀಕ್ಷೆಯಲ್ಲಿ ಪಾಸಾಗಿದ್ದಾರೆ. ಬಾಲ್ಯದಿಂದಲೇ ಓದು ಬರಹದ ಗೀಳೂ ಹಚ್ಚಿಕೊಂಡ ಇವರು ಪೊಲೀಸ ಇಲಾಖೆಯಲ್ಲಿ ಪೇದೆಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ವೃತ್ತಿಯಲ್ಲಿ ಪೊಲೀಸ್ ಆಗಿದ್ದರು, ಪ್ರವೃತ್ತಿಯಲ್ಲಿ ಸಾಹಿತಿಗಳಾಗಿದ್ದಾರೆ. ಬೀದರದಲ್ಲಿ ದೇಶಾಂಶ ಹುಡಗಿಯವರ ಅಧ್ಯಕ್ಷತೆಯಲ್ಲಿಯ 'ಧರಿನಾಡು' ಎಂಬ ಕನ್ನಡ ಸಾಹಿತ್ಯ ಸಂಘದ ಸದಸ್ಯರಾಗಿ ಪದಾಧಿಕಾರಿಯಾಗಿ, ಜಿಲ್ಲೆಯ ಸಾಹಿತಿಗಳ ಸಾಲಿನಲ್ಲಿ ಗುರುತಿಸಿಕೊಂಡರು. ಮೊದಲು 'ಧರಿನಾಡು' ಸಂಘದ ಮೂಲಕ ನೂರಾರು ಬರಹಗಾರರಿಗೆ ಸಾಹಿತಿಗಳಿಗೆ ವೇದಿಕೆ ನೀಡಿ, ಅವರಲ್ಲಿ ಕೆಲವರ ಕೃತಿಗಳನ್ನು ಪ್ರಕಟಿಸುತ್ತ ತಾವೂ ಕವಿಯಾಗಿ ಬೆಳೆದರು ಇವರ ಬೆನ್ನಹಿಂದಿನ ಬೆಳಕಾಗಿದ್ದವರು ಪತ್ನಿ ಶ್ರೀಮತಿ ಚೆನ್ನಮ್ಮ ವಲ್ಲೇಪುರೆ ಅವರು. 'ಕಾವ್ಯ, ಕಥೆ, ಜೀವನ ಚರಿತ್ರೆ, ಆಧುನಿಕ ವಚನದಂತಹ ಸೃಜನ ಶೀಲ ಕೃತಿಗಳು ಹನ್ನೊಂದು ಸಂಪಾದನೆ ಅಭಿನಂದನಾಗ್ರಂಥಗಳು ಸಂಪಾದನೆಗಳು ಐವತ್ತು ಒಟ್ಟು ಅರವತ್ತೊಂದು ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದ್ದಾರೆ.[೪೮]

ಹಂಶಕವಿಯವರ ಸ್ವರಚಿತ ಕೃತಿಗಳೆಂದರೆ, 'ಹಾಹಾಕಾರ' (೨೦೦೧) (ಕವನ ಸಂಕಲನ) 'ಸಂತ ಗುಂಡಯ್ಯ' (ಚರಿತ್ರೆ) 'ದತ್ತ ಗೀತ ಮಾಲಾ' (ಹಾಡುಗಳು) 'ದತ್ತ ದರ್ಶನ' ಚರಿತ್ರೆ, ಬದುಕು (ಕವನ ಸಂಕಲನ)

'ಅಪರೂಪದ ಶರಣರು' (ಚರಿತ್ರೆ) 'ಬೀದರ ಜಿಲ್ಲೆಯ ಆಧುನಿಕ ವಚನಕಾರರು', 'ಕಾವ್ಯ ಲಹರಿ' ಮೊದಲಾದವುಗಳು ಹಲವು ಜಿಲ್ಲಾ ಮಟ್ಟದ ಪ್ರಶಸ್ತಿಗಳನ್ನು ಪಡೆದ ಇವರು 'ಆಧುನಿಕ ವಚನಕಾರ'ರಾಗಿಯೂ ಪರಿಚಿತರಾಗಿದ್ದಾರೆ.

೨೦೦೮ರಲ್ಲಿ ರಾಜ್ಯ ಮಟ್ಟದ ಪ್ರಾತಿನಿಧಿಕ ವಚನಗಳನ್ನು ಸಂಗ್ರಹಿಸಿ ಅವುಗಳನ್ನು 'ಆಧುನಿಕ ವಚನಗಳು' ಎಂಬ ಹೆಸರಿನಡಿಯಲ್ಲಿ ಸಂಪಾದಿಸಿ ಪ್ರಕಟಿಸಿದರು. ಶ್ರೀ ಸಿದ್ಧಲಿಂಗೇಶ್ವರ ಬುಕ್ ಡೀಪೋ ಕಲಬುರ್ಗಿಯಿಂದ

ಪ್ರಕಾಶಿತಗೊಂಡಿರುವ ಇದರಲ್ಲಿ ೧೮೮ ಪ್ರಾತಿನಿಧಿಕ ವಚನಕಾರರ ಕೆಲವು ವಚನಗಳನ್ನು ಅವರವರ ಅಂಕಿತನಾಮದ ಹೆಸರಿನಲ್ಲಿ ಮೊದಲು ಬೆಳಕಿಗೆ ತಂದಿದ್ದಾರೆ. ಈ ಕೃತಿಯಲ್ಲಿ ಇವರು ಬೀದರ ಜಿಲ್ಲೆಯ ೪೦ ಆಧುನಿಕ ವಚನಕಾರರನ್ನು ಗುರುತಿಸಿದ್ದಾರೆ. ಆ ಯಾವ ವಚನಕಾರರ ಬಗ್ಗೆ ಯಾವುದೇ ಮಾಹಿತಿ ನೀಡಿಲ್ಲ.

೨೦೦೯ರಲ್ಲಿ ಎಲ್ಲೇಗೌಡ ಬೆಸಗರಹಳ್ಳಿಯವರು ವಿನಯ ಪ್ರಕಾಶನ ಬೀದರ ಪ್ರಕಾಶನದಡಿಯಲ್ಲಿ 'ಆಧುನಿಕ ವಚನಕಾರರು' ಎಂಬ ಪುಸ್ತಕವನ್ನು ಹೊರತಂದಿದ್ದಾರೆ. ಇದರಲ್ಲಿ ಕರ್ನಾಟಕದ ೪೯೬ ಆಧುನಿಕ ವಚನಕಾರರನ್ನು ಗುರುತಿಸಲಾಗಿದೆ. ಈ ವಿನಯ ಪ್ರಕಾಶಕರು 'ಹಂಶಕವಿ' ಅವರು ಈ ಕೃತಿಯಲ್ಲಿ ಬೀದರ ಜಿಲ್ಲೆಯ ೪೦ ಜನ ಆಧುನಿಕ ವಚನಕಾರರ ಹೆಸರು ಹಾಗೂ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ. ಆದರೆ ಈ ೪೦ ಜನರಲ್ಲಿ ೩೦ ಜನ ಮಾತ್ರ ೨೦೧೬ರ ಹೊತ್ತಿಗೆ ತಮ್ಮ ಆಧುನಿಕ ವಚನ ಸಂಕಲನಗಳನ್ನು ಹೊರತಂದಿದ್ದಾರೆ. ಆನಂತರದಲ್ಲಿ ಬೇರೆ ೧೦ ಜನರು ಆಧುನಿಕ ವಚನಗಳನ್ನು ಅಲ್ಲಲ್ಲಿ ರಚಿಸಿರುವ ಉಲ್ಲೇಖಗಳಿವೆ.

ಹಂಶಕವಿಯು 'ದತ್ತದಿಗಂಬರ' ಎಂಬ ಅಂಕಿತದಲ್ಲಿ ೧೨೬ ಆಧುನಿಕ ವಚನಗಳನ್ನು 'ದತ್ತ ದಿಗಂಬರ ವಚನಗಳು' ಎಂಬ ಹೆಸರಿನಲ್ಲಿ ೨೦೧೪ರಲ್ಲಿ ಪ್ರಕಟಿಸಿದ್ದಾರೆ. ಇವರು ೧೨ನೇಯ ಶತಮಾನದ ಶರಣರ ಚಿಂತನೆಗಳನ್ನು ಅಳವಡಿಸಿಕೊಂಡಿದ್ದಾರೆ. ಶರಣರು ಅಂದಿನ ವಾಸ್ತವಿಕ ನೆಲೆಗಟ್ಟಿನ ಮೇಲೆ, ತಮ್ಮ ಅನುಭಾವದ ಮೂಲಕ ವಚನಗಳನ್ನು ರಚಿಸಿದ್ದರೆ, ಹಂಶ ಕವಿಯವರು ಇಂದಿನ ವಾಸ್ತವಿಕ ಬದುಕಿನ ಹಿನ್ನೆಲೆಯಲ್ಲಿ ತಾವು ಅನುಭವಿಸಿದ ವಿಷಯ ಕುರಿತು ಅಭಿವ್ಯಕ್ತಿಸಿದ್ದಾರೆ.

ಒಟ್ಟಿನಲ್ಲಿ ತಮ್ಮ ವಚನಗಳಲ್ಲಿ ವಾಸ್ತವಿಕ ಪ್ರಪಂಚದಲ್ಲಿರುವ ವಸ್ತು ವೈವಿಧ್ಯವನ್ನು ಮತ್ತು ಮನುಷ್ಯನ ನಾನಾ ರೀತಿಯ ಭಾವನೆಗಳನ್ನು ವಿಮರ್ಶಾತ್ಮಕವಾಗಿ ಅನಾವರಣಗೊಳಿಸಿದ್ದು ಕಂಡುಬರುತ್ತದೆ. ಮನುಷ್ಯ ಯಾವಾಗ ಈ ಭೂಮಿಗೆ ಬಂದನೋ ಆವಾಗಿಂದ ಕಷ್ಟನಷ್ಟಗಳು ತಪ್ಪಿದ್ದಲ್ಲ. ಅನಿವಾರ್ಯವಾಗಿ ಅವುಗಳನ್ನು ಅನುಭೋಗಿಸಬೇಕಾಗಿರುವುದರಿಂದ ಎದೆಗುಂದಬಾರದೆನ್ನುತ್ತಾರೆ. ಆದರೂ ಇಲ್ಲಿ ಕಹಿ ಬೇಡ, ಹುಳಿ ಬೇಡ, ಖಾರವಾಗಿ ನುಡಿದಂತೆ ನಡೆಯಲು ಹೇಳುತ್ತಾರೆ. ಮಾನವೀಯ ಅಂತಃಕರಣವುಳ್ಳ ವಿಚಾರಗಳನ್ನು ತಿಳಿಸುವ ವಚನಗಳು ಇಲ್ಲಿ ಹೆಚ್ಚಾಗಿವೆ. ಪೊಲೀಸನಾಗಿದ್ದರೂ ಪ್ರೀತಿ, ಪ್ರೇಮ, ವಿಶ್ವಾಸದ ನಗೆಬೀರಿ, ಎಲ್ಲರೊಂದಿಗೆ ಒಂದಾಗಿ ಬಾಳುತ್ತಿರುವ ಈ ಆಧುನಿಕ ವಚನಕಾರ, ಸಹೃದಯಿ, ಶರಣ ಜೀವಿ ಎನಿಸಿರುವ ಇವರು ತಮ್ಮ ಬರಹಗಳ ಮೂಲಕ ಮಾನವ ಪ್ರೇಮ, ಪ್ರಕೃತಿ ಪ್ರೇಮ, ಸಮಾಜ ಸೇವಾ ಗುಣಗಳನ್ನು ಬಿತ್ತಲು ಪ್ರಯತ್ನಿಸಿರುವುದು ಎದ್ದು ಕಾಣುತ್ತದೆ. ಬೀದರ ಜಿಲ್ಲೆಯ ಆಧುನಿಕ ವಚನ ಸಾಹಿತ್ಯಕ್ಕೆ ಇವರ ಕೃತಿ ಶ್ರೇಷ್ಠ ಕೊಡುಗೆಯಾಗಿದೆ.

**೩.೨೪ ಶಾಂತಮ್ಮ ಬಲ್ಲೂರ ಅವರ 'ವಚನ ಗೊಂಚಲು' (೨೦೧೫)**

ಬೀದರ ಜಿಲ್ಲೆಯ ಮಹಿಳೆಯರು ಸೃಜನಶೀಲ ಸಾಹಿತ್ಯದಲ್ಲಿ ತೊಡಗಿಕೊಂಡಿರುವುದರ ಮುಂದುವರಿಕೆಯಾಗಿ ಶಾಂತಮ್ಮ ಬಲ್ಲೂರರು ಕಾಣುತ್ತಾರೆ. ಅವರ 'ವಚನ ಗೊಂಚಲು' ಆಧುನಿಕ ವಚನಗಳ ಸಂಕಲನ. ಇದು ಒಂದು ಸಾಹಿತ್ಯ ಪ್ರಕಾರವಾಗಿ ಗಮನ ಸೆಳೆಯುವ ಕೃತಿಯಾಗಿ ಕಾಣುತ್ತದೆ. ಶಾಂತಮ್ಮ ಬಲ್ಲೂರ ಅವರು ಬೀದರದ ಪ್ರಮುಖ ಮಹಿಳಾ ಲೇಖಕಿಯರಲ್ಲಿ ಒಬ್ಬರು. ಬೀದರನ ಕರ್ನಾಟಕ ಲೇಖಕಿಯ ಸಂಘ, ಜಿಲ್ಲಾ ಘಟಕ ಬೀದರದ ಸದಸ್ಯೆಯಾಗಿ ಬರಹಕ್ಕೆ ಕೈ ಹಾಕಿದ್ದಾರೆ. ಆ ಸಂಘದ ಅಧ್ಯಕ್ಷರಾಗಿದ್ದ ಯಶೋದಮ್ಮ ಸಿದ್ಧಬಟ್ಟೆಯವರು ಇವರ ಸಾಹಿತ್ಯ ಚಟುವಟಿಕೆಗಳಿಗೆ ಸ್ಫೂರ್ತಿ, ಪ್ರೇರಣೆ, ಧೈರ್ಯ ತಂದುಕೊಟ್ಟಿದ್ದಾಗಿ ಅವರೇ ಹೇಳಿಕೊಳ್ಳುತ್ತಾರೆ.

ಶಾಂತಮ್ಮರ ಬರಹಕ್ಕೆ ಅವರ ಪತಿ ಸಾಮಸನ್‌ರ ಸಮ್ಮತಿ, ಸಹಕಾರ ಹೆಚ್ಚಾಗಿರುವುದನ್ನು ಅವರು ತಿಳಿಸುತ್ತಾರೆ. ಈ ಹಿನ್ನೆಲೆಯಲ್ಲಿ ಮೊದಲು ಅವರು 'ನೆರಳು' ಎನ್ನುವ ಕವನ ಸಂಕಲನವನ್ನು ಹೊರತಂದಿದ್ದಾರೆ. ೨೦೧೫ರಲ್ಲಿ 'ವಚನ ಗೊಂಚಲು' ಕೃತಿ ಮೂಡಿ ಬಂದಿದೆ. **'ಶಾಸನೇಶ್ವರಿ'** ಅಂಕಿತದಲ್ಲಿ ಈ ಕೃತಿಯಲ್ಲಿ ೨೦೪ ಆಧುನಿಕ ವಚನಗಳಿವೆ. ವಿಶ್ವ ಸಾಹಿತ್ಯ ಲೋಕದ ವಿಶಿಷ್ಟ ಪ್ರಕಾರವಾದ 'ವಚನ'ವನ್ನು ಶಾಂತಮ್ಮನವರು ತಮ್ಮ ಸಾಹಿತ್ಯ ಪ್ರಕಾರವಾಗಿ ಬಳಸಿಕೊಂಡು ಉತ್ತಮ ಪ್ರಯತ್ನ ಮಾಡಿದ್ದಾರೆನ್ನಬಹುದು.

"ಇಂದಿನ ಕಾಲಮಾನದ ಚುಟುಕು ಸಾಹಿತಿಗಳು ವಚನ ಪ್ರಕಾರವನ್ನು ತಮ್ಮ ಅಭಿವ್ಯಕ್ತಿಯ ಮಾಧ್ಯಮವಾಗಿ ಬಳಸಿಕೊಳ್ಳುತ್ತಿರುವುದು ವಚನ ಸಾಹಿತ್ಯದ ಸಾರ್ವತ್ರಿಕತೆಯನ್ನು ಸೂಚಿಸುತ್ತದೆ. ಆಧುನಿಕ ಬದಕಿಗೆ ಕಿರಿದರಲ್ಲೇ ಹಿರಿದಾದುದನ್ನು ಹಿಡಿದಿಡುವ ಸಾಹಿತ್ಯ ಪ್ರಕಾರದ ಅವಶ್ಯಕತೆಯಿದೆ. ಸೂಚ್ಯವಾಗಿ ಮಹತ್ವದ್ದನ್ನು ಹೇಳುವ ಪ್ರತಿಭೆಗೆ ವಚನ ಪ್ರಕಾರ ಹೇಳಿ ಮಾಡಿಸಿದಂತಿದೆ. ಶಾಂತಮ್ಮ ತಮ್ಮ ಗಂಭೀರ ವಿಚಾರಗಳನ್ನು ವ್ಯಕ್ತಪಡಿಸಲು ಈ ಮಾರ್ಗ ಹಿಡಿದದ್ದು ಸರಿಯಾಗಿಯೇ ಇದೆ ಎನ್ನುತ್ತಾರೆ ರಂಜಾನ್ ದರ್ಗಾ"[೪೯]

ಶಿಕ್ಷಕಿಯಾಗಿರುವ ಶಾಂತಮ್ಮ ಅವರು ಸಮಕಾಲೀನ ಬದುಕಿನ ಚಿಂತನೆಗಳತ್ತ ಒಲವು ತೋರಿದ್ದು, ವಚನ ಕೃತಿಯಲ್ಲಿ ಎದ್ದು ಕಾಣುತ್ತಿದ್ದು ಇದು ಈ ನೆಲೆಯಲ್ಲಿ ತನ್ನದೇ ಆದ ಸ್ಥಾನ ಪಡೆಯುತ್ತದೆ ಎಂದು ಹೇಳಬಹುದು.

**೩.೨೫ ರಘುನಾಥ ಹಡಪದರ 'ವಚನಗಳು' (೨೦೧೬)**

ರಘುನಾಥ ಹಡಪದ ಅವರು ಬೀದರ ಜಿಲ್ಲೆಯ ತತ್ವಪದಕಾರ, ಕವಿ, ಶರಣ ಜೀವಿ ಹಾಗೂ ಆಧುನಿಕ ವಚನಕಾರರಾಗಿ ಗುರುತಿಸಿಕೊಂಡಿದ್ದಾರೆ. ೨೦೧೦ ರಿಂದಲೇ ನಿರಂತರವಾಗಿ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ರಘುನಾಥ ಅವರು ಅನೇಕ ತ್ರಿಪದಿಗಳನ್ನು, ರಾಮದಾಸರ 'ಮನಾಚೆ ಶ್ಲೋಕಗಳು' ಎಂಬ ಭಾಮಿನಿ ಷಟ್ಪದಿಯ ಕಾವ್ಯವನ್ನು ಅನುವಾದಿಸಿದ್ದಾರೆ. ಈಗಾಗಲೇ ನಾಲ್ಕು ತತ್ವಪದ ಕೃತಿಗಳ ಸಂಪಾದಕರಾಗಿಯೂ ಕಾರ್ಯಗೈದಿದ್ದಾರೆ.

ರಘುನಾಥ ಹಡಪದ ಅವರು ಜನಿಸಿದ್ದು ಇಂದಿನ ತೆಲಂಗಾಣದ ನಾರಾಯಣಖೇಡಿನ ಚೆಪ್ಪಿ ಗ್ರಾಮದಲ್ಲಿ. ಆ ಗ್ರಾಮದ ಸುಂದ್ರಮ್ಮ ಮತ್ತು ಮಲ್ಲಪ್ಪ ದಂಪತಿಗಳ ಉದರದಲ್ಲಿ ಅವರ ಹಿರಿಯಮಗನಾಗಿ ದಿನಾಂಕ ೨೫-೦೭-೧೯೬೧ರಲ್ಲಿ ಜನಿಸಿದರು. ಬಾಲ್ಯದಲ್ಲಿಯೇ ತಾಯಿಯನ್ನು ಕಳೆದುಕೊಂಡು ತಂದೆಯ ಆಶ್ರಯದಲ್ಲಿ ತೆಲಗು ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ. ಪಾಸು ಮಾಡಿದರು. ಆದರೂ ತಮ್ಮ ಬದುಕನ್ನು ಭದ್ರಪಡಿಸಿಕೊಳ್ಳಲು

ಸ್ವಜಾತಿಯ ಕಸುಬಿಗೆ ಮೊರೆ ಹೋದರು. ೧೯೭೭ರಲ್ಲಿ ಮದುವೆಯಾದ ಇವರು ತಮ್ಮ ಕುಲಬಾಂಧವರ ಕಾಟ ಸಹಿಸಲಾರದೆ ಬದುಕನ್ನು ಕಟ್ಟಿಕೊಳ್ಳಲು ೧೯೮೦ರಲ್ಲಿ ಬೀದರಗೆ ಬಂದು ತಮ್ಮ ಕಾಯಕವನ್ನು ಮುಂದುವರೆಸಿದರು.

ವೃತ್ತಿಯೊಂದಿಗೆ ಪ್ರವೃತ್ತಿಯಲ್ಲಿ ಆಧ್ಯಾತ್ಮ ಜೀವಿಯಾಗಿದ್ದ ರಘುನಾಥರು ಯಾರಾದರೂ ಕನ್ನಡದಲ್ಲಿ ಹೇಳಿದ ವಚನ ಹಾಗೂ ತತ್ವಪದಗಳನ್ನು ತೆಲುಗಿನಲ್ಲಿ ಬರೆದುಕೊಂಡು ಮನನ ಮಾಡಿಕೊಳ್ಳುತ್ತಿದ್ದರು. ಜ್ಞಾನಿಗಳಿದ್ದ ಕಡೆಗೆ ಸ್ವತಃ ಕನ್ನಡ ಕಲಿಯುವುದರೊಂದಿಗೆ ಕನ್ನಡದಲ್ಲಿ ತಮ್ಮದೇ ಆದ ಅನುಭವವನ್ನು ಕಟ್ಟಿಕೊಡುತ್ತ, ತತ್ವ-ಪದಕಾರರಾಗಿ, ಆಧುನಿಕ ವಚನಕಾರರಾಗಿ ಬೆಳೆದು ಬಂದಿದ್ದಾರೆ. ಬೀದರನ ಚಿಟ್ಟಾವಾಡಿಯಲ್ಲಿ ನೆಲೆನಿಂತಿರುವ ಇವರು ಬಸವಾದಿ ಶರಣರು, ಕಾಯಕ-ದಾಸೋಹ ಕುರಿತು ಆಳವಾಗಿ ಅಧ್ಯಯನ ಮಾಡಿಕೊಂಡಿದ್ದಾರೆ.

'ನಿರಂಜೇಶ್ವರಾ' ಅಂಕಿತದಲ್ಲಿ ನೂರಾರು ವಚನಗಳನ್ನು ಬರೆದಿರುವ ಇವರು 'ನೀಲಮ್ಮನ ಬಳಗದ ವಚನಗಳು' ಸಂಕಲನದಲ್ಲಿ ತಮ್ಮ ೨೯ ವಚನಗಳನ್ನು ಪ್ರಕಟಿಸಿದ್ದಾರೆ. ಶರಣರ ವಚನಗಳ ಪ್ರಭಾವದ ಹಿನ್ನೆಲಯಲ್ಲಿ ರಚನೆಗೊಂಡಿರುವ ರಘುನಾಥ ಹಡಪದ ವಚನಗಳು ಸಮಕಾಲೀನ ಸಮಸ್ಯೆಗಳನ್ನು ಕುರಿತು ಮಾತನಾಡುತ್ತವೆ. ಗಾತ್ರದಲ್ಲಿ ಸ್ವಲ್ಪ ದೊಡ್ಡ ದೊಡ್ಡ ವಚನಗಳನ್ನು ರಚಿಸಿರುವ ಇವರು ತಮ್ಮ ಅನುಭವಗಳನ್ನು ಆಯಾ ವಚನಗಳಲ್ಲಿ ಮನಂಬುಗುವಂತೆ ರಚಿಸಿದ್ದು ವಿಶೇಷವೆನ್ನಬಹುದು.

ಸದ್ಗುರುವಿಗಾಗಿ ಕಾಯುವಿಕೆ, ತನ್ನನರಿಯುವುದು, ಧರ್ಮ ರಾಜಕೀಯಕ್ಕೆ ಜೋತುಬೀಳಬಾರದೆಂಬ ಭಾವ, ಶರಣರ ಹಿರಿಮೆ, ವಿಷಯಂಗಳಿಗೆಳಸುವುದು, ಗುರು-ಶಿಷ್ಯರ ಶ್ರೇಷ್ಠತೆ, ಮೊದಲಾದ ವಿಷಯಗಳನ್ನು ಕುರಿತ ವಿವೇಚನೆಗಳು ಇಲ್ಲಿಯ ವಚನಗಳಲ್ಲಿವೆ. ರಘುನಾಥ ಹಡಪದರ ವಚನಗಳು ಭಕ್ತಿ ಪರಂಪರೆಗೆ ಸೇರಿದಂಥವುಗಳು. ತಮ್ಮದೇ ಆದ ಅಂಕಿತದಲ್ಲಿ ಇವರ ವಚನಗಳಿವೆ. ಶರಣರ ವಚನ ಸಾಹಿತ್ಯದ ಮುಂದುವರೆಕೆಯ ಭಾಗವಾಗಿ ಇವರ ವಚನಗಳು ರಚನೆಗೊಂಡಿರುವುದರಿಂದ ಅವುಗಳಿಗೆ ಅದರದೇ ಆದದ ವೈಶಿಷ್ಟ್ಯಗಳಿವೆ. ಇಲ್ಲಿ ಬಸವಾದಿ ಶರಣರ ತತ್ವಾದರ್ಶಗಳನ್ನು ವಿಸ್ತೃತ ಮಾಡಿ, ಇಂದಿನ ಯುಗಧರ್ಮಕ್ಕನುಗುಣವಾಗಿ ಇವರು ವಚನ ರಚಿಸಿದ್ದಾರೆ. ಇಲ್ಲೆಲ್ಲ ಸರಳವಾದ ವಾಖ್ಯಗಳು, ಸರಳವಾದ ಭಾಷೆ, ವಿಷಯಗಳನ್ನು ತುಂಬಾ ಸರಳವಾಗಿ ತಿಳಿಸಿ ಹೇಳುವ ಕ್ರಮ ಮನಮುಟ್ಟುತ್ತದೆ. ರೋಷ, ಆವೇಶಗಳಿಂದ ದೂರವಾಗಿರುವ ಇವರ ಶೈಲಿ ಬೀದರ ಜಿಲ್ಲೆಯ ಆಧುನಿಕ ವಚನ ಸಾಹಿತ್ಯಕ್ಕೆ ನವೀನ ರೀತಿಯಲ್ಲಿದೆ ಎನ್ನಬಹುದು.

**೩.೨೬ ವೇದಾವತಿ ಮಠಪತಿಯವರ ವಚನಗಳು (೨೦೧೬)**

ಬಸವಾನುಯಾಯಿ ವೇದಾವತಿ ಮಠಪತಿಯವರು ಆದರ್ಶ ಗೃಹಿಣಿ. ಬಸವ ಮಹಿಮೆಯ ಹಾಡುತ್ತ. ಶರಣ ತತ್ವವು ಎಲ್ಲೆಡೆ ಪಸರಿಸಬೇಕೆಂಬ ಬಯಕೆ ಹೊತ್ತವರು. ತಮ್ಮ ಉತ್ಕಟ ಬಯಕೆಯಂತೆ ಮನೆಯನ್ನೇ ಬಸವಾಲಯವಾಗಿಸಿಕೊಂಡವರು. ಬಸವಕಲ್ಯಾಣ ತಾಲೂಕಿನ ಗೋರ್ಟಾ (ಬಿ) ಗ್ರಾಮದಲ್ಲಿ ೫-೧೦-೧೯೬೫ರಲ್ಲಿ ಜನಿಸಿದ್ದಾರೆ. ಇವರ ತಂದೆ ನಾಗಯ್ಯ, ತಾಯಿ ರತ್ನಮ್ಮರ ಏಳನೆಯ ಮಗುವಾಗಿ ಜನಿಸಿದವರು. ದೊಡ್ಡ ಕುಟುಂಬದಲ್ಲಿ

ನಾಲ್ಕು ಜನ ಅಣ್ಣಂದಿರು ಹಾಗೂ ಇಬ್ಬರು ಅಕ್ಕಂದಿರ ಮುದ್ದಿನ ತಂಗಿಯಾಗಿ ಬೆಳೆದಿದ್ದಾರೆ. ೧೯೮೫ರಲ್ಲಿ ಬೀದರ ತಾಲೂಕಿನ ಮಲಿಕ್‌ಮಿರ್ಜಾಪುರದ ಮಲ್ಲಿಕಾರ್ಜುನರೊಂದಿಗೆ ಮದುವೆಯಾಗಿ ಈಗ ಬೀದರದಲ್ಲಿಯೇ ನೆಲೆನಿಂತಿದ್ದಾರೆ.

ಆಕಸ್ಮಿಕವಾಗಿ ೧೯೯೬ರಲ್ಲಿ ಶಿಕ್ಷಕ ವೃತ್ತಿ ಸಿಕ್ಕಾಗ ಆನಂದಿತರಾಗಿ ಹುಮನಾಬಾದ ತಾಲ್ಲೂಕಿನ ಚಾಂಗಲೇರಿ ಗ್ರಾಮದ ಉರ್ದು ಮಾಧ್ಯಮ ಶಾಲೆಯಲ್ಲಿ ಕನ್ನಡ ಶಿಕ್ಷಕರಾಗಿ ಸೇವೆ ಆರಂಭಿಸಿದ್ದಾರೆ. ಶ್ರದ್ಧೆ, ನಿಷ್ಠೆಯಿಂದ ಸೇವೆ ಸಲ್ಲಿಸುತ್ತಿರುವ ಇವರು ಅಪ್ಪಟ ಬಸವಭಕ್ತರು. ವೃತ್ತಿಯಿಂದ ಶಿಕ್ಷಕಿಯಾಗಿ, ಪ್ರವೃತ್ತಿಯಿಂದ ಬಸವಾನುಯಾಯಿಯಾಗಿ ಗುರುತಿಸಿಕೊಂಡಂತೆ ೨೦೧೦ ರಿಂದ ಬೀದರದ ನೀಲಾಂಬಿಕಾ ಬಳಗದ ಜೀವಾಳವಾಗಿಯೂ ಚಿರಪರಿಚಿತರಾಗಿದ್ದಾರೆ. ಬಸವ ಭಕ್ತಿಯ ಸತ್ಸಂಗಿಗಳಾಗಿರುವ ಇವರು ವಿದ್ಯಾನಗರದ ನಿವಾಸಿ. ಬಸವನಗರದ ಅಕ್ಕನ ಬಳಗ, ಶಿವನಗರದ ಅಕ್ಕನ ಬಳಗ, ಪ್ರತಾಪನಗರದ ಅಕ್ಕನ ಬಳಗಗಳಿಗೆ ಹೋಗಿ ಮಾಸಿಕ ಶಿವಾನುಭವ, ಶೀವಯೋಗ ಕಾರ್ಯಕ್ರಮವನ್ನು ನಡೆಸಿಕೊಟ್ಟಿದ್ದಾರೆ. ಯಾವ ಪ್ರಚಾರ, ಪರಿಚಯ ಬಯಸದ ಇವರು ಎಲೆಮರೆಯ ಕಾಯಂತೆ ಕಾರ್ಯ ನಿರ್ವಹಿಸುವ ಆಧುನಿಕ ವಚನಕಾರರೂ ಆಗಿದ್ದಾರೆ.

ತಮ್ಮ ಗಂಡನ ಹೆಸರಾದ ಮಲ್ಲಿಕಾರ್ಜುನನ ಹೆಸರನ್ನು ಸೇರಿಸಿಕೊಂಡು ತಮ್ಮ ಗುರುಬಸವಣ್ಣ ಹೆಸರನ್ನು ಅಂಟಿಸಿಕೊಂಡು, 'ಮಲ್ಲಿಕಾರ್ಜುನ ಪ್ರಿಯ ಬಸವಣ್ಣ' ಎಂಬ ಅಂಕಿತದಲ್ಲಿ ಕೆಲವು ವಚನಗಳನ್ನು ರಚಿಸಿದ್ದಾರೆ. ಅವರ ೩೦ ವಚನಗಳು 'ನೀಲಮ್ಮನ ಬಳಗದ ವಚನಗಳು' ಎಂಬ ಸಂಕಲನದಲ್ಲಿ ಪ್ರಕಟವಾಗಿವೆ.[೫೦] ಸಮಕಾಲೀನ ಬದುಕಿನ ವಿವಿಧ ವಿಷಯ ವಿಚಾರಗಳು ಇಲ್ಲಿ ವಚನಗಳಾಗಿ ಅಭಿವ್ಯಕ್ತವಾಗಿವೆ.

ಒಟ್ಟಿನಲ್ಲಿ ವೇದಾವತಿಯವರ ವಚನಗಳ ಮೇಲೆ ಬಸವಾದಿ ಶರಣರ ದಟ್ಟ ಪ್ರಭಾವವಿದ್ದು, ಅವುಗಳಿಗೆ ಅವರದೇ ಆದ ಲಯಗಾರಿಕೆ ಮೂಡಿದೆ. ತಾವು ಹೇಳಬೇಕಾದ ವಿಷದ ಖಚಿತ ನಿರೂಪಣೆಗಾಗಿ ಪದಗಳನ್ನು ದುಡಿಸಿಕೊಂಡ ಗೆಯ್ಮೆಯಿದೆ. ತಾವು ಕಂಡುಂಡ ಅನುಭವಗಳನ್ನು ಸ್ಪಷ್ಟವಾಗಿ ಅಭಿವ್ಯಕ್ತಿಸುವ ತಂತ್ರಗಾರಿಕೆಯಿದೆ. ಆದರೆ ಶರಣರ ವಚನಗಳ ದಟ್ಟಪ್ರಭಾವದಿಂದ ಹೊರಬರಲಾಗದ ಅಸಹಾಯಕತೆಯೂ ಇದೆ. "ತಮ್ಮ ವಿಚಾರಗಳಿಗೆ ತಮ್ಮದೇ ಆದ ಅಭಿವ್ಯಕ್ತಿಯನ್ನು ಮಾಧ್ಯಮವನ್ನಾಗಿ ಮಾಡಿಕೊಂಡರೆ ಇವರ ವಚನಗಳು ಇನ್ನಷ್ಟು ಪರಿಣಾಮಕಾರಿಯಾಗುತ್ತಿತ್ತು"[೫೧] ಎಂಬ ಅನಿಸಿಕೆಯು ಸರಿಯಾದುದೆನಿಸುತ್ತದೆ.

**೩.೨೭ ಚಂದ್ರಮ್ಮ ದರ್ಗೆಯವರ ವಚನಗಳು (೨೦೧೬)**

ಸಾತ್ವಿಕ ಹಾಗೂ ತಾತ್ವಿಕ ಬದುಕಿನ 'ಚಂದ್ರಮ್ಮ' ಬೀದರ ಜಿಲ್ಲೆಯ ಓರ್ವ ಪ್ರತಿಭಾವಂತೆ ಲೇಖಕಿ. ಮಹಾರಾಷ್ಟ್ರದ ದೆಗ್ಲೂರ ತಾಲೂಕಿನ ಕುನ್ಮಾರಪಳ್ಳಿಯಲ್ಲಿ ೧೯೪೭ರಲ್ಲಿ ಜನಿಸಿರುವ ಚಂದ್ರಮ್ಮ ದೈವಭಕ್ತಳು. ಶುದ್ಧ ಕನ್ನಡ ಪ್ರದೇಶವಾಗಿರುವ ಆ ಗ್ರಾಮದ ಅನುಕೂಲಸ್ಥ ಮನೆತನದ ಭೀಮರಾವ ಇವಳ ತಂದೆ, ರತ್ನಮ್ಮ ಪೊಲೀಸ ಪಾಟೀಲ ಇವರ ತಾಯಿ. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡ ಚಂದ್ರಮ್ಮ ತಾಯಿಯ ಆಶ್ರಯದಲ್ಲಿ ಬೆಳೆದಳು. ಚಂದ್ರಮ್ಮ ಪ್ರೌಢಾವಸ್ಥೆಗೆ ಬರಬರುತ್ತಿದ್ದಂತೆ ತಾಯಿ ಇವಳನ್ನು ಬೀದರನ ಔರಾದ ತಾಲೂಕಿನ ಏಕಲಾರ ಗ್ರಾಮದ ಅಗರ್ಭ ಶ್ರೀಮಂತ ದರ್ಗೆ ಮನೆತನದ ಷಣ್ಮುಕಪ್ಪ ದರ್ಗೆಯವರಿಗೆ ಮದುವೆಮಾಡಿಕೊಟ್ಟರು. ದಾಸೋಹಕ್ಕೆ ಹೆಸರಾಗಿದ್ದ ಪ್ರತಿಷ್ಠಿತ ಮನೆತನದ ಹಿರಿಯ ಸೊಸೆಯಾಗಿ ಚಂದ್ರಮ ಗಂಡನ ಮನೆಯನ್ನು ಸೇರಿದಳು.

ದರ್ಗೆ ಮನೆತನದ ಷಣ್ಮುಕಪ್ಪನ ತಂದೆ ಬಸವಂತರಾಯ ದರ್ಗೆಯವರು ೪೦೦ ಎಕರೆ ಜಮೀನು, ಕೆಲಸಕ್ಕೆ ಆಳುಕಾಳು ಹೊಂದಿದ್ದ ಮನೆತನದವರು. ಶ್ರೀಮಂತಿಕೆಯ ಜೊತೆಗೆ ಭಾಲ್ಕಿ ಹಿರೇಮಠದ ಲಿಂ. ಡಾ. ಚನ್ನಬಸವಪಟ್ಟದ್ದೇವರ ನೆಚ್ಚಿನ ಶಿಷ್ಯರಾಗಿದ್ದರಿಂದ ದಾಸೋಹ ಮಾಡುವುದರಲ್ಲಿ ಒಂದೆ ಮುಂದೆ ನೋಡುತ್ತಿರಲಿಲ್ಲ. ಪ್ರತಿ ವರ್ಷ ಎಕಲಾರದಿಂದ ಭಾಲ್ಕಿ ಮಠಕ್ಕೆ ಪ್ರಸಾದ ನಿಲಯಕ್ಕಾಗಿ ದವಸಧಾನ್ಯಗಳು ಬರುತ್ತಿದ್ದವು. ಪೂಜ್ಯ ಚನ್ನಬಸವ ಪಟ್ಟದ್ದೇವರು ಆ ಊರಿಗೆ ಬಂದಾಗ ನಾಲ್ಕಾರು ದಿನ ಅನುಭಾವ ನೀಡುತ್ತಿದ್ದರು. ಸುತ್ತ ಮುತ್ತಲಿನ ಗ್ರಾಮಗಳಿಂದ ಬಂದವರಿಗೂ ಅಲ್ಲಿ ದಾಸೋಹದ ವ್ಯವಸ್ಥೆ ಇರುತ್ತಿತ್ತು. ದರ್ಗೆಯವರ ಮನೆಯಲ್ಲಿ ಬಸವತತ್ವವನ್ನುಳಿದು ಬೇರಾವ ಪೂಜೆಗಳು ಜರುಗುತ್ತಿರಲಿಲ್ಲ.

ಆದರೆ ಅದೇಕೋ ನಂತರದಲ್ಲಿ ಬಸವಂತರಾವ ದರ್ಗೆಯವರು ಜೋತಿಷ್ಯದ ಕಡೆಗೆ ವಾಲಿದರು. ಅದನ್ನು ಅಧ್ಯಯನ ಮಾಡಿದರು. 'ಕಾಲ ಜ್ಞಾನ ಸೂಚಿ' ಎಂಬ ಪುಸ್ತಕ ಬರೆದು ಪ್ರಕಟಿಸಿದರು. 'ಜ್ಯೋತಿಷ್ಯ ಶಾಸ್ತ್ರದ ಅಧ್ಯಯನದಲ್ಲಿ ತೊಡಗಿದ ಚಂದ್ರಮ್ಮನ ಮಾವನವರಿಗೆ ಈ ಜಗತ್ತು ಮುಳುಗುತ್ತದೆ. ಜಗತ್ತಿನ ಆಯುಷ್ಯ ಕಡಿಮೆ ಎಂಬ ಲೆಕ್ಕಾಚಾರ ಸಿಕ್ಕಿತು. ಹೀಗಾಗಿ ಅವರು ತಮ್ಮ ಮಕ್ಕಳ ಬಗ್ಗೆ ಯೋಚಿಸದೆ ನೂರಾರು ಎಕರೆ ಭೂಮಿಯನ್ನು ಬಡಬಗ್ಗರಿಗೆ ದಾನ ಮಾಡಿದರು. ಉಳಿದದ್ದನ್ನು ಸಿಕ್ಕ ಬೆಲೆಗೆ ಮಾರಿದರು. ಅದರಿಂದ ಬಂದ ಹಣದಲ್ಲಿ ಒಂದು ವರ್ಷಕಾಲ ಸುತ್ತಲಿನ ೧೨ ಹಳ್ಳಿಗಳ ಜನರಿಗೆ ದಾಸೋಹ ಮಾಡಿದರು. ದಿನನಿತ್ಯ ಬಗೆ ಬಗೆಯ ಊಟ, ತಿಂಡಿ ಏರ್ಪಡಿಸಿ ಹಂಚಿದರು. ಜಗತ್ತು ಮುಳುಗಲಿಲ್ಲ. ಆದರೆ ಶ್ರೀಮಂತ ಮನೆತನ ನಿಲ್ಲಲು ಸೂರಿಲ್ಲದಷ್ಟು ಬಡತನದಿಂದ ಕುಂದಿತು. ಹೀಗಾಗಿ ಊರಿನಲ್ಲಿ ಉಳಿಯದೆ ಮಕ್ಕಳು ವಲಸೆ ಹೋಗುವ ಸ್ಥಿತಿ ಬಂತು. ಅವರ ಹಿರಿಯಮಗ ಷಣ್ಮುಕಪ್ಪ ತನ್ನ ಹೆಂಡತಿಯೊಂದಿಗೆ ಬೀದರಗೆ ಬಂದು ನೆಲೆಸಿದನು.

ಆದಾಯ ತೆರಿಗೆ ಲೆಕ್ಕ ಬರೆಯುವುದರಲ್ಲಿ ನಿಪುಣನಾಗಿದ್ದ ಷಣ್ಮುಖಪ್ಪ ಅದರಿಂದಲೇ ಕುಟುಂಬದ ನಿರ್ವಹಣೆ ಮಾಡತೊಡಗಿದರು. ಇವರಿಗೆ ಇಬ್ಬರು ಗಂಡು. ಮೂವರು ಹೆಣ್ಣು ಮಕ್ಕಳಾದಾಗ, ಷಣ್ಮುಕಪ್ಪ ರಸ್ತೆ ಅಪಘಾತದಲ್ಲಿ ತೀರಿಕೊಂಡರು. ಪತಿ ಮರಣದ ನಂತರ ಚಂದ್ರಮ್ಮ ಮಕ್ಕಳಿಗೆ ಬೆನ್ನೆಲುಬಾಗಿನಿಂತು ಬೆಳೆಸಿದರು. ಶಾಲೆಗೆ ಹೋಗಿರದ

ಅವರು ಮಕ್ಕಳೊಂದಿಗೆ ಕಲಿತರು. ಧರ್ಮದ ಕಾರ್ಯ ಮುಂದುವರೆಸಿದರು. ಪೂಜ್ಯ ಬಸವಲಿಂಗ ಪಟ್ಟದ್ದೇವರ ಸಹಕಾರದಿಂದ 'ಹೃದಯ ಗೀತೆ' ಎಂಬ ಪುಸ್ತಕ ಪ್ರಕಟಿಸಿದರು. ನಂತರ ವಚನಗಳನ್ನು ರಚಿಸಿದರು. ಆದರೆ ಕ್ಯಾನ್ಸರ್‌ನಿಂದಾಗಿ ೧೯೭೨ರಲ್ಲಿ ಅವರೂ ಲಿಂಗೈಕ್ಯರಾದರು.

ತಾಯಿಯ ಮರಣದ ನಂತರ ಅವರ ಸಹೋದರನಿಗೆ ನೆರಳಾಗಿದ್ದ ಪ್ರಭಾವತಿ (ಚಂದ್ರಮ್ಮನ ಕಿರಿಯ ಮಗಳು ೧೯೭೫ರಲ್ಲಿ ಮದುವೆಯಾಗಿ ಗಂಡನ ಮನೆಗೆ ಹೋಗುವಾಗ ತಾಯಿ ಬರೆದ ವಚನಗಳನ್ನು, ಹಾಡುಗಳನ್ನು ತನ್ನೊಂದಿಗೆ ಕೊಂಡೊಯ್ದು ಜೋಪಾನವಾಗಿ ಇರಿಸಿಕೊಂಡಿದ್ದಳು. ಈಗ ಅವು ನೀಲಮ್ಮನ ಬಳಗದ ವಚನಗಳಲ್ಲಿ ಪ್ರಕವಾಗಿವೆ.

'ತಂದೆ ಗುರುಬಸವಾ' ಎಂಬ ಅಂಕಿತದಲ್ಲಿ ಲಿಂ. ಚಂದ್ರಮ್ಮ ದುರ್ಗೆಯವರ ೨೯ ಆಧುನಿಕ ವಚನಗಳನ್ನಿಲ್ಲಿ ಸಂಪಾದಿಸಲಾಗಿದೆ. ತಮ್ಮ ತನು ಶುದ್ಧಿ, ಮನಶುದ್ಧಿ, ಭಾವ ಶುದ್ಧಿಗಾಗಿ ಹಂಬಲಿಸುವ ವಚನಕಾರ್ತಿ ಎತ್ತ ನೋಡಿದತ್ತ ಗುರುಸಬವನ ನಾಮರೂಪವನ್ನೇ ಕರುಣಿಸುವಂತೆ ಪ್ರಾರ್ಥಿಸುತ್ತಾಳೆ. ಬಸವಣ್ಣನವರ ಬಗ್ಗೆ ಜನಪದ ಸಾಹಿತ್ಯದಲ್ಲಿ ಬಂದಿರುವ ಹಾಗೂ ಬೇರೆ ಬೇರೆ ವಚನಕಾರರು ಆ ಶರಣನನ್ನು

ಕುರಿತು ಹೊಗಳಿರುವ ಅನೇಕ ಪದಗಳನ್ನು, ವಾಖ್ಯಗಳನ್ನು ಉಪಯೋಗಿಸಿಕೊಂಡು ಇವರು ತಮ್ಮ 'ಅಂಕಿತನಾಮ'ವಿಟ್ಟು ಹೇಳಿರುವುದು ತಿಳಿದುಬರುತ್ತದೆ. ಆಚಾರ, ವಿಚಾರ, ಗುರು, ತನು-ಮನ-ಧನ, ಆತ್ಮ ನಿವೇದನೆಗಳಿಗೆ ಸಂಬಂಧಿಸಿದ ವಚನಗಳು ಇಲ್ಲಿವೆ.

ಈ ವಚನಗಳೆಲ್ಲ ಓದಲಿಕ್ಕೆ, ಹಾಡಲಿಕ್ಕೆ, ಕೇಳಲಿಕ್ಕೆ ಬಹು ಹಿತವೆನಿಸುವವು. ಆದರೆ ಓಂಜಲು, ಹಿಸುಕಲು, ವಿಶ್ಲೇಷಿಸಲು ಇಲ್ಲಾದವ ಸರಕುಗಳಿಲ್ಲ. ನಮ್ಮ ವಚನ ಕೀರ್ತನಕಾರರಂತೆ ಎಲ್ಲವನ್ನು ಮಾಡಲು ದೇವರನ್ನೇ ಪ್ರಾರ್ಥಿಸುವುದು ಎಷ್ಟು ಸಾಧ್ಯವಾಗುತ್ತದೆ. ನಮ್ಮ ಪ್ರಯತ್ನ ಸ್ವಲ್ಪಾದರೂ ಬೇಡವೇ? ನಾವು ಮುನ್ನುಗ್ಗಬೇಡವೇ? ವಚನಕಾರ್ತಿ ನಮ್ಮ ಸುತ್ತಣ ಸಮಾಜದತ್ತ ಒಮ್ಮೆ ಕಣ್ತೆರೆದು ದಿಟ್ಟಿಸಿ ನೋಡಿ, ಅದನ್ನು ದರ್ಶಿಸಿ, ಪ್ರದರ್ಶನದ ಅನುಭವವನ್ನು ತಮ್ಮದಾಗಿಸಿಕೊಳ್ಳಬೇಕಿತ್ತು. ಆಗ ಮಾತ್ರ ವಚನಗಳಿಗೆ ನವೀನತೆ ಮೈದೋರಿ ಇಂದಿನ ಓದುಗರಿಗೆ ಪ್ರಯೋಜನವೆನಿಸಬಲ್ಲದಿತ್ತು ಎಂಬ ಭಾವ ಹೊರಡದಿಹುದು.

**೩.೨೮ ಮಂಗಲ ಮಾಶೆಟ್ಟಿಯವರ ವಚನಗಳು**

ಅಕ್ಕನ ಬಳಗದ ಮೂಲಕ ಬೀದರನಲ್ಲಿ ಆಧುನಿಕ ವಚನಕಾರರಾಗಿ ಬೆಳೆದವರಲ್ಲಿ ಮಂಗಲ ಮಾಶೆಟ್ಟಿಯವರೂ ಒಬ್ಬರು. ಇವರ ೨೯ ವಚನಗಳು 'ನೀಲಮ್ಮನ ಬಳಗದ ವಚನಗಳು' ಪುಸ್ತಕದಲ್ಲಿ ಅಚ್ಚಾಗಿವೆ. ಇವರು ಕೆಲ ಸಾಹಿತಿಗಳಂತೆ ಕೀರ್ತಿವಾಸನೆಗೆ ಬಿದ್ದು ಬರೆದವರಲ್ಲ ತಮ್ಮ ಬದುಕನ್ನು ಭದ್ರವಾಗಿಸಿಕೊಳ್ಳುತ್ತ ತಮ್ಮೊಳಗೆ ತಾವು ಇಳಿಯುತ್ತ ಅನುಭವಿಸಿದ ನೈಜ ನುಡಿಗಳ ಅಭಿವ್ಯಕ್ತಿ ಇವರ ವಚನಗಳಾಗಿವೆ.

ವ್ಯಾಪಾರಸ್ಥರ ಮನೆಯ ಸೊಸೆಯಾಗಿರುವ 'ಮಂಗಲ' ಅವರು ಮನೆಗೆಲಸವನ್ನೆಲ್ಲ ಮುಗಿಸಿಕೊಂಡು ಪತಿಯ ಬಟ್ಟೆ ಹೊಲೆಯುವ ಕಾಯಕದಲ್ಲಿ ನೆರವಾಗುತ್ತಾರೆ. ಔರಾದ ತಾಲೂಕಿನ ಮಸ್ಕಲ ಗ್ರಾಮದ ಕಾಶೀಬಾಯಿ-ವಿಶ್ವನಾಥ ಬುಟ್ಟೆ ದಂಪತಿಗಳ ಉದರದಲ್ಲಿ ೧೯೭೧ರಲ್ಲಿ ಇವರು ಜನಿಸಿದ್ದಾರೆ. ಬಾಲ್ಯದಿಂದಲೇ ಪೂಜೆ-ಪುನಸ್ಕಾರಗಳಲ್ಲಿ ಆಸಕ್ತಿ ಹೊಂದಿದ್ದ 'ಮಂಗಲ' ಅವರು ಮನೆಯಲ್ಲಿ ದಿನಾಲು ಅದನ್ನು ನೆರವೇರಿಸಿಯೇ ಕಾಯಕದಲ್ಲಿ ತೊಡಗುತ್ತಾರೆ. ಹತ್ತನೇಯ ತರಗತಿಯವರೆಗೆ ಓದಿರುವ ಅವರು ಬಾಲ್ಯದಿಂದಲೇ ಓದುವ ಹವ್ಯಾಸ ಬೆಳೆದಿಕೊಂಡಿದ್ದರು. ಜೋಜನ ಗ್ರಾಮದ ವೀರಶೆಟ್ಟಿ ಮಾಶೆಟ್ಟಿಯವರ ದತ್ತು ಪುತ್ರರಾದ ಶಿವರಾಜಪ್ಪನನ್ನು ಮದುವೆಯಾಗಿ ಈಗ ಬೀದರನಲ್ಲಿ ತಂಗಿದ್ದಾರೆ.

ಬೀದರನ ನೀಲಾಂಬಿಕಾ ಬಳಗಕ್ಕೆ ಸೇರಿಕೊಂಡ ಮೇಲೆ ಬಳಗದ ಬಾಂಧವ್ಯದಲ್ಲಿ ಬೆಳೆಯುತ್ತ, ತಮ್ಮಿಂದ ಸಮಾಜಕ್ಕೆ ಏನಾದರೊಂದು ಒಳ್ಳೆಯದಾಗಬೇಕೆಂದು ನಿಶ್ಚಯಿಸಿಕೊಂಡು ತಮ್ಮ ಭಾವನೆಗಳನ್ನು ಭಾಷೆಯಲ್ಲಿ ಹೊಂದಿಸಿ ಬರೆಯಲು ಆರಂಭಿಸಿದರು. ಈಗಾಗಲೇ ನೂರಕ್ಕಿಂತ ಹೆಚ್ಚು ವಚನಗಳನ್ನು, ೫೦ಕ್ಕಿಂತ ಹೆಚ್ಚು ಭಕ್ತಿಯ ಹಾಡುಗಳನ್ನು ರಚಿಸಿ ಎಲ್ಲರಿಂದಲೂ ಸೈ ಎನಿಸಿಕೊಂಡಿದ್ದಾರೆ.

'ಮಂಗಲಾಪ್ರಿಯ ಲಿಂಗಯ್ಯಾ' ಎಂಬ ಅಂಕಿತ ಇರ ವಚನಗಳು ಸರಳವಾಗಿದ್ದು, ಓದಿಸಿಕೊಂಡು ಹೋಗುತ್ತವೆ. ಬಸವ ನಿಷ್ಠೆಯ ವಚನಗಳು ಇಲ್ಲಿ ವಿಶೇಷವಾಗಿದ್ದು ಲೇಖಕಿಯ ಭಾವದ ತೀವ್ರತೆಯನ್ನು ಅವು ಎತ್ತಿ ತೋರುತ್ತವೆ.

ಒಟ್ಟಿನಲ್ಲಿ ಈ ವಚನಕಾರ್ತಿ ಹಿಂದಿನ ತಲೆಮಾರಿನ ವಚನಕಾರರನ್ನು ಅನುಕರಿಸಿಯೂ ತನ್ನದೇ ಆದ ವಚನಗಳನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಜಗತ್ತನ್ನು ಬರಿಯ ಹೊರಗಣ್ಣುಗಳಿಂದ ಮಾತ್ರವಲ್ಲದೆ, ಒಳಗಣ್ಣುಗಳಿಂದ ವೀಕ್ಷಿಸುತ್ತಾರೆ ಎಂಬುದಕ್ಕೆ ಇವರ ಅನೇಕ ವಚನಗಳು ಸಾಕ್ಷಿ ಹೇಳುತ್ತವೆ. ಶರಣರ ವಚನಗಳ

ಓದಿನಿಂದ, ನೀಲಮ್ಮನ ಬಳಗಳ ಶರಣೆಯರ ಸತ್ಸಂಗದಿಂದ ತನ್ನ ಬಾಳಿನ ಒಳಿತನ್ನು ನಿಜವಾಗಿ ಕಂಡುಕೊಂಡೆನೆಂಬ ಈ ವಚನಕಾರ್ತಿಯ ಅನಿಸಿಕೆ ಸ್ತುತ್ಯಾರ್ಹ ಬಡತನ ಮನಸ್ಸಿಗೆ ಸಂಬಂಧಿಸಿದ್ದೇ ಹೊರತು ಲಾಕಿಕ್ಕಲ್ಲ ಎಂಬುದನ್ನು ಅವರು ಸೊಗಸಾಗಿ ಹೇಳಿದ್ದಾರೆ ಜಿಲ್ಲೆಯ ವಚನಕಾರರಲ್ಲಿ ಇವರಿಗೆ ಉತ್ತಮ ಸ್ಥಾನವಿದೆ.

**೩.೨೯ ಸೀಮಾ ಪಾಟೀಲರ ವಚನಗಳು (೨೦೧೬)**

ಔರಾದ ತಲೂಕಿನ ಬಳತ (ಬಿ) ಗ್ರಾಮದ ಶರಣ ದಂಪತಿಗಳಾದ ರತ್ನಮ್ಮ ಸಂಗಶೆಟ್ಟಿ ಸಾವಳೆಯರ ನಾಲ್ಕನೇಯವಳಾಗಿ ಜನಿಸಿದ ಸೀಮಾ ಅವರು ಬೀದರ ಜಿಲ್ಲೆಯ ಇನ್ನೊರ್ವ ಆಧುನಿಕ ವಚನಕಾರ್ತಿ. ದಿನಾಂಕ ೧೦-೦೪-೧೯೭೮ ರಂದು ಇವರು ಜನಿಸಿದ್ದಾರೆ. ದೈವ ಭಕ್ತರಾದ ತಂದೆ-ತಾಯಿ ಹಾಗೂ ಪಾಟೀಲ ಮನೆತನದಲ್ಲಿ ಬೆಳೆದ ಇವರು ಅದರ ಪ್ರಭಾವಕ್ಕೊಳಗಾಗಿದ್ದಾರೆ. ಆ ಊರಿಗೆ ಯಾರೇ ಜಂಗಮರು ಬಂದರೆ ಅವರನ್ನು ಮೊದಲು ಮನೆಗೆ ಕರೆತಂದು ಪ್ರಸಾದ, ದಾಸೋಹ ಮಾಡುವ ಮನೆತನವದು. ಅಂಥ ಮನೆಯಲ್ಲಿ ಬೆಳೆದು ಬಂದಿರುವ ಸೀಮಾ ಅವರು ಪಿಯುಸಿವರೆಗೆ ಓದಿದ್ದಾರೆ. ನಂತರ ೧೯೯೬ರಲ್ಲಿ ಅದೇ ತಾಲೂಕಿನ ಬಂಬಳಗಿಯ ಅಶೋಕ ಪಾಟೀಲರ ಬಾಳಸಂಗಾತಿಯಾಘಿದ್ದಾರೆ. ಎರಡು ಮಕ್ಕಳ ತಾಯಿಯಾದ ನಂತರ ಇವರು ಬರೆಯಲು ಪ್ರಾರಂಭಿಸಿದರು.

ಇಷ್ಟಲಿಂಗ ಪೂಜೆ, ಶಿವಯೋಗವನ್ನು ಎಂದೂ ಮರೆಯದ ಇವರು ದೈವಶಕ್ತಿಯ ಮೇಲೆ ಭಾರ ಹಾಕಿ ಬ್ರೆನ್ ಹೆಂಬ್ರಿಜ್ ಆಗಿದ್ದ ತನ್ನ ಗಂಡನನ್ನು ಉಳಿಸಿಕೊಂಡವರು. ಆಗ ತಾವು ನಂಬಿದ್ದ ದೈವವನ್ನು 'ನಿಸ್ಸೀಮ ಪ್ರಭುವೆ' ಎಂದು ಕರೆದು, ಅದೇ ಅಂಕಿತದಲ್ಲಿ ನೂರಾರು ವಚನಗಳನ್ನು ಹಾಡುಗಳನ್ನು ಬರೆದಿದ್ದಾರೆ. ಅವರ ೩೦ ಆಧುನಿಕ ವಚನಗಳು 'ನೀಲಮ್ಮನ ಬಳಗದ ವಚನಗಳು' ಕೃತಿಯಲ್ಲಿ ಪ್ರಕಟವಾಗಿವೆ.

ಹಿಂದಿನ ವಚನ ಪರಂಪರೆಯ ಮುಂದುವರೆದ ಭಾಗವಾಗಿ ಸೀಮಾ ಪಾಟೀಲರ ವಚನಗಳು ಮೂಡಿಬಂದಿದ್ದು, ಇಷ್ಟದೈವದೆಡೆಯ ಅನೇಕ ಮುಖದ ಅನನ್ಯ ಭಕ್ತಿ ಅಲ್ಲಿ ಎದ್ದು ಕಾಣುತ್ತದೆ. 'ತಾಯಿಯನ್ನಗಲಿದ ಮಗುವಿನಂತೆ ನಾನು ನಿಮ್ಮ ಹಂಬಲಿಸುವೆನಯ್ಯಾ' ಹಾಗೂ 'ಮಗುವನ್ನಗಲಿದ ತಾಯಿಯಂತ ನಾನು ನಿಮ್ಮ ಹಂಬಲಿಸುವೆನಯ್ಯಾ' ಎಂಬ ಹಿರಿಯಾಸೆಯುಳ್ಳ ಇವರ ವಚನಗಳು ಭಕ್ತಿಯ ರಸವನ್ನು ಹೊರಹೊಮ್ಮಿಸುತ್ತವೆ. 'ಲಿಂಗವನ್ನು ಎನ್ನ ಕರಸ್ಥಲದಲ್ಲಿ ಕಂಡು ಅರ್ಚಿಸಿ, ಆರಾದಿಸಿ, ಆನಂದಿಸಿದೆನಾಗಿ ಸರ್ವಸುಖಿಯಾದೆನು' 'ನಿಮ್ಮ ಶರಣರ ಸಂಘದೊಳು ನಾನಿರುವೆನಯ್ಯಾ' 'ನಿಮ್ಮ ಶರಣರ ಸಂಗವೆನಗೆ ಕರುಣಿಸಯ್ಯಾ' 'ಎನ್ನ ಬಾಳ ಭಾಗ್ಯ ನೀನಯ್ಯಾ' ಎಂಬಂತಹ ವಚನಗಳಲ್ಲಿ ವಚನಗಾರ್ತಿಯ ಲಿಂಗಾನುಭಕ್ತಿಯ ಅಣುರಣನೆಯಿದೆ.

ಬದುಕನ್ನೇ ಲಿಂಗಪೂಜೆಯಾಗಿಸಿಕೊಂಡಿರುವ ಸೀಮಾ ಅವರು ಶರಣರ ಸಂಗ ತನ್ನ ಬದುಕಿನ ದಿವ್ಯಾನುಭೂತಿಗರಿತು ಕಾರಣವಾಯಿತೆಂಬುದನ್ನು ಬಗೆ ಬಗೆಯಲ್ಲಿ ವರ್ಣಿಸಿದ್ದಾರೆ. ಆದರೆ ಅವೆಲ್ಲವೂ ಒಂದು ಸೀಮಿತ ಪರಧಿಯಲ್ಲಿ ಅಭಿವ್ಯಕ್ತವಾಗಿವೆ. ಒಳಗಣ್ಣಿನಿಂದ ಬಾಹ್ಯ ಜಗತ್ತನ್ನು ವೀಕ್ಷಿಸಿದ ದೃಷ್ಟಾಂತಗಳಾವವೂ ಇಲ್ಲಿ ಕಂಡುಬರುತ್ತಿಲ್ಲ. ಅವರ 'ಮಾತಿನಿಂದಲೇ ಆಯ್ತು ಮಹಾಭಾರತದ ಇತಿಹಾಸ, ಮಾತಿನಿಂದಲೇ ಆಯ್ತು ಶ್ರೀರಾಮನಿಗೆ ವನವಾಸ, ಮಾತಿನಿಂದಲೇ ಮಿತ್ರ, ಶತ್ರು, ಮಾತಿನಿಂದಲೇ ಸರಸ-ವಿರಸ, ಹಗೆ, ಕೊಲೆ, ಆಧ್ಯಾತ್ಮದ ನೆಲೆ ಎಂಬ ವಿಚಾರಗಳನ್ನು ಕಟ್ಟಿಕೊಡುತ್ತಿದ್ದಾರೆ. ಗಳಿಸಿ ಹಣ, ಸಂಪತ್ತು ಇಡಬಾರದು, ಅದು ಸಮಾಜಕ್ಕೆ ಸಂದಾಯವಾಗಬೇಕೆಂಬ ವಿಚಾರವನ್ನು ಸ್ಪಷ್ಟಪಡಿಸುತ್ತಾರೆ. ಆದರೂ ಅವನ ವಚನಗಳು ಇನ್ನೂ ನಿರಿಕ್ಷಿತ ಮಟ್ಟಕ್ಕೆ ತಲುಪಿದರೆ ಚನ್ನಾಗಿತ್ತು ಎನಿಸುತ್ತದೆ.

ಸಮಾಜದ ಸುತ್ತ-ಮುತ್ತಲ ನೋಟ ಗಮನಾರ್ಹವಾಗಿರುವಂತೆ, ಅಭಿವ್ಯಕ್ತಿ ಕ್ರಮವೂ ಗಟ್ಟಿಯಾಗಬೇಕು. ಚರ್ವಿತ ಚರ್ವಣ ವಚನಗಳಿಗಿಂತ, ಸಮಾಜಮುಖಿಯ ನೆಲೆಯಲ್ಲಿ ಇವರು ಸ್ಪಂದಿಸಬೇಕಾದ ಅವಶ್ಯಕತೆಯಿದೆ ಎಂಬುದನ್ನಿಲ್ಲಿ ಹೇಳಬಹುದಾಗಿದೆ.

**೩.೩೦ ರಾಜಮ್ಮ ಚಿಕ್ಕಪೇಟಿಯವರ ವಚನಗಳು – ೨೦೧೬**

ಸಮಾಜದ ಆಗುಹೋಗುಗಳನ್ನು ಸೂಕ್ಷ್ಮವಾಗಿ ಗಮನಿಸುವ ರಾಜಮ್ಮ ಚಿಕ್ಕಪೇಟೆಯವರು ಜಿಲ್ಲೆಯ ಮಹಿಳಾ ವಚನಕಾರ್ತಿಯರಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ಹೊಂದಿದ್ದಾರೆ. ಮಲಗಿರುವ ಸಮಾಜವನ್ನು ಎಬ್ಬಿಸಲು ಬರಹವೇ ಪ್ರಧಾನವಾದ ಅಸ್ತ್ರವೆಂದು ಭಾವಿಸಿರುವ ಇವರು ಪ್ರಾಥಮಿಕ ಶಾಲೆಯ ಶಿಕ್ಷಕರೂ ಆಗಿದ್ದಾರೆ.

ಔರಾದ ತಾಲೂಕಿನ ಠಾಣಾ ಕುಸನೂರಿನ ಖೇಮಶೆಟ್ಟಿ ಮನೆತನದಲ್ಲಿ ೦೧-೦೬-೧೯೬೬ರಲ್ಲಿ ಜನಿಸಿದ್ದಾರೆ. ಇವರ ತಂದೆ ಕಾಶಪ್ಪ. ತಾಯಿ ಲಕ್ಷ್ಮೀಬಾಯಿ. ಬಾಲ್ಯದಿಂದಲೇ ಗಂಭೀರತೆಗೆ ಹೆಸರಾಗಿರುವ ಇವರು ಮನೆಯಲ್ಲಿ ಯಾರಾದರೂ ಸಣ್ಣ ತಪ್ಪು ಮಾಡಿದರೂ ಅದನ್ನು ಖಂಡಿಸುತ್ತಿದ್ದರು. ಆಟ ಪಾಟಗಳಲ್ಲಿ ಸದಾ ಮುಂದಿರುತ್ತಿದ್ದ ರಾಜಮ್ಮ ಟಿ.ಸಿ.ಎಚ್. ಮುಗಿಸಿ ಶಿಕ್ಷಕರಾದರು. ಹಾಗೆಯೇ ಬಿ.ಎ. ಪದವಿ ಹೊಂದಿರುವರು ೧೯೮೮ರಲ್ಲಿ ಯರನಳ್ಳಿ ಗ್ರಾಮದ ಗಂಗಶೆಟ್ಟಿಯವರನ್ನು ಮದುವೆಯಾಗಿ ಈಗ ಬೀದರನಲ್ಲಿ ನೆಲೆಸಿದ್ದಾರೆ.

೨೦೦೯ ರಿಂದ ಬೀದರನ ವಿದ್ಯಾನಗರದ ನೀಲಮ್ಮನ ಬಳಗದ ಸ್ಥಾಪನೆಯಲ್ಲಿ ಕಾರಣೀಕರ್ತರಾಗಿರುವ ಇವರು ನಿರಂತರ ಶರಣರ ಸತ್ಸಂಗದಲ್ಲಿ ತಪ್ಪದೇ ಭಾಗವಹಿಸುತ್ತಾರೆ. ಅಲ್ಲಿ ಆಗಾಗ ಚಿಂತನೆ ಮಾಡುತ್ತಾರೆ. ತಮ್ಮ ವಿಚಾರಗಳನ್ನು ಮಂಡಿಸುತ್ತಾರೆ. ತಮ್ಮ ಭಾವ ತೀವ್ರಗೊಂಡಾಗ, ಮನಸ್ಸು ಚಿಂತನೆಗೊಳಗಾದಾಗ ಪೆನ್ನು ಹಿಡಿದು ಬರೆಯುತ್ತಾರೆ.. ೨೦೧೧ ರಿಂದ ಅವರು ಆಗಾಗ ಬರೆದಿಟ್ಟ ವಚನಗಳು ಸುಮಾರು ೮೦. ಅಲ್ಲಲ್ಲಿ ತಮ್ಮ ಬಿಡಿ ಲೇಖನಗಳನ್ನೂ ಪ್ರಕಟಗೊಳಿಸಿದ್ದಾರೆ. ೨೦೧೬ರಲ್ಲಿ 'ನೀಲಮ್ಮನ ಬಳಗದ ವಚನಗಳಲ್ಲಿ' ಇವರ ೩೦ ವಚನಗಳು ಪ್ರಕಟವಾಗಿವೆ.

'ಕಾಯಕ ಪ್ರಿಯ ಬಸವೇಶ್ವರ' ಅಂಕಿತದಲ್ಲಿರುವ ಇವರ ವಚನಗಳು ಸಮಾಜದ ಓರೆ-ಕೋರೆಗಳನ್ನು ತಿಳಿಸುತ್ತ, ಸಮಾಜ ತಿದ್ದುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಬಹಿರಂಗದ ವೇಷ ನಮ್ಮನ್ನು ದೊಡ್ಡವರೆಂದು ತೋರಿಸಿದರೂ, ನಾವು ಅಲ್ಪರಾಗಿರುತ್ತೇವೆ. ಎಂಬುದನ್ನು ಅವರು 'ಕಾವಿಯ ಧರಿಸಿದರೇನಯ್ಯಾ ಮನದ ಕಾಮವು ಬಿಡದನ್ನಕ್ಕ?....' ಎಂದು ಹೇಳಿರುವುದ ಲೇಖಕರ ನಿರ್ಬಿಡೆಯ ನಡೆಯನ್ನು ತಿಳಿಸುತ್ತದೆ. ಪ್ರದರ್ಶನ ಪ್ರಿಯರಾಗಿರುವ ಇಂದಿನ ವೇಷಧಾರಿಗಳು ದರ್ಶನಾಕಾಂಕ್ಷಿಗಳಲ್ಲ, ಅವರಿಗೆ ಪ್ರಯತ್ನ ಬೇಕಾಗಿಲ್ಲ. ಫಲಿತಾಂಶ ಬೇಕು. ಸಾಧನೆ ಬೇಕಾಗಿಲ್ಲ ಸಿದ್ಧಿ ಬೇಕು. ಮಡಿವಂತಿಕೆ ತೋರುವವರು ಮಲೀನತೆಯ ಮಡುವಾಗಿದ್ದಾರೆ ಎಂಬುದನ್ನು ಎತ್ತಿ ತೋರಿಸುತ್ತಾರೆ.

'ಹೀನ ಗುಣದವನಿಗೆ ಹಿರಿಯನೆನ್ನಬಹುದೇ? ತೃಷೆಯನಡಗಿಸಲೆಂದು ಸುರಾಪಾನವ ಮಾಡಬಹುದೇ? ಅವಗುಣವುಳ್ಳವನಿಗೆ ಆಚಾರ್ಯನೆನ್ನಬಹುದೇ?' ಎನ್ನುವಂತಹ ಮಾತುಗಳಲ್ಲಿಯ ಅವರ ಸೂಕ್ಷ್ಮಾವಲೋಕನವನ್ನು ಗಮನಿಸಬಹುದು. 'ಉಸಿರು ಇರುವಾಗಲೇ ಬದುಕುವ ಕಲೆ'ಯನ್ನು ಬೆಳೆಸಿಕೊಳ್ಳಬೇಕೆಂಬ ನೀತಿಯನ್ನು ಇವರ ವಚನಗಳು ಸಾರುತ್ತವೆ.

ರಾಜಮ್ಮನವರು ತನ್ನ ವಚನದಲ್ಲಿ ಸಮಕಾಲೀನ ವಸ್ತು ಸ್ಥಿತಿಯನ್ನು ಜೋಡಿಸುತ್ತ ಮೂಲ ಆಶಯಕ್ಕೆ ಭಂಗಬರದಂತೆ ಚಿತ್ರಿಸಲು ಪ್ರಯತ್ನಿಸಿರುವುದು ಎದ್ದು ಕಾಣುತ್ತದೆ. ಇಂದಿನ ಜನತೆಯಲ್ಲಿ ತುಂಬಿ ನಿಂತಿರುವ

ಅಜ್ಞಾನ ವೇಷಧಾರಿ ಧರ್ಮ ಗುರುಗಳು, ದುಃಖ ದುರ್ಗುಣಗಳು ಸಂಪಾದನೆಯ ಮಾರ್ಗಗಳು, ಹಣದ ದುರಾಸೆ, ಅಧಿಕಾರ ವ್ಯಾಮೋಹ, ವ್ಯಸನಗಳು ಇವರ ವಚನಗಳ ವಸ್ತುಗಳಾಗಿ ಇಲ್ಲಿ ಮೆರೆದಿವೆ. ವ್ಯಕ್ತಿಯ ಮಾನಸಿಕ ದೌರ್ಬಲ್ಯಗಳನ್ನು ಅರಿತಿರುವ ಈ ವಚನಕಾರ್ತಿ ಅವುಗಳ ನಿವಾರಣೆಗಾಗಿ ಇಷ್ಟದೈವದ ಮೊರೆ ಹೋಗಿದಿದ್ದಾರೆ. ಅದಕ್ಕಾಗಿ ದುರಾಸೆ ಬೇಡವೆಂದೂ ಹೇಳುತ್ತಾರೆ. ತನ್ನಂತರಂಗದ ಶುದ್ಧಿ ಮಹತ್ವದ್ದೆಂದೂ ಸಾರುತ್ತಾರೆ.

'ಹೊರಗೆ ದೀಪವ ಹಚ್ಚಿದರೇನಯ್ಯ?
ಒಳಗೆ ಮನದ ಕತ್ತಲೆ ಅಳಿಯದನ್ನಕ'

ಎಂಬಂತಹ ವಚನಗಳಲ್ಲಿ ವಚನಕಾರರ ಅನುಭಾವ ಗಟ್ಟಿಕೊಂಡ ಅಭಿವ್ಯಕ್ತಿಗಳಿರುವುದು ಎದ್ದು ಕಾಣುತ್ತವೆ. ಬಸವಾದಿ ಶರಣರ ಪ್ರಭಾವ, ಸ್ವಧರ್ಮನಿಷ್ಠೆ, ಶರಣರ ಸತ್ಸಂಗ ಜೀವನದ ಹಲವು ಬಗೆಗಳು ಇವರ ವಚನಗಳಲ್ಲಿ ಅರ್ಥಪೂರ್ಣವಾಗಿ ಎದ್ದುಕಾಣುತ್ತವೆ. ಆಧುನಿಕ ವಚನ ಸಾಹಿತ್ಯ ಪರಂಪರೆಯಲ್ಲಿ ಅವು ಗುರುತಿಸಲ್ಪಡುತ್ತವೆ ಎನ್ನಬಹುದು.

**೩.೩೧ ಕರುಣಕ್ಕ ಜೀರ್ಗೆಯವರ ವಚನಗಳು (೨೦೧೬)**

ಬೀದರ ನೀಲಮ್ಮನ ಬಳಗದ ಆಧುನಿಕ ವಚನಕಾರರಲ್ಲಿ ಕರುಣಕ್ಕನವರೂ ಒಬ್ಬರು. ಸುಸಂಸ್ಕೃತ ಬಳಗದ ಪರಿಸರದಲ್ಲಿ ತಾವೂ ಒಬ್ಬ ಕವಿಯಾಗಿ ಹೊರಹೊಮ್ಮಿದವರು. ಕರುಣಕ್ಕನವರು ಕಲಿತದ್ದು ಬರೀ ನಾಲ್ಕನೇಯ ತರಗತಿಯವರೆಗೆ ಮಾತ್ರ. ತಮ್ಮ ಜೊತೆಗಿನ ಸತ್ಸಂಗಿಗಳು ವಚನ ಬರೆಯಲು ಆರಂಭಿಸಿದಾಗ ತಾವೂ ಏಕೆ ಬರೆಯಬಾರದೆಂದು? ಭಾವಿಸಿ ತಮ್ಮನುಭವಗಳನ್ನು ಸರಳವಾಗಿ ಹಿಡಿದಿಡಲು ಆರಂಭಿಸಿದರು. ಸು. ೫೪ರ ವಯಸ್ಸಿನಲ್ಲಿ ಅವರು ವಚನ ಬರೆಯಲು ಆರಂಭಿಸಿದರು. ಅವರ ಈ ಬರವಣಿಗೆಯ ಹಿಂದೆ ಬಳವಳಿಯಾಗಿ ಬಂದ ತಂದೆ ಚನ್ನಪ್ಪ ಮೋರ್ಗಿಯವರ ರಕ್ತಗುಣವೂ ಇದೆ ಎನ್ನಬಹುದು.

೧೯೬೦ರಲ್ಲಿ ಔರಾದ ತಾಲೂಕಿನ ಖಾನಾಪುರ ಗ್ರಾಮದ ಮೋರ್ಗಿ ಚನ್ನಪ್ಪ ಹಾಗೂ ನಾಗಮ್ಮರ ಉದರದಲ್ಲಿ ಜನಿಸಿದ 'ಕರುಣಕ್ಕ' ತಂದೆಯ ಕವಿತಾಗುಣವನ್ನು ಪಡೆದುಕೊಂಡೇ ಜನಿಸಿದರು. ಅದೇ ತಾಲೂಕಿನ ಎಕಲಾರ ಗ್ರಾಮದ ಶಂಕರರಾವ ಜೀರ್ಗೆಯವರನ್ನು ೧೯೭೮ರಲ್ಲಿ ಮದುವೆಯಾದರು. ಓರ್ವ ಪುರುಷನ ಹಿಂದೆ ಸ್ತ್ರೀ ಶಕ್ತಿ ಇರುವಂತೆ, ಕರುಣಕ್ಕಳ ಬೆಳವಣಿಗೆಯಲ್ಲಿ ಅವರ ಪತಿ ಶಂಕರರಾವ ಬೆನ್ನೆಲುಬಾಗಿ ನಿಂತರು, ತಮ್ಮ ವಚನ ರಚನೆಗೆ ಪತಿ ಬೆಂಬಲವಾಗಿ ನಿಂತಿರುವುದನ್ನು ಕರುಣಕ್ಕ ಸ್ಮರಿಸುತ್ತಾರೆ.

'ನಿಃಶೂನ್ಯ ಲಿಂಗಯ್ಯ' ಎಂಬ ವಚನಾಂಕಿತದಲ್ಲಿ ಇವರು ೭೦ ರಷ್ಟು ವಚನಗಳನ್ನು ಬರೆದಿದ್ದಾರೆ. ಭಕ್ತಿಯ ಹಾಡುಗಳನ್ನು, ಕವನಗಳನ್ನು ಹೆಣೆದಿದ್ದಾರೆ. ಅಡುಗೆ ಕಲೆ, ರಂಗೋಲಿ ಬಿಡಿಸುವುದು, ಹಾಡು ಹಾಡುವುದು, ವಿಶೇಷವಾಗಿ ಲಾಡು ತಯಾರಿಸುವುದು ಇವರ ಅಚ್ಚು ಮೆಚ್ಚಿನ ಹವ್ಯಾಸಗಳು. ನಡೆದಂತೆ ನುಡಿವ ಈ ಭಲಗಾರ್ತಿ ಜಿಲ್ಲೆಯ ಉತ್ತಮ ಆಧುನಿಕ ವಚನಕಾರ್ತಿಯೂ ಎನಿಸಿದ್ದಾರೆ.

'ನೀಲಮ್ಮನ ಬಳಗದ ವಚನ'ಗಳಲ್ಲಿ ಕರುಣಕ್ಕಳ ೨೮ ವಚನಗಳು ಪ್ರಕಟವಾಗಿವೆ. ಕರುಣಕ್ಕ ವಚನಗಳ ವಿಶೇಷತೆ ಎಂದರೆ ಅಂತ್ಯ ಪ್ರಾಸಕ್ಕೆ ಹೆಚ್ಚಿನ ಗಮನ ನೀಡಿದ್ದು. ಹೀಗಾಗಿ ಗಂಭೀರತೆಯಲ್ಲಿ ಸಾಗಬಹುದಾಗಿದ್ದ ಅನೇಕ ವಚನಗಳು ಸಪ್ಪೆ ಎನಿಸುತ್ತವೆ. ಆಧುನಿಕ ವಚನಗಳ ಅಭಿವ್ಯಕ್ತಿಯಲ್ಲಿ ಯಾವುದೇ ಚೌಕಟ್ಟಿನ

ಬಂಧವಿರಬಾರದು. ಅದು ತಾನೇ ತಾನಾಗಿ ಮುಕ್ತವಾಗಿ ಅರಳಿ ಬರಬೇಕು. ಆದರೂ ತಮ್ಮ ಸುತ್ತಲಿನ ಒಳ-ಹೊರಗನ್ನು ಇವರು ಸೂಕ್ಷ್ಮ ದೃಷ್ಟಿಯಿಂದ ಗಮನಿಸುತ್ತಾರೆಂಬುದಕ್ಕೆ ಕೆಲವು ವಚನಗಳು ಸಾಕ್ಷಿಯಾಗುತ್ತವೆ.

ಹೆಣ್ಣಿನ ಸ್ಥಿತಿ-ಗತಿಯ ಬಗ್ಗೆ, ಸ್ತ್ರೀ ಸಮಾನತೆಯ ಬಗ್ಗೆ ಮಾತನಾಡುವ ಇವರ ವಚನಗಳಲ್ಲಿ ಹೆಚ್ಚಾಗಿ ಉಪದೇಶಾತ್ಮಕ ಮಾದರಿಯಿದೆ. ಸರಳ, ಸಹಜವಾದ ಅಭಿವ್ಯಕ್ತಿ ಗುಣಗಳಿವೆ. ವ್ಯಕ್ತಿತ್ವ ವಿಕಸನವನ್ನು ಇಲ್ಲಿನ ವಚನಗಳು ಉತ್ತೇಜಿಸುತ್ತವೆ. ಬಸವತತ್ವ ಪರಂಪರೆಯ ಬೆಳಕು ಇಲ್ಲಿದೆ.

**೩.೩.೨ ಈಶ್ವರಮ್ಮ ಪಾಟೀಲರ ವಚನಗಳು (೨೦೧೬)**

ಭಾಲ್ಕಿ ತಾಲೂಕಿನ ಕೋನಮೇಳಕುಂದ ಗ್ರಾಮದಲ್ಲಿ ದಿನಾಂಕ : ೦೪-೦೭-೧೯೬೮ ರಂದು ಜನಿಸಿರುವ ಈಶ್ವರಮ್ಮನವರು, ಬೀದರ ಜಿಲ್ಲೆಯ ಇನ್ನೋರ್ವ ಆಧುನಿಕ ವಚನಕಾರ್ತಿ. ನಾಲ್ಕು ಜನ ಅಣ್ಣಂದಿರ ಮುದ್ದಿನ ತಂಗಿಯಾಗಿ ಬೆಳೆದಿರುವ ಇವರ ತಾಯಿ ತಾರಾಬಾಯಿ ಹಾಗೂ ತಂದೆ ಗುರುಪಾದಪ್ಪ ಬೈರೆಯವರು. ಬಿ.ಎ. ಪದವಿಯನ್ನು ಉನ್ನತ ದರ್ಜೆಯಲ್ಲಿ ಪಾಸಾಗಿರುವ ಇವರು ತೆಲಂಗಾಣದ ಮೇದಕ ಜಿಲ್ಲೆಯ ಚಪ್ಪಗ್ರಾಮದ ಶಿವರಾಜ ಪಾಟೀಲರನ್ನು ಮದುವೆಯಾಗಿದ್ದಾರೆ. ಅತ್ತೆ – ಮಾವಂದಿರ ಮನವೊಲಿಸಿ ಬಿ.ಇಡಿ. ಪದವಿ ಮಾಡಿಕೊಂಡು ಶಿಕ್ಷಣ ಸಂಸ್ಥೆಯೊಂದರಲ್ಲಿ ಶಿಕ್ಷಕಿಯಾದರು. ನಂತರ ೧೯೯೪ರಲ್ಲಿ ತವರೂರಿನ ಸರಕಾರಿ ಶಾಲೆಯಲ್ಲಿ ಪ್ರಾಥಮಿಕ ಶಾಲೆಯಲ್ಲಿ ಸೇವೆ ಸಲ್ಲಿಸಿದ್ದಾರೆ. ವಿದ್ಯಾನಗರ ಬೀದರದ ನಿವಾಸಿಯಾಗಿರುವ ಈಶ್ವರಮ್ಮ ಸಿದ್ಧಾರೂಡ ಶಿವಯೋಗಿಗಳ ಭಕ್ತರು.

ನೌಬಾದದ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕಿಯಾಗಿರುವ ಇವರು, ಜೀವನದಲ್ಲಿ ಅನೇಕ ಏಳು-ಬೀಳುಗಳನ್ನು ಕಂಡಿದ್ದಾರೆ. ತಂದೆಯ ಮಾತುಗಳನ್ನು ವೇದವಾಕ್ಯವೆಂದು ಭಾವಿಸಿ ನಡೆಯುತ್ತಿದ್ದಾರೆ. ನಂತರದ ದಿನಗಳಲ್ಲಿ ವಿದ್ಯಾನಗರದ ಅಕ್ಕನ ಬಳಗದ ಬಸವನ ಭಕ್ತಿಯು ಇವರಲ್ಲಿ ಧೈರ್ಯ, ಶಾಂತಿ, ಸಮಾಧಾನ ತುಂಬಿತು. ನಂತರದಲ್ಲಿ ಕವನ, ಚುಟುಕು ಹಾಗೂ ಆಧುನಿಕ ವಚನಗಳನ್ನು ಬರೆಯಲಾರಂಭಿಸಿದರು. ಬಸವಜ್ಯೋತಿ, ಅಕ್ಕನ ಬಳಗದ ಕಾರ್ಯಕ್ರಮಗಳಲ್ಲಿ ಆಗಾಗ ವ್ಯಕ್ತಪಡಿಸುತ್ತಿದ್ದ ತಮ್ಮ ಅನುಭವಗಳಿಗೆ ಆಧ್ಯಾತ್ಮದ ಲೇಪ ನೀಡಿ ವಚನಗಳನ್ನು ರಚಿಸಿದರು.

"ಶಿವಸಿದ್ಧಲಿಂಗ" ಎಂಬ ಅಂಕಿತನಾಮದಲ್ಲಿ ಈಶ್ವರಮ್ಮನವರ ೨೮ ವಚನಗಳು 'ನೀಲಮ್ಮನ ಬಳಗದ ವಚನ ಸಂಕಲನ'ದಲ್ಲಿ ಪ್ರಕಟವಾಗಿವೆ. ಇವರ ವಚನಗಳಲ್ಲಿ ಆಧ್ಯಾತ್ಮ, ಆರಾಧನೆ, ಇಷ್ಟಲಿಂಗಪೂಜೆ, ಗುರುಮಹಾತ್ಮೆ ಗುರುಬಸವನ ಜ್ಞಾನ, ಆಶೆಯ ಸ್ವರೂಪ, ನಿಜವಾದ ಭಕ್ತಿ, ಭವದ ಭ್ರಮೆ ಮೊದಲಾದ ವಿಷಯಗಳ ವಿವರಣೆಯಿದೆ.

ಆಪ್ಯಾಯಮಾನವಾಗುತ್ತವೆ. ಎಲ್ಲವೂ ನಿನ್ನದಾದ ಬಳಿಕ ನನ್ನದೇನಿದೆ ಹೇಳಾ? 'ದುರ್ಭಾವವಳಿಯಿತ್ತು ಸದ್ಭವದ ಸಾಲಿಟ್ಟು' 'ನಿನ್ನ ಕೃಪೆಗಿಂತ ಮುಕ್ತಿಯಿಲ್ಲ ಎಂಬಂತಹ ಸಾಲುಗಳು ಮನಮುಟ್ಟುತ್ತವೆ. ನಾಗರಿಕತೆಯ ಹೆಸರಿನಲ್ಲಿ ಅನಾಗರಿಕತೆಯೆಡೆಗೆ ಸಾಗುವ ಬದುಕಿಗೆ ಕೈದೀವಿಗೆಯಾಗುವ ವಚನಗಳು ಇಲ್ಲಿವೆ. ಜಿಲ್ಲೆಯ ಉತ್ತಮ ವಚನಕಾರ್ತಿಯರಲ್ಲಿ ಇವರೂ ಕಾಣುತ್ತಾರೆ ಎನ್ನಬಹುದು.

**೩.೩.೩ ಸುಂದರಮ್ಮನವರ ವಚನಗಳು (೨೦೧೬)**

ಬಡತನದ ಬೇಗೆಯಲ್ಲಿ ಬೆಂದು ನೊಂದು ಮೇಲೆದ್ದವರು ಸುಂದ್ರಮ್ಮ. ಮನೆಯಲ್ಲಿ ಸದಾ ಸತ್ಸಂಗ, ಭಗವಂತನ ಆರಾಧನೆ. ಭಜನೆ, ಕಿರ್ತನೆಗಳ ವಾತಾವರಣದಲ್ಲಿ ಬಾಳಿದವಳು. ಆಧ್ಯಾತ್ಮಜೀವಿ ಶರಣ ರಘುನಾಥ

ಹಡಪದರ ಹಿರಿಯ ಮಗಳಿವಳು. ೧೯೮೨ರಲ್ಲಿ ಜನಿಸಿರುವ ಇವಳು ಅಕ್ಷರ ಜ್ಞಾನಕ್ಕಾಗಿ ಶಾಲೆಗೆ ಹೋಗಿ ಪಿಯುಸಿ ಹಾಗೂ ಡಿ.ಇಡಿ. ಪದವಿ ಪಡೆದಿದ್ದಾಳೆ. ೨೦೦೧ರಲ್ಲಿ ವಿವಾಹವಾಗಿರುವ ಇವರು ನಗರದ ಪ್ರತಿಷ್ಠಿತ ಸಂಸ್ಥೆಯೊಂದರ ಪ್ರಾಥಮಿಕ ಶಾಲೆಯಲ್ಲಿ ಅರೆಕಾಲಿಕ ಶಿಕ್ಷಕಿಯಾಗಿ ಸೇವೆಸಲ್ಲಿಸುತ್ತಿದ್ದಾರೆ.

ಮೃದು ಸ್ವಭಾವದ ಭಾವಜೀವಿಯಾಗಿರುವ ಸುಂದ್ರಮ್ಮ ರಾಗ ಸಂಯೋಜನೆ ಮಾಡಿ ಹಾಡುವುದರಲ್ಲಿ ಪ್ರಮುಖರು. ಕಥೆ, ಕಾದಂಬರಿ ಓದುವುದು, ತತ್ವಪದ, ವಚನ, ಕವನಗಳನ್ನು ಬರೆಯುತ್ತ ತಂದೆಯಂತೆ ಕವಿ ಹೃದಯದವಳಾಗಿ ಹೊರಹೊಮ್ಮಿದ್ದಾಳೆ.

"ಉದಯ ಮಲ್ಲೇಶ್ವರ" ಅಂಕಿತದಲ್ಲಿ ರಚಿತವಾಗಿರುವ ಇವರ ವಚನಗಳಲ್ಲಿ ೧೪ ವಚನಗಳು 'ನೀಲಮ್ಮನ ಬಳಗಗಳ ವಚನಗಳಲ್ಲಿ' ಪ್ರಕಟಗೊಂಡಿವೆ. 'ಸ್ವಾರ್ಥ ಬಾರದಿರಲಿ' 'ಹೆಣ್ಣು ಹೀನಳಲ್ಲ' 'ಸಂಸಾರದ ಬೇಗೆ' 'ಸದ್ಗುರು ಮಹಾತ್ಮೆ' 'ಧನದ ಲೋಭ ಬೇಡ' 'ಹಣದ ಆಸೆ' 'ಚುನಾವಣೆ ಪಾಠ' ನೀತಿಯುಕ್ತವಾದ ಹಲವು ವಚನಗಳನ್ನು ಇವರು ಬರೆದಿದ್ದಾರೆ.

ಇಲ್ಲಿಯ ವಚನಕಾರ್ತಿಯರೆಲ್ಲರೂ ತಮ್ಮದೇ ಆದ ನೆಲೆಗಳಲ್ಲಿ, ಚರ್ಚೆಗಳಲ್ಲಿ ಭಾಗವಹಿಸಿ, ಬಸವಾದಿ ಶರಣರ ಕಾಲದಂತೆ, ಒಂದೇ ಸಮಯದಲ್ಲಿ ವಚನಗಳನ್ನು ರಚಿಸಿದ್ದು ಬೀದರ ಜಿಲ್ಲೆಗೆ ಮತ್ತೊಮ್ಮೆ ಸಂದ ವಚನವಾಙ್ಮಯದ ಹುಲುಸು ಎನ್ನಬಹುದು.

**೩.೩೪ ರಮೇಶ ಬಿರಾದಾರರ ವಚನಗಳು (೨೦೧೬)**

ಕನ್ನಡ ಪರ, ಜನಪರ ಹೋರಾಟಗಾರರಾಗಿರುವ ರಮೇಶ ಬಿರಾದಾರ ಬೀದರ ಜಿಲ್ಲೆಯಲ್ಲಿ ಪರಿಚಿತ ವ್ಯಕ್ತಿ. ಸಾಹಿತ್ಯ ಕೃಷಿ ಹಾಗೂ ಬಸವಾದಿ ಶರಣರ ಅಧ್ಯಯನದಲ್ಲಿ ತೊಡಗಿದವರು. ಸಾಮಾನ್ಯ ಮಧ್ಯಮ ಕುಟುಂಬದ ಗಡಿ ಕುಸುನೂರಿನ ನಿವಾಸಿಗಳಾದ ವೀರಬಸಪ್ಪ ಹಾಗೂ ಸಿದ್ಧಮ್ಮ ದಂಪತಿಗಳ ಹಿರಿಯ ಮಗನೀತ. "ಸದಾ ಏನಾದರೊಂದು ಚಟುವಟಿಕೆಯಲ್ಲಿ ನಿರತನಾಗಿರುವ ಈತ ಕನ್ನಡ ಕಾರ್ಯ, ಬಸವತತ್ವಕಾರ್ಯ, ಸಾಮಾಜಿಕ ಕಾರ್ಯವನ್ನು ಕೈಗೊಳ್ಳುತ್ತಿದ್ದು, ಅನೇಕ ವರ್ಷಗಳಿಂದ ಇದರಲ್ಲಿ ಸಕ್ರಿಯೆಯಾಗಿದ್ದಾರೆ. ಯಾರು ಗುರುತಿಸಲಿ, ಗುರುತಿಸದೇ ಇರಲಿ, ಸದ್ದು ಗದ್ದಲವಿಲ್ಲದಂತೆ ಕಾರ್ಯ ಮಾಡುವ ಸ್ವಭಾವ ಇವರದು. ಸೋಲು ಗೆಲುವು ಲೆಕ್ಕಿಸದೆ, ಕೀರ್ತಿ–ವಾರ್ತೆ ಬಯಸದೇ ಸನ್ಮಾನ ಪುರಷ್ಕಾರಕ್ಕೆ ಆಸೆ ಮಾಡದೇ ದುಡಿಯುವ ಸ್ವಭಾಗ ರಮೇಶರದೆಂದು ಡಾ. ಬಸವಲಿಂಗ ಪಟ್ಟದ್ದೇವರು ನುಡಿದಿದ್ದಾರೆ.[೫೨]

ಬೀದರ ಜಿಲ್ಲಾ ವಿಕಾಸ ವೇದಿಕೆಯನ್ನು ಹುಟ್ಟು ಹಾಕಿ ಆ ಮೂಲಕ ಜನರ ಅನೇಕ ಸಮಸ್ಯೆಗಳಿಗೆ ಪರಿಹಾರ ಒದಗಿಸಲು ಸಹಕಾರಿಯಾಗಿದ್ದಾರೆ. ಹಾಗೆಯೇ ಇದರೊಂದಿಗೆ ಜಿಲ್ಲಾ ಬರಹಗಾರರ ಮತ್ತು ಕಲಾವಿದರ ಸಂಘವನ್ನು ಕಟ್ಟುವ ಮೂಲಕ ಅನೇಕ ಕಾರ್ಯಕ್ರಮಗಳನ್ನು ಏರ್ಪಡಿಸಿದ್ದಾರೆ. ಸಾಹಿತಿಗಳ ಹಾಗೂ ಕಲಾವಿದರ ಒಡನಾಟದಲ್ಲಿ ತಾವು ಕವಿಯಾಗಿ ಹೊರಹೊಮ್ಮಿದ್ದಾರೆ. ಈಗಾಗಲೇ "ಜೀವನದಿ ಬತ್ತಿದಾಗ" ಎಂಬ ಕವನ ಸಂಕಲನ ತಂದಿದ್ದಾರೆ. ಹಲವಾರು ಆಧುನಿಕ ವಚನಗಳನ್ನು ರಚಿಸಿದ್ದಾರೆ.

ಬಸವಾದಿ ಶರಣರ ಪರಂಪರೆಯಲ್ಲಿ ಜೀವನ ಸಾಗಿಸಲು ಬಯಸುತ್ತಿರುವ ರಮೇಶ ಬಿರಾದಾರ ಅವರು 'ಪಾಪನಾಶಲಿಂಗದೇವಾ' ಎಂಬ ಅಂಕಿತದಲ್ಲಿ 'ನೀಲಮ್ಮನ ಬಳಗದ ವಚನಗಳಲ್ಲಿ' ತಮ್ಮ ೩೦ ವಚನಗಳನ್ನು ಬೆಳಕಿಗೆ ತಂದಿದ್ದಾರೆ. 'ನೀಲಮ್ಮನ ಬಳಗದ' ವಚನಗಳನ್ನು ಪ್ರಕಟಪಡಿಸಲು ಮುಂದಾಳಾಗಿ ನಿಂತು ಆ ಕೃತಿಯನ್ನು ಸಂಪಾದಿಸಿ ಕೊಟ್ಟಿದ್ದಾರೆ. ಅವರ ಇಲ್ಲಿಯ ವಚನಗಳಲ್ಲಿ ಭಕ್ತಿ, ಅರಿವು, ನಡೆ–ನುಡಿ, ಜಪ–ತಪ, ನಾಡಹಬ್ಬ,

ಸ್ವತಂತ್ರತೆ, ಕಾಯ–ಮಾಯ, 'ಶರಣ ತತ್ವ' 'ಸಂಸಾರ' ಆಚಾರ, ಗುಡಿ ಗುಂಡಾರ, ಧನಿಕರ ಜಂಬ, ಭ್ರಷ್ಟಾಚಾರ, ಅಕ್ಷರ ಮಹಿಮೆ ಮೊದಲಾದ ವಿಷಯಗಳ ವಿವರಣೆಯಿದೆ. ಒಟ್ಟನಲ್ಲಿ ಇವರ ರಚನೆಗಳಲ್ಲಿ ಭಕ್ತಿಯ ಮೂಲಕ ಬದುಕನ್ನು ಅರ್ಥೈಸುವ ಪರಿ ಬಹುತೇಕ ವಚನಗಳಲ್ಲಿ ಸುವ್ಯಕ್ತವಾಗಿದೆ. ಆದರೂ ಜಾಳು ಜಾಳಾದ ಅಭಿವ್ಯಕ್ತಿಯಿಂದ ಇವರ ರಚನೆಯಲ್ಲಿ ವಚನಗಳಿಗೆ ಬರಬೇಕಾಗಿದ್ದ ಬಿಗುತನ ಬಂದಿಲ್ಲವೆನಿಸುತ್ತದೆ.

ಬೀದರ ಜಿಲ್ಲೆಯಲ್ಲಿ ಈ ರೀತಿ ವಚನ ಸಂಕಲನಗಳನ್ನು ತರುವ ಮೂಲಕ ಈ ೩೫ ಜನ ಆಧುನಿಕ ವಚನಕಾರರು ಪ್ರಸಿದ್ಧರಾಗಿದ್ದಾರೆ. ಆದರೆ ತಮ್ಮ ಒಂದೋ, ಎರಡೋ, ಐದೋ ವಚನಗಳನ್ನು ಅಲ್ಲಲ್ಲಿ ಪ್ರಕಟಪಡಿಸಿರುವವರೂ ಇದ್ದಾರೆ. ಆದರೆ ನಾವಿಲ್ಲಿ 'ವಚನ ಕೃತಿ' ಪ್ರಕಟ ಪಡಿಸಿದವರ ವಚನಗಳನ್ನು ಮಾತ್ರ ಅಧ್ಯಾಯನಕ್ಕೆ ಒಳಪಡಿಸಿದ್ದೇವೆ ಎಂದು ವಿನಮ್ರವಾಗಿ ಹೇಳಲು ಇಚ್ಛಿಸಿದ್ದೇನೆ.

**೩.೩೫ ಎಸ್. ಎಂ. ಜನವಾಡಕರ್‌ರ (ತಥಾಗತ್ ಗಾಥೆಗಳ್)**

ಬೀದರ ಜಿಲ್ಲೆಯ ಭಾಲ್ಕಿ ತಾಲೂಕಿನ ಹಾಲಹಳ್ಳಿ ಗ್ರಾಮದ ಜನವಾಡಕರ್ ಅವರು ೧೯೫೦ರ ಜನೇವರಿ ೩ ರಂದು ಜನಿಸಿದ್ದಾರೆ. ಎಂ.ಎ., ಬಿ.ಇಡಿ. ಪದವೀಧರರಾಗಿರುವ ಇವರು ಪ್ರಾಥಮಿಕ ಶಾಲಾ ಶಿಕ್ಷಕರಾಗಿ, ಸರಕಾರಿ ಸೇವೆಯಲ್ಲಿ ಸೇರಿಕೊಂಡು ಅನೇಕ ಬಡ್ತಿಗಳನ್ನು ಹೊಂದಿ ಸರ್ವ ಶಿಕ್ಷಣ ಅಭಿಯಾನದಲ್ಲಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಇವರ ತಂದೆ ಮರಿಲಿಂಗಪ್ಪ, ತಾಯಿ ಮಹಾರುದ್ರಮ್ಮ ೨೦೦೮ರಲ್ಲಿ ಸೇವೆಯಿಂದ ನಿವೃತ್ತರಾಗಿರುವ ಇವರು ಕವನ, ಗೀತೆ, ನಾಟಕ, ಪ್ರಬಂಧ ಸಾಹಿತ್ಯ ರಚಿಸುವುದರೊಂದಿಗೆ ಆಧುನಿಕ ವಚನಕಾರರಾಗಿಯೂ ಗಮನ ಸೆಳೆದಿದ್ದಾರೆ.

ಶೀಲತರಂಗ (ಕವನ ಸಂಕಲನ) ಧಮ್ಮಾಮೃತ ಗೀತೆ (ಕಾವು) ಹಾಗೂ ಬುದ್ಧ ಗೆದ್ದ ಮಾರನ್‌ಯುದ್ಧ (ನಾಟಕ) ನಂಟು ಬಿಡದೆ ಅಂಟಿಕೊಂಡವರು (ಕಾದಂಬರಿ) ಹಳ್ಳಿಯ ಸಂಪ್ರದಾಯದ ಹಾಡುಗಳು, ಬಣ್ಣದ ಬದುಕು (ಕಥಾ ಸಂಕಲನ) ಹಿಮಸಾಗರ (ಪ್ರವಾಸ ಕಥನ) ಪ್ರಜ್ಞಾತರಂಗ (ಕವನ) ಸಂಗಲನಗಳನ್ನು ಪ್ರಕಟಿಸಿದ್ದಾರೆ. ಬೌದ್ಧ ಸಾಹಿತ್ಯದಲ್ಲಿ ತುಂಬಾ ಆಸಕ್ತಿಯಿರುವ ಇವರು, ಆದರ್ಶ ಜೀವನಕ್ಕೆ ಹೆಸರುವಾಸಿಯಾಗಿದ್ದಾರೆ. ಕನ್ನಡ ಭಾಷಾಭಿಮಾನಿ, ರಾಷ್ಟ್ರಪ್ರೇಮಿಯಾಗಿರುವ ಇವರು ತಮ್ಮ ಬಿಡುವಿನ ಸಮಯದಲ್ಲಿ ಸಾಮಾಜಿಕ ಹಾಗೂ ಧಾರ್ಮಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಮಾಜಕ್ಕೆ ಮಾರ್ಗದರ್ಶನ ನೀಡುತ್ತಲಿದ್ದಾರೆ. ಹಾಡುಗಾರರು ಹಾಗೂ ಉತ್ತಮ ಭಾಷಣಕಾರರಾಗಿರುವ ಜನವಾಡಕರ್ ಅವರು ಉತ್ತಮ ಆಧುನಿಕ ವಚನಕಾರರೂ ಆಗಿದ್ದಾರೆ.

'ತಥಾಗತ್' ಅಂಕಿತದಲ್ಲಿ ೧೧೮೩ ಆಧುನಿಕ ವಚನಗಳನ್ನು ರಚಿಸಿದ್ದಾರೆ. ಅವು 'ತಥಾಗತ್ ಗಾಥೆಗಳ' ಹೆಸರಿನಲ್ಲಿ ೨೦೦೬ರಲ್ಲಿ ಪ್ರಕಟವಾಗಿವೆ. ವಾಸ್ತವ ಬದುಕಿನ ಮಾನವ ಜೀವನವನ್ನು ಚಿತ್ರಿಸುವ ಇಲ್ಲಿಯ ಗಾಥೆಗಳ ನವೀನ ರೂಪದಲ್ಲಿದ್ದು, ಕನ್ನಡ ಛಂದೋಗಾಯತ್ರಿ ತ್ರಿಪದಿ ರೂಪವನ್ನು ಹೋಲುತ್ತವೆ. ಭಗವಾನ ಬುದ್ಧನ ಜೀವನ ಮತ್ತು ಉಪದೇಶಗಳನ್ನು ಪ್ರೌಢ ಭಾಷೆಯಲ್ಲಿ ಈ ವಚನಗಳಲ್ಲಿ ಹಿಡಿದಿಡಲು ಪ್ರಯತ್ನಿಸಲಾಗಿದೆ. ವಾಸ್ತವಿಕಾಂಶಗಳನ್ನು ಮರೆಮಾಚದೆ, ವೈಭವೀಕರಿಸದೆ, ನೈಜತೆಗೆ ಸಾಧ್ಯವಾದಷ್ಟು ಅಪಚಾರಬರದಂತೆ ತತ್ವ ಸಂದೇಶಗಳನ್ನು ಹೇಳುವ ಪ್ರಯತ್ನವನ್ನು ಇವರು ಮಾಡಿದ್ದಾರೆ. ಮುಕ್ತ ಛಂದಸ್ಸಿನಲ್ಲಿ ರಚಿಸಿರುವ ಇಲ್ಲಿನ ವಚನಗಳು ಸರಳ ಸುಲಲಿತವಾದ ಭಾಷೆಯಲ್ಲಿದ್ದು, ಜನಸಾಮಾನ್ಯರಿಗೂ ಓದಿದಾಗ ಅರ್ಥವಾಗುವ ಶೈಲಿಯಲ್ಲಿವೆ. ಪ್ರತಿಭಾನ್ವಿತರಾದ ಜನವಾಡಕರ ಅವರಿಗೆ ಶಿಕ್ಷಣ ರಂಗದಲ್ಲಿ ಸೇವೆ ಸಲ್ಲಿಸಿದ ಅಪಾರವಾದ ಅನುಭವ ಹಾಗೂ

ದೇಶವನ್ನು ಸುತ್ತಿರುವ ಲೋಕಾನುಭವ ಇರುವುದರಿಂದ ತಥಾಗತನ ಚರಿತ್ರೆ ಹಾಗೂ ತಥಾಗತ್ ವಚನಗಳನ್ನು ಕನ್ನಡ ಸಾಹಿತ್ಯಲೋಕಕ್ಕೆ ನೀಡಲು ಸಾಧ್ಯವಾಗಿದೆ ಎನಿಸುತ್ತದೆ. ಬೀದರ ಜಿಲ್ಲೆಯ ಉತ್ತಮ ಆಧುನಿಕವಚನಕಾರರಲ್ಲಿ ಜನವಾಡಕರ ಸ್ಥಾನವು ಮುಖ್ಯವಾಗಿದೆ.

**೩.೩೬ ಶ್ರೀಮತಿ ಕಲಾವತಿ ಬಿರಾದಾರ – ನುಡಿ ಬೆಳಕು (೨೦೧೫)**

ಬೀದರ ಜಿಲ್ಲೆಯ ಧರಿನಾಡಿನ ಹಿರಿಯ ಕವಿಯತ್ರಿ ಶ್ರೀಮತಿ ಕಲಾವತಿ ಬಿರಾದಾರ ಅವರು ಭಾಲ್ಕಿ ಚನ್ನಬಸವೇಶ್ವರ ಕಾಲೇಜಿನ ನಿವೃತ್ತ ಪ್ರಾಚಾರ್ಯ ಪ್ರೊ. ಎಸ್.ಬಿ. ಬಿರಾದಾರರ ಧರ್ಮಪತ್ನಿ. ಬೀದರನ ಶೆಟಗಾರ ಮನೆತನದಲ್ಲಿ ಜನಿಸಿದ ಇವರ ತಾಯಿ ಬಸಮ್ಮಾ ತಂದೆ ಕಲ್ಲಪ್ಪಾ ಶೆಟಗಾರರು. ಚಿಕ್ಕ ಹಾಗೂ ಸುಸಂಸ್ಕೃತ ಕುಟುಂಬದಲ್ಲಿ ಜನಿಸಿರುವ ಇವರು ಎಸ್.ಎಸ್.ಎಲ್.ಸಿ. ವರೆಗೆ ಮಾತ್ರ ಓದಿದಾಗ ಲಗ್ನವಾಯಿತು. ನಂತರ ಬಾಹ್ಯ ವಿದ್ಯಾರ್ಥಿಯಾಗಿ ಬಿ.ಎ. ಪದವಿ ಪಡೆದರು. ಪ್ರೊ. ಎಸ್.ಬಿ. ಬಿರಾದಾರ ಸಹಾಯ ಸಹಕಾರದಿಂದ ಕಥೆ, ಕವನ, ಆಧುನಿಕ ವಚನಗಳನ್ನು ಬರೆದದ್ದಾಗಿ ಅವರು ಹೇಳಿಕೊಳ್ಳುತ್ತಾರೆ.

ಈಗಾಗಲೇ 'ಭಾವ ಕುಸುಮ' ಹಾಗೂ 'ಭಾವ ಸಂಗಮ' ಎಂಬ ಎರಡು ಕವನ ಸಂಕಲನಗಳನ್ನು ಲೋಕಾರ್ಪಣೆ ಮಾಡಿರುವ ಇವರು ೨೦೧೫ರಲ್ಲಿ ತಮ್ಮ ದಾಂಪತ್ಯ ಜೀವನದ ಸುವರ್ಣ ಮಹೋತ್ಸವದ ಆಚರಣೆಯ ಹೊತ್ತಿನಲ್ಲಿ 'ನುಡಿ ಬೆಳಗು' ಎಂಬ ಆಧುನಿಕ ವಚನ ಸಂಕಲನವನ್ನು ಲೋಕಾರ್ಪಣೆ ಮಾಡಿದ್ದಾರೆ.

'ಅಪ್ಪ ಚನ್ನಬಸವೇಶ' ಅಂಕಿತನಾಮದಲ್ಲಿರುವ ಇಲ್ಲಿನ ವಚನಗಳು 'ಬಸವತತ್ವ'ದ ಪರಿಮಳವನ್ನು ಹೊರಸೂಸುತ್ತವೆ. ಇವರ ವಚನಗಳಲ್ಲಿ ಮಾನವೀಯ ಮೌಲ್ಯಗಳು, ಬಸವತತ್ವದ ಸಂದೇಶಗಳು, ಅಂಧಶ್ರದ್ಧೆ, ಮೂಢನಂಬಿಕೆಯ ಖಂಡನೆ ಮುಂತಾದ ವಿಷಯಗಳು ಮೂಡಿ ಬಂದಿವೆ. ದಯೆ, ಅಂತಃಕರಣ, ಪ್ರೇಮ, ಮಾನವೀಯತೆಯೇ ನಮ್ಮ ಆಸ್ತಿಯೆಂಬುದು ಅವರ ವಚನದ ತುಂಬಾ ತುಂಬಿಕೊಂಡಿದೆ.[೫೩]

ಒಟ್ಟಿನಲ್ಲಿ ಕಲಾವತಿಯವರಲ್ಲಿ ಭಕ್ತಿಯಿದೆ, ಸುತ್ತಲಿನ ಸಮಾಜವನ್ನು ಕಣ್ಣು ತೆರೆದುನೋಡುವ ಕುತೂಹಲವಿದೆ. ಮೌಢ್ಯತೆಗಳ ಕುರಿತು ಸೌಮ್ಯ ರೋಷವಿದೆ. ಜೀವನಾನುಭವವಿದೆ ಕವಿ ಹೃದಯದೊಂದಿಗೆ ಸಾಮಾಜಿಕ ಕಳಕಳಿ ಇರುವುದನ್ನಿಲ್ಲಿ ಅರಿಯಬಹುದು. ವಚನಗಳು ಅಲ್ಲಲ್ಲಿ ಗದ್ಯದ ಸಾಲುಗಳೇನೋ ಎನ್ನುವಂತಿದ್ದರೂ ಭಾಷೆಯಿಂದ ಇವರು ಓರ್ವ ಉತ್ತಮ ವಚನಕಾರ್ತಿಯಾಗಿದ್ದಾರೆ ಎನ್ನಬಹುದು.

ಟಿಪ್ಪಣಿಗಳು

೧.) ಡಾ. ಜಿ.ಎಸ್. ಕಾಪಸೆ – ಮಧುರ ಚೆನ್ನ – ಪು. ೧

೨) ಡಿ.ವ್ಹಿ. ಗುಂಡಪ್ಪ – ಸಾಹಿತ್ಯ ಶಕ್ತಿ – ಪು. ೧೩೧

೩) ಮಹಾಕವಿ ರಾಘವಾಂಕ – ಪು. ೧೭೧

೪) ಡಾ. ಆರ್.ಸಿ. ಹಿರೇಮಠ ಸಾಹಿತ್ಯ ವಿಮರ್ಶೆ – ಪು. ೮೯

೫) ಜಿ.ಎಸ್. ಕಾಪಸೆ – ಮಧುರಚೆನ್ನ ಪು. ೬

೬) ಡಾ. ವಿ.ಕೃ. ಗೋಕಾಕ – ಸಾಹಿತ್ಯದಲ್ಲಿ ಪ್ರಗತಿ – ಪು. ೪೬

೭) ಡಾ. ಗುರುಲಿಂಗಪ್ಪ ದಬಾಲೆ – 'ಬೀದರ ಜಿಲ್ಲೆಯ ಅನುಭಾವಿ ಕವಿಗಳು –ಪು. ೨೨೦

೮) ಎಂ.ಜಿ. ಗಂಗನಪಳ್ಳಿ – 'ವಚನ ಮಂದಾರ' – ಮುನ್ನುಡಿ

೯) ಶ್ರೀ ಬಿ.ಎಸ್. ಖೂಬಾ – 'ಯುಗವಾಣಿ' ಪ್ರಸ್ತಾವನೆಯಲ್ಲಿ ಹಾಗೂ 'ಶತಕಾಂತ್ಯದ ವಚನ ಶತಕ' ೨೦೦೧ರ ಅರಿಕೆಯಲ್ಲಿ

೧೦) ಡಾ. ಸೋಮನಾಥ ಯಾಳವಾರ – 'ಶತಕಾಂತ್ಯದ ವಚನ ಶತಕ' – ಸಮಾಲೋಚನೆಯಲ್ಲಿ

೧೧) ಕರುಣಾ ಸಲಗಾರ – ಶಿವಲಿಂಗೇಶ್ವರ ವಚನಗಳು ಬೆನ್ನುಡಿಯಲ್ಲಿ ಹಂಶ ಕವಿ ಹೇಳಿದ್ದು.

೧೨) ಡಾ. ಸೋಮನಾಥ ಯಾಳವಾರ – ಭಾವಧಾರೆ – ವ.ಸಂ. ೨೦ – ಪು. ೬

೧೩) ಕರುಣಾ ಸಲಗರ – ಭಾವಧಾರೆ – ವ.ಚಂ. ೨೦ – ಪು. ೬

೧೪) ಡಾ. ಸೋಮನಥ ಯಾಳವಾರ – ಭಾವಧಾರೆ – ಮುನ್ನುಡಿಯಲ್ಲಿ

೧೫) ಸುಬ್ಬಣ್ಣ ಅಂಬೆಸಂಗೆ ಭಾಲ್ಕಿ – 'ಬೆಳಗಿನೊಳಗಣ ಬೆಳಕು' – ಬೆನ್ನುಡಿಯಲ್ಲಿ

೧೬) ಶ್ರೀ ದೇಶಾಂಶ ಹುಡಗಿ – ಚನ್ನಬಸವ ಚರಿತೆ – ಮುನ್ನುಡಿಯಲ್ಲಿ ಪ್ರ.

೧೭) ಬೀದರ ಕನ್ನಡ ಕೋಶ – ದೇಶಾಂಶ ಹುಡಗಿ – ಪ್ರ. ಶಂಭುಲಿಂಗ ವಾಲ್ದೊಡ್ಡಿ – ಅನುಬಂಧ – ೩ – ಪು. ೬೩೨ –೪೦

೧೮) ದೇಶವ ಹುಡಗಿ ದಿಗಂಬರ ವಚನಗಳು – ಮುನ್ನುಡಿಯಲ್ಲಿ – ಪು. VII-VIII

೧೯) ದೇಶವ ಹುಡಗಿ ದಿಗಂಬರ ವಚನಗಳು – ನನ್ನನುಡಿ – ಪು. XVI

೨೦) ಚೇತನಾ ಧರ್ಮರಡ್ಡಿ (ಮಗಳು) ಆಸ್ಟೇಲಿಯಾ – 'ನಾನೊಂದು ಹುಲ್ಲು ಕಡ್ಡಿಯೆಂದು ಉದಾಸೀನವೇಕೆ? ಬೆನ್ನುಡಿಯಲ್ಲಿ

೨೧) ಶಾರದಾ ದಯಾಸಾಗರ ರಾಯಚೂರ – ಅಭಿಪ್ರಾಯದಲ್ಲಿ – ವಚನ ಪುಷ್ಪಾಂಜಲಿ

೨೨) ಅವರ ಚೊಚ್ಚಲ ಕೃತಿ ಹೆಚ್ಚು ಜನರ ಕೈಗೆ ದೊರೆಯದೇ ಹೋಗಿರುವುದರಿಂದ ವಚನ ಪುಷ್ಪಾಂಜಲಿಯ ೧೨೫ ವಚನ ಹಾಗೂ ಹೆಚ್ಚಿನ ೧೩೦ ವಚನಗಳನ್ನು ಸೇರಿಸಿ ಈ ಕೃತಿ ಪ್ರಕಟಿಸಲಾಗಿದೆ.

೨೩) ಶ್ರೀ ಸಿದ್ಧರಾಮ ಶರಣರು ಬೆಲ್ದಾಳ 'ವಚನ ಕುಸುಮ – ಮುನ್ನುಡಿಯಲ್ಲಿ ಪು. V, VI

೨೪) ಡಾ. ಆರ್.ಬಿ. ಚಿಲುಮಿ – 'ವಚನ ಸುಗಂಧ' – ಮುನ್ನಡೆಸಲು ಮುನ್ನುಡಿ – ಪು. ೫

೨೫) ಪುಷ್ಪಾ ಕನಕಾ "ವಚನಸುಮ" – ನನ್ನ ನುಡಿಯಲ್ಲಿ

೨೬) ದೇಶಾಂಶ ಹುಡಗಿ – 'ವಚನಸುಮ' – ಮುನ್ನುಡಿಯಲ್ಲಿ – iv

೨೭) ರಂಜರ್ನ ದರ್ಗಾ – ನನ್ನಶಿವ – 'ಮಧುರ ಭಾವದ ಹೊನಸು – ಪು. ೭ರಲ್ಲಿ

೨೮) ಎಂ. ಮುಕ್ತುಂಬಿ – ನ್ನನಶಿವ – ಅರಿಕೆಯಲ್ಲಿ – ಪು. ೧೧

೨೯) ಪ್ರೊ. ಸಿದ್ಧಣ್ಣ ಲಂಗೋಟಿ – 'ಭಾಲ್ಕಿ ಚಂದ್ರನ ಮಹಾ ಬೆಳಗು' – ಮುನ್ನುಡಿಯಲ್ಲಿ – ಪು. iv

೩೦) ಡಾ. ಬಸವಲಿಂಗ ಪಟ್ಟದ್ದೇವರು – 'ಗುರುಪ್ರಸಾದ' – ಸಂದೇಶದಲ್ಲಿ – ಪು. iv

೩೧) ಡಾ. ಮಾಣಿಕರಾವ ಧನಾಶ್ರೀ – 'ಗುರು ಪ್ರಸಾದ' – ಮುನ್ನುಡಿಯಲ್ಲಿ

೩೨) ಎಂ.ಜಿ ದೇಶಪಾಂಡೆ – ವಚನ ಚಂದ್ರಿಕೆ – ನನ್ನನುಡಿ – ಪು. v

೩೩) ಗಿರಿಸಿದ್ಧಲಿಂಗನ ಪರಮಾನಂದದ ಪಂಚಪದಿಗಳು – ಮುನ್ನುಡಿಯಲ್ಲಿ ದೇಶಾಂಶ ಹುಡಗಿ – ಪು.

೩೪) ಡಾ. ಬಸವರಾಜ ಬಲ್ಲೂರ – 'ಭಾವ ಬಯಲಾದಾಗ' – ಮುನ್ನುಡಿಯಲ್ಲಿ – ಪು. ೧೨

೩೫) ಮಹೇಶ್ವರಿ ಹೇಡೆ – ಭಾವ ಬಯಲಾದಾಗ – ಪು. ೧೭

೩೬) ಹಂಶಕವಿ – 'ವಚನಾಮೃತ' – ಪೀಠಿಕೆಯಲ್ಲಿ – ಪು. vii

೩೭) ಶಾಂತಲಿಂಗ ಸ್ವಾಮಿಗಳು – ಆಧುನಿಕ ವಚನಗಳು – ೦೭

೩೮) ಡಾ. ಸೋಮನಾಥ ಯಾಳವಾರ – 'ವಚನದಲ್ಲಿ ನಾಮಾಮೃತ' – ಪು.೫೦

೩೯) ಡಾ. ರಘುಶಂಖ ಭಾತಂಬ್ರಾ – 'ಶರಣ ಸೌರಭ' ಸ್ಮರಣ ಗ್ರಂಥ – ಪು. ೨೬–೨೭– ಡಾ. ಬಸವರಾಜ ಬಲ್ಲೂರ ಲೇಖನ

೪೦) ಡಾ. ಗವಿಸಿದ್ಧಪ್ಪ ಪಾಟೀಲ ಸುಗಂಧ – ಸಮಾರೋಪ – ಪು. ೮೫

೪೧) ರಂಜಾನ್ ದರ್ಗಾ – 'ಆನು ಒಲಿದಂತೆ ಹಾಡುವೆ – ಸಮಾಲೋಚನೆಯಲ್ಲಿ – ಪು. ೧೨

೪೨) ಡಾ. ಜಗನ್ನಾಥ ಹಬ್ಬಾಳೆ – 'ಆನು ಒಲಿದಂತೆ ಹಾಡುವೆ' – ಬೆನ್ನುಡಿಯಲ್ಲಿ

೪೩) ವಿ. ಸಿದ್ಧರಾಮಣ್ಣ ಶರಣರು – ಸಿದ್ಧರಾಮಣ್ಣ ಶರಣರ ವಚನಗಳು – ಲೇಖಕರ ನುಡಿಯಲ್ಲಿ

೪೪) ಪ್ರೊ. ಸಿದ್ಧಣ್ಣ ಲಂಗೋಟಿ – ವಿ. ಸಿದ್ಧರಾಮಣ್ಣ ಶರಣರು – ಪು. ೩

೪೫) ಡಾ. ಗವಿಸಿದ್ಧಪ್ಪ ಪಾಟೀಲ – ಸಾಹಿತ್ಯದ ಬೆಳಕಿನಲ್ಲಿ – ಪು. ೮೯

೪೬) ಡಾ. ಸೋಮನಾಥ ಯಾಳವಾರ – ವಚನಸಿರಿ – ಮುನ್ನುಡಿಯಲ್ಲಿ ಪು. viii

೪೭) ವಿಶ್ವನಾಥ ಬಿರಾದಾರ – 'ಆದಿನಾಥನ ಗಾನಲಹರಿ – ನನ್ನನುಡಿಯಲ್ಲಿ – ಪು. x-xi

೪೮) ಡಾ. ಗವಿಸಿದ್ಧಪ್ಪ ಪಾಟೀಲ – 'ದತ್ತ ದಿಗಂಬರ ವಚನಗಳು' – ಬೆನ್ನುಡಿಯಲ್ಲಿ

೪೯) ರಂಜಾನ್ ದರ್ಗಾ – ವಚನ ಗೊಂಚಲು – ಬೆನ್ನುಡಿಯಲ್ಲಿ

೫೦) ನೀಲಮ್ಮನ ವಚನಗಳು – (ಸಂ) – ರಮೇಶ ಬಿರಾದಾರ – ಪು. ೫೭–೬೫

೫೧) ಡಾ. ಪ್ರದೀಪಕುಮಾರ ಹೆಬ್ರಿ – ನೀಲಮ್ಮನ ಬಳಗದ ವಚನಗಳು – ನುಡಿತೋರಣದಲ್ಲಿ – ಪು. ೧೮೨

೫೨) ನೀಲಮ್ಮನ ಬಳಗದ ವಚನಗಳು – ಸಂ. ರಮೇಶ ಬಿರಾದಾರ – ಸಂದೇಶದಲ್ಲಿ ಪು. ೭

೫೩) ಡಾ. ಬಸವಲಿಂಗ ಪಟ್ಟದ್ದೇವರು – ನುಡಿ ಬೆಳಗು – ಸಂದೇಶದಲ್ಲಿ ಪು. vi

# ಅಧ್ಯಾಯ – ೪

## ಕಲಬುರ್ಗಿ ಜಿಲ್ಲೆಯ ಆಧುನಿಕ ವಚನಕಾರರು ಮತ್ತು ಅವರ ವಚನ ಸಾಹಿತ್ಯ

೧೨ನೇಯ ಶತಮಾನದ ವಚನ ಸಾಹಿತ್ಯಕ್ಕೆ ಕಲಬುರ್ಗಿ ಜಿಲ್ಲೆ ಕನ್ನೆನೆಲ ಆಗಿರುವಂತೆ, ಆಧುನಿಕ ವಚನ ಸಾಹಿತ್ಯಕ್ಕೂ ಪ್ರಸಿದ್ಧವಾಗಿದೆ. ಶರಣರ ವಚನ ಸಾಹಿತ್ಯದ ಮೊದಲ ವಚನಕಾರ ಕಲಬುರ್ಗಿ ಜಿಲ್ಲೆಯ ಜೇಡರ ದಾಸಿಮಯ್ಯ ಆಗಿರುವಂತೆ, ದೇವದುರ್ಗದ ಆದಿ ಅಮಾತೆಪ್ಪ ಕಲಬುರ್ಗಿ ಪರಿಸರದ ಮೊದಲ ಆಧುನಿಕ ವಚನಕಾರನಾಗಿದ್ದಾನೆ. "ದೇಶಕಧಿಕನಾದ ದೇವದುರ್ಗಾಧೀಶ' ಎಂಬ ವಚನಗಳ ಅಂಕಿತದಲ್ಲಿ ಈತನು ಬರೆದ ೧೯೧ ವಚನಗಳು ೧೯೨೭ಕ್ಕಿಂತ ಮೊದಲೇರಚಿತಗೊಂಡಿರುವುದರಿಂದ ಕರ್ನಾಟಕದ ಮೊಟ್ಟಮೊದಲ ಆಧೂನಿಕ ವಚನಕಾರ 'ಆದಿ ಅಮತೆಪ್ಪ" ಎಂದು ಡಾ. ಬಸವರಾಜ ಸಬರದ ಅವರು ಹೇಳಿರುವುದು[೧] ಗಮನಾರ್ಹ ಸಂಗತಿ. ಹೀಗಾಗಿ ಹನ್ನೆರಡನೆಯ ಶತಮಾನದ ವಚನ ಸಾಹಿತ್ಯದಂತೆ, ಆಧುನಿಕ ವಚನ ಸಾಹಿತ್ಯವೆಂಬ ಪ್ರಕಾರವು ಉದಯವಾದದ್ದು ಈ ಕಲಬುರ್ಗಿ ಜಿಲ್ಲೆಯಿಂದಲೇ ಎಂದು ಹೇಳಬಹುದು.

ಇಂದಿನ ಕಾಲದಲ್ಲಿ ಸಂಪದ್ಭರಿತವಾಗಿ ಬೆಳೆಯುತ್ತಿರುವ ಆಧುನಿಕ ವಚನಸಾಹಿತ್ಯಕ್ಕೆ ಕಲಬುರ್ಗಿ ಜಿಲ್ಲೆಯ ಕೊಡುಗೆ ಅತ್ಯಮೂಲ್ಯವಾಗಿದೆ. ಇಲ್ಲಿಯ ಈ ವಾಙ್ಮಯಕ್ಕೆ ಬಹುಮುಖ ಪ್ರತಿಭೆಯ ಸಮಾಜದ ವಿವಿಧ ಕ್ಷೇತ್ರದ ವ್ಯಕ್ತಿಗಳು ಈ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಅವರಲ್ಲಿ ಗೃಹಿಣಿಯರು, ಶಿಕ್ಷಕರು, ವೈದ್ಯರು, ಅಭಿಯಂತರು, ಬ್ಯಾಂಕ್ ಉದ್ಯೋಗಿಗಳು, ಮಠಾಧೀಶರು, ಸಮಾಜ ಸೇವಕರು ಹೀಗೆ ಇನ್ನೂ ಹಲವಾರು ಕ್ಷೇತ್ರದ ಕಾಯಕ ಜೀವಿಗಳು ಈ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಕಾಣಿಕೆ ನೀಡಿದ್ದಾರೆ. ಅಂಥವರಲ್ಲಿ ೨೩ ಜನ ಪ್ರಾತಿನಿಧಿಕ ವಚನಕಾರರನ್ನಿಲ್ಲಿ ಪರಿಚಯಿಸಲಾಗಿದೆ. ಇನ್ನೂ ಅಧಿಕ ಸಂಖ್ಯೆಯ ವಚನಕಾರರ ಪಟ್ಟಿ ಇಲ್ಲಿ ದೊರಕುತ್ತದೆಯಾದರೂ ೨೦೧೬ರ ವರೆಗೆ ಯಾರೂ ತಮ್ಮ ಆಧುನಿಕ ವಚನ ಪುಸ್ತಕಗಳನ್ನು ಪ್ರಕಟಿಸಿದ್ದಾರೋ ಅಂಥವರನ್ನು ಮಾತ್ರ ಇಲ್ಲಿ ಪ್ರಾತಿನಿಧಿಕವಾಗಿ ಪರಿಗಣಿಸಲಾಗಿದೆ.

ವಚನಕಾರರು ತಮ್ಮ 'ವಚನ ಸಂಕಲನ'ಗಳನ್ನು ಪ್ರಕಟಪಡಿಸಿರುವ ವರ್ಷದ ಹಿನ್ನೆಲೆಯಲ್ಲಿ ವಚನಕಾರರನ್ನು ಕ್ರಮವಾಗಿ ಜೋಡಿಸಿಕೊಂಡು ಅವರ ವಚನ ಸಾಹಿತ್ಯ ಹಾಗೂ ಅವರನ್ನು ಇಲ್ಲಿ ಅವಲೋಕಿಸಲಾಗಿದೆ. ಹೀಗಾಗಿ ಕಲಬುರ್ಗಿ ಜಿಲ್ಲೆಯಲ್ಲಿ ಬರುವ ಆಧುನಿಕ ವಚನ ಸಾಹಿತ್ಯ ಹಾಗೂ ವಚನಕಾರರ ಸಂಕ್ಷಿಪ್ತ ಪರಿಚಯವನ್ನು ಈ ಕೆಳಗಿನಂತೆ ಅವಲೋಕಿಸಬಹುದು.

**೪.೧ ಸಿದ್ಧರಾಮ ಪೋಲೀಸ ಪಾಟೀಲರ 'ಸತ್ಯಜ್ಞಾನ ವಚನಗಳು' (೨೯೮೦)**

**ಭಾಗ – ೧.೨.೩.೪ (೧೯೯೩)**

ಕಲಬುರ್ಗಿ ಜಿಲ್ಲೆಯ ಪ್ರಮುಖ ಸಾಹಿತಿಗಳಲ್ಲಿ ಒಬ್ಬರಾಗಿರುವ ಸಿದ್ಧರಾಮ ಪೋಲೀಸಪಾಟೀಲರು ಕಾವ್ಯ, ಚರಿತ್ರೆ, ಪ್ರಬಂಧ, ಸಂಪಾದನೆ, ವಚನ ಸಾಹಿತ್ಯ ಮೊದಲಾದ ಪ್ರಕಾರಗಳಿಂದ ಕೂಡಿದ ಸು. ೧೫ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಕಲಬುರ್ಗಿ ಜಿಲ್ಲೆಯ ಅಫಜಲ್ಪೂರ ತಾಲೂಕಿನ ದಿಗ್ಸಂಗಾ (ಬಿ) ಗ್ರಾಮದ ಇವರು ವೃತ್ತಿಯಲ್ಲಿ ಇಂಜಿನಿಯರ್. ಶ್ರೀ ಶರಣಪ್ಪ ತಂದೆ ಹಾಗೂ ತಾರಾಬಾಯಿಯವರ ಮಗನಾಗಿ ೧೯೪೬ರ ಜೂನ್ ೭ ರಂದು ಜನಿಸಿದ್ದಾರೆ. ಬಿ.ಇ. ಪದವೀಧರರಾಗಿರುವ ಇವರು ಲೋಕೋಪಯೋಗಿ ಇಲಾಖೆಯಲ್ಲಿ ಅಭಿಯಂತರಾಗಿ ಸೇವೆ ಸಲ್ಲಿಸಿ ವಿಶ್ರಾಂತ ಜೀವನವನ್ನು ಅನುಭವಿಸುತ್ತಿದ್ದಾರೆ.

ಪ್ರವೃತ್ತಿಯಲ್ಲಿ ಸಾಹಿತಿಗಳಾಗಿರುವ ಇವರು ಹೈಸ್ಕೂಲಿನಲ್ಲಿ ಓದುತ್ತಿರುವಾಗಲೇ ಕಥೆ, ಕವನ, ಹರಟೆ, ವ್ಯಕ್ತಿ ಚಿತ್ರಣ ಹಾಗೂ ತ್ರಿಪದಿಗಳನ್ನು ಬರೆಯಲು ಆರಂಭಿಸಿದ್ದರು. ಕಲಬುರ್ಗಿ ಹಾಗೂ ಅಫಜಲ್ಪುರ ತಾಲೂಕಿನ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಜಿಲ್ಲೆಯ ಕರ್ನಾಟಕ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿಯೂ ಸಕ್ರಿಯವಾಗಿ ಸೇವೆ ಸಲ್ಲಿಸಿದ್ದಾರೆ. ಅನೇಕ ಕವಿಗೋಷ್ಠಿ, ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿರುವ 'ಸಿದ್ಧರಾಮ'ರು 'ಸತ್ಯಜ್ಞನ ವಚನಗಳು' ಎಂಬ ಹೆಸರಿನ ಭಾಗ ೧, ಭಾಗ ೨, ೩ ಹಾಗೂ ಭಾಗ ೪ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ.

'ನಾನು ನಮ್ಮಪ್ಪನ್ಹಾಂಗ', 'ನಿನೊಮ್ಮೆ ಸತ್ತು ನೋಡು' ಹಾಗೂ 'ಮತ್ತೇಕೆ ಮೂಕ ವೇದನೆ' ಎಂಬ ಕವನ ಸಂಕಲನಗಳು, ನಿರಂಜನ ಜಂಗಮ ಅಲ್ಲಮ ಪ್ರಭುವಿನ ಚರಿತ್ರೆ, ಹಳ್ಳಿಯ ಹವಳಗಳು ವ್ಯಕ್ತಿಚಿತ್ರಣ, 'ನಾ ಮಾಡ್ಕೊಂಡ ಹಜಾಮತಿ ಪ್ರಬಂಧ ಸಂಕಲನ', 'ಭೂಗರ್ಭ ಜಲ ವೈಜ್ಞಾನಿಕ ಕೃತಿ', 'ವಿನೋದ ಸಾಹಿತ್ಯ', 'ಶಬ್ದ ಸೋಪಾನ' 'ಬೆಣ್ಣಿ ತೊರೆ' ಎಂಬಂತಹ ಕೃತಿಗಳನ್ನು[೨] ಕನ್ನಡ ಸಾಹಿತ್ಯಕ್ಕೆ ಕಾಣಿಕೆಯಾಗಿ ಕೊಟ್ಟಿದ್ದಾರೆ. ಇವರು 'ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಯನ್ನು ಗಮನಿಸಿ, ಇವರಿಗೆ ಅನೇಕ ಪ್ರಶಸ್ತಿ, ಪುರಸ್ಕಾರಗಳು ಸಂದಿವೆ. ಜಿಲ್ಲೆಯ ಹಾಗೂ ತಾಲೂಕಿನ ಕನ್ನಡ ಸಾಹಿತ್ಯ ಸಮ್ಮೇಳನಗಳ ಸರ್ವಾಧ್ಯಕ್ಷತೆಯ ಗೌರವವೂ ಇವರಿಗೆ ದೊರಕಿದೆ.

'ಸತ್ಯಜ್ಞ' ಎಂಬ ಅಂಕಿತದಿಂದ ಸಾವಿರಾರು ವಚನಗಳನ್ನು ರಚಿಸಿರುವ ಸಿದ್ಧರಾಮ ಪೊಲೀಸ ಪಾಟೀಲರ ಮೇಲೆ 'ಸರ್ವಜ್ಞ' ಕವಿಯ ದಟ್ಟವಾದ ಪ್ರಭಾವವಾಗಿರುವುದನ್ನು ಗಮನಿಸಬಹುದು. ಅಂಕಿತನಾಮ, ತ್ರಿಪದಿಗಳ ಸ್ವರೂಪ, ಲಕ್ಷಣ ಹಾಗೂ ರಚನೆಗಳಲ್ಲಿ ಈ ಛಾಯೆಯನ್ನು ಸ್ಪಷ್ಟವಾಗಿ ಗುರುತಿಸಬಹುದು. ಆದರೂ ಅವುಗಳಲ್ಲಿರುವ ಸ್ವಾತಂತ್ರ್ಯತೆ, ಪ್ರಾಮಾಣಿಕತೆ ಹಾಗೂ ಅಭಿವ್ಯಕ್ತಿ ಕ್ರಮದಲ್ಲಿ ಪೊಲೀಸ ಪಾಟೀಲರು ತಮ್ಮತನವನ್ನು ಗಟ್ಟಿಯಾಗಿ ಉಳಿಸಿಕೊಂಡದ್ದು ಎದ್ದು ಕಾಣುತ್ತದೆ.

ಪಾಟೀಲರ ತ್ರಿಪದಿಗಳಿಗೆ ಸರಳತೆ, ಸಹಜತೆಯ ಗುಣವಿದೆ. ಲಾಲಿತ್ಯಮಯವಾದ ಪದಗಳ ಬಳಕೆ, ಪ್ರಾದೇಶಿಕ ಭಾಷಾ ಶೈಲಿಯಿಂದ ಓದುಗರ ಮನ ಸೂರೆಗೊಳ್ಳುತ್ತವೆ. ಇವರ ತ್ರಿಪದಿಗಳನ್ನು ಕುರಿತು. ಡಾ. ಸಿದ್ಧಯ್ಯ ಪುರಾಣಿಕರ ಮಾತೆಂದರೆ, "ತೆರೆದ ಕಣ್ಣುಗಳಿಂದ ಸುತ್ತಮುತ್ತಲೂ ದಿನರಾತ್ರಿಯೆನ್ನದೆ ಸಮಾಜದಲ್ಲಿ ನಡೆಯುತ್ತಿರುವುದನ್ನು ನೋಡುತ್ತ ನಡೆದಿರುವ ಶ್ರೀ ಸಿದ್ಧರಾಮರಿಗೆ ಬೆಳಕು ಕಂಡಂತೆ 'ಿೀವಿ ಶಬ್ದ ಬಿಟ್ಟು ಭಾವಕ್ಕೆ ಬೆಲೆಕೊಟ್ಟು ಬಣ್ಣಿಸಿದ್ದಾರೆ. ಲೋಕ ಮಿಡಿದಂತೆ ನುಡಿದ ಇವರ ಹೃದಯ ವೀಣೆಯು ಹೊಮ್ಮಿಸಿದ ಇಂಚರಗಳಾಗಿ ಈ ತ್ರಿಪದಿಗಳು ಮೈದಾಳಿವೆ"[೩] ಎಂದಿರುವುದು ಸರಿಯಾದ ಹೇಳಿಕೆ ಎನ್ನಬಹುದು.

ಸರಳತೆಯನ್ನು ಮೈಗೂಡಿಸಿಕೊಂಡಿರುವ ಸಿದ್ಧರಾಮ ಪಾಟೀಲರ ಈ ತ್ರಿಪದಿಗಳು ಆಧುನಿಕ ವಚನ ಸಾಹಿತ್ಯದಲ್ಲಿ ತಮ್ಮದೇ ಆಗಿರುವ ವಿಶಿಷ್ಟ ನೆಲೆಯನ್ನು ಕಂಡುಕೊಂಡಿರುವ ವೈಚಾರಿಕ ಅಭಿವ್ಯಕ್ತಿಗಳಾಗಿದ್ದು, ಕವಿಯ ಅನುಭವ ಹಾಗೂ ನೈತಿಕತೆಯನ್ನು ಪ್ರಚುರಪಡಿಸುತ್ತವೆ 'ಸರ್ವಜ್ಞ' ಮೂರ್ತಿಯಂತೆ ಸಹಜ ಹಾಗೂ ನಿತ್ಯನೂತನ ವಿಚಾರಗಳಿಂದ ಕೂಡಿರುವ ಇವು ಪೂರ್ಣ ಜೀವನ ಪ್ರಜ್ಞೆಯನ್ನು ಹೊರರಸೂಸುತ್ತವೆ. ಸಿದ್ಧರಾಮ ಪೊಲೀಸ ಪಾಟೀಲರು ಸತ್ಯಜ್ಞನ ವಚನಗಳು ಭಾಗ ೧,೨,೩,೪ ಸಂಕಲನಗಳಲ್ಲಿ ಈವರೆಗೆ ಸು. ೩೦೦೦ ತ್ರಿಪದಿಗಳನ್ನು ಹೊರತಂದಿದ್ದಾರೆ. ವಿವಿಧ ವಿಷಯ ವಸ್ತುಗಳನ್ನೊಳಗೊಂಡಿರುವ ಅವರ ಈ 'ಸತ್ಯಜ್ಞನ ವಚನಗಳು' ಕನ್ನಡ ಸಾಹಿತ್ಯಕ್ಕೆ ಅದರಲ್ಲೂ ಕಲಬುರ್ಗಿ ಜಿಲ್ಲೆಯ ಆಧುನಿಕ ವಚನ ವಾಙ್ಮಯಕ್ಕೆ ಅಮೂಲ್ಯ ಕೊಡುಗೆಗಳಾಗಿವೆ.

ಇವರ 'ಸತ್ಯಜ್ಞ'ನ ವಚನಗಳು ಭಾಗ – ೨ರಲ್ಲಿ "ವೈಯಕ್ತಿಕ, ಪ್ರಾದೇಶಿಕ, ಸಾಹಿತ್ಯ–ಶಿಕ್ಷಣ, ಸಾಮಾಜಿಕ, ವಿಡಂಬನೆ–ಮೂಢನಂಬಿಕೆ, ವೈಜ್ಞಾನಿಕ, ಆರ್ಥಿಕ, ವೈದ್ಯಕೀಯ ಮತ್ತು ನೈತಿಕ ಧರ್ಮ ಚಿಂತನೆಯ ವಿಷಯಗಳನ್ನೊಳಗೊಂಡ ರಚನೆಗಳಿವೆ. ಸಿದ್ಧರಾಮ ಪಾಟೀಲರು ಇಲ್ಲಿಯ ವಚನಗಳಲ್ಲಿ ವ್ಯಕ್ತಿ, ಸಮಾಜ, ರಾಷ್ಟ್ರ ಧರ್ಮ, ದೇವರು, ಜನಪದ, ರಾಜಕಾರಣ ಇವುಗಳಲ್ಲದೆ, ಹಾಸ್ಯ, ವಿಡಂಬನೆ, ಮೂಢನಂಬಿಕೆ, ವ್ಯಂಗ್ಯ, ಉಪದೇಶ, ಸಲಹೆ, ಸೂಚನೆ, ಎಚ್ಚರಿಕೆಯಂತಹ ಮಾನವ ಸ್ವಭಾವದ ವಿಶ್ಲೇಷಣೆಯನ್ನು ನಿರಾಡಬರವಾಗಿ ಮೂಡಿಸಿದ್ದಾರೆ.[೪] ಆಧುನಿಕ ವಚನ ಸಾಹಿತ್ಯದಲ್ಲಿ ಇಲ್ಲಿಯ ತ್ರಿಪದಿಗಳನ್ನು ತುಂಬಾ ಉತ್ತಮ ಗುಣದವುಗಳೆಂದು ತಿಳಿಯಬಹುದಾಗಿದೆ.

'ಸತ್ಯಜ್ಞನ ವಚನಗಳು' ಭಾಗ ೪ ರಲ್ಲಿ ಒಟ್ಟು ೧೫೦೧ ವಚನಗಳು ಸೇರಿಕೊಂಡಿವೆ. ಈಗಾಗಲೇ ಪಾಟೀಲರ ಸತ್ಯಜ್ಞನ ವಚನಗಳ ಸಂಖ್ಯೆ ೭೫೦೦ಕ್ಕೂ ಮಿಕ್ಕಿ ಮುಂದುವರೆದಿದೆ. ಉಳಿದವುಗಳು ಇನ್ನೂ ಪ್ರಕಟವಾಗಬೇಕಾಗಿವೆ. ಉಳಿದ ಭಾಗಗಳಲ್ಲಿಯಂತೆ ಇಲ್ಲಿನ ವಚನ ತ್ರಿಪದಿಗಳಲ್ಲಿ ಸಮಕಾಲೀನ – ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಧಾರ್ಮಿಕ ಹಾಗೂ ಸಾಹಿತ್ಯಿಕ ವ್ಯವಸ್ಥೆಯಲ್ಲಿನ ಅವ್ಯವಸ್ಥೆಯನ್ನು ವಿಡಂಬನಗೊಳಪಡಿಸಿ ಜನಪರ ಪ್ರಜ್ಞೆ ಮೂಡಿಸುವ ವಿಚಾರಗಳಿವೆ.

ಶ್ರೀ ಸಿದ್ಧರಾಮ ಪಾಟೀಲರಿಗೆ ತ್ರಿಪದಿಗಳನ್ನು ರಚಿಸುವುದು ತುಂಬಾ ಸಲೀಸಾಗಿ ಹೋಗಿದೆ. ಗಟಗಟನೆ ನೀರು ಕುಡಿದಂತೆ ಅವರು ಪುಂಖಾನುಪುಂಖವಾಗಿ ತ್ರಿಪದಿಗಳನ್ನು ರಚಿಸುವ ಸಾಮರ್ಥ್ಯವನ್ನು ಹೊಂದಿದ್ದಾರೆ.

ಸಮಾಜಮುಖಿಯಾಗಿರುವ ಪಾಟೀಲರ ತ್ರಿಪದಿಗಳು, ನಿತ್ಯ ಸಮಾಜದಲ್ಲಿ ನಡೆಯುವ ಅನ್ಯಾಯ, ಅನೀತಿ, ದಬ್ಬಾಳಿಕೆ, ಲಂಚಗುಳಿತನ, ಜಾನಪದ, ಕೃಷಿ, ವೈದ್ಯ, ಆರೋಗ್ಯ, ಶಿಕ್ಷಣ ಮೌಢ್ಯ, ಹತ್ತು–ಹಲವು ವಿಷಯಗಳನ್ನು ಸಮೃದ್ಧವಾಗಿ ಒಳಗೊಂಡಿವೆ. ಎಷ್ಟೋ ಸಮಸ್ಯೆಗಳ ಸಂಘರ್ಷಗಳ ಜ್ವಲಂತ ಚಿತ್ರಣವನ್ನು ಅವ ತ್ರಿಪದಿಗಳಲ್ಲಿ ಕಾಣಬಹುದು. ಪ್ರಾದೇಶಿಕತೆಯ ಮೇಲೆ ತುಂಬಾ ಅಭಿಮಾನವಿರುವ ಈ ಕವಿಗಳು ಹಾಗೂ ಅವರ ತ್ರಿಪದಿಗಳಿಗೆ ಆಧುನಿಕ ವಚನ ಸಾಹಿತ್ಯದಲ್ಲಿ ಉನ್ನತ ಹೆಚ್ಚುಗಾರಿಕೆಯಿದೆ ಎನ್ನಬಹುದು.

**೪.೨ ಶರಣಬಸವಪ್ಪ ಅಪ್ಪರ ದಾಸೋಹ ಸೂತ್ರಗಳು (೧೯೮೮)**

ಕಲಬುರ್ಗಿ ಜಿಲ್ಲೆಯ ಆಧುನಿಕ ವಚನಕಾರರ ಸಾಲಿನಲ್ಲಿ ಡಾ. ಶರಣಬಸಪ್ಪ ಅಪ್ಪಾ ಅವರ ಹೆಸರೂ ಸೇರಿಕೊಂಡಿದೆ. ಕಲಬುರ್ಗಿಯ ಶ್ರೀ ಶರಣಬಸವೇಶ್ವರ ಮಹಾಸಂಸ್ಥಾನದ ಎಂಟನೆಯ ಮಹಾದಾಸೋಹದ ಪೀಠಾಧಿಪತಿಗಳಾಗಿರುವ ಇವರು ದಾರ್ಶನಿಕರು. ಬಸವಾದಿ ಶರಣರ ಮಾರ್ಗದಲ್ಲಿ ನಡೆದುಬಂದಿರುವ ಈ ಸಂಸ್ಥಾನ 'ದಾಸೋಹ'ಕ್ಕೆ ತನ್ನದೇ ಆದ ವ್ಯಾಖ್ಯಾನ್ನ ಬರೆದಿದೆ. ಸಂತ ಹಾಗೂ ಶರಣ ಸಂಪ್ರದಾಯದ ಶರಣಬಸಪ್ಪನವರು ತಮಗೆ ತಿಳಿದ ಉತ್ತಮ ಮಾರ್ಗವನ್ನು ರೂಢಿಸಿಕೊಂಡು ಸಮಾಜದ ಒಳಿತಿಗಾಗಿ ಧಾರ್ಮಿಕ, ಆಧ್ಯಾತ್ಮಿಕ ಹಾಗೂ ಶೈಕ್ಷಣಿಕ ರಂಗಗಳ ಮೂಲಕ ಸೇವೆ ಸಲ್ಲಿಸುತ್ತಿದ್ದಾರೆ. ಕವನ, ವಚನ, ಭಕ್ತಿಗೀತೆಗಳನ್ನು ರಚಿಸಿರುವ ಶರಣಬಸಪ್ಪನವರು 'ದಾಸೋಹ ಸೂತ್ರಗಳು' ಎಂಬತಹ ಅನುಭವದ ನುಡಿಗಳನ್ನು ರಚಿಸುವ ಮೂಲಕ ಆಧುನಿಕ ವಚನಕಾರರೂ ಎನಿಸಿದ್ದಾರೆ.

ಇವರು ದಾಸೋಹ ಮೂರ್ತಿಗಳಾದ ಪೂಜ್ಯ ದೊಡ್ಡಪ್ಪ ಅಪ್ಪ ಹಾಗೂ ಮಾತೋಶ್ರೀ ಗೋದುತಾಯಿಯವರ ಉದರಲ್ಲಿ ೧೯೩೫ರ ನವ್ಹೆಂಬರ ೧೪ ರಂದು ಜನಿಸಿದ್ದಾರೆ. ಈ ಮಹಾದಂಪತಿಗಳ ದಾಸೋಹ ಪರಿಸರದಲ್ಲಿ ಬೆಳೆದ ಇವರು, ಆ ಸಂಸ್ಕಾರವನ್ನು ರೂಢಿಸಿಕೊಂಡು ಬಾಲ್ಯದಿಂದಲೇ ಆಧ್ಯಾತ್ಮ

ಜೀವಿಯಾಗಿ ಬೆಳೆದರು. ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಿಂದ 'ತತ್ವಜ್ಞಾನ'ದಲ್ಲಿ ಎಂ.ಎ. ಪದವಿಯನ್ನು ಉನ್ನತ ಶ್ರೇಣಿಯಲ್ಲಿ ಪಡೆದುಕೊಂಡರು ತಾವು ಗಳಿಸಿಕೊಂಡ ಜ್ಞಾನವು ಸಮಾಜಕ್ಕೆ ಸದುಪಯೋಗವಾಗಬೇಕೆಂಬ ಇಚ್ಛೆಯಲ್ಲಿ ಕೆಲವು ವರ್ಷಗಳ ಕಾಲ ಶರಣ ಬಸವೇಶ್ವರ ವಾಣಿಜ್ಯ ಮಹಾವಿದ್ಯಾಲಯದಲ್ಲಿ 'ಗೌರವ ಅಧ್ಯಾಪಕರಾಗಿ' ಸೇವೆ ಸಲ್ಲಿಸಿದರು. ಆನಂತರ ತಾವು ಶಿಕ್ಷಣ ಸಂಸ್ಥೆಗಳನ್ನು ಬೆಳೆಸಲು ಮನಸ್ಸುಮಾಡಿ, ಹಲವಾರು ಶಿಕ್ಷಣ ಸಂಸ್ಥೆಗಳನ್ನು ತೆರೆದು ಅದರ ಅಧ್ಯಕ್ಷರಾಗಿದ್ದುಕೊಂಡು ಈ ಭಾಗದ ಮಕ್ಕಳಿಗೆ ಒಳ್ಳೆಯ ಶಿಕ್ಷಣ ದೊರಕಿಸಿಕೊಡುವಲ್ಲಿ ಸಫಲರಾದರು.

ಹಾಗೆಯೇ ಅವರು ಪಿಠಾಧಿಪತಿಗಳಾಗಿರುವ 'ದಾಸೋಹ ಮಠ'ದಲ್ಲಿ ನೂರೆಂಟು ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಇಲ್ಲಿಯ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಹಾಗೂ ದಾಸೋಹ ಕ್ಷೇತ್ರಕ್ಕೆ ತಮ್ಮದೇ ಆದ ಕೊಡಿಗೆಯನ್ನು ನೀಡಿದ್ದಾರೆ.

'ಮಹಾದಾಸೋಹಿ ಶರಣ ಬಸವ' ಎಂಬ ಅಂಕಿತದಲ್ಲಿ ರಚನೆಯಾಗಿರುವ 'ಮಹಾದಾಸೋಹ ಸೂತ್ರಗಳು' ಎಂಬ ಕೃತಿಯು ೧೯೮೮ರಲ್ಲಿ ಪ್ರಕಟವಾಗಿದೆ. ಇದರಲ್ಲಿ ದಾಸೋಹ ಸೂತ್ರಕ್ಕೆ ಸಂಬಂಧಿಸಿದ ೧೬ ವಚನಗಳಿವೆ. ಇದನ್ನು ಡಾ. ಎಲ್. ಬಸವರಾಜ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ. ಆಧುನಿಕ ವಚನ ಸಾಹಿತ್ಯಕ್ಕೆ ವಿಶಿಷ್ಟವಾದ ಕೊಡುಗೆಯಂತಿರುವ ಈ ಕೃತಿಯಲ್ಲಿ 'ಕಾಯಕ-ದಾಸೋಹ' ತತ್ವಗಳನ್ನು ಮತೀಯ ಅರ್ಥವ್ಯಾಪ್ತಿಯಿಂದ ಮುಕ್ತಗೊಳಿಸಿ, ವಿಶ್ವಧರ್ಮದ ಅಂತರ್ಗತ ಸತ್ವಗಳ ಬೆಳಕಿನಲ್ಲಿ ಅವಿಷ್ಕಾರಗೊಳಿಸಿದ್ದಾರೆ. ಈ ವಚನಗಳು ಅನುಭವ ಮತ್ತು ಆಧ್ಯಾತ್ಮಿಕ ಚಿಂತನೆಯಿಂದ ಕೂಡಿದ್ದು ಸರಳವಾಗಿ ಅಭಿವ್ಯಕ್ತವಾಗಿವೆ.

ಬಸವಾದಿ ಶರಣರು ರೂಪಿಸಿದ 'ದಾಸೋಹ' ಸಿದ್ಧಾಂತವನ್ನೇ ತಮ್ಮ ಜೀವನ ಸಿದ್ಧಾಂತವನ್ನಾಗಿ ಸ್ವೀಕರಿಸಿರುವ ಶ್ರೀ ಶರಣಬಸವಪ್ಪನವರು ಅದನ್ನು ಸೂತ್ರರೂಪದಲ್ಲಿ ಹೇಳಿರುವರು. ಅಗಾಧವಾದ ಆಧ್ಯಾತ್ಮಿಕ ಅರ್ಥ, ಅನುಭಾವಿಕ ಹಿನ್ನೆಲೆಯುಳ್ಳ ಇಲ್ಲಿಯ ವಚನಗಳನ್ನು ಇಂಗ್ಲೀಷ, ಹಿಂದಿ, ಮರಾಠಿ ಹಾಗೂ ತೆಲುಗು ಭಾಷೆಗಳಿಗೆ ಅನುವಾದಿಸಲಾಗಿದೆ.

ಮುಕ್ತ ಪಾದಗಳ ಸಂಖ್ಯೆಯಲ್ಲಿ ಅಂದರೆ ಏಳು ಸಾಲುಗಳಿಂದ ಹಿಡಿದು, ಮೂವತ್ತೊಂದು ಸಾಲುಗಳ ವ್ಯಾಪ್ತಿಯಿರುವ ವಚನಗಳು ಇಲ್ಲಿವೆ. ಸರಳವಾದ ರಚನಾಶೈಲಿಯಲ್ಲಿ ಇವು ನಿರೂಪಿತಗೊಂಡಿವೆ. 'ದಾಸೋಹ' ಭಾವವೇ ಆ ಸೂತ್ರಗಳ ಪ್ರಮುಖ ವಸ್ತುವಾಗಿದೆ.

ಶರಣಬಸವಪ್ಪನವರ ವಚನ ರಚನಾಶೈಲಿ ಅವರದೇ ಆದ ರೀತಿಯಲ್ಲಿದೆ. ಸರಳವಾಗಿ ವಚನಗಳನ್ನು ಓದಿಸಿಕೊಂಡು ಹೋಗುತ್ತದೆ. ಇಲ್ಲಿಯ ಒಂದೊಂದು ಸೂತ್ರವು ಸೂಕ್ತಿಯಾಗಿ ನಿಂತು. ಆಲೋಚನಾಪರವಾದ ಚಿಂತನೆ ನೀಡುತ್ತವೆ. ಕೆಲವೊಂದು ವಚನಕಾರನ ಆಧ್ಯಾತ್ಮಿಕ ಅನುಭವದ ಎತ್ತರ-ಬಿತ್ತರವನ್ನೂ ತಿಳಿಸುತ್ತವೆ. ಆ ವಚನ ಸೂತ್ರಗಳಲ್ಲಿ ಏಕಮುಖತೆ ಕಾಣಿಸಿದರೂ ಅವುಗಳಲ್ಲಿಯ ಸೊಗಸುತನ, ಅನುಭವ ಗಮ್ಯತೆಯಿಂದ ಮನಸೆಳೆಯುತ್ತವೆ. ವೈಯಕ್ತಿಕ ನೆಲೆಯ ಆಲೋಚನೆಗಳ ಮೂಲಕ ಸಾಮಾಜಿಕತೆಯನ್ನೂ ಕಟ್ಟಿಕೊಡುತ್ತವೆ.

ಒಟ್ಟಿನಲ್ಲಿ ಡಾ. ಎಲ್. ಬಸವರಾಜ ಅವರು ಅಭಿಪ್ರಾಯಪಟ್ಟಿರುವಂತೆ "ಈ ದಾಸೋಹ ಸೂತ್ರ (ವಚನ)ಗಳು ಮಿಕ್ಕ ಬಸವಾದಿ ಪ್ರಮಥರ ವಚನಗಳಂತೆ ಹೆಚ್ಚು ಕಾವ್ಯಾತ್ಮಕವಾಗಿರದಿದ್ದರೂ, ಬಹಳ ತಾತ್ವಿಕವಾದುವೇ ಆಗಿವೆ. ಆದುದರಿಂದಲೇ ಅವು ತಮ್ಮ ಗಾಢವಾದ ಚಿಂತನೆಗಳಿಂದಲೂ ಕ್ಲಿಷ್ಟವಾದ ಪರಿಭಾಷೆಗಳಿಂದಲೂ ಕೆಲವೊಮ್ಮೆ ಶುಷ್ಕವೆನಿಸಿದರೂ ಸಹ ತೆಂಗಿನ ತರಗಳಲ್ಲಿ ಸಿಹಿಯಾದ ಕೊಬ್ಬರಿಯಿರುವಂತೆ

ಅದರಲ್ಲಿ ಹಸಿಯೆಲ್ಲಾ ಆರಿದ ಗಿಟುಕಿದೆ. ಅದರ ಸಪಿ, ಅದರ ಮೃದು, ಸ್ನಿಗ್ಧ ಆದಕ್ಕೆ ವಿಶಿಷ್ಟವಾದುದು"[೨] ಎಂದಿರುವುದು ಸರಿಯಾದ ಹೇಳಿಕೆ ಎನ್ನಬಹುದು.

**೪.೩ ಚನ್ನಣ್ಣ ವಾಲಿಕಾರರ – ಮುನ್ನೂರ ಮೂರು ವಚನಗಳು – ೧೯೯೩**

ಕಲಬುರ್ಗಿ ಜಿಲ್ಲೆಯ ಮಹತ್ವದ ಬಂಡಾಯ ಸಾಹಿತಿಗಳಲ್ಲಿ ಚನ್ನಣ್ಣ ವಾಲಿಕಾರ ಪ್ರಮುಖರು. ಕವಿಯಾಗಿ, ಕಥೆಗಾರನಾಗಿ, ವಿಮರ್ಶಕನಾಗಿ, ಸಂಶೋಧನಕನಾಗಿ, ಜಾಣಪದ ತಜ್ಞನಾಗಿ ಹೆಸರುವಾಸಿಯಾಗಿರುವಂತೆ ಆಧುನಿಕ ವಚನಕಾರನಾಗಿಯೂ ಪ್ರಮುಖರೆನಿಸಿದ್ದಾರೆ. ವಾಲಿಕಾರರು ಮೂಲತಃ ಬಂಡಾಯ ಕವಿಯಾಗಿದ್ದರೂ ಸಹ ಅವರು ವಚನ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರವಾಗಿದೆ.

ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲೂಕಿನ ಶಂಕರವಾಡಿಯಲ್ಲಿ ೧೯೪೩ರ ಎಪ್ರಿಲ್ ಆರರಂದು ಜನಿಸಿರುವ ಚೆನ್ನಣ್ಣ ಎಂ.ಎ., ಪಿಹೆಚ್.ಡಿ. ಪದವೀಧರರು. ಧೂಳಪ್ಪ ಹಾಗೂ ಸಾಬಮ್ಮರ ಮಗನಾಗಿರುವ ಈತನು ಶಿಕ್ಷಕನಾಗಿ, ರಾಯಚೂರಿನ ಎಲ್.ವ್ಹಿ.ಡಿ. ಕಾಲೇಜಿನಲ್ಲಿ ಕನ್ನಡ ಅಧ್ಯಾಪಕನಾಗಿ, ನಂತರ ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ, ವಿಭಾಗದ ನಿರ್ದೇಶಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ.

'ಹೈದ್ರಾಬಾದ ಕರ್ನಾಟಕದ ಗ್ರಾಮದೇವತೆಗಳು' ಎಂಬ ಮಹಾಪ್ರಬಂಧಕ್ಕೆ ಡಾಕ್ಟರೇಟ ಪದವಿ ಪಡೆದ ಇವರು ಕಾವ್ಯ, ಕಥೆ, ಕಾದಂಬರಿ, ಸಂಕೀರ್ಣ ಬರಹ, ಜಾನಪದ, ಸಂಶೋಧನೆ, ಸಂಪಾದನೆ, ಪ್ರವಾಸ ಕಥನ, ಮಹಾಕಾವ್ಯ ನಾಟಕ ಮುಂತಾದ ಸಾಹಿತ್ಯ ಕ್ಷೇತ್ರದಲ್ಲಿ ಸಾಧನೆ ಮಾಡಿ ನಾಡಿನಾದ್ಯಂತ ಪ್ರಸಿದ್ಧರಾಗಿದ್ದಾರೆ. ಕುಸ್ತಿ, ಹಾಡುಗಾರಿಕೆ, ಬಯಲಾಟ, ಒಕ್ಕಲುತನ ಮತ್ತು ದೀನದಲಿತರ ಸೇವೆಯ ಅಭಿರುಚಿಯುಳ್ಳ ಚೆನ್ನಣ್ಣನವರ ಸಾಹಿತ್ಯ ಸಾಧನಾ ಪಥ ಅನನ್ಯವಾದುದು.

ಚೆನ್ನಣ್ಣ ವಾಲಿಕಾರ ಅವರು ಇದುವರೆಗೆ ೧೦ ಕವನ ಸಂಗ್ರಹಗಳನ್ನು, ೪ ಕಥಾ ಸಂಕಲನಗಳನ್ನು, ೫ ಕಾದಂಬರಿಗಳನ್ನು, ೪ ಜಾನಪದ ಸಂಶೋಧನ ಗ್ರಂಥಗಳನ್ನು, ೫ ಸಂಪಾದನೆಗಳನ್ನು, ೧೧ ನಾಟಕಗಳನ್ನು ಮತ್ತು ೧೧ ದಪ್ಪಿನಾಟಗಳನ್ನು ಹೀಗೆ ಒಟ್ಟು ೫೦ (ಐವತ್ತು) ಕೃತಿಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ಕೊಟ್ಟಿದ್ದಾರೆ.

ತಮ್ಮದೇ ಆದ ಸ್ವತಂತ್ರ ಪ್ರಕಾಶನ ಸಂಸ್ಥೆಯಾದ, ದಲಿತ–ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಬಡೇಪೂರ ಕಾಲನಿ ಕಲಬುರ್ಗಿಯಿಂದ ಇವರ ಸಮಗ್ರ ಕಾವ್ಯ, ಕಥೆ, ಕಾದಂಬರಿ, ನಾಟಕ, ದಪ್ಪಿನಾಟ, ಜಾನಪದ ಸಂಪ್ರಬಂಧ, ಸಂಶೋಧನ ಬೃಹತ್ ಸಂಪುಟಗಳನ್ನು ಹೊರತಂದು ಕನ್ನಡ ಸಾಹಿತ್ಯ ಲೋಕದಲ್ಲಿ ವಿಶಿಷ್ಟ ಸಾಧನೆ ಮಾಡಿ ತೋರಿಸಿದ್ದಾರೆ."[೬] ಇದರೊಂದಿಗೆ ಅವರ 'ಮುನ್ನೂರಾ ಮೂರು ವಚನಗಳು' ಕೃತಿ ಪ್ರಕಟವಾಗಿದೆ.

'ವಾಲಿಕಾರ ಚೆನ್ನಣ್ಣ' ಎಂಬ ಅಂಕಿತದಲ್ಲಿ ಇವರ ೩೦೩ ವಚನಗಳು ೧೯೯೩ರಲ್ಲಿ ಪ್ರಕಟವಾಗಿವೆ. ಇವರ ಈ ವಚನ ಸಂಕಲನ ಇಂದಿನ ಆಧುನಿಕ ವಚನಕಾರರ ಅಂಕಿತ ಹಾಗೂ ಆಶಯಗಳಿಗೆ ಹೋಲಿಸಿದರೆ ಇದು ಬಿನ್ನ ನೆಲೆಯಲ್ಲಿ ನಿಲ್ಲುವುದನ್ನು ಅರಿಯಬಹುದು. ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಇಲ್ಲಿಯ ವಚನಗಳ ರಚನೆಯಿದೆ. ಇವರು ಅಂಕಿತನಾಮ ಪದ್ಧತಿ ಹಾಗೂ ವಸ್ತು ವಿವೇಚನೆಯಲ್ಲಿ ೧೨ನೇಯ ಶತಮಾನದ ನಿಷ್ಠುರ ಶರಣ ಅಂಬಿಗರ ಚೌಡಯ್ಯನನ್ನು ಹೋಲುತ್ತಾರೆ.

ದಲಿತ–ಬಂಡಾಯ ಕವಿಯಾಗಿರುವ ವಾಲೀಕಾರರು ಕೆಳವರ್ಗದವರ, ನಿರ್ಗತಿಕರ ಮೇಲಾಗುವ ದೌರ್ಜನ್ಯ, ಅನ್ಯಾಯ, ಅತ್ಯಾಚಾರಗಳ ವಿರುದ್ಧ ಪ್ರತಿಭಟಿಸುವ ಮನೋಭಾವವನ್ನು ಅವರ ವಚನಗಳು

ಒಳಗೊಂಡಿವೆ. ಅಧ್ಯಯನ, ಅಧ್ಯಾಪನ, ಲೋಕಾನುಭವವಿರುವ ಈ ಕವಿ ಮಾನವ ಜೀವನದ ವ್ಯಾಪಾರಗಳನ್ನು ತನ್ನ ಪರಿಸರದಲ್ಲಿ ಕಂಡುಂಡು, ಅದನ್ನು ವಿಶ್ಲೇಷಣೆಗೊಳಪಡಿಸಿ, ಜಾನಪದೀಯ ಶೈಲಿಯಲ್ಲಿ ವಚನಗಳಲ್ಲಿ ಹಿಡಿದಿಟ್ಟಿದ್ದಾರೆ. 'ಕಾವ್ಯಾನಂದರ ವಚನೋದ್ಯಾನ ಓದಿದ ನಂತರ ಇವರು ಘೋಷಣೆಗಳನ್ನು ತಪ್ಪಿಸಿಕೊಳ್ಳಲು ವಚನಗಳನ್ನು ರಚಿಸಿದರು. ಚನ್ನಣ್ಣನವರ ಎಲ್ಲ ಪ್ರಕಾರಗಳಿಗೆ ವಸ್ತುವಾಗಿರುವ ಸಾಮಾಜಿಕ ಪ್ರಜ್ಞೆಯೇ ಇಲ್ಲಿನ ವಚನಗಳಲ್ಲೂ ಕಂಡುಬರುತ್ತದೆ.

ಸಾಮಾಜಿಕ ಜೀವನ ಸುಂದರವಾಗಿರಬೇಕು. ಎಲ್ಲೆಲ್ಲೂ ಸಮಾನತೆ, ಸಾಮರಸ್ಯದ ಬದುಕು ಸದಾ ಇರಬೇಕೆಂಬ ಕಾಳಜಿ ಇಲ್ಲಿದೆ. ಜಾತಿ, ವರ್ಣ, ವರ್ಗಗಳಲ್ಲಿ ವಿಂಗಡಣೆಯಾದ ಸಮಾಜ, ಭ್ರಷ್ಟಾಚಾರ, ಅನಾಚಾರಗಳಿಂದ ತುಂಬಿ ನಿಂತಿದೆ. ಈ ವ್ಯವಸ್ಥೆ ಕಂಡ ಕವಿ ಹೃದಯ ರೋಷಗೊಂಡಿದೆ. ಆ ಪರಿಣಾಮವೇ ವಚನಗಳಲ್ಲಿ ವ್ಯಕ್ತವಾಗಿದೆ. ಜಾನಪದ ಸಾಹಿತ್ಯದ ಒಗಟು, ಒಡಪು, ಹಾಡಿನ ಪ್ರಕಾರಗಳ ಪ್ರಭಾವವಿರುವುದನ್ನು ಅರಿಯಬಹುದು. ದೀರ್ಘರಚನಾ ತಂತ್ರ ಬದಲಿಸಿ, ಮುಕ್ತಕ ರೀತಿಯಲ್ಲಿ ಹನಿ ಹನಿಯಾಗಿ ವಿಚಾರಗಳನ್ನು ಅಭಿವ್ಯಕ್ತಿಸುವ ಪ್ರಯೋಗಕ್ಕೆ ಈ ವಚನಗಳು ಸಾಕ್ಷಿಯಾಗುತ್ತವೆ.

ಆಧುನಿಕ ಯುಗದ ಸಮಸ್ಯೆ, ವೈಷಮ್ಯಗಳಿಗೆ ಪರಿಹಾರಾರ್ಥವಾಗಿರುವ ವಾಲೀಕಾರರ ವಚನಗಳು ಆಗುಹೋಗುಗಳ ಪರಿಣಾಮವನ್ನು ವಿವರಿಸುತ್ತವೆ. ತಮ್ಮ ವಿಚಾರಗಳಿಗೆ ಯಾವುದೇ ಆತಂಕವಿಲ್ಲದೆ ಈ ಮಾಧ್ಯಮದಲ್ಲಿ ಅವುಗಳನ್ನು ಅಭಿವ್ಯಕ್ತಿಸಲಾಗಿದೆ. ಕಲಬುರ್ಗಿ ಜಿಲ್ಲೆಯ ಆಧುನಿಕ ವಚನ ಸಾಹಿತ್ಯಕ್ಕೆ ಚನ್ನಣ್ಣನ ಕೊಡುಗೆ ವಿಶಿಷ್ಟವಾಗಿದೆ ಎಂಬುದನ್ನು ಇವು ಸಾರುತ್ತವೆ.

**೪.೪ ಜಯಶ್ರೀ ದಂಡೆಯವರ 'ಸ್ವಭಾವದ ವಚನಗಳು' (೧೯೯೪)**

ಜಯಶ್ರೀ ದಂಡೆಯವರು ಕಲಬುರ್ಗಿ ಜಿಲ್ಲೆಯ ಹೆಸರಾಂತ ಸಾಹಿತಿ ಹಾಗೂ ಶ್ರೇಷ್ಠ ವಚನಕಾರರಾಗಿದ್ದಾರೆ. ೧೯೯೪ರಲ್ಲಿ 'ಸ್ವಭಾವದ ವಚನಗಳು' ಎಂಬ ಮೌಲಿಕ ಕೃತಿಯೊಂದನ್ನು ಕನ್ನಡದ ಆಧುನಿಕ ವಚನ ಸಾಹಿತ್ಯಕ್ಕೆ ನೀಡಿದ್ದಾರೆ. ಇವರು ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನ ಢವಳಗಿ ಗ್ರಾಮದಲ್ಲಿ ದಿನಾಂಕ ೦೩-೦೩-೧೯೫೮ರಲ್ಲಿ ಜನಿಸಿದರು. ಇಲಕಲ್ಲ ಮತ್ತು ಬಾಗಲಕೋಟೆಯಲ್ಲಿ ಪದವೀ ಶಿಕ್ಷಣ ಪಡೆದುಕೊಂಡು, ಕಲಬುರ್ಗಿಯ ಸ್ನಾತಕೋತ್ತರ ಕೇಂದ್ರದಿಂದ ಕನ್ನಡ ಎಂ.ಎ. ಪದವೀ ಪಡೆದುಕೊಂಡರು. ೧೯೮೭ರಲ್ಲಿ 'ಬೆಡಗಿನ ವಚನಗಳು' ಎಂಬ ಮಹಾಪ್ರಬಂಧವನ್ನು ಸಲ್ಲಿಸಿ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಡಾಕ್ಟರೇಟ ಪದವಿ ಪಡೆದಿದ್ದಾರೆ. ಕಲಬುರ್ಗಿ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿರುವ ಇವರು ಜಾನಪದ ವಿದ್ವಾಂಸ ಡಾ. ವೀರಣ್ಣ ದಂಡೆಯವರ ಧರ್ಮಪತ್ನಿಯಾಗಿದ್ದಾರೆ.

ಕನ್ನಡ ಸಾಹಿತ್ಯಕ್ಕೆ ಕವನ, ವಿಮರ್ಶೆ, ಸಂಶೋಧನೆ ಹಾಗೂ ಸಂಪಾದನೆಯ ಅನೇಕ ಮಹತ್ವದ ಕೃತಿಗಳನ್ನು ನೀಡಿದ್ದಾರೆ. ನೂರಾರು ವೈಚಾರಿಕ ಹಾಗೂ ಸಂಶೋಧನಾತ್ಮಕ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಅಂಕಣ ಬರಹಗಳನ್ನು ಹಲವು ಪತ್ರಿಕೆಗಳಿಗೆ ಬರೆದ ಶ್ರೇಯಸ್ಸು ಇವರಿಗಿದೆ. ಸಂಶೋಧನಾ ಕಮ್ಮಟ, ಶಿಬಿರಗಳಲ್ಲಿ ಭಾಗವಹಿಸಿ ನೂರಾರು ಉಪನ್ಯಾಸಗಳನ್ನು ನೀಡಿದ್ದಾರೆ. ವಚನ ಸಾಹಿತ್ಯದ ಮೇಲೆ ಅಪಾರ ಆಸಕ್ತಿಯಿರುವ ಜಯಶ್ರೀಯವರು ಅದನ್ನು ಆಳವಾಗಿ ಅಧ್ಯಾಯನ ಮಾಡಿರುವ ಕೆಲವೇ ವಿದ್ವಾಂಸರಲ್ಲಿ ಅವರೊಬ್ಬರೆನಿಸಿದ್ದಾರೆ. ಇದರ ಪರಿಣಾಮವಾಗಿಯೇ ಅವರು 'ಸ್ವಭಾವದ ವಚನಗಳು' ಎಂಬ ಆಧುನಿಕ ವಚನಗಳನ್ನು ರಚಿಸಿದ್ದಾರೆ.

'ನಿಜಗುರು ಮಹಾಂತಲಿಂಗ'ವೆಂಬ ಅಂಕಿತನಾಮದಲ್ಲಿ ೨೪೩ ವಚನಗಳನ್ನು ಈ ಕೃತಿಯ ಮೂಲಕ ನೀಡಿದ್ದಾರೆ. "ಆಧುನಿಕ ವಚನಕಾರರನೇಕರು ತಮ್ಮ ತಮ್ಮ ವಚನ ಸಂಗ್ರಹಗಳಿಗೆ ತಮಗೆ ಇಷ್ಟಬಂದ ಹೆಸರುಗಳನ್ನು ಇಟ್ಟುಕೊಂಡಿದ್ದಾರೆ. ಉದಾ. ಸಿದ್ಧಯ್ಯ ಪುರಾಣಿಕರು 'ವಚನೋದ್ಯಾನ' ಜೀರಿಗೆ ಕಟ್ಟಿ ಬಸವಪ್ಪನವರು 'ಕಟ್ಟೀಯ ಬಸವೇಶ್ವರ ವಚನಗಳು' ಎ. ವ್ಹಿ. ರಂಗಣ್ಣನವರ 'ರಂಗಬಿನ್ನಪ', ಜೋಳದ ರಾಶಿ ದೊಡ್ಡನಗೌಡರ 'ದೇಶಿಯ ವಚನಗಳು' ಇತ್ಯಾದಿ. ಆದರೆ ಜಯಶ್ರೀ ದಂಡೆಯವರು ತಮ್ಮ ಸಂಗ್ರಹಕ್ಕೆ 'ಸ್ವಭಾವದ ವಚನಗಳು' ಎಂದು ಹೆಸರಿಟ್ಟದ್ದಾರೆ. ಇದು ತುಂಬಾ ನವೀನವೂ ಅರ್ಥಪೂರ್ಣವೂ ಆದ ಹೆಸರು. ಈ ಸಂಗ್ರಹದ ಆರು ವಿಭಾಗಗಳು ಸ್ವಭಾವದ ಪರಿಧಿಯಲ್ಲಿರುವಂತಿದೆ" ಎಂದಿದ್ದಾರೆ ಶಾಂತರಸರು.[೭]

ವಿಶಿಷ್ಟ ಚಿಂತನೆಗಳಿಂದ ಕೂಡಿರುವ ಈ ವಚನ ಸಂಕಲನದಲ್ಲಿ ೧) ಪ್ರಾಣಿ ಸ್ವಭಾವಗಳು ೨) ಹೆಣ್ಣು ಹೆಣ್ಣಿನ ಬಳಗ ೩) ಮಾನವ ಸ್ವಭಾವಗಳು ೪) ಮಾನವ ಸಾಮಾಜಿಕ ೫) ಲಿಂಗವಂತ ಧರ್ಮ-ದೇವರು ೬) ಬೆಡಗು ಎಂಬ ಭಾಗಗಳಲ್ಲಿ ವಚನಗಳು ನಿರೂಪಿತವಾಗಿವೆ. ಕೊನೆಯ ಬೆಡಗು ಎನ್ನುವ ಭಾಗ ತನ್ನದೇ ಆದಂತಹ ವಿಶಿಷ್ಟವಾದ ಒಳ ಅರ್ಥಹೊಂದಿದೆ. ಗೂಡಾರ್ಥದಿಂದ ಕೂಡಿದ ಇಲ್ಲಿನ ವಚನಗಳು ಆತ್ಮ ಶೋಧನೆಗೆ ಹಚ್ಚುತ್ತವೆ.

ಪ್ರಾಣಿ ಸ್ವಭಾವದ ವಚನಗಳಲ್ಲಿಯೇ ಮತ್ತೆ ವಿಭಾಗಿಸಿಕೊಂಡು ಅದರಲ್ಲಿ ಸಾಕು ಪ್ರಾಣಿಗಳು, ಕಾಡು ಪ್ರಾಣಿಗಳು ಇತರ ಪ್ರಾಣಿಗಳಲ್ಲಿ ಜಲಚರಗಳು, ಪಕ್ಷಿಗಳು ಕ್ರಿಮಿ ಕೀಟಗಳೆಂದು ವಿಂಗಡನೆ ಮಾಡಿಕೊಂಡಿದ್ದಾರೆ. ಎರಡನೇಯ ಭಾಗದಲ್ಲಿ ಹೆಣ್ಣು , ಹೆಣ್ಣಿನ ಬಳಗದಲ್ಲಿ ಹೆಣ್ಣಿನ ಮಲತಾಯಿ, ಮಗಳು, ತಂದೆ, ಸಹೋದರ, ಸೋದರಮಾವ ಹೀಗೆ ಮುಂತಾದ ಗುಣ ಸ್ವಭಾವಗಳ ಸಂಬಂಧಗಳ ಚಿತ್ರಣ ಈ ವಚನಗಳಲ್ಲಿದೆ. ಮಾನವ ಸ್ವಭಾವಗಳಲ್ಲಿ ನ್ಯಾಯ ನಿಷ್ಠುರಿ, ಸುಸಂಸ್ಕೃತರು, ತಮ್ಮ ಜಾಲದಲ್ಲಿ ತಾವೇ ಬಿದ್ದವರು, ದುಷ್ಟರು, ಅಧಮರು, ಸಾಮಾಜಿಕ ವಿಡಂಬನೆ, ವಿಪರ್ಯಾಸಗಳ ಗುಣ ಸ್ವಭಾವದ ಚಿತ್ರಣಗಳಿವೆ. ನಾಲ್ಕನೆಯ ಭಾಗವಾದ ಮಾನವ-ಸಾಮಾಜಿಕದಲ್ಲಿ ಸಾಮಾಜಿಕ ಎಚ್ಚರಿಕೆಯ ಕಳಕಳಿ ಇದ್ದರೆ, ಐದನೆಯ ಭಾಗವಾಗಿರುವ ಲಿಂಗವಂತ-ಧರ್ಮ, ದೇವರು, ಭಾಗದಲ್ಲಿ ಲಿಂಗ, ಲಿಂಗದೇವರು, ಲಿಂಗವಂತ, ಬಸವಾದಿ ಶರಣರು, ಅನುಭವ-ಅನುಭಾವದ ಹಂಬಲ ಈ ಮೊದಲಾದ ಪರಿಕಲ್ಪನೆಗಳ ವಿವರಗಳು ಕಾಣುತ್ತವೆ. ಹೀಗೆ ವಿವಿಧ ಮುಖಗಳಿಂದ ಡಾ. ಜಯಶ್ರೀ ದಂಡೆಯವರು ಅಮೂಲ್ಯವಾದಂತಹ ವಚನಗಳನ್ನು ರಚಿಸಿದ್ದು ಕಂಡುಬರುತ್ತದೆ.

ಮಾನವ ಬದುಕಿನ ನಿಜವಾದ ಅರ್ಥವನ್ನು ಹೇಳಿಕೊಡುವ ಇಲ್ಲಿಯ ವಚನಗಳು ಜೀವನದ ವಾಸ್ತವಿಕ ಅರಿವನ್ನು ಹೆಚ್ಚಿಸುವ ಜೊತೆಗೆ ಅದರ ಪಾವಿತ್ರ್ಯವಾದ ಅನುಭವವನ್ನೂ ಕಟ್ಟಿಕೊಡುತ್ತವೆ. ಅನುಭವ-ಅಭಿವ್ಯಕ್ತಿ ಸಾಮರ್ಥ್ಯ ಹೊಂದಿರುವ ಜಯಶ್ರೀ ದಂಡೆಯವರು ತಮ್ಮ ಈ ವಚನಗಳ ಮೂಲಕ ಕನ್ನಡದ ಆಧುನಿಕ ವಚನ ಸಾಹಿತ್ಯಕ್ಕೆ ಶ್ರೀಮಂತಿಕೆ ತಂದಿದ್ದಾರೆ ಎನ್ನಬಹುದು.

**೪.೫ ಹನುಮಂತರಾವ ಮೋತಕಪಳ್ಳಿಯವರ ವಚನಾನಂದ (೧೯೯೪)**

ವೃತ್ತಿಯಲ್ಲಿ ಬ್ಯಾಂಕ ಅಧಿಕಾರಿಯಾಗಿರುವ ಹಣಮಂತರಾವ ಮೋತಕಪಳ್ಳಿಯವರು ಪ್ರವೃತ್ತಿಯಲ್ಲಿ ಸಾಹಿತಿಗಳು. ಕೃಷ್ಣಾ ಗ್ರಾಮೀಣ ಬ್ಯಾಂಕಿನ ಅಧಿಕಾರಿಗಳಾಗಿ ಸೇವೆಸಲ್ಲಿಸುತ್ತ ಸಾಹಿತಿಗಳಾಗಿ ಪ್ರಸಿದ್ಧರಾಗಿದ್ದಾರೆ. ತಮ್ಮ ವೃತ್ತಿಯ ಬಿಡುವಿನಲ್ಲಿ ವಚನಗಳನ್ನು ಓದುತ್ತ ಕಾಲಕಳೆದರು. ಅದರ ಅಧ್ಯಯನದ ಫಲವಾಗಿ ತಮಗೆ ಹೊಳೆದಂತ ವಿಚಾರಗಳನ್ನು ವಚನಮಾಧ್ಯಮದ ಮೂಲಕ ಹೊರಹಾಕಿದ್ದಾರೆ.

ಕಲಬುರ್ಗಿ ಜಿಲ್ಲೆಯ ಚಿಂಚೋಳಿ ತಾಲೂಕಿನ ಪೋದಂಪುರ ಗ್ರಾಮದಲ್ಲಿ ೧೯೫೭ರ ಜೂನ ೧ನೇಯ ತಾರೀಖಿನಂದು ಜನಿಸಿದರು. ಇವರ ತಂದೆ ವೀರಭದ್ರಪ್ಪ ಪೋತಕಪಳ್ಳಿ ತಾಯಿ ಶ್ರೀಮತಿ ನಿರಂಜಮ್ಮ. ತಮ್ಮ ಶಿಕ್ಷಣವನ್ನು ಕನಕಪುರ, ಚಿಮ್ಮನಚೋಡ ಹಾಗೂ ಕಲಬುರ್ಗಿಯಲ್ಲಿ ಪಡೆದರು. ಅರ್ಥಶಾಸ್ತ್ರ ವಿಷಯದಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಪಡೆದಿರುವ ಇವರು ಕೃಷ್ಣಾ ಗ್ರಾಮೀಣ ಬ್ಯಾಂಕಿನ ಅಧಿಕಾರಿಯಾಗಿ ಸೇವೆಗೆ ಸೇರಿಕೊಂಡು ಈಗ ನಿವೃತ್ತರಾಗಿದ್ದಾರೆ.

'ಸಚ್ಚಿದಾನಂದ ಪ್ರಿಯ ವೀರಭದ್ರ' ಎಂಬ ಅಂಕಿತನಾಮದಲ್ಲಿ ಆಧುನಿಕ ವಚನಗಳನ್ನು ಬರೆದಿರುವ ಹಣಮಂತರಾವ ಅವರು ೧೯೯೪ರಲ್ಲಿ 'ವಚನಾನಂದ' ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಇದು ವೈವಿಧ್ಯಮಯವಾದ ವಿಷಯಗಳನ್ನೊಳಗೊಂಡ ಕೃತಿಯಾಗಿದ್ದು, ಇಲ್ಲಿನ ವಚನಗಳು ವಿನೂತನವಾದ ವಿಚಾರಗಳಿಂದ ತುಂಬಿವೆ. ಮಕ್ಕಳ ಆಟ, ನೋಟ, ಶ್ರೀಮಂತ, ಬಡವ, ಕಾಮ, ಪ್ರೇಮ, ದೇಶಪ್ರೇಮ, ಶಾಂತಿ, ಭಕ್ತಿ, ಅಭಿಮಾನ, ಸಾಮಾಜಿಕ ವಿಡಂಬನೆ, ಮಾನವನ ವಿವಿಧ ರೀತಿ ನೀತಿಗಳು ಈ ಮೊದಲಾದ ಅನೇಕ ವಿಷಯಗಳು ಇವರ ವಚನಗಳಲ್ಲಿ ಕಾಣಸಿಗುತ್ತವೆ.

**೪.೬ ಗುರುಲಿಂಗಪ್ಪ ಹಾಲಹಳ್ಳಿಯವರ 'ವಚನಾನುಭಾವ' (೧೯೯೫)**

ಕಲಬುರ್ಗಿ ಜಿಲ್ಲೆಯ ಶ್ರೇಷ್ಠ ಆಧುನಿಕ ವಚನಕಾರರಲ್ಲಿ ಗುರುಲಿಂಗಪ್ಪ ಹಾಲಹಳ್ಳಿಯವರೂ ಪ್ರಮುಖರಾಗಿದ್ದಾರೆ. ಶರಣರ ಹಾಗೂ ಅವರ ವಚನ ಸಾಹಿತ್ಯದ ಪ್ರಭಾವದ ಹಿನ್ನೆಲೆಯಲ್ಲಿ ಇಂದಿನ ಯುಗದಲ್ಲಿ ಆಧುನಿಕ ವಚನ ಬರೆದಿರುವ ಅನೇಕರಲ್ಲಿ ಇವರೂ ಒಬ್ಬರು. ಇವರ ಮೇಲೆ ಹನ್ನೆರಡನೇಯ ಶತಮಾನದ ಶರಣರ ವಚನಗಳು, ಸಂಸ್ಕೃತಿ ಹಾಗೂ ನಡೆನುಡಿಗಳ ಪ್ರಭಾವ ದಟ್ಟವಾಗಿರುವುದನ್ನು ಅವರ ವಚನಗಳಲ್ಲಿ ಮನಗಾಣಬಹುದು.

ಇಂದಿನ ಕಲಬುರ್ಗಿ ಜಿಲ್ಲೆಯ ಚಿಂಚೊಳ್ಳಿ ತಾಲೂಕಿನ ಮೋಘಾ ಎಂಬ ಗ್ರಾಮದಲ್ಲಿ ೧೯೫೯ನೇಯ ಜನೇವರಿ ೧ ರಂದು ಇವರು ಜನಿಸಿದರು. ತಂದೆ ಶ್ರೀ ಶರಣಪ್ಪ ಹಾಲಳ್ಳಿ ಹಾಗೂ ತಾಯಿ ಬಸಮ್ಮ. ಸುಸಂಸ್ಕೃತ ಮನೆತನದಲ್ಲಿ ಹುಟ್ಟಿದ ಗುರುಲಿಂಗಪ್ಪನವರು ಮೋಘಾ ಹಾಗೂ ಸುಲೇಪೇಟಗಳಲ್ಲಿ ಪ್ರಾಥಮಿಕ ಹಾಗೂ ಪ್ರೌಢ ಶಾಲಾ ಶಿಕ್ಷಣವನ್ನು ಮುಗಿಸಿಕೊಂಡರು. ಬಾಲ್ಯದಿಂದಲೇ ವಚನ ಸಾಹಿತ್ಯದಲ್ಲಿ ಆಸಕ್ತಿ ಹೊಂದಿದ್ದ ಇವರು ತಮ್ಮ ಶಿಕ್ಷಣದ ನಂತರದಲ್ಲಿ ವಚನ ಸಾಹಿತ್ಯವನ್ನು ಆಳವಾಗಿ ಅಧ್ಯಾಯನ ಮಾಡಿದರು. ಅದರ ಫಲವಾಗಿ ಕನ್ನಡ ಸಾಹಿತ್ಯಕ್ಕೆ ೧) ಶರಣರ ಜಯಘೋಷಗಳು ೨) ವಚನಾನುಭಾವ ಸಾಹಿತ್ಯ ೩) ಸುವರ್ಣಯುಗಶಿಲ್ಪಿ ೪) ನುಲಿಯ ಚಂದಯ್ಯ ೫) ಎಲ್ಲಿಂದ ಎಲ್ಲಿಗೆ ಎಂಬ ಕೃತಿಗಳನ್ನು ಕಾಣಿಕೆಯಾಗಿ ನೀಡಿದ್ದಾರೆ.

'ಗುರು ಬಸವಪ್ರಿಯ ಕೂಡಲ ಸಂಗಮದೇವ' ಎಂಬ ಅಂಕಿತನಾಮದಲ್ಲಿ ಗುರುಲಿಂಗಪ್ಪ ಹಾಳಹಳ್ಳಿಯವರು ಬರೆದಿರುವ ೧೦೫ ವಚನಗಳು 'ವಚನಾನುಭಾವ ಸಾಹಿತ್ಯ' ಎಂಬ ಕೃತಿಯ ಮೂಲಕ ಪ್ರಕಟವಾಗಿವೆ. ಬಸವಾದಿ ಶರಣರ ವಚನಗಳಿಂದ ಪ್ರಭಾವಿತರಾಗಿರುವ ಇವರ ವಚನಗಳಲ್ಲಿ ಧರ್ಮ, ಸಮಾಜ, ಆಚಾರ–ವಿಚಾರ, ಸತಿ–ಪತಿಭಾವ, ಅಷ್ಟಾವರಣ, ಪಂಚಾಚಾರ, ಷಟಸ್ಥಲಗಳು, ನಡೆ–ನುಡಿ, ಸರ್ವಧರ್ಮ ಸಮನ್ವಯ ಭಾವವನ್ನು ಕಾಣಬಹುದು. ಹಾಲಳ್ಳಿಯವರ ವಚನಗಳಲ್ಲಿ ಜನರ ಆಡಂಬರದ ಮುಖವಾಡದ ವೇಷಧಾರಿ ಬದುಕನ್ನು ಅಂಧಶ್ರದ್ಧೆಯನ್ನು ಕುರಿತು ತೀರಾ ಬಂಡಾಯ ಮನೋಭಾವದಿಂದ ತಮ್ಮ ವಚನಗಳಲ್ಲಿ ವಿವೇಚಿಸಿದ್ದಾರೆ.

ಇಂದಿನ 'ಆಧುನಿಕ ಯುಗದಲ್ಲಿ ವಚನ ಸಾಹಿತ್ಯದ ರಚನೆ ಕಡಿಮೆಯಾದರೂ ಕೂಡ ಶ್ರೀ ಗುರುಲಿಂಗಪ್ಪನವರಂತಹ ವಚನಕಾರರಲ್ಲಿ ವೈಚಾರಿಕತೆ, ವೈಜ್ಞಾನಿಕತೆ ಹಾಗೂ ನಿರಾಡಂಭರತೆಯನ್ನು ಪ್ರತಿನಿಧಿಸುವ ಸಾಹಿತಿಗಳು ಮಹತ್ವಪೂರ್ಣ ವಚನಗಳನ್ನು ರಚಿಸಿದ್ದಾರೆ.' ಎಂದು ಸೂಗಯ್ಯ ಹಿರೇಮಠರು ಅಭಿಪ್ರಾಯ ಪಡುತ್ತಾರೆ.[೮]

ಒಟ್ಟಿನಲ್ಲಿ ಶಿಕ್ಷರಾದ ಶಿವಶಂಕರಯ್ಯಾ ಕಪನೂರವರು ಅಭಿಪ್ರಾಯಪಟ್ಟಿರುವಂತೆ ಪ್ರತಿಷ್ಠೆಗಾಗಿ ರಚಿಸುವುದು ಸಾಹಿತ್ಯವಲ್ಲ. ಶ್ರೀ ಗುರುಲಿಂಗಪ್ಪನವರು ಪ್ರತಿಷ್ಠೆಗಾಗಿ ವಚನ ರಚನೆ ಮಾಡದೆ ತಾವು ಬದುಕುತ್ತಿರುವ ಸಮಾಜದ ಸಮಕಾಲೀನ ಸಮಸ್ಯೆಗಳು ಮತ್ತು ಮುಂಬರುವ ಯುಗ ಯುಗಾಂತರದ ನಂತರದ ಸಮಸ್ಯೆಗಳಿಗೂ ಸಾಮಾಜಿಕ ಅನಿಷ್ಟಗಳ ಪರಿಹಾರಗೈಯುವ ವಿಚಾರದಿಂದ ಅರ್ಥಪೂರ್ಣವಾದ ಈ 'ವಚನಾನುಭವ ಸಾಹಿತ್ಯ' ರಚಿಸಿದ್ದಾರೆ. ತಾವು ಬರೆದ 'ವಚನಾನುಭವ ಸಾಹಿತ್ಯ' ಆಸ್ವಾದಿಸುವುದರ ಜೊತೆಗೆ ಜೀವನ ಮೌಲ್ಯಗಳನ್ನು ಸರ್ವರೂ ಅಭಿವೃದ್ಧಿ ಪಡಿಸಿಕೊಳ್ಳಬೇಕೆಂಬ ಕಾಳಜಿ ಇಡೀ ಕೃತಿಯುದ್ದಕ್ಕೂ ಕಾಣುತ್ತದೆ. ಎಂದಿರುವುದನ್ನು[೯] ಸರಿಯಾದ ಹೇಳಿಕೆ ಎನ್ನಬಹುದು. ಆಧುನಿಕ ವಚನ ಸಾಹಿತ್ಯಕ್ಕೆ ಇದೊಂದು ಉತ್ತಮ ಕೊಡಿಗೆಯಾಗದೆ.

**೪.೭ ಭೀಮರಾವ ನಮಿಸುವೆನಿನ್ನ (೧೯೯೭)**

ಕಲಬುರ್ಗಿ ಜಿಲ್ಲೆಯ ಶ್ರೇಷ್ಠ ಆಧುನಿಕ ವಚನಕಾರರಲ್ಲಿ ಭೀಮರಾವ ಅವರ ಹೆಸರೂ ಕೇಳಿಬರುತ್ತದೆ. ಜಿಲ್ಲೆಯ ಚಿಂಚೊಳ್ಳಿ ತಾಲೂಕಿನ ಗೌಡನಹಳ್ಳಿಯ ಒಕ್ಕಲುತನ ಮನೆತನದ ವೀರಪ್ಪ ಹಾಗೂ ನಾಗಮ್ಮರ ಮಗನೀತ. ೧೯೨೫ರ ಮೇ ೨೫ ರಂದು ಜನಿಸಿದ್ದಾರೆ. ಕಲಬುರ್ಗಿಯಲ್ಲಿ ಮೆಟ್ರಿಕ್ ಪಾಸಾಗಿ ಹೈದ್ರಾಬಾದನ ಉಸ್ಮಾನಿಯ ವಿಶ್ವವಿದ್ಯಾಲದಿಂದ ಬಿ.ಕಾಂ. ಮತ್ತು ಎಲ್.ಎಲ್.ಬಿ. ಪದವಿ ಮುಗಿಸಿಕೊಂಡು ಬಂದು ವಿವಿಧ ಕ್ಷೇತ್ರಗಳಲ್ಲಿ ಉದ್ಯೋಗಕ್ಕೆ ತೊಡಗಿದರು. ವಿವಿಧ ಸಂಘ ಸಂಸ್ಥೆಗಳೊಂದಿಗಿನ ಸಂಬಂಧ, ಕರ್ನಾಟಕ ಸರಕಾರದ ಹೆಚ್ಚುವರಿ ಕಾರ್ಯದರ್ಶಿಯಾಗಿ ಸೇವೆ, ಶೈಕ್ಷಣಿಕ ರಂಗದಲ್ಲಿ ಹಾಗೂ ಸಮಾಜ ಸುಧಾರಣೆಯಲ್ಲಿಯೂ ಮಹತ್ವದ ಸೇವೆ ಸಲ್ಲಿಸಿದ್ದಾರೆ. ೧೯೪೭ರಲ್ಲಿ ಹೈದ್ರಾಬಾದ ವಿಮೋಚನಾ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಇವರು ನಂತರದಲ್ಲಿ ಹೈದ್ರಾಬಾದ ಸರಕಾರದ ಸೇವೆಯಲ್ಲೂ ನಿರತರಾಗಿದ್ದರು.

ಅಪಾರವಾದ ಜೀವನಾನುಭವ ಹಾಗೂ ಆಡಳಿತದ ಪರಿಯನ್ನು ಹೊಂದಿದ್ದ ಭೀಮರಾವ ಅವರು ತಮ್ಮ ೭೦ನೇಯ ವಯಸ್ಸಿನಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಪ್ರವೇಶ ಮಾಡಿದರು. 'ನೀಲಕಂಠೇಶ್ವರ' ಎಂಬ ಅಂಕಿತದಲ್ಲಿ ೧೯೯೫ರಲ್ಲಿ ಮೊದಲ ವಚನ ಸಂಕಲನ 'ಮುಚ್ಚಿಡದ ನುಡಿಗಳು' ಎಂಬುದನ್ನು ಹಾಗೂ ೧೯೯೬ರಲ್ಲಿ 'ನಮಿಸುವೆ ನಿನ್ನ' ಎಂಬ ಇನ್ನೊಂದು ಸಂಕಲನವನ್ನು ತಂದಿದ್ದಾರೆ. ಎರಡೂ ಸಂಕಲನ ಸೇರಿ ಒಟ್ಟು ಅವರು ೧೧೯ ವಚನಗಳನ್ನು ಪ್ರಕಟಿಸಿದ್ದಾರೆ.

ತಮ್ಮ ಪ್ರತಿಯೊಂದು ವಚನಗಳಿಗೆ ಒಂದು ಶೀರ್ಷಿಕೆ ಕೊಟ್ಟು ವಚನ ರಚಿಸಿರುವುದು ಇವರ ವಿಶೇಷತೆಯಾಗಿದೆ. ಇದರಿಂದ ವಚನಗಳನ್ನು ಬೇಗನೆ ಅರ್ಥಮಾಡಿಕೊಳ್ಳಲು ಅನುಕೂಲವಾಗುತ್ತದೆ ಎನ್ನಬಹುದು. 'ನೀತಿ ಬೋಧನೆ' ಹೆಚ್ಚಾಗಿರುವ ಇವರ ವಚನಗಳು ಮುಕ್ತ ಛಂದಸ್ಸಿನಲ್ಲಿವೆ. ಗಾತ್ರ, ಸಾಲುಗಳಿಗೆ ನಿಬಂಧನೆಯಿಲ್ಲ. ಕೆಲವು ವಚನಗಳು ಮಧ್ಯಮ ಗಾತ್ರದವಾಗಿ ಕಂಡರೆ ಹಲವು ವಚನಗಳು ದೀರ್ಘ ಸ್ವರೂಪದಲ್ಲಿರುವುದು ಕಂಡುಬರುತ್ತದೆ. ಭೀಮರಾಯರ ಒಂದು ವಿಶಿಷ್ಟತೆ ಏನಂದರೆ ಅವರ ವ್ಯವಹಾರ, ಆಡಳಿತ ಭಾಷೆಯಲ್ಲಿ

ಉರ್ದುವಾಗಿತ್ತು. ಆದರೂ ಅವರು ತಮ್ಮ ವಚನಗಳನ್ನು ಕನ್ನಡದಲ್ಲಿ ರಚಿಸಿ ಮಾತೃಭಾಷೆಯ ಋಣ ತೀರಿಸಿದ್ದಾರೆನ್ನಬಹುದು.

ಅವರ ವಚನಗಳಲ್ಲಿ ಜೀವನದ ಸಿಹಿಕಹಿಗಳಿವೆ. ಅವರದೇ ಆದ ಅನುಭವಗಳಿವೆ. ತಾನು ತಿಳಿಗನ್ನಡದ ತಿರುಳನ್ನು ಅರಿಯದಿದ್ದರೂ. ತಮ್ಮದೇ ಆದ ಶೈಲಿಯಲ್ಲಿ ವಚನಗಳನ್ನು ರಚಿಸಿದ್ದಾಗಿ ಹೇಳಿಕೊಂಡಿದ್ದಾರೆ. ಜೀವನದಲ್ಲಿ ತಾಳ್ಮೆ, ಸಹನೆಯ ಗುಣ ಮುಖ್ಯವಾಗಿರಬೇಕು. ತಾಳಿದವನು ಬಾಳಿಯಾನು ಎಂಬುದು ಅಲ್ಲಲ್ಲಿ ಹೇಳಿದ್ದಾರೆ. ಅವರ ಕೆಲವು ವಚನಗಳಲ್ಲಿ ದೇವರ ಅಸ್ತಿತ್ವ, ಭಯ, ಭಕ್ತಿ, ಆಚಾರ-ವಿಚಾರ, ಸನ್ಮಾರ್ಗದ ಮಾತುಗಳಿವೆ. ತಮ್ಮ ಜೀವನಾನುಭವ ಹಾಗೂ ಸೇವಾನುಭವಗಳ ಹಿನ್ನೆಲೆಯಲ್ಲಿ ತಮ್ಮದೇ ಆದ ಶೈಲಿಯಲ್ಲಿ ವಚನಗಳನ್ನು ರಚಿಸಿದ್ದಾರೆ. ಕಲಬುರ್ಗಿ ಜಿಲ್ಲೆಯ ಆಧುನಿಕ ವಚನ ಸಾಹಿತ್ಯಕ್ಕೆ ತಮ್ಮೆರಡು ಕೃತಿಗಳನ್ನು ನೀಡುವ ಮೂಲಕ ಗಮನಾರ್ಹವಾಗುತ್ತಾರೆ ಎನ್ನಬಹುದು.

**೪.೮ ಸರಸ್ವತಿ ಚಿಮ್ಮಲಗಿಯವರ 'ಎಡಬಿಡಂಗಿ ದೇವ'ನ ವಚನಗಳು (೧೯೯೬)**

ವೈಚಾರಿಕ ನಿಲುವುಳ್ಳ ಕವಿ, ವಿಮರ್ಶಕಿ, ಸಂಶೋಧಕಿ ಹಾಗೂ ಆಧುನಿಕ ವಚನಕಾರ್ತಿಯಾಗಿರುವ ಡಾ. ಸರಸ್ವತಿ ಚಿಮ್ಮಲಗಿಯವರು ಬಂಡಾಯ ಕವಿಯೂ ಹೌದು. ಪ್ರತಿಭಾನ್ವಿತ ಲೇಖಕಿಯಾಗಿರುವ ಚಿಮ್ಮಲಗಿಯವರು ಕ್ರಿಯಾತ್ಮಕ ಭಾಷಣಕಾರರೂ ಹೌದು. ನಿರ್ಭಿಡೆಯಿಂದ ಮಾತನಾಡುವ ಇವರು ಎಂ.ಎ.,ಪಿ.ಹೆಚ್.ಡಿ. ಪದವೀಧರರು ಕಲಬುರ್ಗಿಯ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಯಾದ ಹೈದ್ರಾಬಾದ ಕರ್ನಾಟಕ ಶಿಕ್ಷಣ ಸಂಸ್ಥೆಯ ಶ್ರೀ ವೀರಮ್ಮ ಗಂಗಸಿರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಬಹುಮುಖ ಪ್ರತಿಭೆಯ ಚಿಮ್ಮಲಗಿಯವರು ಸಾಹಿತ್ಯದಲ್ಲಷ್ಟೇ ಅಲ್ಲದೆ ರಂಗಭೂಮಿ, ಆಕಾಶವಾಣಿ, ದೂರದರ್ಶನದಲ್ಲಿಯೂ ಭಾಗವಹಿಸಿ ಕಾರ್ಯಕ್ರಮ ನೀಡಿದ್ದಾರೆ. ರಾಜ್ಯ ಹಾಗೂ ರಾಷ್ಟ್ರಮಟ್ಟದ ಕ್ರೀಡೆಗಳಲ್ಲು ಅವರು ಭಾಗಿಯಾಗಿದ್ದಾರೆ. ಕಬ್ಬಡ್ಡಿ, ಖೋಖೋ ಆಟಗಳಲ್ಲಿ ಹಾಗೂ ೧೯೯೫ರಲ್ಲಿ ಮಲೇಶಿಯಾದ ಪೆನಾಂಗದಲ್ಲಿ ಮಲೇಶಿಯನ್ ಓಪನ್ ವೆಟರನ್ ಅಥ್ಲೇಟಿಕ ಚಾಂಪಿಯನ್‌ಶಿಪ್ ಪ್ರಶಸ್ತಿಗೂ ಭಾಜನರಾಗಿದ್ದಾರೆ.

೧೯೪೪೮ರ ಮೇ ಒಂದರಂದು ಜನಿಸಿರುವ ಸರಸ್ವತಿಯವರು ಸಾಹಿತ್ಯ ಹಾಗೂ ಹವ್ಯಾಸ ರಂಗಭೂಮಿಯಲ್ಲಿ ಅಪಾರ ಸಾಧನೆ ಮಾಡಿದ್ದಾರೆ. ಹಿಂದುಳಿದ ವರ್ಗಕ್ಕೆ ಸೇರಿರುವ ಇವರು ಕನ್ನಡ ಸಾಹಿತ್ಯಕ್ಕೆ ೧೦ಕ್ಕಿಂತ ಹೆಚ್ಚು ಬಹುಮುಖ್ಯ ಕೃತಿಗಳನ್ನು ನೀಡಿದ್ದಾರೆ. ಅನೇಕ ಲೇಖನಗಳು ಹಾಗೂ ನಾಟಕಗಳನ್ನು ರಚಿಸಿದ್ದಾರೆ 'ಕಮಲಾ ಹಂಪನಾ ಅವರ ಸಮಗ್ರ ಸಾಹಿತ್ಯ' ಕುರಿತು ಪ್ರಬಂಧ ಮಂಡಿಸಿ ಕಲಬುರ್ಗಿ ವಿಶ್ವವಿದ್ಯಾಲಯದಿಂದ ಡಾಕ್ಟರೇಟ ಪದವಿಯನ್ನು ಗಳಿಸಿದ್ದಾರೆ.

'ಎಡಬಿಡಂಗಿದೇವ' ಎಂಬ ಅಂಕಿತನಾಮದಲ್ಲಿ ೫೮ ವಚನಗಳ್ನು ರಚಿಸಿ, ಅವುಗಳನ್ನು 'ಎಡಬಿಡಂಗಿದೇವನ ವಚನಗಳು' ಎಂಬ ಆಧುನಿಕ ವಚನ ಸಂಕಲನವೊಂದನ್ನು ತಂದಿದ್ದಾರೆ. ೧೯೯೬ರಲ್ಲಿ ಪ್ರಕಟವಾಗಿರುವ ಇಲ್ಲಿಯ ವಚನಗಳಲ್ಲಿ 'ಸ್ತ್ರೀ ಸಂವೇದನೆ' ಪ್ರಮುಖ ವಿಷಯವಾಗಿದ್ದು, ಮಾನವ-ಮಾನವರ ಸಂಬಂಧ, ಸಮಾಜದಲ್ಲಿನ ಇತ್ತೀಚಿನ ವಿದ್ಯಮಾನ ಕುರಿತು ಕವನದ ಮಾದರಿಯನ್ನೇ ಹೋಲುವ ವಚನ ರಚನೆಗಳಿವೆ.

ಕಲಬುರ್ಗಿ ಜಿಲ್ಲೆಯ ಆಧುನಿಕ ವಚನ ಸಾಹಿತ್ಯಕ್ಕೆ ಮಹತ್ವದ ಕಾಣಿಕೆಯಂತಿರುವ ಈ ಕೃತಿಯು ವಿನೂತನ ಶೈಲಿಯಲ್ಲಿದೆ. ಮಾನವ ಸ್ವಭಾವದ ಇಬ್ಬಂದಿತನದ ಬಗ್ಗೆ ಬಂಡಾಯ ಮನೋಭಾವದಿಂದ

ಪ್ರತಿಭಟಿಸಿದ್ದು ಕಂಡುಬರುತ್ತದೆ. ಸಮಾಜದಲ್ಲಿಯ ಮೇಲುವರ್ಗದವರ ಅಧಿಕಾರಿಗಳ ದೌರ್ಜನ್ಯದ ಕುರಿತು ವಚನಗಳು ಮಾತನಾಡುತ್ತವೆ.

ತಾವು ಇಂಥ ವಚನಗಳನ್ನು ಬರೆಯಲು ಅವರೇ ಕಾರಣವೆಂದೂ ಹೇಳುತ್ತಾರೆ. "ಕೊಳೆತುಹೋದ ಕಂದಾಚಾರಗಳನ್ನು ಕಿತ್ತಿ ಎಸೆದು ಆರೋಗ್ಯಕರ ಸಮಾಜ ಕಟ್ಟಲು ಹುಟ್ಟಿಕೊಂಡ ಎಡಪಂಥಿಯರೂ ಕೂಡ ತಮ್ಮ ಸೈದ್ಧಾಂತಿಕ ನೆಲೆಯಲ್ಲಿ ನಿಂತು ಸಿದ್ಧಾಂತಗಳನ್ನು ಜನತೆಗೆ ಹೇಳಿ, ತಮ್ಮ ನಡೆ-ನುಡಿಯಲ್ಲಿ ರೂಢಿಸಿಕೊಳ್ಳದೆ ಸ್ವಾರ್ಥ, ವಂಚನೆ, ಅಧಿಕಾರದಾಹ, ದುರಾಶೆ, ಅಪ್ರಮಾಣಿಕತೆ, ದೇಶಪ್ರೇಮ, ನಿಷ್ಠೆ, ನೈತಿಕ ಬಲ ಕುಗ್ಗಿರುವುದನ್ನು ಕಂಡು ಕಳವಳಗೊಂಡು 'ಎಡಬಿಡಂಗಿದೇವ' ಎಂಬ ಅಂಕಿತವಿರಿಸಿಕೊಂಡು ವಚನಗಳನ್ನು ರಚಿಸಿದ್ದೇನೆ" ಎಂದು ಮನಬಿಚ್ಚಿ ಹೇಳಿಕೊಂಡಿದ್ದಾರೆ.[೧೦] ಯಾರ ದಾಕ್ಷಿಣ್ಯಕ್ಕೂ ಒಳಗಾಗದ ತಮಗನಿಸಿದ್ದನ್ನೂ ನೇರವಾಗಿ, ಹರಿತವಾದ, ಮೊನಚಾದ ಮಾತುಗಳನ್ನು ಪ್ರಯೋಗಿಸಿ ಇವರು ವಚನ ರಚಿಸಿರುವುದು ಕಂಡುಬರುತ್ತದೆ.

ತಮ್ಮ ವೈಚಾರಿಕ ಪ್ರಜ್ಞೆಯನ್ನು, ನಿಷ್ಠುರತೆಯನ್ನು, ಸಮಾಜದ ಎಡಬಿಡಂಗಿತನವನ್ನು ವಚನ ಮಾಧ್ಯಮದ ಮೂಲಕ ಸಮಾಜಕ್ಕೆ ತಿಳಿಸಿರುವುದು ಅವರ ವಚನಗಳ ಶ್ರೇಷ್ಠತೆ ಎನ್ನಬಹುದು.

**೪.೯ ಶೈಲಜಾ ಉಡಚಣ ಅವರ ಕೇಳುಮಗಾ (೧೯೯೭)**

ಆಧುನಿಕ ಕನ್ನಡ ಮಹಿಳಾ ಲೇಖಕಿಯರಲ್ಲಿ ಪ್ರಮುಖವಾಗಿರುವ ಶೈಲಜಾ ಉಡಚಣ ಅವರು ಹೈದ್ರಾಬಾದ ಕರ್ನಾಟಕದ ಮಹತ್ವದ ಕವಿ. ಇವರು ಗದ್ಯ ಪದ್ಯಗಳೆರಡರಲ್ಲಿಯೂ ಸಮಸಮ ಕೃತಿಗಳನ್ನು ಹೊರತಂದವರಾಗಿದ್ದರೂ ನಾಡಿನಲ್ಲಿ ಅವರನ್ನು ಪ್ರಮುಖವಾಗಿ ಗುರುತಿಸುವುದು ಕವಯಿತ್ರಿ ಎಂದೇ. ಶೈಲಜಾ ಅವರಿಗೆ ಕಾವ್ಯವು ಅತ್ಯಂತ ಆಸಕ್ತಿದಾಯಕ ಕ್ಷೇತ್ರವಾಗಿರುವುದರಿಂದ ಕನ್ನಡದಲ್ಲಿ ಆಧುನಿಕ ಕಾವ್ಯ ಪರಂಪರೆ ನಡೆದು ಬಂದದಾರಿಯಲ್ಲಿ ಅವರ ಸ್ಥಾನ ಮಹತ್ವದ್ದಾಗುತ್ತದೆ ಎನ್ನಬಹುದು. ಆಧುನಿಕ ವಚನಕಾರ್ತಿಯೂ ಆಗಿರುವ ಶೈಲಜಾ ನಾಡಿನ ಪ್ರಮುಖ ಲೇಖಕರೆನಿಸಿದ್ದಾರೆ.

ಮೂಲತಃ ರಾಯಚೂರಿನವರಾದ 'ಮಹಾಂತಮ್ಮ ಹಸ್ಮಕಲ್' ೧೯೩೫ರ ಜುಲೈ ೨೬ ರಂದು ಜನಿಸಿದರು. ಹಸ್ಮಕಲ್ ಗಿರಿಮಲ್ಲಪ್ಪ ಮತ್ತು ಪಾರ್ವತಿಯರ ಚೊಚ್ಚಿಲು ಸಂತಾನ ಇವರು ಬಾಲ್ಯದಿಂದಲೆ ತಾಯಿಯ ಸಂಪ್ರದಾಯತೆಗಿಂತ, ತಂದೆಯ ವಿಚಾರ ಗವ್ಯತೆಗೆ ಪ್ರಭಾವಿತರಾಗಿ ಬೆಳೆದರು. ಇವರ ಶಿಕ್ಷಣವು ಮನೆಯಂಗಳದಿಂದಲೇ ಆರಂಭವಾಯಿತು. ಅಡಿಗೆಮನೆಯಲ್ಲಿ ಅಮ್ಮ, ಅಂಗಡಿ ಮುಂಗಟ್ಟಿನಲ್ಲಿ ಅಪ್ಪ ಯಾವಾಗಲೂ ಓದು ಕಲಿ, ಮಗ್ಗಿ ಹೇಳು, ಲೆಕ್ಕ ಮಾಡು ಎಂದು ಗದುರುತ್ತಾ ಶಿಕ್ಷಣಕ್ಕೆ ನಾಂದಿ ಹಾಡಿದರು. ಬಹುಶಃ ಆ ದಿನಮಾನಗಳಲ್ಲಿ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡದಿರುವ ಕಾಲದಲ್ಲಿ, ಗಂಡಸರಿಗೂ ಓದಿನ ಅಗತ್ಯ ಮನಗಾಣದೆ, ಮೌಢ್ಯತೆ ತುಂಬಿದ ಸ್ವಾತಂತ್ರ್ಯಪೂರ್ವ ದಶಕಗಳಲ್ಲಿ ಶೈಲಜಾ ಅವರಿಗೆ ಶಾಲೆಯ ಮೆಟ್ಟಿಲು ಹತ್ತಲು ಕಾರಣೀಕರ್ತರಾದವರು ಅವರ ತಂದೆ-ತಾಯಿಗಳು. ಅಪ್ಪ ಅಮ್ಮಂದಿರಿಬ್ಬರೂ ಅಲ್ಪಸ್ವಲ್ಪ ಓದಿದವರಾಗಿದ್ದರು ಹೀಗಾಗಿ ಶಿಕ್ಷಣ ತಮ್ಮ ಮಕ್ಕಳಿನ ಬಾಳಿನ ಭವಿಷ್ಯದ ಭದ್ರಬುನಾದಿ ಎಂದು ನಂಬಿದ್ದರು. ಹೀಗಾಗಿ ಅಂದಿನ ಸಮಾಜದ ಟೀಕೆ-ವ್ಯಂಗ್ಯಗಳನ್ನು ಗಮನಿಸದೆ ಮಗಳಿಗೆ ಶಿಕ್ಷಣ ನೀಡಿದರು. ಆಗ ಕನ್ನಡ, ಉರ್ದು, ಗಣಿತ ಹಾಗು ಇಂಗ್ಲೀಷ ವಿಷಯಗಳಲ್ಲಿ ಹೆಚ್ಚು ಅಂಕ ಪಡೆದು ಪಾಸಾದ 'ಮಹಾಂತಮ್ಮ' ಎಂ.ಎ. ಪದವಿ ಪಡೆದದ್ದಲ್ಲದೆ, ಪಿಹೆಚ್.ಡಿ. ಕೂಡ ಮಾಡಿದರು. ಶಿಕ್ಷಕಿಯಾಗಿ ಉಪನ್ಯಾಸಕಿಯಾಗಿ, ಸರಕಾರಿ ಕಾಲೇಜಿನ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದ ಇವರು ಮದುವೆಯ ನಂತರ ಡಾ. ಶೈಲಜಾ ಉಡಚಣ ಆಗಿ ನಾಮಾಂಕಿತರಾದರು.

ಚಿಕ್ಕ ವಯಸ್ಸಿನಿಂದಲೇ ಓದುವ ಹವ್ಯಾಸವಿರುವ ಶೈಲಜಾ ಅವರು ಪುಟ್ಟದೊಂದು ಲೈಬ್ರರಿ ಮಾಡಿಕೊಂಡಿದ್ದರೆಂದು, ಅಲ್ಲಿ ಬಾಯರನ್, ಕೀಟ್ಸ್, ಈಲಿಯಟನ ಕವನ ಸಂಗ್ರಹಗಳು, ಪ್ರೇಮಚಂದ ಅವರ ಕಥೆ ಪುಸ್ತಕಗಳು, ಅರೇಬಿಯನ್ ನೈಟ್ಸ ಚಂದ ಮಾಮಾ ಪತ್ರಿಕೆ, ವಡ್ಡಾರಾಧನೆ ಹೀಗೆ ವಿವಿಧ ನಮೂನೆಯ ಪುಸ್ತಕಗಳು ಅಲ್ಲಿದ್ದವು. ಶೈಲಜಾ ಅವರು ಹೈಸ್ಕೂಲ ವಿದ್ಯಾರ್ಥಿಯಾಗಿದ್ದಾಗಲೇ ಅನೇಕ ಮಹತ್ವದ ಕಾದಂಬರಿಗಳನ್ನು ಓದಿದ್ದರು. ಇವರ ಕಾವ್ಯಾಸಕ್ತಿಗೆ ನೀರೆರೆದವರೆಂದರೆ ಅವರ ಪತಿ ಬಸವಣ್ಣಪ್ಪ ಉಡಚಣ ಅವರು ಹಾಗೂ ಗುಲ್ಬರ್ಗಾ ಆಕಾಶವಾಣಿ ಕೇಂದ್ರ, ಆಗ ಅವರ ಕಾವ್ಯವಾಚನ, ಚಿಂತನ, ಲೇಖನಗಳಿಗೆ ಆಕಾಶವಾಣಿ ಸಾಕಷ್ಟು ಅವಕಾಶ ನೀಡಿತು. ಇವೆಲ್ಲದರ ಪರಿಣಾಮವಾಗಿ ಅವರು ೧) ಒಂದುಗಳಿಗೆ (೧೦೭೩) ೨) ಕಾದುನೋಡು (೧೯೭೯) ೩) ಸ್ವಗತ (೧೯೮೧) ೪) ಕಪ್ಪು ನೆಲಸೊಕ್ಕಿದ ಸೂರ್ಯ (೧೦೮೭) ೫) ನನ್ನಂಥವರು (೧೯೯೫) ೬) ಶೈಲಜಾ ಸಮಗ್ರ ಕಾವ್ಯ (೧೯೯೮) ಮತ್ತು ೭) ಕಾಲ ದೂರವಿಲ್ಲ (೨೦೦೨) ಎಂಬ ಏಳು ಕವನ ಸಂಕಲನಗಳು ಹಾಗೂ ಕಾವೇತರ ಕೃತಿಗಳಲ್ಲಿ ಸಂಶೋಧನೆ, ಸಂಪಾದನೆ, ವಿಮರ್ಶೆ, ಅನುವಾದ ಮತ್ತು ಸಂಕೀರ್ಣ ಸಾಹಿತ್ಯವನ್ನು ರಚಿಸಿದ್ದಾರೆ.

ವಚನಗಳ ರಚನೆಯನ್ನು ಕೈಕೊಂಡು ಆಧುನಿಕ ವಚನಕಾರ್ತಿಯರಾಗಿದ್ದಾರೆ. ಅವರ 'ಕೇಳುಮಗಾ' (೧೯೯೭) ಗಿರಿಸುತೆಯ ನವ ವಚನಗಳು (೨೦೦೩) ಪ್ರಕಟವಾಗಿವೆ. ಶೈಲಜಾ ಅವರ 'ಕೇಳುಮಗಾ' ಕೃತಿಯಲ್ಲಿ ಅರವತ್ತೆಂಟು ವಚನಗಳಿವೆ. "ಕೇಳುಮಗಾ ಒಂದು ಹೊಸತನದ ಅವಿಷ್ಕಾರಕ್ಕೆ ನಾಂದಿ ಹಾಡುತ್ತಿದೆ. ರಚನೆ, ವಸ್ತು, ಶೈಲಿ, ಆಕೃತಿಯೆಲ್ಲವೂ ಇಲ್ಲಿ ಬೇರೆ ರೀತಿಯಲ್ಲಿ ಮೈಮುರಿಯುತ್ತಿವೆ. ಇಲ್ಲಿ ಹೇಳುವವರು ಕೇಳುವವರು ಬೇರೆ ಬೇರೆ ಇರುವರೆಂದು ಕಂಡರೂ. ಅದು ಒಂದೇ ಆತ್ಮದ ಧ್ವನಿ. ಇಲ್ಲಿ ಉಪದೇಶವಿಲ್ಲ, ಮಾಗಿದ ಬದುಕಿನ ಅನುಭವ, ಅನುಭಾವ ಹರಳುಗಟ್ಟಿದೆ ಜೇನಾಗಿ ಹರಿದಿದೆ" ಎನ್ನುತ್ತ ಶಾಂತರಸು ಇದು ಭಾವಪರವಶನಾಗಿ ಬರೆದುದಲ್ಲ, ಸಂಪೂರ್ಣ ಎಚ್ಚರದಿಂದ ಬರೆದದ್ದು ಎಂದು ಹಾರೈಸಿದ್ದಾರೆ.[೧೧]

'ಕೇಳುಮಗಾ' ಅಂಕಿತದಲ್ಲಿರುವ ಈ ಕೃತಿ ಆಧುನಿಕ ವಚನ ಸಾಹಿತ್ಯದಲ್ಲಿ ಅತ್ಯಂತ ಮಹತ್ವದ ಕೃತಿಯಾಗಿದೆ. ವಚನ ರಚನೆ ಆರಂಭಿಸಿದಾಗ ಕವಿತೆಗಳು ಹಿಮ್ಮೆಟ್ಟಿದ್ದು ಸ್ವತಃ ಕವಿಯಿತ್ರಿಗೂ ಅಚ್ಚರಿ ತಂದಿದೆ ಎನಿಸುತ್ತದೆ. ಸಮಷ್ಠಿ ಪ್ರಜ್ಞೆ ಮೈಗೂಡಿದಾಗ ವ್ಯಷ್ಠಿಗೆ ಮಹತ್ವ ಕಡಿಮೆ ಎನ್ನುವ ಸಮಾಧಾನ ಇಲ್ಲಿ ಮೂಡಿನಿಂತಿರುವಂತಿದೆ. ನಾನಿದ್ದರೇನೆ ನಾವು ಆಗುತ್ತೇವೆ. ನುಡಿಯುತ್ತೇವೆ. ನಾನು ಮುಖ್ಯ ಎಂದು ಹೇಳುವಲ್ಲಿ 'ನಾವು ವಿಚಾರವಂತಿಕೆಯಲ್ಲಿ ಎಷ್ಟೇ ಸಾಮಾಜಿಕವಾದರೂ ವ್ಯಕ್ತಿಗತ ಅಸ್ತಿತ್ವವು ಬೇಕೆ ಬೇಕೆಂಬ ಕರೆ ಇದೆ. ಮುಂದುವರೆದ ಅವರ ಕಾವ್ಯದ ಗೊತ್ತು ಗುರಿಗಳು ದೀರ್ಘವಾಗುತ್ತ, ಗಂಭೀರವಾಗುತ್ತ, ಸಂಕಲ್ಪಶಕ್ತಿ ಗಟ್ಟಿಗೊಂಡುದರ ಸೂಚನೆಯು ಮುಂದಿನ ಅನೇಕ ರಚನೆಗಳಲ್ಲಿ ಅಭಿವ್ಯಕ್ತವಾಗಿವೆ. ಕಲಬುರ್ಗಿ ಜಿಲ್ಲೆಯ ಆಧುನಿಕ ವಚನಸಾಹಿತ್ಯಕ್ಕೆ ಶೈಲಜಾ ಅವರ 'ಕೇಳುಮಗಾ' ಹಾಗೂ 'ಗಿರಿಸುತೆಯ ನವ ವಚನಗಳು' ವಿಶಿಷ್ಟವಾದ ಕೊಡುಗೆ ನೀಡಿವೆ.

**೪.೧೦ ಎಸ್.ಎಸ್. ಪಾಟೀಲರ ವೈದ್ಯವಚನ (೧೯೯೭), ನೇತ್ರ ವಚನ (೧೯೯೮)**

ವೃತ್ತಿಯಲ್ಲಿ ವೈದ್ಯರಾಗಿದ್ದರೂ ಪ್ರವೃತ್ತಿಯಲ್ಲಿ ಶರಣ ಸಾಹಿತಿಯಾಗಿರುವ ಎಸ್.ಎಸ್. ಪಾಟೀಲರು ಕಲಬುರ್ಗಿ ಜಿಲ್ಲೆಯ ಪ್ರಮುಖ ಆಧುನಿಕ ವಚನಕಾರರು. ಸೋಮಶೇಖರ ಪಾಟೀಲರು ಕಲಬುರ್ಗಿಯಲ್ಲಿ ೧೯೪೪೮ ಮೇ ೨೯ ರಂದು ಜನಿಸಿದರು. ಸುಸಂಸ್ಕೃತ ಮನೆತನದಲ್ಲಿ ಜನಿಸಿರುವ ಇವರು ಬಾಲ್ಯದಿಂದಲೇ

ಶರಣ ಸಂಸ್ಕೃತಿಯಲ್ಲಿ ಬೆಳೆದು ಬಂದರು. ಕಲಬುರ್ಗಿಯಲ್ಲಿಯೇ ಶಿಕ್ಷಣ ಪಡೆದ ಇವರು ವೈದ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದು ಅಸ್ತಿಸಂಯೋಜಕ ಶಸ್ತ್ರವೈದ್ಯರಾಗಿ ಅನುಪಮ ಸೇವೆ ಮಾಡಿದ್ದಾರೆ. ತಮ್ಮ ವೃತ್ತಿಯಲ್ಲಿ ತುಂಬಾ ನಿಷ್ಠೆಯಿಂದ ಕಾರ್ಯ ಮಾಡಿ ರೋಗಿಗಳ ಶುಶ್ರೂತೆಯ ಕಾಯಕದಲ್ಲಿ ಕೈಲಾಸವನ್ನು ಕಂಡವರು. ಇವರು ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ಕಾಣಿಕೆ ನೀಡಿದ್ದಾರೆ.

ಒಟ್ಟು ಆರು ಕೃತಿಗಳನ್ನು ರಚಿಸುವ ಅವರು, ನಾಲ್ಕು ಆಧುನಿಕ ವಚನ ಸಂಕಲನಗಳನ್ನು ನೀಡಿದ್ದಾರೆ. 'ಸಿದ್ಧನೆ' ಎಂಬ ಅಂಕಿತದಲ್ಲಿ ೧೯೯೭ರಲ್ಲಿ 'ವೈದ್ಯವಚನ' ೧೯೯೮ರಲ್ಲಿ ನೇತ್ರವಚನ, ೧೯೯೯ರಲ್ಲಿ ವೈದ್ಯಕೀಯ ವಚನ ಹಾಗೂ ೨೦೦೦ ದಲ್ಲಿ 'ವೈದ್ಯನ ವಚನಗಳು' ಎಂಬಂಥ ಕೃತಿಗಳನ್ನು ನೀಡಿದ್ದಾರೆ. ಹಲವು ಸಂಶೋಧನಾ ಲೇಖನಗಳನ್ನು, ಸಂಪಾದನಾ ಕೃತಿಗಳನ್ನು ಅವರು ಪ್ರಕಟಿಸಿದ್ದಾರೆ.

ವೈದ್ಯಕೀಯ ಜ್ಞಾನವಿರದಂತಹವರೂ ಅರ್ಥಮಾಡಿಕೊಳ್ಳಬಹುದಾದ ಇಲ್ಲಿನ ವಚನಗಳು ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದವುಗಳಾಗಿವೆ. ವಿವಿಧ ರೋಗಗಳು, ಆರೋಗ್ಯಗಳಿಗೆ ಚಿಕಿತ್ಸೆ, ವೈದ್ಯಕೀಯ ಚಿಕಿತ್ಸೆ ಕುರಿತ ಕ್ಲಿಷ್ಟವಾದ ವೈಜ್ಞಾನಿಕ ವಿಷಯಗಳನ್ನು, ಸರಳವಾದ ವಚನಗಳ ಮುಖಾಂತರ ತಿಳಿಸಿರುವುದು ಅವರ ಹೆಗ್ಗಳಿಕೆ ಎನ್ನಬಹುದು. ಎಸ್.ಎಸ್. ಪಾಟೀಲರು ತಮ್ಮ ಅಗಾಧವಾದ ವೈದ್ಯಕೀಯ ಪಾಂಡಿತ್ಯದೊಂದಿಗೆ ಸಾಹಿತ್ಯದ ಮೆರಗನ್ನು ಜೋಡಿಸಿ ಮಹತ್ವದ ಸಂಕಲನಗಳನ್ನು ಹೊರತಂದಿದ್ದಾರೆ. ಈ ಮೂಲಕ ಅವರು ಸುಪ್ತವಾಗಿರುವ ವೈದ್ಯಕೀಯ ವಿಷಯಗಳು, ರೋಗಗಳು, ದುಶ್ಚಟಗಳ ನಿರ್ಮೂಲನೆ, ಆರೋಗ್ಯ ರಕ್ಷಣೆಯ ಕುರಿತು ಅತ್ಯಂತ ಗಂಭೀರವಾದ ಆಲೋಚನೆಗಳನ್ನು ಸಮಾಜಕ್ಕೆ ಅರ್ಪಿಸಿದ್ದಾರೆ.

ಪಾಟೀಲರ ಮೂರನೆಯ ವಚನ ಸಂಕಲನವಾದ 'ಮಗುವಚನ' ಕೃತಿ ೨೦೧ ವಚನಗಳುಳ್ಳ ಮಕ್ಕಳಿಗೆ ಸಂಬಂಧಿಸಿದ ವೈದ್ಯಕೀಯ ಜ್ಞಾನವನ್ನು ತಿಳಿಸುತ್ತವೆ. ಅವರೇ ಹೇಳುವಂತೆ ಇಲ್ಲಿ "ಸಮಾಜಕ್ಕೆ ಸಹಾಯಕವಾಗುವಂತೆ ಮಕ್ಕಳ ಆರೋಗ್ಯದ ಬಗ್ಗೆ ಸರಳ ಭಾಷೆಯಲ್ಲಿ ಬರೆದ ಪುಸ್ತಕಗಳು ಸಾಹಿತ್ಯದಲ್ಲಿ ವಿರಳ" ಹಾಗಾಗಿ ಅವರು ಇದನ್ನು ರಚಿಸಿದರು. ಈ ಪುಸ್ತಕವು ಡಾ. ಎನ್.ಜಿ.ಗಚ್ಚಿ ನಮನಿಯವರು ಅಭಿಪ್ರಾಯ ಪಡುವಂತೆ "ನಾಳೆಯ ದೇಶದ ಪ್ರಜ್ಞಾವಂತ ಪ್ರಜೆಗಳೆನಿಸಿರುವ ಇಂದಿನ ಮಕ್ಕಳ ಹಿತಚಿಂತನೆಯ ಗುರಿ ಹೊಂದಿದೆ. ಬಾಲ್ಯದಲ್ಲಿ ಮಕ್ಕಳು ಎದುರಿಸಬಹುದಾದ ಅನೇಕ ಸಮಸ್ಯೆಗಳ ಬಗ್ಗೆ ಪಾಟೀಲರು ತಿಳಿಸಿದ್ದಾರೆ. ಪಾಲಕರಿಗೆ ಮಗುವಿನ ಆರೋಗ್ಯ-ಅನಾರೋಗ್ಯದ ತಿಳುವಳಿಕೆ ಕೊಟ್ಟಿದ್ದಾರೆ. ಸಮಸ್ಯೆ ಕೈಮೀರುವ ಮುನ್ನವೇ ಪಾಲಕರು ಮುಂಜಾಗ್ರತವಹಿಸಿದರೆ ಮಕ್ಕಳ ವಿಕಲತೆ ಹಾಗೂ ಮರಣ ಸಂಖ್ಯೆ ಗಣನೀಯವಾಗಿ ಇಳಿಸುವಲ್ಲಿ ಸಾಧ್ಯವಾಗುತ್ತದೆ.[೧೨] ಎಂದಿರುವುದನ್ನಿಲ್ಲಿ ಗಮನಿಸಬಹುದು.

ಪಾಟೀಲರ 'ವೈದ್ಯನ ವಚನ'ಗಳು ಪುಸ್ತಕ ವೈದ್ಯರನ್ನು ಕುರಿತು ಹಲವು ಸಂಗತಿಗಳನ್ನು ತುಂಬಾ ಪ್ರಾಮಾಣಿಕವಾಗಿ ತಿಳಿಸುತ್ತದೆ. ವೈದ್ಯಕೀಯ ಭಾಷೆಯಲ್ಲಿಯೇ ಆರೋಗ್ಯ ಹಾಗೂ ಹಲವಾರು ಚಿಕಿತ್ಸೆಗಳ ಬಗ್ಗೆ ಪಾರಿಭಾಷಿಕ ಶಬ್ದಗಳಲ್ಲಿ ವಿಷಯಗಳನ್ನು ತಿಳಿಸುತ್ತದೆ. ಇದರಲ್ಲಿ ೨೦೭ ವಚನಗಳಿವೆ. ಒಟ್ಟಿನಲ್ಲಿ ಪಾಟೀಲರು ವೈದ್ಯಕೀಯ ರಂಗದ ಪ್ರಮುಖ ಸಂಗತಿಗಳನ್ನು, ರೋಗಗಳನ್ನು ನಿಖರವಾದ ಜ್ಞಾನದಲ್ಲಿ ವಚನಗಳ ಮೂಲಕ ತಿಳಿಸಿರುವುದು ಅಭಿನಂದನೀಯ ಆಧುನಿಕ ವಚನ ಸಾಹಿತ್ಯಕ್ಕೆ ಆಧುನಿಕ ವೈದ್ಯಕೀಯ ವಿಷಯಗಳನ್ನು, ತಮ್ಮ ವಿಚಾರದ ಮೂಲಕ ಸೆರೆಹಿಡಿದಿರುವುದು ಅದ್ಭುತ ಕೊಡುಗೆ ಎನ್ನಬಹುದು.

೪.೧೧ ವಿಜಯಕುಮಾರ ಪರುತೆ ಅವರ 'ಮಹಾತಪಸ್ವಿ' ಹಾಗೂ ವಚನಧಾರೆ

ವಿಜಯಕುಮಾರ ಪರುತೆಯವರು ವೃತ್ತಿಯಲ್ಲಿ ಹಿಂದಿ ಉಪನ್ಯಾಸಕರಾಗಿದ್ದರೂ, ಪ್ರವೃತ್ತಿಯಲ್ಲಿ ಕನ್ನಡದ ಒಬ್ಬ ಸೃಜನಶೀಲ ಬರಹಗಾರರು. ಕಲಬುರ್ಗಿ ಜಿಲ್ಲೆಯ ಉತ್ತಮ ಆಧುನಿಕ ವಚನಕಾರರಲ್ಲಿ ಅವರೂ ಒಬ್ಬರೆಂದು ಗುರುತಿಸಿಕೊಂಡಿದ್ದಾರೆ. ಶ್ರೀಯುತರು ಕಲಬುರ್ಗಿ ಜಿಲ್ಲೆಯ ಚಿತ್ತಾಪೂರ ತಾಲೂಕಿನ ಕಾಳಗಿಯಲ್ಲಿ ೧೯೬೩ರ ಮೇ ೧೮ ರಂದು ಜನಿಸಿದ್ದಾರೆ. ತಮ್ಮ ಶಿಕ್ಷಣವನ್ನು ಕಾಳಗಿ, ಕಲಬುರ್ಗಿಯಲ್ಲಿ ಮುಗಿಸಿಕೊಂಡು ೧೯೯೩ರಲ್ಲಿ ಧಾರವಾಡ ವಿಶ್ವವಿದ್ಯಾಲಯದಿಂದ ಹಿಂದಿ ಭಾಷೆಯಲ್ಲಿ ಎಂ.ಎ. ಪದವಿ ಪಡೆದು ಹೈದ್ರಾಬಾದ ಶಿಕ್ಷಣ ಸಂಸ್ಥೆಯ ವ್ಹಿ.ಜಿ. ಮಹಿಳಾ ಮಹಾವಿದ್ಯಾಲಯದಲ್ಲಿ ಹಿಂದಿ ಉಪನ್ಯಾಸಕರಾಗಿ ಸೇವೆಯಲ್ಲಿದ್ದಾರೆ.

ಶರಣರ ನಂತರ ಹಾಗೂ ಆಧುನಿಕ ಕೆಲವು ವಚನಕಾರರ ವಚನಗಳನ್ನು ಓದಿ ಅವರ ದಟ್ಟವಾದ ಪ್ರಭಾವದಿಂದ ವಚನ ರಚಿಸಿದವರಲ್ಲಿ ಶ್ರೀ ವಿಜಯಕುಮಾರವರೂ ಒಬ್ಬರು. ಆಧ್ಯಾತ್ಮದ ಪ್ರಭಾವ, ಪ್ರೇರಣೆ ಹಾಗೂ ಸರಳ ಜೀವನದ ವೈಚಾರಿಕ ವಿವೇಚನೆಯಿರುವ ಆಧುನಿಕ ವಚನಕಾರರಲ್ಲಿ ಪರುತೆಯವರು ಪರಿಗಣಿತರಾಗಿದ್ದಾರೆ. ೧೯೯೮ರಲ್ಲಿ ರಚಿಸಲಾಗಿರುವ ತಮ್ಮ 'ಮಹಾತಪಸ್ವಿ' ಎಂಬ ಕೃತಿಯ ಮುಖಾಂತರ ಇವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರು.

ಭರತನೂರಿನ ಶ್ರೀಗುರುನಂಜೇಶ್ವರ ಯೋಗಿಯ ಮೇಲೆ ಅಪಾರ ಭಕ್ತಿಯುಳ್ಳ ಇವರು 'ಗುರುನಂಜೇಶ್ವರ' ಎಂಬ ಅಂಕಿತದಲ್ಲಿ 'ಮಹಾತಪಶ್ವಿ' ಕೃತಿಯಲ್ಲಿ ೧೦೧ ವಚನಗಳನ್ನು ಪ್ರಕಟಿಸಿದ್ದಾರೆ. ಆನಂತರ ೨೦೦೯ರಲ್ಲಿ ಅವರು 'ವಚನಧಾರೆ' ಎಂಬ ಕೃತಿಯನ್ನು ಪ್ರಕಟಿಸುವ ಮೂಲಕ ಅದರಲ್ಲಿ ೨೫೬ ಆಧುನಿಕ ವಚನಗಳನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೀಡಿದ್ದಾರೆ. "ಜೀವನಾನುಭವ ಹಾಗೂ ಆಳವಾದ ಅಧ್ಯಾಯನದ ಫಲವಾಗಿ ಸರಳ, ಸುಂದರ ಶೈಲಿಯ ವಚನಗಳು ಇಲ್ಲಿದ್ದು, ಆ ವಚನಗಳು ವೈಚಾರಿಕತೆಯಿಂದ ಆಕರ್ಷಿತವಾಗುತ್ತವೆ. ಈ ಎರಡೂ ವಚನ ಸಂಕಲನಗಳು ವಚನ ಸಾಹಿತ್ಯದ ಗಣಿಗೆ ಅಪೂರ್ವ ನಿಧಿಯಾಗಿ ಗೋಚರಿಸುತ್ತವೆ. ಇವರ ರಚನೆಗಳಲ್ಲಿ ಭಕ್ತಿ, ಜ್ಞಾನ, ವೈರಾಗ್ಯ, ಜೀವನ ಮೌಲ್ಯಗಳು, ವೈಚಾರಿಕತೆ, ಆತ್ಮಾವಲೋಕನ, ಅನುಭಾವಿಕವಾದ ವಿಚಾರಗಳು ಎದ್ದು ಕಾಣುತ್ತವೆ. ವಿಜಯಕುಮಾರ ಪರುತೆಯವರು ಓರ್ವ ಶಿಕ್ಷಕರಾಗಿರುವುದರಿಂದ ಈ ಶಿಕ್ಷಕನ ಬಗೆಗೆ ವಚನಗಳನ್ನು ರಚಿಸಿ ಆ ರಂಗದ ಮಹತ್ವವನ್ನು ಬಿಚ್ಚಿಡುತ್ತಾರೆ.

ಪರುತೆಯವರ 'ವಚನಧಾರೆ' ೨೦೦೯ರಲ್ಲಿ ಪ್ರಕಟವಾಗಿದೆ. ಇಲ್ಲಿಯ ವಚನಗಳಲ್ಲಿ "ಆಧುನಿಕ ಪ್ರಪಂಚದ ವಿಸ್ಮಯ, ಸಂಕೀರ್ಣತೆ, ಎಡಬಿಡಂಗಿತನ, ಅವಾಂತರಗಳೆಲ್ಲವೂ ಅಭಿವ್ಯಕ್ತವಾಗಿವೆ. ಬದುಕಿನ ಮೌಲ್ಯ ಮತ್ತು ಸಾರ್ಥಕತೆಯನ್ನು ಬಿಂಬಿಸುವ ಪರುತೆಯವರ ವಚನಗಳು ನಿಜಕ್ಕೂ ಅರ್ಥಪೂರ್ಣವಾದಂತಹುಗಳು ಎಂದು ಡಾ. ನಾಗೇಂದ್ರ ಮಸೂತಿ ಅಭಿಪ್ರಾಯಪಟ್ಟಿದ್ದಾರೆ.[೧೩]

ಇಲ್ಲಿಯ ವಚನಗಳಲ್ಲಿ ಆಧ್ಯಾತ್ಮಿಕ ಹಾಗೂ ಶಿಕ್ಷಣ ಸಂಘಗಳು ಪುನರ್ ವಿಮರ್ಶೆಗೊಂಡಿರುವುದನ್ನು ಮನಗಾಣಬಹುದು. ನಿಶ್ಚಿತ ಗುರಿ ತಲುಪಿದರೆ ಸಾಕು' ಎನ್ನುವ ಪ್ರಜ್ಞೆಯನ್ನೂ ಇವರಿಲ್ಲಿ ತೋರುತ್ತಾರೆ. ಮನುಷ್ಯನ ಆಂತರಂಗಿಕ ಜಗತ್ತು ತೆರೆದುಕೊಳ್ಳಲು ಅರಿವು ಎಚ್ಚರಿಕೆ ತುಂಬಾ ಮುಖ್ಯವೆಂಬುದನ್ನು ಇಲ್ಲಿಯ ವಚನಗಳು ಸಾರುತ್ತವೆ. ಕೌಟುಂಬಿಕ ವ್ಯವಸ್ಥೆ, ಸಂಬಂಧಗಳನ್ನು ಕುರಿತ ವಚನಗಳೂ ಇಲ್ಲಿವೆ.

ಒಟ್ಟು ಪರುತೆಯವರ ವಚನಗಳಲ್ಲಿ ಆಧುನಿಕತೆಯ ಮೆರಗು ಹಾಗೂ ಪರಂಪರಾಗತವಾಗಿರುವ ಸೂತ್ರಬದ್ಧತೆಯನ್ನು ಕಾಣಬಹುದು. ಕಾವ್ಯಾಂಶವು ಇನ್ನಷ್ಟು, ಸ್ಪಷ್ಟವಾಗಿ ಕಾನುವಂತಾದರೆ ವಚನಗಳು ಗಟ್ಟಿಗೊಳ್ಳಲು ಸಹಾಯಕವಾಗುತ್ತಿತ್ತು. ಆದರೂ ಜಿಲ್ಲೆಗೆ ಇವರ ಕೊಡುಗೆ ಮಹತ್ವದ್ದು ಎನ್ನಬಹುದು.

**೪.೧೨ ಶ್ರೀಮತಿ ನಾಗಮ್ಮ ಮುಗಳಿಯವರ 'ಬಿಂದು ಪ್ರಕಾಶ' – ೧೯೯೯**

ನಾಗಮ್ಮ ಮುಗಳಿಯವರು ಕಲಬುರ್ಗಿ ಜಿಲ್ಲೆಯ ಇನ್ನೋರ್ವ ಆಧುನಿಕ ವಚನಕಾರ್ತಿ, ವೃತ್ತಿಯಲ್ಲಿ ಶಿಕ್ಷಕಿಯಾದಂತಹ ಇವರು ಸೇಡಂ ತಾಲೂಕಿನ ಕೋಲ್ಕುಂದಾ ಗ್ರಾಮದಲ್ಲಿ ಜನಿಸಿದರು. ಚಿಕ್ಕಂದಿನಿಂದಲೇ ಊರ ಸಮೀಪದ ಯಾನಗುಂದಿಯ ಮಾತೆ ಮಾಣಿಕೇಶ್ವರಿಯವರ ದರ್ಶನಕ್ಕೆ ಹೋಗಿ ಅವರನ್ನು ಸಮೀಪದಿಂದ ಕಂಡು, ಅವರ ಮಾತು, ಸನ್ಮಾರ್ಗ ಹಾಗೂ ಹಿತೋಪದೇಶದ ಪ್ರಭಾವಕ್ಕೊಳಗಾದವರು. ಶ್ರೀ ಮಾಣಿಕೇಶ್ವರಿಯ ಮಾತೆಯನ್ನು ತುಂಬಾ ಭಕ್ತಿ ಗೌರವಗಳಿಂದ ಕಾಣುವ ನಾಗಮ್ಮನವರು, ಆ ಯಾನಗುಂದಿಯ ಯೋಗಿನಿಯಾದ ಮಾತಾಜಿಯವರ ಹೆಸರಿನಲ್ಲಿಯೇ 'ಅಮ್ಮಾ' ಎಂಬ ಅಂಕಿತವನ್ನಿಟ್ಟುಕೊಂಡು ವಚನ ಬರೆದಿದ್ದಾರೆ. 'ಶ್ರೀ ಸೂಗೂರೇಶ' ಎಂಬ ಅಂಕಿತದಲ್ಲಿಯೂ ಇವರು ವಚನಗಳನ್ನು ಬರೆದದ್ದು ಕಂಡುಬರುತ್ತದೆ.

ತಮ್ಮದೇ ಆದಂತಹ ಆರಾಧ್ಯದೈವವನ್ನು ಕುರಿತ ಭಕ್ತಿ ತುಂಬಿದ ವಚನಗಳು ಇವರ ಕೃತಿಯಲ್ಲಿ ಕಾಣಸಿಗುತ್ತವೆ. ಇವರು ೧೯೯೯ರಲ್ಲಿ 'ಬಿಂದು ಪ್ರಕಾಶ' ಎಂಬ ಕೃತಿಯನ್ನು ಪ್ರಕಟಿಸುವ ಮೂಲಕ ಆಧುನಿಕ ವಚನಕಾರರ ಸಾಲಿನಲ್ಲಿ ನಿಂತಿದ್ದಾರೆನ್ನಬಹುದು. ಅವರ ಇಲ್ಲಿಯ ವಚನಗಳು ಅವರೇ ಹೇಳಿಕೊಂಡಿರುವಂತೆ "ನನಗೆ ಶ್ರೀ ಮಾತಾಜಿಯವರ ಆಶೀರ್ವಾದದ ಬಲದಿಂದ, ಧೈರ್ಯ, ದಿಟ್ಟ ಹೆಜ್ಜೆ, ನಿಷ್ಠೆಯಿಂದ ನಡೆಯಲು ಅನುವಾಯಿತು. ಅವರು ನನ್ನ ಹಾಗೆ ನೀನೂ ಒಬ್ಬ ಮಹಿಳೆ ಸಾತ್ವಿಕ ಜೀವನ ನಡೆಸು, ನಿನಗೆ ಜೀವನದಲ್ಲಿ ಯಶಸ್ಸು ಇದೆ ಎಂದು ಆಶೀರ್ವದಿಸಿದರು. ಅವರ ಆ ಜ್ಞಾನ ಆಶೀರ್ವಾದದ ಪ್ರಭಾವದಿಂದ ಈ ಕಿರು ಹೊತ್ತಿಗೆ ಭಾವನಾಜೀವಿಯಾಗಿರುವ ನಾಗಮ್ಮನವರು ಸರಳ ಸ್ವಭಾವದ ವಚನಕಾರ್ತಿ. ಅವರು ತಮ್ಮ ವಚನಗಳಲ್ಲಿ ಆರಾಧ್ಯ ದೈವದ ಕುರಿತ ವಚನಗಳನ್ನೇ ಹೆಚ್ಚಾಗಿ ರಚಿಸಿದ್ದಾರೆ. ಅಲ್ಲೆಲ್ಲ ಅವರ ಭಕ್ತಿ ಭಾವ ಹೊನಲಾಗಿ ಹರಿಯುತ್ತದೆ.

ನಾಗಮ್ಮನವರ ಇಲ್ಲಿಯ ವಚನಗಳು ತುಂಬಾ ಸರಳತೆಗೆ ಹೆಸರಾಗಿವೆ. ಇವು ಓದಿಸಿಕೊಂಡು ಹೋಗುವ ಗುಣವನ್ನು ಹೊಂದಿದ್ದು ಸರ್ವರಿಗೂ ಅರ್ಥವಾಗುವ ರೀತಿಯಲ್ಲಿವೆ. ಅತಿ ಭಾವುಕತೆಯಿಂದ ಕೂಡಿರುವ ಇವುಗಳಲ್ಲಿ ಕಾವ್ಯಗುಣ ತುಂಬಾ ಕಡಿಮೆಯಿದೆ. ಇಲ್ಲಿ ಗಣೇಶ ಸ್ತುತಿ, ಘನಲಿಂಗದ ಮಹಿಮೆ, ಸತ್‌ಸಂಗ, ಗುರುಸೇವೆ, ಜ್ಞಾನದಾಹ, ಹರಳಯ್ಯನ ಹಾಡು, ಕಲಬುರ್ಗಿ ಶರಣರ ಹಾಡು ಮೊದಲಾದ ಶೀರ್ಷಿಕೆಗಳಡಿಯಲ್ಲಿ ಭಕ್ತಿಯ ಸ್ತುತಿ ಮಾಡಿದ್ದು ಕಂಡುಬರುತ್ತದೆ. ವೈಜ್ಞಾನಿಕ ಯುಗದಲ್ಲೂ ಭಕ್ತಿ ಪರವಶತೆಯನ್ನು ಹೇಳುವ ಇಲ್ಲಿಯ ವಚನಗಳು ತಮ್ಮದೆ ಆದ ಚಿಂತನೆಯಲ್ಲಿ ಮುಖ್ಯವಾಗುತ್ತವೆ.

**೪.೧೩ ಬಸವರಾಜ ಮೋದಿ ಅವರ 'ಆನು ಒಲಿದಂತೆ' ೨೦೦೫**

ಕಲಬುರ್ಗಿ ಜಿಲ್ಲೆಯ ಆಧುನಿಕ ವಚನಕಾರರಲ್ಲಿ ಕೇಳಿಬರುತ್ತಿರುವ ಪ್ರಮುಖ ಹೆಸರುಗಳಲ್ಲಿ ಡಾ. ಬಸವರಾಜ ಮೋದಿ ಅವರು ಒಬ್ಬರು. ವೃತ್ತಿಯಿಂದ ವೈದ್ಯರು, ಪ್ರವೃತ್ತಿಯಿಂದ ವೈದ್ಯ ಸಾಹಿತಿ. ಇವರ ಆಸಕ್ತಿಯ ಕ್ಷೇತ್ರ ಹತ್ತು ಹಲವು. ವಚನೋತ್ಸವ ಸಂಘಟನೆ, ಅಜ್ಞಾನ-ಅಂಧಾನುಕರಣೆ ದೂರ ಮಾಡಲು ಹೋರಾಟ, ಬಸವಾದಿ ಪ್ರಮಥರ ವಚನ ಸಾಹಿತ್ಯದ ಪ್ರಸಾರ, ಆಧುನಿಕ ವಚನಕಾರ ಇತ್ಯಾದಿಯಾಗಿ ಚಟುವಟಿಕೆಯಲ್ಲಿದ್ದಾರೆ.

ಕಲಬುರ್ಗಿ ಜಿಲ್ಲೆಯ 'ನೆಲ್ಲಿಗೆ' ಎಂಬ ಊರಿನಲ್ಲಿ ೧೯೪೯ರ ಅಕ್ಟೋಬರ್ ೧೦ ರಂದು ಇವರು ಜನಿಸಿದರು. ಇವರ ತಾಯಿಯ ಹೆಸರು ಗೊಲ್ಲಾಳಮ್ಮ ಹಾಗೂ ತಂದೆಯ ಹೆಸರು ಶ್ರೀ ವಿರುಪಾಕ್ಷಪ್ಪ ಮೋದಿ. ಶರಣ ಸಂಸ್ಕೃತಿಯನ್ನು ಮೈಮನಗೂಡಿಸಿಕೊಂಡಿರುವ ಕುಟುಂಬ ವರ್ಗದಿಂದ ಬಂದಿರುವ ಡಾ. ಬಸವರಾಜ ಅವರು ವೈದ್ಯವೃತ್ತಿಯಲ್ಲಿದ್ದಾರೆ. ಬಾಲ್ಯದಿಂದಲೂ ಸಾಹಿತ್ಯದ ಆಸಕ್ತಿಯನ್ನು ಹೊಂದಿದ್ದ ಇವರು, ತಮ್ಮ ಶಿಕ್ಷಣವನ್ನು ಮೊದಲು ಕಲಬುರ್ಗಿಯ ಶರಣಬಸವೇಶ್ವರ ಶಿಕ್ಷಣ ಸಂಸ್ಥೆಯಲ್ಲಿ ಪೂರೈಸಿಕೊಂಡು, ನಂತರ ಹುಬ್ಬಳ್ಳಿಯ ಕರ್ನಾಟಕ ವೈದ್ಯಕೀಯ ಮಾಹಾವಿದ್ಯಾಲಯ (ಕೆ.ಎಂ.ಸಿ)ಯಲ್ಲಿ ಎಂ.ಬಿ.ಬಿ.ಎಸ್. ಪದವಿಯನ್ನು ಪಡೆದರು. ೧೯೭೯ರಲ್ಲಿ ಎಂ.ಡಿ. ಪದವಿ ಪಡೆದು ಅರವಳಿಕೆ ಶಾಸ್ತ್ರದ ಅಧ್ಯಾಪಕರಾಗಿ ಮೊದಲು ಹುಬ್ಬಳ್ಳಿಯ ಕೆ.ಎಂ.ಸಿ.ಯಲ್ಲಿ ಸೇವೆಸಲ್ಲಿಸಿ ನಂತರ ಬೆಂಗಳೂರು, ಮೈಸೂರಿನಲ್ಲಿ ಸೇವೆ ಸಲ್ಲಿಸಿ, ನಂತರದಲ್ಲಿ ಕಲಬುರ್ಗಿಯ ಮಹಾದೇವಪ್ಪ ರಾಂಪೂರೆ ವೈದ್ಯಕೀಯ ಕಾಲೇಜಿನಲ್ಲಿ ಅರವಳಿಕೆ ವಿಭಾಗದ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದ್ದಾರೆ.

ಕಲಬುರ್ಗಿಯಲ್ಲಿ ಅವರು ವಾಸಿಸಲು ಪ್ರಾರಂಭಿಸಿದ ಮೇಲೆ ಇಲ್ಲಿಯ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಸಂಘಟನೆಯಲ್ಲಿ ತೊಡಗಿಸಿಕೊಂಡರು. 'ವಚನೋತ್ಸವ' ಎಂಬ 'ಸತ್ಸಂಗ'ವನ್ನು ಹುಟ್ಟು ಹಾಕಿ ಮನಮನೆಗಳಲ್ಲಿ ವಚನ ಚಿಂತನ–ಮಂಥನ ಕಾರ್ಯಕ್ರಮವನ್ನು ಸಂಘಟಿಸುತ್ತ ಬಂದಿದ್ದಾರೆ. ಅಖಿಲಭಾರತ ಅರವಳಿಕೆ ಶಾಸ್ತ್ರಜ್ಞರ ಸಂಘದ ಕಾರ್ಯದರ್ಶಿಯಾಗಿ, ಕರ್ನಾಟಕ ಅರವಳಿಕೆ ಜನರಲ್ಸ್ ಸಂಪಾದಕ ಮಂಡಳಿ ಸದಸ್ಯರಾಗಿ, ಅಖಿಲ ಭಾರತೀಯ ವೈದ್ಯಕೀಯ ಸಂಘದ ಕಾರ್ಯದರ್ಶಿಯಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ.

ಅರವಳಿಕೆ ಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ಸಂಶೋಧನ ಲೇಖನಗಳನ್ನು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಕಾಲರಾ, ವಿಷಮಜ್ವರ, ಆಮಶಂಕೆ ವಿಷಯಗಳನ್ನು ಕುರಿತು ಹಂಪಿ ಕನ್ನಡ ವಿಶ್ವವಿದ್ಯಾಲಯದ ವೈದ್ಯಕೀಯ ವಿಶ್ವಕೋಶದಲ್ಲಿ ಲೇಖನ ಪ್ರಕಟಿಸಿದ್ದಾರೆ. ಸು. ೨೦ಕ್ಕಿಂತಲೂ ಹಚ್ಚು ಪ್ರಬಂಧಗಳನ್ನು ಅರವಳಿಕೆ ಶಾಸ್ತ್ರದ ವಿಷಯವಾಗಿ ಮಂಡಿಸಿದ್ದಾರೆ.

'ಆನು ಒಲಿದಂತೆ' ಬೀಜದೊಳಗಣ ವೃಕ್ಷ ಮತ್ತು 'ವಚನಗಳ ಅಂತರಾಳ' ಇವು ಬಸವರಾಜ ಮೋದಿಯವರ ಕೃತಿಗಳು 'ಬೀಜದೊಳಗಣ ವೃಕ್ಷ' ಲೇಖನಗಳ ಸಂಗ್ರಹವಾದರೆ ವಚನಗಳ ಅಂತರಾಳ ವಚನಗಳ ವಿಶ್ಲೇಷಣಾ ಕೃತಿಯಾಗಿದೆ, ಆಧುನಿಕ ವಚನ ಸಾಹಿತ್ಯದಲ್ಲಿ 'ಆನು ಒಲಿದಂತೆ' ಒಂದು ಪ್ರಮುಖ ಸಂಕಲನವಾಗಿ ಗಮನ ಸೆಳೆಯುತ್ತದೆ.

'ಬಸವಪ್ರಿಯ ವೀರ ಶಿವಲಿಂಗೇಶ್ವರ' ಅಂಕಿತದಲ್ಲಿರುವ ಬಸವರಾಜ ಮೋದಿಯವರ ೩೦೨ ವಚನಗಳು 'ಆನು ಒಲಿದಂತೆ' ಎಂಬ ಹೆಸರಿನಲ್ಲಿ ೨೦೦೫ರಲ್ಲಿ ಪ್ರಕಟಗೊಂಡಿವೆ. ವಚನ ಸಾಹಿತ್ಯದಲ್ಲಿ ವೈಜ್ಞಾನಿಕ ಸಂಗತಿಗಳ ಕುರಿತ ಇವರ ಬರವಣಿಗೆ ಕುತೂಹಲಕಾರಿಯಾಗಿದೆ. ಮಾನವನ ಸಾತ್ವಿಕ ಜೀವನದ ಬಗ್ಗೆ ಪ್ರೀತಿ ಹೊಂದಿರುವ ಡಾ. ಮೋದಿಯವರು ಶಿವಶರಣ ವೈದ್ಯ ಸಂಗಣ್ಣನ ಪರಂಪರೆಯವರಾಗಿದ್ದಾರೆ. ಮೂಢನಂಬಿಕೆಗಳನ್ನು ಖಂಡಿಸಿ, ಸಾಮಾಜಿಕ ಅನ್ಯಾಯಗಳ ಅನಾವರಣ, ನೈತಿಕತೆಯನ್ನು ಎತ್ತಿ ಹೇಳುವುದು, ಜನಪರ ನಿಲುವು, ಸಮಾಜಪರ ಒಲವು ಶ್ರೀಯುತರ ಆಧುನಿಕ ವಚನಗಳ ಆಶಯವಾಗಿದೆ ಎಂದಿದ್ದಾರೆ. ಡಾ. ಅಶೋಕ ನರೋಡೆಯವರು.[೧೪]

ಮೋದಿಯವರ ವಚನಗಳು ಓದಲು ಸರಳವಾಗಿದ್ದರೂ, ಗಹನವಾದ ವಿಚಾರಗಳನ್ನು ಅರುಹುತ್ತವೆ. ಅವರ ವಚನಗಳಲ್ಲಿ ಅನುಕಂಪವಿದ್ದರೂ, ತಾತ್ಸಾರವಿಲ್ಲ, ವಿಡಂಬನೆ ಕಾಣಿಸಿದರೂ ಟೀಕೆಗಳಿಲ್ಲ. ವ್ಯಂಗ್ಯೋಕ್ತಿಗಳು

ಕಾಣಿಸಿಗುತ್ತಿದ್ದರೂ ಅವು ಮನನೋಯಿಸುವುದಿಲ್ಲ. ಅನೇಕ ವಚನಗಳು ಗದ್ಯದಂತೆ ಗುಣಗ್ರಾಹಿ ಎನಿಸಿದರೂ ಅವುಗಳಲ್ಲಿ ಕಾವ್ಯಗುಣ ಕುಂದಿಲ್ಲವೆನ್ನಬಹುದು.

ವ್ಯಕ್ತಿತ್ವ ವಿಕಾಸ ಹಾಗೂ ಸಾಮಾಜಿಕ ಸ್ವಾಸ್ಥ್ಯಕ್ಕೆ ತುಂಬಾ ಪ್ರಾಮುಖ್ಯತೆ ನೀಡುವ ಈ ವಚನಗಳು ಕಲಬುರ್ಗಿ ಜಿಲ್ಲೆಯ ಆಧುನಿಕ ವಾಙ್ಮಯಕ್ಕೆ ಮಹತ್ವದ ಕೊಡುಗೆಯಾಗಿವೆ.

**೪.೧೪ ನಾಗೇಂದ್ರ ಮಸೂತಿಯವರ ಉರಿವಕೆಂಡವ ಹೊತ್ತು – ೨೦೦೮**

ನಾಗೇಂದ್ರ ಮಸೂತಿಯವರು ಕನ್ನಡದ ಕ್ರಿಯಾಶೀಲ ಅಧ್ಯಾಪಕರು. ಮೃದು ಸ್ವಭಾವದ ಸಂವೇದನಾಶೀಲವ್ಯಕ್ತಿ. ಸರಳತೆ, ಆತ್ಮೀಯತೆಯುಳ್ಳ ಪ್ರಾಮಾಣಿಕ ವ್ಯಕ್ತಿ. ಅಧ್ಯಾಯನ ಹಾಗೂ ಅಧ್ಯಾಪನವೆರಡರಲ್ಲೂ ಹೆಸರುಗಳಿಸಿದ್ದಾರೆ. ಕನ್ನಡ ಸಾಹಿತ್ಯ ರಚನೆ, ವಿಮರ್ಶೆ, ಸಂಶೋಧನೆಗಳಲ್ಲಿ ತಮ್ಮದೇ ಆದ ವಿದ್ವತ್ತು ಹೊಂದಿರುವ ಮಸೂತಿಯವರು 'ಕಲಬುರ್ಗಿ ಕನ್ನಡ ವರ್ಣನಾತ್ಮಕ ವ್ಯಾಕರಣ' ಎಂಬ ಮಹಾಪ್ರಬಂಧ ರಚಿಸಿ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಡಾಕ್ಟರೇಟ ಪದವಿ ಪಡೆದಿದ್ದಾರೆ.

ನಾಗೇಂದ್ರರು ೧೯೬೪ರ ಜೂನ್ ೨೦ ರಂದು ಕಲಬುರ್ಗಿಯಲ್ಲಿ ಜನಿಸಿದರು. ಇವರ ತಂದೆಯವರು ಸೋಮಶೇಖರ ವಸೂತಿ ಹಾಗೂ ತಾಯಿಯ ಹೆಸರು ಜಗದೇವಿ. ಸುಸಂಸ್ಕೃತ ಮನೆತನದಲ್ಲಿ ಬೆಳೆದ ಇವರ ಶಿಕ್ಷಣ ಕಲಬುರ್ಗಿಯಲ್ಲಿಯೇ ಆಯಿತು. ಕಲಬುರ್ಗಿ ವಿಶ್ವವಿದ್ಯಾಲಯದಿಂದ ಎಂ.ಎ. ಕನ್ನಡದಲ್ಲಿ ಪದವಿ ಹಾಗೂ ಪಿಹೆಚ್.ಡಿ. ಪದವಿ ಪಡೆದಿದ್ದಾರೆ. ಕಲಬುರ್ಗಿಯ ಪ್ರತಿಷ್ಠಿತ ಹೈದ್ರಾಬಾದ ಕರ್ನಾಟಕ ಶಿಕ್ಷಣ ಸಂಸ್ಥೆಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆಯಲ್ಲಿದ್ದಾರೆ. ಬಾಲ್ಯದಿಂದಲೇ ಓದುವ ಬರೆಯುವ ಹವ್ಯಾಸವುಳ್ಳ ಇವರು ಈಗಾಗಲೇ ಹಲವು ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ.

ಶಬ್ಧಚಿತ್ರ ಆಯ್ದ ಹೊಸಗನ್ನಡ ಕವಿತೆ (ಸಂ) ಹೊನ್ನಕಿರಣ (ಸಂ) ಒಡಲನುಡಿ, ಬೂದಿ ಗರ್ಭದಕೆಂಡ, ನೀ ಬೆರಸಿದ ಭೇದ, ನುಡಿಬೆಳಗು, ಕೆಂಡಮಲ್ಲಿಗೆ, ಶಿವಯೋಗಿಸಿದ್ಧರಾಮ ಮೊದಲಾದ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವರ 'ಉರಿವ ಕೆಂಡವ ಹೊತ್ತು' 'ಬೂದಿ ಗರ್ಭದ ಕೆಂಡ' ಹಾಗೂ 'ಕೆಂಡಮಲ್ಲಿಗೆ' ಎಂಬ ಕೃತಿಗಳು ಆಧುನಿಕ ವಚನ ಸಂಕಲನಗಳಾಗಿವೆ. 'ಶ್ರೀ ಗುರುಸಿದ್ಧ' ಎಂಬ ಅಂಕಿತದಲ್ಲಿ ಇವರ ವಚನ ರಚನೆಗಳಿದ್ದು, ಸಹೃದಯರ ಗಮನ ಸೆಳೆಯುತ್ತವೆ.

'ಉರಿವ ಕೆಂಡವ ಹೊತ್ತು' ೨೦೦೮ರಲ್ಲಿ ಪ್ರಕಟಿತವಾಗಿರುವ ಕೃತಿ ಇದರಲ್ಲಿ ೧೧೧ ಆಧುನಿಕ ವಚನಗಳಿವೆ. ಹನ್ನೆರಡನೇಯ ಶತಮಾನದ ಶರಣರ ವಚನಗಳ ದಟ್ಟ ಪ್ರಭಾವದ ಹಿನ್ನೆಲೆಯಲ್ಲಿ ರಚಿತವಾಗಿರುವ ಇಲ್ಲಿನ ವಚನಗಳು ತತ್ವಬೋಧಕವಾಗಿವೆ.

'ಬೂದಿಗರ್ಭದ ಕೆಂಡ' ೨೦೧೪ರಲ್ಲಿ ಪ್ರಕಟವಾಗಿದೆ. ಇದರಲ್ಲಿ ೧೫೨ ಆಧುನಿಕ ವಚನಗಳಿಗೆ ಈ ಕೃತಿಯಲ್ಲಿ ಲೌಕಿಕದಿಂದ ಬಿಡುಗಡೆ ಪಡೆಯುವ ತವಕ-ತಲ್ಲಣಗಳು ಒಳಗಿನ ನೆಮ್ಮದಿಯನ್ನು ಭಂಗಗೊಳಿಸಿವೆ. ಶ್ರೀ ಗುರುಸಿದ್ಧನ ಸನ್ನಿಧಿಯಲ್ಲಿ ತಂಪು ಪಡೆಯುವ ಆಸೆ ಹೊತ್ತು ನಿಂತಿದ್ದಾರೆ. ಯಾವಾಗ ಅವನನ್ನು ಬೆರಸಿ ಬೇರಿಲ್ಲದಂತಿರಬೇಕೋ ಎಂದು ಹಂಬಲಿಸುತ್ತಿದ್ದಾರೆ. ಲೌಕಿಕ ಬಂಧನದಿಂದ ಬಿಡುಗಡೆ ಎಂದುಕೊಂಡರೆ ಪಲಾಯನವಾಗುತ್ತದೆ. ಏಕಕಾಲಕ್ಕೆ ಎರಡನ್ನು ಅನುಭವಿಸಿದರೆ ಶರಣರ ಲಿಂಗಾಂಗ ಸಮರಸ ಸಹಜವಾಗಿ ದೊರಕುತ್ತದೆ ಅಲ್ಲವೇ? ಎನ್ನುವ ಡಾ. ಜಯಶ್ರೀ ದಂಡೆಯವರು ವಚನಕಾರರ ನೇರ ಪ್ರಭಾವಕ್ಕೆ ಒಳಗಾಗಿರುವುದು ಪ್ರತಿ ವಚನಗಳ ಅಂತರಂಗದಲ್ಲಿ ಕಾಣಿಸಿಕೊಳ್ಳುತ್ತದೆ ಎಂದಿದ್ದಾರೆ.[೧೫]

'ಕೆಂಡಮಲ್ಲಿಗೆ' ೨೦೧೬ರಲ್ಲಿ ಪ್ರಕಟವಾಗಿದ್ದು, ಇದರಲ್ಲಿ ೧೫೬ ವಚನಗಳಿವೆ. ವಚನಕಾರರೇ ಹೇಳುವಂತೆ ಈ ಸಂಕಲನವು ವಚನಗಳ ಸೃಷ್ಟಿಕಾರ್ಯದ ಮೂರನೇಯ ಹೆಜ್ಜೆ ಇವೆಲ್ಲ ಒಂದೊಂದು ಭಾವ, ವಿಷಯ, ತತ್ತ್ವ ಸಿದ್ಧಾಂತಗಳ ಅನಾವರಣ ಮಾಡಲು ಪ್ರಯತ್ನಿಸುತ್ತದೆ. 'ಹುಡುಕುತ್ತಿದ್ದೇನೆ ನನ್ನೊಳಗಿರುವ ಮನುಷ್ಯನನ್ನು' ಎನ್ನುವ ವಚನಕಾರ ಎನ್ನ-ದೇವನ ಒಳಗಿರುವ ಒಂದು ಎಳೆಯನ್ನು ಹುಡುಕುವ ನೆಲೆಯಿದೆ. ಪ್ರತಿಯೊಬ್ಬರಲ್ಲೂ ಭಗವಂತನ ಧೀಃಶಕ್ತಿ ಅಡಗಿದೆ ಅದನ್ನು ಹುಡುಕಬೇಕೆಂಬ ತುಡಿತವಿದೆ. ಬದುಕಿನ ಚಿತ್ರಣವನ್ನು, ಬೆಳಕನ್ನು ಕಾಣಬೇಕಾದ ವಿಚಾರವನ್ನು ಸಾವಿನ ಹಿಂದಿರುವ ಸತ್ಯವನ್ನು, ಬಾಳಿನ ಪಯಣವನ್ನು ಅರ್ಥವತ್ತಾಗಿ ಇಲ್ಲಿನ ವಚನಗಳು ನಿವೇದಿಸುತ್ತವೆ.

ಒಟ್ಟಿನಲ್ಲಿ ನಾಗೇಂದ್ರ ಮಸೂತಿಯವರು ಒಬ್ಬ ತತ್ವಜ್ಞಾನಿಯ ರೀತಿಯಲ್ಲಿ ವಚನಗಳನ್ನು ಬಹು ಮೌಲಿಕವಾಗಿ ತೂಗಿ ರಚಿಸಿದ್ದಾರೆ. ಅವರ ಅಂತರಂಗದ ಅದ್ಭುತ ಶಕ್ತಿ ದಾರ್ಶನಿಕತೆಯನ್ನು ಹೊರಹಾಕಿದೆ. ಬದುಕಿನ ಸತ್ಯವನ್ನು ಸಾರಿದೆ. ಲೋಕದ ಮಹಾಶರಣರ ಮಾತುಗಳಿಗೆ ಅರ್ಥ ಹೇಳುವಂತೆ, ಇವರ ವಚನಗಳು ರಚನೆಯಾಗಿವೆ. ಓದಿದಷ್ಟು ಹೊಸ ಹೊಸ ಆರ್ಥ ಸೂಸಬಹುದಾದ ಗುಣ ಅವರ ವಚನಗಳಿಗಿದೆ. ಕಲಬುರ್ಗಿಯ ಆಧುನಿಕ ವಚನಕಾರರಲ್ಲಿ ಇವರ ಹೆಸರು ಮುಂಚೂಣಿಯಲ್ಲಿ ನಿಲ್ಲುತ್ತದೆ. ಎನ್ನಬಹುದು.

**೪.೧೫ ವಿ.ಎಂ. ಬಡಗೇರರ 'ಗವಿಸಿದ್ಧೇಶ್ವರ ವಚನಗಳು' – ೨೦೧೦**

ವಿಜಯಕುಮಾರ ಬಡಿಗೇರ ಅವರು ಕಲಬುರ್ಗಿ ಜಿಲ್ಲೆಯ ಮಹತ್ವದ ವಚನಕಾರರು. ಇವರು ಕಲಬುರ್ಗಿ ಜಿಲ್ಲೆಯ ಕುಸನೂರ ಗ್ರಾಮದವರು. ೧೯೮೧ರ ಮೇ ೩೧ ರಂದು ಜನಿಸಿರುವ ವಿಜಯಕುಮಾರ ತಂದೆ ಮಹಾರುದ್ರಪ್ಪ. ತಾಯಿ ಸಿದ್ಧಮ್ಮ ಬಿ.ಎ. ಪದವೀಧರರಾಗಿರುವ ಇವರು ಪಿ.ಜಿ.ಡಿ.ಸಿ.ಎ. ಪದವಿ ಮುಗಿಸಿಕೊಂಡು ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಎರಡನೇಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಬಾಲ್ಯದಲ್ಲಿಯೇ ಕಾವ್ಯ ರಚನೆಗೆ ಕೈ ಹಾಕಿ, ಕಥೆ, ಲೇಖನ, ನಾಟಕ, ಕವನಗಳನ್ನು ಬರೆಯುತ್ತ ಬಂದರು. ನಂತರದಲ್ಲಿ ಆಧುನಿಕ ವಚನ ರಚನೆಗಳ ಕಡೆಗೆ ಮನಸ್ಸು ಮಾಡಿ ವಚನ ಸಂಕಲನವನ್ನು ತಂದಿದ್ದಾರೆ. ಡಾ. ಎಸ್.ಎಂ. ಹಿರೇಮಠರು ಅಭಿಪ್ರಾಯ ಪಟ್ಟಿರುವಂತೆ ವಿಜಯಕುಮಾರ ಎಂದರೆ ನಿರ್ದಿಷ್ಟವಾಗಿ ಬೇರೆಯವರು ಬರೆದ ಕನ್ನಡದ ಬರಹಗಳನ್ನು ಡಿ.ಟಿ.ಪಿ. ಮಾಡುವವ ಎಂದೇ ತಿಳಿದುಕೊಂಡಿದ್ದೆ. ವಿ.ಎಂ. ಬಡಿಗೇರ ಎಷ್ಟು ಸುಂದರವಾಗಿ ಡಿ.ಟಿ.ಪಿ. ಮಾಡಬಲ್ಲರೋ, ಅಷ್ಟೇ ಸುಂದರವಾಗಿ ಕವನಗಳನ್ನು ಬರೆಯಬಲ್ಲರು, ವಚನಗಳನ್ನು ಸೃಷ್ಟಿಸಬಲ್ಲರು. ಅವರು ಮರೆಯಲ್ಲಿ ಅಡಗಿಕೊಂಡಿರುವ "ಈ ಕವಿ" ಅಥವಾ "ವಚನಕಾರ"ನನ್ನು ಎಷ್ಟು ಜನರು ನೋಡಿದ್ದಾರೋ ಗೊತ್ತಿಲ್ಲ. ಸ್ಥಳೀಯ ಪರಿಸರದಲ್ಲಿ ಯಾವುದೇ ಸದ್ದು ಗದ್ದಲವಿಲ್ಲದಿದ್ದರೂ ವಿ.ಎಂ. ಬಡಗೇರ ರಚಿಸಿದ ಕವನಗಳು ಬೆಂಗಳೂರು, ಬೀದರ, ಶಿವಮೊಗ್ಗೆಯವರೆಗೂ ಪಯಣಿಸಿವೆ. ಅಲ್ಲಿನ ವಿದ್ವಜ್ಜನರಿಂದ, ಸಹೃದಯರಿಂದ ಪ್ರಶಸ್ತಿ-ಪುರಸ್ಕಾರಗಳನ್ನು ಪಡೆದುಕೊಂಡಿವೆ. ಹೀಗಿದ್ದರೂ ಅವರಿಗೆ ಕವನಗಳಾಗಲಿ, ವಚನಗಳನ್ನಾಗಲಿ ಪ್ರಕಟಿಸಬೇಕೆಂಬ ತರಾತುರಿಯಿಲ್ಲ. 'ನಾನು ಕವಿ, ವಚನಕಾರ'ನೆಂಬ ಗರ್ವವಿಲ್ಲ, ಈ ಗುಣಗಳೇ ಅವರನ್ನು ಮೌನಿಯಾಗಿಸಿ ಬರೆಯಲು ತೊಡಗಿವೆ[೧೬] ಎಂದಿದ್ದಾರೆ.

'ಶ್ರೀ ಗವಿಸಿದ್ಧೇಶ್ವರ' ಅಂಕಿತದಲ್ಲಿರುವ ವಚನಗಳು ಇಲ್ಲಿ ಒಟ್ಟು ೧೯೧ ಇವೆ. ಮಾತೃಭಕ್ತಿ, ಗುರುಭಕ್ತಿ, ಸಾಮಾಜಿಕ ಚಿಂತನೆ, ವಿಡಂಬನೆ, ನಶ್ವರತೆ, ಮೌಲ್ಯಪ್ರಜ್ಞೆ, ಶಿಕ್ಷಣ, ರಾಜಕೀಯ, ಕನ್ನಡ ನಾಡು, ನುಡಿ, ಪ್ರೇಮ

ಮುಂತಾದ ವಿಷಯಗಳ ವಿವೇಚನೆ ಇಲ್ಲಿಯ ವಚನಗಳಲ್ಲಿದೆ. ಕುಸುನೂರು ಗ್ರಾಮದ ಆರಾಧ್ಯದೈವ ಶ್ರೀ ಗವಿಸಿದ್ಧೇಶ್ವರರನ್ನೇ ವಚನಾಂಕಿತವಾಗಿರಿಸಿಕೊಂಡು ವಚನಗಳನ್ನು ರಚಿಸಲಾಗಿದೆ. ವಿಜಯಕುಮಾರ ಬಡಿಗೇರ ಅವರಿಗೆ ಬಸವಾದಿ ಶರಣರ ವಚನ ಪ್ರಜ್ಞೆ ಇದೆ ಎಂಬುದು ಹಾಗೂ ಆ ವಚನ ಪರಂಪರೆಯ ಪ್ರಭಾವ ದಟ್ಟವಾಗಿರುವುದನ್ನೂ ಇಲ್ಲಿ ಮನಗಾಣಬಹುದು.

ಇಂದಿನ ವಾಸ್ತವಿಕ ಚಿತ್ರಗಳೊಂದಿಗೆ ಓದುಗರನ್ನು ಸೆರೆಹಿಡಿಯುವ ಇಲ್ಲಿನ ವಚನಗಳು ದೃಶ್ಯಮಾಧ್ಯಮದ ಪ್ರಭಾವದಿಂದ ಮೂಡಿಬಂದಿವೆ. ಓದು, ಬರಹ, ಲೇಖನಗಳಿಂದ ಮುಕ್ತರಾಗುತ್ತಿರುವ ಇಂದಿನ ಜನಾಂಗದಲ್ಲಿ ಓದುವ ಆಸಕ್ತಿಯನ್ನು ಮೂಡಿಸುವ ನಿಟ್ಟಿನಲ್ಲಿ ಇಂಥ ವಚನಗಳು ಸಹಾಯಕಾರಿಯಾಗಬಹುದು. ತಮ್ಮ ಬಿಡುವಿಲ್ಲದ ಕೆಲಸಗಳ ಒತ್ತಡದಲ್ಲಿಯೂ ಈ ಬರೆಯುವ, ಓದುವ ಸಾಹಿತ್ಯಾಸಕ್ತಿಯನ್ನು ಮೈಗೂಡಿಸಿಕೊಮಡಿರುವ. ಎ.ಎಂ. ಬಡಿಗೇರರು ಅಭಿನಂದನಾರ್ಹರಾಗುತ್ತಾರೆ. ಇವರ ಅನೇಕ ವಚನಗಳು ವೈಯಕ್ತಿಕ ನೆಲೆಯಲ್ಲಿದ್ದರೂ. ಹಲವು ಸಾರ್ವತ್ರಿಕ ವಿಚಾರಗಳನ್ನು ಅರುಹುವಲ್ಲಿ ಯಶಸ್ವಿಯಾಗುತ್ತವೆ. ಕಲಬುರ್ಗಿಯ ಆಧುನಿಕ ವಚನ ಸಾಹಿತ್ಯಾಕಾಶದಲ್ಲಿ ಬಡಿಗೇರ ಕೂಡ ಒಂದು ಮಿನುಗುವ ನಕ್ಷತ್ರವಾಗಿದ್ದಾರೆ ಎನ್ನಬಹುದು.

**೪.೧೬ ವಿಶಾಲಾಕ್ಷಿ ಹಿರೇಮಠರ ವಚನಕೇತನ – ೨೦೧೦**

ಕಲಬುರ್ಗಿಯ ಸಗರನಾಡಿನ ಆಧುನಿಕ ವಚನಕಾರ್ತಿ ಶ್ರೀಮತಿ ವಿಶಾಲಾಕ್ಷಿ ಚನ್ನಬಸವ ಹಿರೇಮಠ ಅವರು ತುಮ್ಕೂರಿನ ಸೋಮಯ್ಯ ಹಾಗೂ ಮಾಣಿಕಮ್ಮರ ಉದರದಲ್ಲಿ ಜನಿಸಿದ ವಿಶಾಲಾಕ್ಷಿ, ಸೋದರಮಾವ ಚಂದ್ರಕಾಂತ ಕರದಳ್ಳಿಯವರ ಪರಿಸರದಲ್ಲಿಯೇ ಬೆಳೆದವಳು. ಖ್ಯಾತ ಮಕ್ಕಳ ಸಾಹಿತಿಗಳಾಗಿರುವ ಚಂದ್ರಕಾಂತ ಕರದಳ್ಳಿಯವರು ವಿಶಾಲಾಕ್ಷಿಯವರ ಬರಹಲೇಖನಗಳನ್ನು ತಿದ್ದುತ್ತಾ ಅವರನ್ನು ಬೆಳೆಸಿದರು.

ಬಾಲ್ಯದಿಂದಲೇ ಬಸವಾದಿ ಶರಣರ ವಚನಗಳನ್ನು ಓದುತ್ತ ಅವುಗಳ ದಟ್ಟವಾದ ಪ್ರಭಾವಕ್ಕೊಳಗಾಗುತ್ತ ಬೆಳೆದು ಬಂದಿರುವ ವಿಶಾಲಾಕ್ಷಿ ಹಿರೇಮಠರು ಪತಿ ಚನ್ನಬಸವ ಹಿರೇಮಠರ ಒತ್ತಾಸೆಯಿಂದಲೂ ಬರೆಯಲಾರಂಭಿಸಿದರು. ಅದರಲ್ಲೂ ಆಧುನಿಕ ವಚನಕಾರರಾದ ಶ್ರೀ ಸಿದ್ಧಯ್ಯ ಪುರಾಣಿಕರ 'ಕಾವ್ಯಾನಂದ' ಕಾವ್ಯನಾಮದ ವಚನೋಧ್ಯಾನ ಕೃತಿ ಓದಿದ ಮೇಲೆ ಅವುಗಳ ಅಚ್ಚಳಿಯದ ಪ್ರಭಾವದಿಂದ ಹೊಸ ಲೋಕವೊಂದು ಗೋಚರಿಸಿದಂತಾಗಿ ತಾವೂ ತಮಗನಿಸಿದಂತೆ ವಚನಗಳ ರಚನೆಗೆ ತೊಡಗಿದ್ದಾಗಿ ತಿಳಿಸುತ್ತಾರೆ.

'ವಿಶಾಲ ಪ್ರಿಯ ಚನ್ನಬಸವ' ಅಂಕಿತದಲ್ಲಿ ಅವರು ಬರೆದ ಹತ್ತಾರು ವಚನಗಳನ್ನು ಶಹಾಪುರ 'ಬಸವಮಾರ್ಗ'ದ ಸಂಪಾದಕರಾಗಿದ್ದ ಶ್ರೀ ಲಿಂಗಣ್ಣ ಸತ್ಯಂಪೇಟೆಯವರು ಪ್ರಕಟಿಸುತ್ತ ಇವರನ್ನು ಪ್ರೋತ್ಸಾಹಿಸಿದರು. ಅಂದಿನ ಕಾಲದ ವಚನಕಾರರು ತಮ್ಮ ವೈಯಕ್ತಿಕ ಅನುಭವದಿಂದ ವಚನ ರಚಿಸಿ, ಅನುಭವ ಮಂಟಪದಲ್ಲಿ ವಾಚಿಸಿ, ಸಮಾಜದಲ್ಲಿರುವ ಅಜ್ಞಾನ ಬಡಿದೋಡಿಸಿ ಜನರಿಗೆ ಸಮಾಜಕ್ಕೆ ಸತ್ಯದರ್ಶನ ಮಾಡಲು ವಚನಗಳ ಮೂಲಕ ತಿಳಿ ಹೇಳಿದರು. ವಚನ ವಿಚಾರವನ್ನು ಎಷ್ಟು ಕೇಳಿದರೂ, ಓದಿದರೂ ಕಡಿಮೆ. ರಾಜ, ಪ್ರಜೆ, ಭಕ್ತ–ಭಗವಂತ, ಕಾಯಕ–ಮೋಕ್ಷ, ಚರಿತ್ರೆ–ಪುರಾಣ ಮುಂತಾದ ಅಂತರ ಸಂಬಂಧಿ, ಬಹಿರಂಗ ಸಂಬಂಧಿ ವಿಷಯ ಇಂದಿಗೂ ಜೀವಂತ ವಿಷಯವಾಗಿ ವಚನೋಧ್ಯಾನದಲ್ಲಿ ಅಡಗಿದ್ದು, ಅಂದಿನಂತೆ ಇಂದು ಕೂಡಾ ಸತ್ಯವಾಗಿ ತೋರಿದ್ದು ತಮ್ಮನ್ನು ವಚನಗಳ ರೂಪದಲ್ಲಿ ಬರೆಯಲು ಪ್ರೇರೇಪಿಸಿದವು ಎಂದು ಹೇಳಿದ್ದಾರೆ.[೧೭]

ಆದರೂ ಅಂದಿನ ಸಮಾಜದ ನೆಲೆ ಬೇರೆಯೇ ಆಗಿದ್ದು, ಇಂದಿನ ಸಮಾಜದ ಸಮಸ್ಯೆಗಳೇ ಬೇರೆಯಾಗಿವೆ ಎಂಬ ಪ್ರಜ್ಞೆ ವಚನಕಾರ್ತಿಯಲ್ಲಿ ಸ್ಪಷ್ಟವಾಗಿವೆ.

ವಿಶಾಲಪ್ರಿಯ ಚನ್ನಬಸವ ಅಂಕಿತದಲ್ಲಿಯೇ ಅವರು ನೂರೊಂದು ವಚನಗಳನ್ನು ಬರೆದು 'ವಚನ ಕೇತನ' ಎಂಬ ಹೆಸರಿನಲ್ಲಿ ಪ್ರಕಟಗೊಳಿಸಿದ್ದಾರೆ. ಇಲ್ಲಿಯ ವಚನಗಳು ಹಲವು ಸಾಮಯಿಕ ಸಂದರ್ಭಗಳಲ್ಲಿ ಬರೆದ ವಚನಗಳಾಗಿವೆ. ಬದುಕಿನಲ್ಲಿ ವಿಶಾಲಾಕ್ಷಿ ಕಂಡುಂಡ ಹಾಗೂ ಕಂಡುಬರುವ ಸತ್ಯಗಳನ್ನೇ ತಮ್ಮ ಬರಹಕ್ಕೆ ವಸ್ತುವಾಗಿ ಬಳಸಿಕೊಂಡಿದ್ದಾರೆ.

ಭಾರತೀಯ ತತ್ವಜ್ಞಾನದ ಪರಂಪರೆಯಲ್ಲಿ ಆಲೋಚಿಸುವ ವಚನಕಾರ್ತಿ ಇಲ್ಲಿ ಶರಣ ಸಂಪ್ರದಾಯಕ್ಕೆ ವಿರೋಧವಾಗಿರುವ ಸಂಸಾರದ ವಿಚಾರಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ ಇಲ್ಲಿಯ ವಚನಗಳಲ್ಲಿ ಅನೇಕ ಸತ್ಯ ಸಂಗತಿಗಳು ಸರಳವಾದ ರೀತಿಯಲ್ಲಿ ಅಭಿವ್ಯಕ್ತಗೊಂಡಿವೆ ಇಲ್ಲಿಯ ವಚನಗಳಲ್ಲಿ ವಿಶಾಲಾಕ್ಷಿಯವರು ವಾಸ್ತವಿಕ ಸಂಗತಿಗಳನ್ನು ಹೊಸ ದಿಸೆಯಲ್ಲಿ ವೈಚಾರಿಕವಾಗಿ ಹೇಳಿರುವುದು ಗಮನಸೆಳೆಯುತ್ತದೆ. ಇವರ ಮಾತಿನಲ್ಲಿ ಪರಿವರ್ತನೆಯಾಗಬೇಕೆಂಬ ಆಶೆಯಿಂದ, ಸಜ್ಜನರ ಅನುಭಾವದ ಸಂಗದಿಂದ ಅದು ಸಾರ್ಥಕ ವಾಗಬೇಕೆಂಬ ಒಲವು ಹೆಚ್ಚಾಗಿರುವುದನ್ನು ಮನಗಾಣಬಹುದು.

**೪.೧೭ ಶಿವಕವಿ ಹಿರೇಮಠರ ಶಿವಕವೀಶನ ವಚನಗಳು – ೨೦೧೦**

ಶಿವಕವಿ ಹಿರೇಮಠರು ತತ್ವಪದಕಾರರಾಗಿ, ನಾಟಕಕಾರರಾಗಿ, ಪುರಾಣಿಕರಾಗಿ, ಪ್ರವಚನಕಾರರಾಗಿ, ಚರಿತ್ರೆಕಾರರಾಗಿ, ಆಧುನಿಕ ವಚನಕಾರರಾಗಿ ಪ್ರಸಿದ್ಧರಾಗಿದ್ದಾರೆ. ಸೃಜನಶೀಲ ವ್ಯಕ್ತಿಯಾಗಿರುವ ಶಿವಕವಿಯು ಬಹುಮುಖ ಪ್ರತಿಭೆಯುಳ್ಳವರು. ಅವರು ಕಲಬುರ್ಗಿ ಜಿಲ್ಲೆಯ ಜೋಗುರಿನ ಸುಸಂಸ್ಕೃತ ಮನೆತನದಲ್ಲಿ ೧೯೫೯ರ ಫೆಬ್ರುವರಿ ೦೪ ರಂದು ಜನಿಸಿದ್ದಾರೆ. ಅವರ ತಂದೆಯ ಹೆಸರು ಚಿತ್ರಶೇಖರಯ್ಯಾ ಹಿರೇಮಠ ತಾಯಿ ಗಂಗಮ್ಮನವರು, ಬಾಲ್ಯದಿಂದಲೇ ಪ್ರತಿಭಾನ್ವಿತರಾಗಿರುವ 'ಶಿವಕವಿ' ಕಲಬುರ್ಗಿಯಲ್ಲಿ ಶಿಕ್ಷಣ ಪಡೆದಿದ್ದಾರೆ. ಕಲಬುರ್ಗಿ ಜಿಲ್ಲೆಯ ಉತ್ತಮ ಸಾಹಿತಿಗಳಲ್ಲಿ ಇವರೂ ಒಬ್ಬರೆಂದು ಪರಿಗಣಿಸಲಾಗಿದೆ.

'ಶಿವಕವೀಶ' ಅಂಕಿತನಾಮದಲ್ಲಿ ಇವರು 'ಶಿವಕವೀಶನ ವಚನಗಳು' ಎಂಬ ಕೃತಿಯನ್ನು ೨೦೧೦ರಲ್ಲಿ ಪ್ರಕಟಿಸಿದ್ದಾರೆ. ವಸ್ತು ವೈವಧ್ಯತೆಯಿಂದ ಗಮನಸೆಳೆಯುವ ಇವರ ರಚನೆಗಳಲ್ಲಿ ಸಾಮಾಜಿಕ ಕಳಕಳಿಯನ್ನು ಕಾಣಬಹುದು. ಈ ಕೃತಿಯಲ್ಲಿ ೨೪೦ ವಚನಗಳಿವೆ. ಇವುಗಳಲ್ಲಿ ಭಕ್ತಿ, ಧರ್ಮ, ದೇವರು, ಆಧ್ಯಾತ್ಮವನ್ನು ಕುರಿತ ವಿಚಾರಗಳು ಹೆಚ್ಚಾಗಿವೆ. ಇದರೊಂದಿಗೆ ಸಮಕಾಲೀನ ಸಮಸ್ಯೆಗಳನ್ನು ಕುರಿತ ಸಂಗತಿಗಳ ಉಲ್ಲೇಖವೂ ಇವರ ವಚನಗಳಲ್ಲಿ ಕಾಣಸಿಗುತ್ತವೆ. ಎಂದು ಸಮಾಜಕ್ಕೆ ನೀತಿಯನ್ನು ಭೋದಿಸುತ್ತಾರೆ. ಸರ್ವಜ್ಞ, ಮುಪ್ಪಿನ ಷಡಕ್ಷರಿ, ಮಹಾಂತಶಿವಯೋಗಿಗಳು, ನಿಜಗುಣ ಶಿವಯೋಗಿ ಹಾಗೂ ಬಸವಾದಿ ವಚನಕಾರರ ವಚನ, ಹಾಡುಗಳ ಪ್ರಭಾವವು ಇವರ ಮೇಲೆ ದಟ್ಟವಾಗಿರುವುದನ್ನು ಗುರುತಿಸಬಹುದು. ದಾನ ಮಾಡುವ ಸಂಸ್ಕೃತಿ, ಒಳ್ಳೆಯ ಕಾರ್ಯ ಮಾಡುವ ಜೀವನ ಪದ್ಧತಿಯನ್ನು ಬೆಳೆಸಲು ಪ್ರಯತ್ನಿಸಿರುವ ಶಿವಕವಿ ಹಿರೇಮಠರು ಆ ಮೂಲಕ ಅಂಥವರಿಗೆ ಸಮಾಜದಲ್ಲಿ ದೊರೆಯಬಹುದಾದ ಕೀರ್ತಿಯನ್ನು ತಿಳಿಸುತ್ತಾರೆ. ಕ್ರಿಯಾಶೀಲ ಪ್ರವಚನಕಾರರಾಗಿರುವ ಹಿರೇಮಠರ ವಚನಗಳಲ್ಲಿ ಪ್ರವಚನದ ವಿಷಯಗಳ ನಿರೂಪಣೆಯೇ ಹೆಚ್ಚಾಗಿ ಕಾಣುತ್ತದೆ.

ತುಂಬಾ ಸರಳವಾಗಿ ಸಹಜವಾಗಿ ಸರಳ ಗದ್ಯದಲ್ಲಿ ಉಸಿರಿರುವ ಇವರ ವಚನಗಳು ಜನಸಾಮಾನ್ಯರಿಗೆ ಬಹುಬೇಗನೆ ಅರ್ಥವಾಗುತ್ತವೆ. ಜವಾಬ್ದಾರಿಯುತವಾದ ಸಮಾಜವನ್ನು ನಿರ್ಮಿಸುವಲ್ಲಿ ಅಕ್ಷರ ಜ್ಞಾನ

ಮಹತ್ವದ್ದಾಗುತ್ತದೆ. ಅದನ್ನು ಗುರುವಿನಿಂದ ರೂಪಿಸಿಕೊಳ್ಳಬೇಕೆಂಬ ಉತ್ತಮ ಸಲಹೆ ಇಲ್ಲಿದೆ. ಇದಕ್ಕಾಗಿ ಶಿಕ್ಷಕರೂ ಜವಾಬ್ದಾರಿಯಿಂದ ಮಕ್ಕಳನ್ನು ಬೆಳೆಸಬೇಕೆಂದು ಸಾರುತ್ತಾರೆ. ದೇಶದ ರಕ್ಷಕರು ಆರಕ್ಷಕರು, ಕನ್ನಡ ನಾಡು ನುಡಿ ಪ್ರೇಮವನ್ನು ಕುರಿತು ಇವರ ವಚನಗಳು ಮಾತನಾಡುತ್ತವೆ. ನೀತಿ ಬೋಧಕವಾದ ಅನೇಕ ಸಂಗತಿಗಳ ವಿಚಾರ ಇವರ ವಚನಗಳಲ್ಲಿದೆ. ನಾಟೀ ವೈದ್ಯ ಪದ್ಧತಿಯ ಬಗ್ಗೆಯೂ ಹಲವು ವಚನಗಳು ತಿಳಿಸುತ್ತವೆ. ದೇಶಿ ಔಷಧ ಶಕ್ತಿ ತಿಳಿಸುವ ಇವರ ವಚನಗಳು ಇಲ್ಲಿ ಪ್ರಮುಖವಾಗಿವೆ.

**೪.೧೮ ಮಹಾದೇವ ಬಡಿಗೇರ ಅವರ 'ಬದುಕಿನ ವಚನಗಳು' ೨೦೧೩**

ಕಲಬುರ್ಗಿ ಜಿಲ್ಲೆಯ ಉತ್ತಮ ಆಧುನಿಕ ವಚನಕಾರರಲ್ಲಿ ಒಬ್ಬರೆನಿಸಿರುವ ಮಹಾದೇವ ಬಡಿಗೇರ ಅವರು ಜೇವರ್ಗಿಯ ಸರಕಾರಿ ಪದವೀ ಕಾಲೇಜಿನಲ್ಲಿ ಅಧ್ಯಾಪಕರು. ಕಲಬುರ್ಗಿ ನಿವಾಸಿಯಾಗಿರುವ ಇವರ ಪ್ರಾಥಮಿಕ ಶಿಕ್ಷಣ ಭತಗುಣಕಿ, ಪದವೀ ಶಿಕ್ಷಣ ಇಂಡಿಯಲ್ಲಿ ಹಾಗೂ ಸ್ನಾತಕೋತ್ತರ ಪದವಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಮುಗಿದಿದೆ. ಕಲಬುರ್ಗಿ ವಿಶ್ವವಿದ್ಯಾಲಯದಿಂದ ಪಿಹೆಚ್.ಡಿ. ಪದವಿ ಪಡೆದಿರುವ ಮಹಾದೇವ ಬಡಿಗೇರ ಒಬ್ಬ ಶ್ರೇಷ್ಠ ಲೇಖಕರಾಗಿದ್ದಾರೆ.

ಈಗಾಗಲೇ 'ದೀನಬಂಧು, ಹಾವಿನಾಳ ಕಲ್ಲಯ್ಯ, ಬದುಕಿನ ವಚನಗಳು, ಪ್ರಬಂಧ ಸಾಹಿತ್ಯ, ಅಪೂರ್ವ ಸನ್ಯಾಸಿ ಮೊದಲಾದ ಕೃತಿಗಳನ್ನು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ನೀಡಿದ್ದಾರೆ. ಆಕಾಶವಾಣಿ ಕಲಬುರ್ಗಿ ಕೇಂದ್ರದಿಂದ ಚಿಂತನ, ಪುಸ್ತಕ ವಿಮರ್ಶೆ ಹಾಗೂ ಅವರ ನಾಟಕಗಳು ಪ್ರಸಾರವಾಗಿವೆ. ತಮ್ಮ ಮಹತ್ವದ ಕೆಲವು ಸಂಶೋಧನಾತ್ಮಕ ಲೇಖನಗಳನ್ನು ವಿವಿಧ ಕನ್ನಡ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ತಮ್ಮ ಸಾಹಿತ್ಯ ಸೇವೆಗಾಗಿ 'ಚೈತನ್ಯ ಪ್ರಭು', 'ಸಾಹಿತ್ಯ ಪ್ರಶಸ್ತಿ'ಗಳನ್ನು ಪಡೆದಿದ್ದಾರೆ. ಅವರೋರ್ವ ಆಧುನಿಕ ವಚನಕಾರರಾಗಿ ಗುರುತಿಸಿಕೊಂಡಿದಿದ್ದಾರೆ.

'ಪ್ರಭು' ಅಂಕಿತನಾಮದಲ್ಲಿರುವ ಮಹಾದೇವ ಬಡಿಗೇರರ ೨೫೧ ವಚನಗಳು 'ಬದುಕಿನ ವಚನಗಳು' ಎಂದು ೨೦೧೩ರಲ್ಲಿ ಪ್ರಕಟವಾಗಿವೆ. ಇಲ್ಲಿಯ ಹೆಚ್ಚಿನ ವಚನಗಳು ಸರಳತೆ, ಸೂಕ್ಷ್ಮತೆ ಮತ್ತು ಧ್ವನಿ ರಮ್ಯತೆಯಿಂದ ಕೂಡಿವೆ. ಅಂದರೆ ಮೊದಲನೇಯ ಓದಿನಲ್ಲಿ ಸರಳವಾಗಿ ಕಾಣುವ ವಚನಗಳು, ಎರಡನೇಯ ಸಲ ಓದಿದಾಗ ತಮ್ಮ ಸೂಕ್ಷ್ಮತೆಯನ್ನು ತಿಳಿಸುತ್ತವೆ. ಹಾಗೆಯೇ ಇನ್ನೂ ಸ್ವಲ್ಪ ಆಳವಾಗಿ ಓದಲು ಪ್ರಾರಂಭಿಸಿದರೆ ಅವು ಧ್ವನಿ ರಮ್ಯತೆಯಿಂದ ಕೂಡಿರುವುದು ಗೊತ್ತಾಗುತ್ತದೆ.

ಶರಣರ ತತ್ವ ಸಿದ್ಧಾಂತಗಳಿಂದ ಮತ್ತು ಇತರ ಮಹಾಪುರುಷರ ವಿಚಾರಗಳಿಂದ ಹಾಗೂ ಸ್ವಾನುಭವದಿಂದ ಪ್ರೇರಿತರಾಗಿ ಮಹಾದೇವ ಬಡಿಗೇರ ವಚನಗಳನ್ನು ಬರೆದದ್ದು ತಿಳಿದು ಬರುತ್ತದೆ. "ಅವರ ವಚನಗಳಲ್ಲಿ ಆಧುನಿಕ ಬದುಕಿನ ಸಂಕೀರ್ಣತೆ ಇದೆ. ಪ್ರಾಪಂಚಿಕ ಅನುಭವದೊಂದಿಗೆ ಪಾರಮಾರ್ಥಿಕ ಅನುಭವವಿದೆ. ಶಿಕ್ಷಣ, ಸಂಸ್ಕೃತಿ, ಸಮಾಜ, ಆಧ್ಯಾತ್ಮ, ಧರ್ಮ, ಜಾತಿ, ಮುಂತಾದ ವಸ್ತು ವೈವಿಧ್ಯವಿವೆ. ಭಾವದ ತೀಕ್ಷ್ಣತೆಯಿದೆ. ಅನುಭವವಿದೆ, ಅನುಭಾವವಿದೆ, ವ್ಯಂಗ್ಯ ವಿಡಂಬನೆಗಳಿವೆ."[೧೮] ಎಂಬುದು ಗಮನಾರ್ಹ.

ಒಟ್ಟಿನಲ್ಲಿ ಸಮಕಾಲೀನ ಭಾಷೆ, ಭಾವ, ನುಡಿಗಟ್ಟು ಪ್ರತಿಮೆ, ಸಂಕೇತಗಳಿಂದ ನೇರನುಡಿ, ಸರಳ ಶೈಲಿಯಿಂದ ಸಹೃದಯರನ್ನು ಸೆಳೆಯುತ್ತವೆ. ಚಿಂತನೆಗೆ ನೆಲೆ ಒದಗಿಸುತ್ತವೆ. ಅವು ಹೆಸರಿಗೆ ತಕ್ಕಂತೆ ಬದುಕಿನ ವಚನಗಳಾಗಿವೆ.

**೪.೧೯ ಬಸವರಾಜ ಸಬರದ ಅವರ – ಸಬರದ ಬಸವನ ವಚನಗಳು – ೨೦೧೫**

೧೯೭೬ರ 'ಹೋರಾಟ' ಕವನ ಸಂಕಲನದ ಮೂಲಕ ಸಾಹಿತ್ಯ ಕ್ಷೇತ್ರದಲ್ಲಿ ಕಾಲಿರಿಸಿದ ಬಸವರಾಜ ಸಬರದ ಅವರು ಕನ್ನಡ ನಾಡು ಕಂಡ ಅಪರೂಪದ ಲೇಖಕ. ಕವಿ, ಕಥೆಗಾರ, ನಾಟಕಕಾರ, ವಿಮರ್ಶಕ, ಸಂಶೋಧಕ, ಜಾನಪದ ವಿದ್ವಾಂಸ, ಬಂಡಾಯ ಕವಿ ಎಂದು ಪ್ರಸಿದ್ಧರಾಗಿದ್ದಾರೆ. ಕೊಪ್ಪಳ ಜಿಲ್ಲೆಯ ಕುಕನೂರಿನಲ್ಲಿ ಜನಿಸಿ, ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಎ., ಮುಗಿಸಿ, ಗುಲಬರ್ಗಾ ವಿಶ್ವವಿದ್ಯಾಲಯದಿಂದ ಪಿಹೆಚ್.ಡಿ. ಪದವಿ ಪಡೆದಿದ್ದಾರೆ.

ತಾಳಿಕೋಟೆ, ಔರಾದ, ಬೀದರಗಳ ಕಾಲೇಜುಗಳಲ್ಲಿ ಕನ್ನಡ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ನಂತರ ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಯನ ಸಂಸ್ಥೆಯಲ್ಲಿ ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ, ವಿಭಾಗದ ಮುಖ್ಯಸ್ಥರಾಗಿ, ಪ್ರಸಾರಾಂಗದ ನಿರ್ದೇಶಕರಾಗಿ, ಕಲಾನಿಕಾಯದ ಡೀನ್ ಆಗಿ, ಸಿಂಡಿಕೇಟ್ ಸದಸ್ಯರಾಗಿ ಸೇವೆ ಸಲ್ಲಿಸಿದ ಹೆಗ್ಗಳಿಕೆ ಇವರದು. ಈಗ ನಿವೃತ್ತರಾಗಿ ಕಲಬುರ್ಗಿಯಲ್ಲಿ ವಿಶ್ರಾಂತ ಜೀವನವನ್ನು ನಡೆಸುತ್ತಿದ್ದಾರೆ.

ಬಸವರಾಜ ಸಬರದ ಅವರ ಸಾಹಿತ್ಯಿಕ ಹರವು ಅಪಾರವಾಗಿದೆ. ಆಡು ಮುಟ್ಟದ ಗಿಡವಿಲ್ಲ. ಬಸವರಾಜ ಸಬರದ ಅವರು ಬರೆಯದ ಸಾಹಿತ್ಯವಿಲ್ಲ ಎಂಬ ಮಾತು ಪ್ರಚಾರದಲ್ಲಿದೆ. ಅವರು ಸಂಪಾದಿಸಿದ

ಪುಸ್ತಕಗಳನ್ನು ಬಿಟ್ಟು ಹೇಳುವುದಾದರೆ, ಕಾವ್ಯಗಳು: ಹೋರಾಟ, ನನ್ನವರ ಹಾಡು, ಮೂಡಲಕೆ ಕೆಂಪು ಮೂಡ್ಯಾವ, ನೂರು ಹನಿಗಳು, ದನಿಯೆತ್ತಿ ಹಾಡೇನ, ಬೆಳದಿಂಗಳು ಬಿಸಿಲಾಯ್ತು, ಪದಕಟ್ಟಿ ಹಾಡೆನ, ಗುಬ್ಬಿಯೊಂದು ಗೂಡು ಕಟ್ಯಾದೋ ಮೊದಲಾದ ೧೩ ಕಾವ್ಯ ಸಂಕಲನಗಳು ಪ್ರಕಟವಾಗಿವೆ. ಪ್ರತಿರೂಪ, ನರಬಲಿ, ಬೆಳ್ಳಕ್ಕಿ ಸಾಲು, ಮೂರು ಬೀದಿ ನಾಟಕಗಳು, ಸಬರದ ನಾಟಕಗಳು, ಮೊದಲಾದ ೧೦ ನಾಟಕಗಳು, ೦೮ ವಿಚಾರ ಸಾಹಿತ್ಯ ಕೃತಿಗಳು, ೨೧ ವಚನ ಸಾಹಿತ್ಯ ಕೃತಿಗಳು, ಜನಪದ ಸಾಹಿತ್ಯ ಕುರಿತ ೦೮ ಪುಸ್ತಕಗಳು, ೫ ತತ್ವಪದ ಸಾಹಿತ್ಯಗಳು, ೧೦ ಆಧುನಿಕ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳು, ೩ ಸಂಕೀರ್ಣ ಕೃತಿಗಳು, ಸ್ವತಂತ್ರ ಸಂಪಾದನೆಯ ೨೩ ಕೃತಿಗಳು ಪ್ರಕಟವಾಗಿವೆ. ಒಟ್ಟು ಅವರ ಕೃತಿಗಳ ಸಂಖ್ಯೆ ೧೦೧ ಇದು ೨೦೧೫ರ ವರಗೆಗೆ ಮಾತ್ರ. ಇದರೊಂದಿಗೆ 'ಸಬರದ ಬಸವನ ವಚನಗಳು' ಎಂಬ ಆಧುನಿಕ ವಚನಗಳನ್ನು ಅವರು ರಚಿಸಿದ್ದಾರೆ. ಈಗಾಗಲೆ ಅವರು ಸಾಹಿತ್ಯ ಸೇವೆಗಾಗಿ 'ಜಾನಪದ ಅಕ್ಯಾಡೆಮಿ', 'ಕನ್ನಡ ಸಾಹಿತ್ಯ ಪರಿಷತ್ತು', 'ಕರ್ನಾಟನ ನಾಟಕ ಅಕಾಡೆಮಿ', 'ದೇವಬಹದ್ದೂರ', 'ರತ್ನಾಕರ ವರ್ಣಿ' ಮೊದಲಾದ ೪೦ಕ್ಕಿಂತ ಹೆಚ್ಚು ಪ್ರಶಸ್ತಿಗಳನ್ನು ಪಡೆದಿದ್ದಾರೆ.

'ಸಬರದ ಬಸವ' ಅಂಕಿತನಾಮದಲ್ಲಿ ಅವರು ಬರೆದಿರುವ ೨೦೮ ವಚನಗಳು 'ಸಬರದ ಬಸವನ ವಚನಗಳು' ಎಂಬ ಹೆಸರಿನಲ್ಲಿ ಪ್ರಕಟವಾಗಿವೆ. ೨೦೧೫ರಲ್ಲಿ ಪ್ರಕಟವಾಗಿರುವ ಈ ಕೃತಿಯಲ್ಲಿ ಮುಖ್ಯವಾದ ೩ ಭಾಗಗಳನ್ನು ಮಾಡಿಕೊಳ್ಳಲಾಗಿದೆ. ೧) ಸಮಾಲೋಚನೆಯ ನುಡಿ, ೨) ಸಾಮಾಜಿಕ ವಚನಗಳು, ೩) ಬೆರಗಿನ ವಚನಗಳು. ಮೊದಲನೇಯ ಭಾಗದಲ್ಲಿ ೭೦ ವಚನಗಳು, ಎರಡನೇಯ ಭಾಗದಲ್ಲಿ ೧೦೦ ವಚನಗಳು, ಮೂರನೇಯ ಭಾಗ ಬೆರಗಿನಲ್ಲಿ ೩೮ ವಚನಗಳಿವೆ.

ಇಲ್ಲಿಯ "ವಚನಗಳಲ್ಲಿ ಮಾತು ಮಾಗಿದೆ. ವಾಗರ್ಥ ತೂಗಿದೆ. ಧ್ವನಿ ಬಾಗಿದೆ, ವೈಚಾರಿಕತೆ ಅನನ್ಯವಾಗಿ ಸರಿತೆಯ ಹಾಗೆ ಸಾಕಿದೆ. ನಿಸರ್ಗದ ನಿಯತಿಗಳನ್ನು ಅರಿತುಕೊಳ್ಳುವ ಪ್ರಯತ್ನವಿದೆ ಎಂಬುದನ್ನು ತಿಳಿಸಲಾಗಿದೆ."[೧೯]

೧೨ನೆಯ ಶತಮಾನದ ವಚನಕಾರರ ಅಭಿವ್ಯಕ್ತಿಯ ಮೊನಚು, ಶಿವಶರಣರ ಅನುಭಾವದ ಕೆನೆ, ಆ ಕಾಲದ ಶರಣರ ವಚನಗಳ ಆಶಯದ ನೆಲೆಗಳೆಲ್ಲ ಈ ವಚನದಲ್ಲಿ ಹಾಡಾಗಿ ಹರಿದಿವೆ. ಶರಣರ ವಚನಗಳು ಕನ್ನಡದ ನೆಲದ, ಜಲದ, ಸಕಲ ಚರಾಚರದ ಸತ್ವಪೂರ್ಣ ಕಾವ್ಯದ ಅವತರಣ, ಅಲ್ಲಿ ಭಕ್ತಿಯಿದೆ, ನುಡಿಯ ಶಕ್ತಿ ಇದೆ, ಶರಣರ ವ್ಯಕ್ತಿತ್ವದ ಅಪೂರ್ವ ಅನುಭಾವವಿದೆ. ಧರ್ಮ, ಕಾವ್ಯಧರ್ಮ, ಭಾಷೆಯ ಸಂಪತ್ತು, ಬೆಡಗು, ಬೆರಗು ಎಲ್ಲೂ ಅಲ್ಲಿ ಕೆನೆಗಟ್ಟಿವೆ. ಅಂಥ ಹಿರಿಯ ಕಾವ್ಯ ಪರಂಪರೆಯನ್ನು ಅಧ್ಯಾಯನ ಮಾಡಿದವರು ಡಾ. ಬಸವರಾಜ ಸಬರದ ಅವರು. ಶರಣರ ವಚನಗಳನ್ನು ಚೆನ್ನಾಗಿ ಅಧ್ಯಾಯನ ಮಾಡಿರುವುದರಿಂದ, ವಿದ್ಯಾರ್ಥಿಗಳಿಗೆ ಮನಮುಟ್ಟುವ ಹಾಗೆ ಪಾಠ ಮಾಡುವುದರಿಂದ, ಅಲ್ಲಿ ಇಲ್ಲಿ ಗೋಷ್ಠಿಗಳಲ್ಲಿ ವಿಚಾರ ಸಂಕಿರಣಗಳಲ್ಲಿ ವಚನ ವಾಙ್ಮಯದ ಬಗ್ಗೆ ಮಾತನಾಡಿರುವುದರಿಂದ ಇಡೀ ವಚನ ಸಾಹಿತ್ಯದ ಬಗ್ಗೆ ಅವರಲ್ಲಿ ಸಾಕಷ್ಟು ಮಾಹಿತಿಯಿದೆ. ಆ ವಚನ ರಚನೆ ಆಶಯ, ಅಭಿವ್ಯಕ್ತಿಯ ಗೊತ್ತು ಗುರಿಗಳೆಲ್ಲ ಅವರಿಗೆ ಅರಿವಿರುವುದರ ಜೊತೆಗೆ ಸಾಮಾಜಿಕ ಪ್ರಜ್ಞೆ, ವಾಸ್ತವದ ಅರಿವು ಅವರಿಗೆ ಸಾಕಷ್ಟಿರುವುದರಿಂದ ಇಂಥ ವಚನ ರಚನೆಗಳು ಅವರಿಗೆ ಸಾಧ್ಯವಾಗಿದೆ ಎನ್ನಬಹುದು.

'ಸಬರದ ಬಸವ' ಎಂಬುದು ಯಾವ ದೇವರಿಗೂ ಸಂಬಂಧಿಸಿದ್ದಲ್ಲ; ಅದು ಕೇವಲ ಅವರ ಹೆಸರು ಮಾತ್ರ. ವಚನವನ್ನು ಒಂದು ಸಾಹಿತ್ಯ ಪ್ರಕಾರವಾಗಿ ಮುಂದುವರೆಸಲು ಬಯಸಿರುವ ಇವರ ಶ್ರಮ ಇಲ್ಲಿ ಸಾರ್ಥಕವಾಗಿದೆ ಎನಿಸುತ್ತದೆ. ಬದುಕಿನಲ್ಲಿಯ ವೈರುಧ್ಯಗಳನ್ನು ಪಟ್ಟಿಮಾಡಿ ತುಲನೆ ಮಾಡಿಒಂದು ತಾರ್ಕಿಕ ತೀರ್ಮಾನಕ್ಕೆ ಬರುವ ಪರಿ ಇಲ್ಲಿ ಮನನೀಯವಾಗುತ್ತದೆ.

ಇಲ್ಲಿಯ ವಚನಕಾರ ಒಬ್ಬ ಶ್ರೇಷ್ಠ ಕವಿಯಾಗಿರುವುದರಿಂದ ನವಯುಗದ ಈ ಕವಿ, ಮನುಷ್ಯನ ಗುಣಗಳನ್ನು ತೀಕ್ಷ್ಣವಾಗಿ ಒರೆಗೆ ಹಚ್ಚಿ ನೋಡುವ ಬುದ್ಧಿಯುಳ್ಳವನಾಗಿದ್ದಾನೆ. ಇಲ್ಲಿನ ವಚನಗಳಲ್ಲಿ ತತ್ವ ಇದೆ, ಭಾಷೆಯ ಸೌಂದರ್ಯವಿದೆ, ಭಾವದ ಬಂಧುರತೆಯಿದೆ. ಎಲ್ಲಕ್ಕಿಂತ ಹೆಚ್ಚಾಗಿ ಸಮಾಜಮುಖಿ ಚಿಂತನೆಯಿದೆ. ಹೊಸ ಅನ್ವೇಷಣೆಯ ದೃಷ್ಟಿಕೋನವನ್ನು ಸಬರದರ ವಚನಗಳಲ್ಲಿ ಮನಗಾಣಬಹುದು. ಆಧುನಿಕ ವಚನ ಸಾಹಿತ್ಯದಲ್ಲಿ ಕಾವ್ಯಮಯವಾದ ಒಂದು ಹೊಸತನವನ್ನು ಅವರು ತಂದು ತೋರಿಸಿದ್ದಾರೆ ಎನ್ನಬಹುದು.

**೪.೨೦ ಸೂಗಯ್ಯ ಹಿರೇಮಠರ ಸೂಗೂರೇಶ್ವರ ವಚನಗಳು – ೨೦೧೫**

ಸೂಗಯ್ಯ ಹಿರೇಮಠರು ಕಲಬುರ್ಗಿ ಜಿಲ್ಲೆಯ ಮಹತ್ವದ ಕವಿ. ಸಗರ ನಾಡಿನ ಶಹಾಪುರ ತಾಲೂಕಿನ ಸಿಂಗನಹಳ್ಳಿಯಲ್ಲಿ ಜನಿಸಿದ ಇವರು ಕಲಬುರ್ಗಿ ನಿವಾಸಿಯಾಗಿದ್ದಾರೆ. ೧೯೫೦ರ ಮೇ ತಿಂಗಳ ೯ ರಂದು ಜನಿಸಿದ ಇವರ ತಂದೆ ಶರಣಯ್ಯ, ತಾಯಿ ಶಾಂತಮ್ಮನವರು. ಸುಸಂಸ್ಕೃತ ಮನೆತನದ ಶಿಸ್ತು ಬದ್ಧ ಜೀವನದಲ್ಲಿ ತಮ್ಮ ಬಾಲ್ಯವನ್ನು ಕಳೆದ ಇವರು, ಜಾನಪದ ವಾತಾವರಣದಲ್ಲಿಯೇ ಬೆಳೆದಿದ್ದಾರೆ. ಅಜ್ಜಿ ಹೇಳಿದ ಕಥೆ, ಜನಪದ ಹಾಡು, ಊರಲ್ಲಿಯ ದೊಡ್ಡಾಟದ ದಟ್ಟ ಪ್ರಭಾವದಿಂದ ಪ್ರೋತ್ಸಾಹಿತರಾಗಿದ್ದಾರೆ.

ತಮ್ಮ ಊರು, ಸುರಪುರ, ಕಲಬುರ್ಗಿಯಲ್ಲಿ ಶಿಕ್ಷಣಪಡೆದ ಇವರು ಗುಲಬರ್ಗಾ ವಿಶ್ವವಿದ್ಯಾಲಯದಿಂದ ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆದು, ಹೈದ್ರಾಬಾದ ಶಿಕ್ಷಣ ಸಂಸ್ಥೆಯಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆಗೆ ಸೇರಿ, ಪ್ರಾಚಾರ್ಯರಾಗಿ, ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ. ವಿದ್ಯಾರ್ಥಿ ಜೀವನದಲ್ಲಿಯೇ ಸಮಾಜವಾದಿ ಸಂಘಟನೆಯಲ್ಲಿ ಸೇರಿಕೊಂಡು ಜಿಲ್ಲಾ ಸಂಚಾಲಕರಾಗಿ ಕಾರ್ಯ ಮಾಡಿದರು. ಆಗಿನಿಂದ ಜನಪರ ಕಾಳಜಿಯ ವಿಚಾರಗಳನ್ನು ಮೈಗೂಡಿಸಿಕೊಂಡು ಬೆಳೆದರು. ಸಮುದಾಯ ಜಾಥಾ, ರೈತಪರ

ಹೋರಟ, ಭಾಷಾ ಚಳುವಳಿ, ವಿಶ್ವವಿದ್ಯಾಲಯದಲ್ಲಿ ಲಾಂಛನ ಹೋರಾಟ ಮುಂತಾದ ಕಾರ್ಯಕ್ರಮಗಳಲ್ಲಿ ಸಕ್ರೀಯವಾಗಿ ಭಾಗವಹಿಸಿದರು. ಹೀಗಾಗಿ ಜೀವನವೇ ಹೋರಾಟ, ಹೋರಾಟವೇ ಜೀವನವೆಂದು ಬಾಳಿದವರು ಇವರು.

ಮೊದಲು ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಸಹಾಯಕ ಸಂಶೋಧಕರಾಗಿ ಸೇರಿಕೊಂಡರು. ೧೯೮೪ ರಿಂದ ಇವರ ಸಾಹಿತ್ಯಿಕ ಚಟುವಟಿಕೆಗಳು ಪ್ರಕಟವಾಗತೊಡಗಿದವು. ಉಂಡು ಮಲಗಿದವರು (೧೯೮೪) ಕವನ ಸಂಕಲನದಿಂದ ಆರಂಭಗೊಂಡ ಇವರ ಸಾಹಿತ್ಯ 'ಜನಪದ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು' ಅಂತರ (ಕಥಾಸಂಕಲನ) ನೀರು ನೆಲೆ (ಕವನ ಸಂಕಲನ) ಉರಿಲಿಂಗ ಪೆದ್ದಿ (ಜೀವನ ಚರಿತ್ರೆ) ಹುಳಗಳು (ಕಥಾ ಸಂಕಲನ) ರಂಜೇರಿ ಸಿಂಧರು (ಸಂಶೋಧನೆ) ಜನಪದ ವೈದ್ಯ ಪದ್ಧತಿ, ಕಿನ್ನರಿ ಬೊಮ್ಮಯ್ಯ, ಮಳೆಬಂತು ಮಳೆ (ಶಿಶು ಪ್ರಾಸಗಳು) ಬೇವು ಕಚ್ಚಿದ ಬಾಯಿ (ಕಥಾ ಸಂಕಲನ) ಹೇಮರಡ್ಡಿ ಮಲ್ಲಮ್ಮ (ಚರಿತ್ರೆ) ಚಿಂತನ ಲೇಖನಗಳು ಐದು ಬೀದಿ ನಾಟಕಗಳು, ಅಂಬಿಗರ ಚೌಡಯ್ಯನ ವಚನಗಳು (ವಿಮರ್ಶೆ) ಹೀಗೆ ಸುಮಾರು ೪೦ ಕ್ಕಿಂತ ಹೆಚ್ಚು ಕೃತಿಗಳನ್ನು ಇವರು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಹಾಗೆಯೇ 'ಸೂಗೂರೇಶ್ವರ ವಚನಗಳು' ಎಂಬ ಆಧುನಿಕ ವಚನಗಳನ್ನು ಇವರು ರಚಿಸಿದ್ದಾರೆ.

'ಸೂಗೂರೇಶ್ವರ' ಅಂಕಿತದಲ್ಲಿ ವಚನಗಳನ್ನು ರಚಿಸಿರುವ ಸೂಗಯ್ಯ ಹಿರೇಮಠರು ತಮ್ಮ ವಿದ್ವತ್ತಿಗೆ ಸಜ್ಜನಿಕೆಗೆ ಹೆಸರಾಗಿದ್ದಾರೆ. ೨೦೧೫ರಲ್ಲಿ ಪ್ರಕಟವಾಗಿರುವ ಅವರ 'ಸೂಗೂರೇಶ್ವರ ವಚನಗಳು' ಕೃತಿಯಲ್ಲಿ ೨೫೦ ಮತ್ತು ೫೭ ವೈಜ್ಞಾನಿಕ ವಚನಗಳಿವೆ. ಮೊದಲ ಭಾಗದಲ್ಲಿ ಶಿಕ್ಷಣ, ಬದುಕು, ಬಡತನ, ನಡತೆ, ಕರ್ತವ್ಯ, ಸುದ್ಧಿ, ಮಾನವನ ಹಕ್ಕುಗಳು, ಮಾನವತೆ, ಸಾಹಿತ್ಯ ರೈತರ ಭವಣೆ ಹೀಗೆ ಎಂದು ಗುರುತಿಸಲಾರದಷ್ಟು ಅನೇಕ ವಿಷಯಗಳು ಈ ವಚನಗಳ ವಸ್ತುಗಳಾಗಿವೆ.

ಹಾಗೆಯೇ ಭಾಗ ೧ರ ವಚನಗಳಲ್ಲಿ ಕಲಿಕೆ, ಜನನಾಯಕರು ಬಂಡಾಯಗಾರ, ರೇಟು, ವೇಷಗಾರರು, ವಿದ್ಯಾಕೇಂದ್ರ, ಜಾತ್ರೆ–ಯಾತ್ರೆ, ಕರ್ತವ್ಯ, ಸುದ್ದಿ,, ಜಾತಿ, ಔಷಧ, ಹಣ, ತಿನ್ನುವ ದೇವರು, ಮಾಧ್ಯಮಗಳು, ಹಕ್ಕುಗಳು, ನುಂಗಣ್ಣರು, ನ್ಯಾಯ, ಮಾಲ್, ಹಾಜರಾತಿ, ಸುಲಿಗೆ ಮೊದಲಾದ ವಿಷಯಗಳ ಕುರಿತು ವಿವೇಚನೆಗಳಿವೆ.

ಭಾಗ ೨ ರಲ್ಲಿ ಅವರು ಇಂದಿನ ಪ್ರಪಂಚದ ವೈಜ್ಞಾನಿಕ ತಂತ್ರಜ್ಞಾನ ಕ್ಷೇತ್ರದಲ್ಲಿ ನಡೆಯುತ್ತಿರುವ ಅಭಿವೃದ್ಧಿಯ ಬಗ್ಗೆ ಪ್ರಶಂಸಿದ್ದಾರೆ. ಸೂಗಯ್ಯ ಹಿರೇಮಠ ಈ ವಚನ ಸಂಕಲನ ಕಲಬುರ್ಗಿ ಜಿಲ್ಲೆಗೆ ಒಂದು ಮಾದರಿ ಬಂಡಾಯ ಕಾವ್ಯದಂತಿದೆ ಎನ್ನಬಹುದು.

'ಸೂಗಯ್ಯನವರು ವಚನಗಳನ್ನು ನೋಡುವ ದೃಷ್ಟಿ, ಅವುಗಳನ್ನು ಕಟ್ಟುವ ರೀತಿ, ಒಂದಕ್ಕೊಂದು ಪೂರಕವಾದುದು. ಕಾಲದ ಘಟನೆ, ವಿದ್ಯಮಾನಗಳನ್ನು ವಚನಗಳಲ್ಲಿ ಚಿಂತನೆಯ ಧಾರೆಯಾಗಿ ಹರಿಯ ಮೂಡಿಸುವುದು ಒಂದು ಕಲೆಗಾರಿಕೆ. ಈ ಕಲೆಗಾರಿಕೆಯ ಎಲ್ಲ ಲಕ್ಷಣಗಳನ್ನು ಸೂಗೂರೇಶ್ವರ ವಚನದಲ್ಲಿ ಕಾಣುತ್ತೇವೆ. ಹಿರೇಮಠರ ವಚನಗಳನ್ನು ಕೇವಲ ಸರಕುಗಳಾಗಿ ಸಂಕಲನದಲ್ಲಿ ತುಂಬುತ್ತ ಹೋಗುವುದಿಲ್ಲ. ಅವುಗಳಲ್ಲಿ ಜ್ಞಾನ, ವಿಜ್ಞಾನ, ವೈಚಾರಿಕತೆ, ಮಾನವತೆಯನ್ನು ದರ್ಶಿಸುತ್ತಾರೆ. ಇವು ಸಾಮಾನ್ಯರ ಧ್ವನಿಯಾಗಿ, ಬದುಕಿನ ಒಳನೋಟಗಳಾಗಿ, ಜನಪರ ಕಾಳಜಿಯಾಗಿ ಕೆಲಸ ಮಾಡುತ್ತವೆ.[೨೦] ಎಂಬ ಮಾತು ಸತ್ಯವಾಗಿದೆ.

ಟಿಪ್ಪಣಿಗಳು

೧) ಡಾ. ಬಸವರಾಜ ಸಬರದ – 'ಬಸವಪಥ – ನವ್ಹೆಂಬರ – ೪೩೬ನೆ ಸಂಚಿಕೆ ಪು. ೯೪–೯೫ ಬಸವಸಮಿತಿ ಬೆಂಗಳೂರು

೨) ಡಾ. ರಾಮಚಂದ್ರ ಗಣಾಪುರ – ಗುಲಬರ್ಗಾ ಜಿಲ್ಲೆಯ ಆಧುನಿಕ ವಚನ ಸಾಹಿತ್ಯ – ಪು. ೫೧

೩) ಡಾ. ಸಿದ್ಧಯ್ಯ ಪುರಾಣಿಕ – 'ಸತ್ಯಜ್ಞನ ವಚನಗಳು' – ಮುನ್ನುಡಿಯಲ್ಲಿ –

೪) ರಾಮಚಂದ್ರ ಗಣಾಪುರೆ – ಕಲಬುರ್ಗಿ ಜಿಲ್ಲೆಯ ಆಧುನಿಕ ವಚನ ಸಾಹಿತ್ಯ – ಪು. ೪೦

೫) ಡಾ. ಎಲ್. ಬಸವರಾಜು (ಸಂ) ಮಹಾದಾಸೋಹ ಸೂತ್ರಗಳು – ಪು. ೩೧

೬) ಕಲ್ಯಾಣರಾವ ಪಾಟೀಲ – ಡಾ. ಚೆನ್ನಣ್ಣ ವಾಲೀಕಾರ – ಪು. ೨೦–೨೧

೭) ಡಾ॥ ಜಯಶ್ರೀ ದಂಡೆ – ಸ್ವಭಾವದ ವಚನಗಳು – ಮುನ್ನುಡಿಯಲ್ಲಿ ಪು. iv & vi ರಲ್ಲಿ

೮) ಡಾ॥ ಡಿ.ಬಿ ನಾಯಕ – ವಚನಾನುಭಾವ ಸಾಹಿತ್ಯ – ಮುನ್ನುಡಿಯಲ್ಲಿ – ಪು. v ರಲ್ಲಿ

೯) ಡಾ॥ ಡಿ.ಬಿ ನಾಯಕ – ವಚನಾನುಭಾವ – ಅನಿಸಿಕೆಯಲ್ಲಿ ಹಾಲಳ್ಳಿ – ೧೧

೧೦) ಡಾ॥ ಸರಸ್ವತಿ ಚಿನ್ಮಲಗಿ – ಎಡಬಿಡಂಗಿದೇವ ವಚನಗಳು – ಪು. ೬ ರಲ್ಲಿ

೧೧) ಶೈಲಜಾ ಉಡಚಣ : ಕೇಳುಮಗಾದಲ್ಲಿ ಶೂಭ ಹಾರೈಕೆಯೊಂದಿಗೆ –

೧೨) ಪಾಟೀಲ ಎಸ್.ಎಸ್ – ಮಗುವಚನ – ಪು. ೬ ರಲ್ಲಿ

೧೩) ಶ್ರೀ ವಿಜಯಕುಮಾರ ಪುರಂತೆ – ವಚನಧಾರೆ – ಮುನ್ನುಡಿಯಲ್ಲಿ – ಪು. viii

೧೪) ಡಾ. ಅಶೋಕ ನರೋಡೆ 'ಆಧುನಿಕ ವಚನಕಾರರು' – ಪು. ೧೫೭

೧೫) ಡಾ॥ ನಾಗೇಂದ್ರ ಮಸೂತಿ – ಬೂದಿಗರ್ಭದ ಕೆಂಡ – ಮುನ್ನುಡಿಯಲ್ಲಿ ಪು. vii

೧೬) ಡಾ. ಎಸ್.ಎಂ. ಹಿರೇಮಠ – ಶ್ರೀ ಗವಿಸಿದ್ಧೇಶ್ವರ ವಚನಗಳು – ಮುನ್ನುಡಿಯಲ್ಲಿ – ಪು. iii

೧೭) ವಿಶಾಲಾಕ್ಷಿ ಹಿರೇಮಠ – ವಚನ ಕೇತನ ಲೇಖಕರ ಮಾತು – ವ.೧೧ – ಪು. ೦೬

೧೮) ಡಾ. ಶರಣಬಸಪ್ಪ ಅಪ್ಪ – 'ಬದುಕಿನ ವಚನಗಳು – ಆಶೀರ್ವಚನದಲ್ಲಿ ಪು. v - vi

೧೯) ಡಾ. ದೊಡ್ಡ ರಂಗೇಗೌಡ 'ಸಬರದ ಬಸವನ ವಚನಗಳು' – ಬೆನ್ನುಡಿಯಲ್ಲಿ

೨೦) ಡಾ. ಶ್ರೀಶೈಲ ನಾಗರಾಳ – 'ಸೂಗೂರೇಶ್ವರ ವಚನಗಳು – ಬೆನ್ನುಡಿಯಲ್ಲಿ

## ಅಧ್ಯಾಯ – ೫

## ಆಧುನಿಕ ವಚನ ಸಾಹಿತ್ಯದ ನೆಲೆಗಳು

‘ವಚನವೆಂಬುದು ಶಿವಶರಣರ ಸ್ವತಂತ್ರ ಸೃಷ್ಟಿ. ಪ್ರಪಂಚದ ಯಾವುದೇ ಭಾಷಾ ಸಾಹಿತ್ಯದಲ್ಲಿ ಕಾಣಸಿಗದ ವಿಶಿಷ್ಟ ಪ್ರಕಾರದ ಗದ್ಯವಲ್ಲ, ಪದ್ಯ ಕೇವಲ. ಪದ್ಯವಲ್ಲ; ಉಪದೇಶವಿದೆ, ಉಪದೇಶವಲ್ಲ ಮಾತು ಇದೆ. ಮಾತಲ್ಲ, ಆಧ್ಯಾತ್ಮ, ಆತ್ಮಾನುಭವ, ನೀತಿ ಬೋಧೆ, ಅನುಸಂಧಾನಗಳುಂಟು. ಅವು ವೇದ ಮಂತ್ರಗಳಲ್ಲ; ಇಂತಹ ಲಕ್ಷಣಗಳು ವಚನಗಳಿಗಿವೆ.[೧] ೧೨ನೇಯ ಶತಮಾನವು ಕರ್ನಾಟಕದ ಇತಿಹಾಸದಲ್ಲಿ ವಚನ ಚಳುವಳಿಯ ಮೂಲಕ ಅವಿಸ್ಮರಣೀಯ ಯುಗವಾಗಿ ಕಾಣುತ್ತದೆ. ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ, ಭಾಷಿಕ, ವಿಶೇಷವಾಗಿ ಸಾಹಿತ್ಯಿಕ ನೆಲೆಗಳಿಂದ ಅಮೂಲಾಗ್ರವಾಗಿ ಬದಲಾವಣೆಗೊಳಗಾಯಿತು. ಇದಕ್ಕೆ ಬಸವಣ್ಣನವರ ಧುರೀಣತ್ವ ಕಾರಣವೆನ್ನಬಹುದು.

ಇಪ್ಪತ್ತನೆಯ ಶತಮಾನದಲ್ಲಿ ಗಾಂಧೀಜಿಯವರ ನೇತೃತ್ವದಲ್ಲಿ ಸ್ವಾತಂತ್ರ್ಯಾಂದೋಲನ ಜರುಗಿತು. ಪಾಶ್ಚಾತ್ಯ ಪ್ರಭಾವ, ರಾಷ್ಟ್ರಪ್ರೇಮ, ಸ್ವದೇಶಿ ವಸ್ತುಗಳಿಗೆ ಪ್ರಾಧ್ಯಾನತೆ ದೊರೆತರೂ ಸಾಹಿತ್ಯರಂಗದ ಮೇಲೆ ಪಾಶ್ಚಾತ್ಯ ಪ್ರಭಾವ ದಟ್ಟವಾಯಿತು. ಹೀಗಾಗಿ ಸಾಹಿತ್ಯದ ಹಲವು ರೂಪಗಳು ಭಾರತದ ಇತರ ಭಾಷೆಗಳಂತೆ ಕನ್ನಡದಲ್ಲೂ ಬಂದವು. ಇಂತಹ ಸಂದಿಗ್ಧತೆಯ ಹೊತ್ತಿನಲ್ಲಿ ಸ್ವದೇಶಿ ಆಂದೋಲನ, ಸ್ವಾತಂತ್ರ್ಯಾಂದೋಲನಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಹರ್ಡೇಕರ ಮಂಜಪ್ಪನವರು ಬಸವಾದಿ ಶರಣ ಪ್ರೇರಣೆಯ ಹಿನ್ನೆಲೆಯಲ್ಲಿ ಆಧುನಿಕ ವಚನಗಳಿಗೆ ‘ಓಂಕಾರ’ ಹಾಕಿರುವುದು ಐತಿಹಾಸಿಕ ಅಂಶವಾಗಿದೆ.

‘ಜನಸಾಮಾನ್ಯರಿಂದ ಜನಿಸಿ, ಜನಸಾಮಾನ್ಯರ ನಡುವೆ ಬೆಳೆದು, ಜನಸಾಮಾನ್ಯರಿಗಾಗಿ ಮಿಡಿದದ್ದು ವಚನಸಾಹಿತ್ಯ. ಹೊಸ ಸಮಾಜದ ನಿರ್ಮಾಣವೇ ಶರಣರ ಸಂಕಲ್ಪವಾಗಿತ್ತು.’ ಹೊಸ ವ್ಯವಸ್ಥೆಯೊಂದನ್ನು ಹುಟ್ಟು ಹಾಕಲು ಈ ‘ವಚನ’ವು ಅವರಿಗೊಂದು ಮಾಧ್ಯಮವಾಗಿ ದೊರಕಿತು. ಆದರೆ ಆಧುನಿಕ ಸಂದರ್ಭದಲ್ಲಿ ಉದಾರಮಾನವತಾವಾದ, ಉನ್ನತ ಆದರ್ಶ, ಸಮಾಜ ಸುಧಾರಣೆ, ರಾಷ್ಟ್ರದೇಳ್ಗೆಯ ಸಂಕಲ್ಪ ಹೊತ್ತ ಹರ್ಡೇಕರ ಮಂಜಪ್ಪನವರಿಗೆ ಆಧುನಿಕ ವಚನ ಸಾಹಿತ್ಯವೊಂದು ಊರುಗೋಲಾಯ್ತು.[೨] ಆಧುನಿಕ ವಚನ ಸಾಹಿತ್ಯಕ್ಕೆ ೧೨ನೇಯ ಶತಮಾನದ ವಚನ ವಾಜ್ಞಯ ಪ್ರೇರಣೆಯಾದರೂ, ವಸ್ತು ವಿಷಯ, ಆಶಯ, ಸಾಮಾಜಿಕ ಕಳಕಳಿ, ಸಾಹಿತ್ಯ ಸಂವೇದನೆಗಳಲ್ಲಿ ಆಧುನಿಕತೆ ತಾನೇ ತಾನಾಗಿ ಬಂತು. ಯುಗಧರ್ಮದ ಆಶಯಗಳನ್ನು ಪ್ರತಿಪಾದಿಸುವ ಇಲ್ಲಿನ ಆಧುನಿಕ ವಚನಗಳು ಪಡೆದುಕೊಂಡ ಆಯಾಮ ವಿಶಾಲ ಮತ್ತು ವೈವಿಧ್ಯಮಯವಾಗಿದೆ. ರಚನಾ ತಂತ್ರದ ದೃಷ್ಟಿಯಿಂದ ಇವು ೧೨ನೇಯ ಶತಮಾನದ ವಚನವನ್ನು ಹೋಲುತ್ತವಾದರೂ, ಸ್ವತಂತ್ರವಾದ ಅಭಿವ್ಯಕ್ತಿ ಸಾಧ್ಯತೆಯನ್ನು ಪಡೆದಿವೆ. ಇಷ್ಟದೇವತೆಯೆದುರಿನಲ್ಲಿ ಸಾತ್ವಿಕ ಸಂತಾಪಗಳಾಗಿ ಪ್ರಕಟವಾಗುತ್ತಿದ್ದ ವಚನಗಳು ಇಂದು ಸಮಾಜನಿಷ್ಠವಾಣಿಯಾಗಿ ಹೊರಹೊಮ್ಮುತ್ತಿವೆ. ಅಂತರ್‌ಮುಖದಿಂದ ಬಹಿರ್‌ಮುಖಿಯಾಗಿ ಪ್ರಕಟವಾಗುತ್ತಲಿವೆ. ಅನೇಕ ವಚನಗಳಲ್ಲಿ ಅನಿಯತವಾದ ಪದ್ಯದ ಲಯ ಚಲ್ಲುವದಿರುವುದನ್ನು ಗಮನಿಸಬಹುದು.[೩] ಇಪ್ಪತ್ತನೇಯ ಶತಮಾನದ ಆರಂಭದಿಂದ ಮೊದಲ್ಗೊಂಡು ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯದವರೆಗಿನ ಪ್ರಮುಖ ಘಟ್ಟಗಳಲ್ಲಿ ಮೂಡಿಬಂದಿರುವ, ಹೊಸ ಶತಮಾನದ ಹೊಸ್ತಿಲಲ್ಲಿಯೂ ರಚನೆಗೊಳ್ಳುತ್ತಿರುವ ವಚನಗಳನ್ನು

ಸ್ಥೂಲವಾಗಿ 'ಆಧುನಿಕ ವಚನ ಸಾಹಿತ್ಯ'ವೆಂದು ಕರೆಯಲಾಗುತ್ತದೆ. ಕಲಬುರ್ಗಿ ಹಾಗೂ ಬೀದರ ಜಿಲ್ಲೆಯ ಈ ಸಾಹಿತ್ಯ ರಚನೆಕಾರರಲ್ಲಿ ಶಿಕ್ಷಕರು, ಗಾಯಕರು, ಅನುಭಾವಿಗಳೂ ಮಠದ ಸ್ವಾಮಿಗಳು, ವೈದ್ಯರು, ವ್ಯಾಪಾರಸ್ಥರು, ಕಾರ್ಮಿಕರು, ಕೃಷಿಕರು, ಮಹಿಳೆಯರು ಮೊದಲಾಗಿ ವಿವಿಧ ವೃತ್ತಿಯಲ್ಲಿರುವವರು ಇದ್ದಾರೆ. ಕೆಲವರು ಅಲ್ಲಲ್ಲಿ ಬಿಡಿ ವಚನಗಳನ್ನು ಪ್ರಕಟಿಸಿದವರೂ ಇದ್ದಾರೆ.

ತಮ್ಮ ಬರಹಗಳ ಮೂಲಕ ತಮ್ಮನ್ನು ಅಭಿವ್ಯಕ್ತಿಸಿಕೊಳ್ಳುತ್ತಿರುವ ಇವರ ವಚನಗಳಿಗೆ ವಿದ್ಯೆಯ ಮಹತ್ವ, ಕನ್ನಡ ಭಾಷಾ ಪ್ರೇಮ, ಪ್ರಕೃತಿ ಸೊಬಗು, ಧರ್ಮದ ಪರಿ, ಆಡಂಬರ, ವಂಚನೆ, ರಾಜಕಾರಣ. ವೈಯಕ್ತಿಕ ಸವಾಲುಗಳು, ಸಾಮಾಜಿಕ ಏರುಪೇರುಗಳು, ಸಾಂಸ್ಕೃತಿಕ ಸಂಘರ್ಷಗಳು, ವೃತ್ತಿಪರತೆ, ಭ್ರಷ್ಟಾಚಾರ, ಕುಟುಂಬ, ಆರ್ಥಿಕ ನೆಲೆ, ಸಾಹಿತ್ಯಿಕ ಸಂದರ್ಭಗಳು, ಈ ಮೊದಲಾದ ಅನೇಕ ಸಂಗತಿಗಳು ವಚನಗಳ ವಸ್ತುಗಳಾಗಿವೆ. ಬಹುಮುಖಿ ನೆಲೆಗಳಲ್ಲಿ ಅಭಿವ್ಯಕ್ತಗೊಂಡಿರುವ ಇಲ್ಲಿಯ ವಚನ ಸಾಹಿತ್ಯವನ್ನು ಪ್ರಧಾನವಾಗಿ ೧) ವ್ಯಕ್ತಿ–ವ್ಯಕ್ತಿತ್ವದ ನೆಲೆ, ೨) ಸಾಮಾಜಿಕ ನೆಲೆ, ೩) ಧಾರ್ಮಿಕ ನೆಲೆ, ೪) ರಾಜಕೀಯ ನೆಲೆ, ೫) ಸಾಂಸ್ಕೃತಿಕ ನೆಲೆ, ೬) ಅನುಭವಿಕ ನೆಲೆ, ೭) ಭಾಷಿಕ ಹಾಗೂ ಸಾಹಿತ್ಯಿಕ ನೆಲೆಗಳೆಂದು ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

**೫–೧ ವ್ಯಕ್ತಿ ಹಾಗೂ ವ್ಯಕ್ತಿತ್ವದ ನೆಲೆ**

ಮನುಷ್ಯ ಸ್ವಭಾವತಃ ವಿಚಾರವಾದಿ ಜನ್ಮತಃ ಸಂಘಜೀವಿ. ಚಿಂತನಶೀಲತೆ ಮಾನವನ ಸಹಜ ಧರ್ಮವಾಗಿರುವಂತೆ, 'ಸಮರಸ'ಯುಕ್ತ ಬದುಕು ಆತನ ಸಹಜ ನಡುವಳಿಕೆ ಎನಿಸುತ್ತವೆ. ಆ ಕಾರಣದಿಂದಲೇ ಆತನು ತನ್ನ ಅನುಭವ ಅಥವಾ ಅನಿಸಿಕೆಗಳನ್ನು ವಿಚಾರದ ಕಕ್ಷೆಯಲ್ಲಿಡಬಯಸಿದಂತೆ, ತನ್ನ ಬದುಕು ಅಥವಾ ಜೀವನವನ್ನು 'ಸಮರಸ'ದ ಸಮಾಜದಲ್ಲಿ ಕಳೆಯಬಯಸುತ್ತಾನೆ. ಹೀಗೆ ಮಾಡುವುದರಿಂದಲೇ ನೈಜ ಬದುಕಿಗೆ ಒಂದು ಹೊಸ ಆಯಾಮ ಒದಗಿ, ಮಾನವನ ಬದುಕು ನೈಜ ಬದುಕಾಗುತ್ತದೆ. ಹೀಗಾಗಿ ಸಮಾಜದ ಸ್ವಾಸ್ಥ್ಯಕ್ಕೆ ವ್ಯಕ್ತಿಯ ಧರ್ಮ ನೀತಿ, ಅರ್ಥ ಮಾನತವಾದಿ ಗುಣ ಹಾಗೂ ವೈಚಾರಿಕ ನೆಲೆಗಳು ಬಹುಮುಖ್ಯವಾಗುತ್ತವೆ. ಆಧುನಿಕ ವಚನಕಾರರ ಈ ಅಭಿವ್ಯಕ್ತಿಗೆ ಶ್ರೀ ಸಾಮಾನ್ಯನೇ ಕೇಂದ್ರಬಿಂದು, ಆ ಸಾಮಾನ್ಯನ ಬದುಕು ಎಲ್ಲ ನೆಲೆಗಳಲ್ಲಿ ಸಮೃದ್ಧಗೊಳ್ಳಬೇಕು. ಅದಕ್ಕೆ ಒಬ್ಬ ವ್ಯಕ್ತಿಯಲ್ಲಿರುವ ದ್ವಂದ್ವಗಳಾದ ನಡೆ-ನುಡಿ, ಆಚಾರ–ವಿಚಾರ, ಅನುಭವ–ಅಭಿವ್ಯಕ್ತಿ, ಸ್ವಾರ್ಥ–ಪರಾರ್ಥ, ಜ್ಞಾನ–ಕ್ರಿಯೆ, ಅಂತರಂಗ–ಬಹಿರಂಗಗಳಲ್ಲಿರುವ ವೈರುಧ್ಯಗಳನ್ನು ದೂರಗೊಳಿಸಿಕೊಂಡು ಜೀವನವನ್ನು ಹಸನಾಗಿಸಿಕೊಳ್ಳುವ ಪ್ರಯತ್ನವಿರುವುದನ್ನು ವಚನಗಳ ಈ ನೆಲೆಯಲ್ಲಿ ಕಾಣಬಹುದು.

ನಾನು ಓದುತ್ತಿದ್ದೇನೆ
ಆದರೆ ಯಾವ ಪರೀಕ್ಷೆ ಕಟ್ಟಿಲ್ಲ
ದಿನಪತ್ರಿಕೆಯಲ್ಲಿ ಹುಟ್ಟಿದವರ, ಸತ್ತವರ
ಅಧಿಕಾರ ಪಡೆದವರ, ಕಳೆದುಕೊಂಡವರ
ಸನ್ಮಾನ ಗಿಟ್ಟಿಸಿದವರ
ಮಾನ ಹರಾಜು ಹಾಕಿಕೊಂಡವರೆಲ್ಲಾ

ಬೆತ್ತಲಾದ ಸುದ್ದಿ ಓದುತ್ತಿದ್ದೇನೆ ।
ಸಾಹಿತ್ಯದಲ್ಲಿ ಕಥೆಯಾದವರ ವ್ಯಥೆಯನು
ಕವಿತೆಯಲ್ಲಿ ಅಲಂಕಾರಗೊಂಡವರನ್ನು
ಚರಿತ್ರೆಯಲಿ ಬಿಂಬವಾದವರನ್ನು
ಓದಿ ಓದಿ ಬದುಕು ಹುಡುಕುತ್ತಲಿರುವೆ
ಒಂದರಲ್ಲಿ ಮತ್ತೊಂದನು ಶೊಧಿಸುತ್ತಲಿರುವೆ ಶ್ರೀ ಗುರುಸಿದ್ಧ[೪]

ವ್ಯಕ್ತಿಗತವಾದ ಬದುಕು ಸಾಮಾಜಿಕವಾಗಿ ರೂಪಗೊಳ್ಳಬಹುದಾದದ್ದನ್ನು ಹುಡುಕುವ ನೆಲೆ ಈ ವಚನದಲ್ಲಿದೆ. ಓದು-ಪರೀಕ್ಷೆಗಿಂತ, ಜೀವನ ಪರೀಕ್ಷೆಗೆ ಯೋಗ್ಯವಾಗಬೇಕು. ವರ್ತಮಾನದ ಬದುಕಿನ ವಾಸ್ತವಿಕತೆಗಳೊಂದಿಗೆ ವ್ಯಕ್ತಿನೆಲೆಯ ಹುಡುಕಾಟವು ಇಲ್ಲಿ ಪರಿಣಾಮಕಾರಿಯಾಗಿ ವ್ಯಕ್ತಗೊಂಡಿದೆ. ಅದು ವ್ಯಕ್ತಿಯ ವ್ಯಕ್ತಿತ್ವ ರೂಪಗೊಳ್ಳಬಹುದಾದ ಕ್ರಿಯೆಯೆಡೆಗೂ ಬೊಟ್ಟು ತೋರುವುದು ಗಮನಾರ್ಹ ಅಂಶ.

ಮನುಷ್ಯನ ವ್ಯಕ್ತಿತ್ವ ವಿಕಾಸಕ್ಕೆ ಸಾಮಾಜಿಕ ಹಾಗೂ ಧಾರ್ಮಿಕ ಮಾರ್ಗವೂ ಅನುಕರಣಿಯವಾಗಿದೆ. ಅದರಲ್ಲೂ ವ್ಯಕ್ತಿಯ ಆತ್ಮ ಶೊಧನೆಯು ಇದಕ್ಕೆ ಬುನಾದಿ ಹಾಕುತ್ತದೆ. ಅಂತರಂಗದ ಬೆಳವಣಿಗೆಗೆ ಏಣಿಯಾಗಿ ನಿಲ್ಲುವ ಆತ್ಮ ನಿವೇದನೆಯು ಬಸವಣ್ಣನ ವಚನಗಳಲ್ಲಿ ಅದ್ವಿತೀಯವಾಗಿ ಅಭಿವ್ಯಕ್ತಗೊಂಡಿದೆ. ಹಾಗೆಯೇ ಇಲ್ಲಿಯ ಅನೇಕ ಆಧುನಿಕ ವಚನಕಾರರ ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಗೆ ಆತ್ಮವಿಮರ್ಶೆಯನ್ನು ಮಾನದಂಡವಾಗಿಸಿದ್ದು ಕಂಡುಬರುತ್ತದೆ. ಬದುಕಿನಲ್ಲಿ ಬೇರೆಯವರನ್ನು ತಿಳಿದುಕೊಳ್ಳುವುದು ಸುಲಭ ಆದರೆ ಮನುಷ್ಯ ತನನ್ನು ತಾನು ಅರಿತುಕೊಳ್ಳುವುದು ಕಷ್ಟ. ಪ್ರತಿಯೊಬ್ಬ ವ್ಯಕ್ತಿ 'ತನ್ನ ತಾನು ಅರಿಯಬೇಕು' ಎಂಬ ನೆಲೆಯಲ್ಲಿ ಚಿಂತನೆ ಮಾಡಿದ್ದನ್ನು ಇಲ್ಲಿ ಮನಗಾಣಬಹುದು.

ತನ್ನ ತಾನರಿಯುವುದೆಂದರೆ
ಇರುವುದನ್ನು ಮರೆಯುವುದಲ್ಲವಯ್ಯಾ
ಇಲ್ಲದ್ದನ್ನು ತಿಳಿದುಕೊಳ್ಳುವುದು
ಆತ್ಮ ಸಾಧನೆ ಮಾಡುವುದೆಂದರೆ
ಸಂಸಾರವನ್ನು ತೊರೆಯುವುದಲ್ಲವಯ್ಯಾ
ಅದರಲ್ಲಿದ್ದೇ ಅದನ್ನು ಗೆದ್ದು ನಿಲ್ಲುವುದು
ತನ್ನ ತಾನರ್ಪಿಸಿಕೊಳ್ಳುವುದೆಂದರೆ
ಕಳೆದುಕೊಳ್ಳುವುದಲ್ಲವಯ್ಯಾ ಹೊಸದನ್ನು
ಪಡೆದುಕೊಳ್ಳುವುದು ನೋಡಾ
ಸಬರದ ಬಸವ[೫]

ಬಸವರಾಜ ಸಬರದರ ಈ ವಚನ 'ತನ್ನನ್ನು ತಾನರಿಯುವುದೆಂದರೇನು?' ಎಂಬುದನ್ನು ತುಂಬಾ ವೈಚಾರಿಕವಾಗಿ ಅರುಹುತ್ತದೆ. ಅದು ತನ್ನಲ್ಲಿರುವುದನ್ನು ಮರೆಯುವುದಲ್ಲ; ಇಲ್ಲದ್ದನ್ನು ತಿಳಿದುಕೊಳ್ಳುವುದು ಆತ್ಮ ಸಾದನೆ ಮಾಡಿಕೊಳ್ಳುವುದು. ಸಂಸಾರದಲ್ಲಿದ್ದುಕೊಂಡು, ಅದನ್ನು ಗೆಲ್ಲುವುದುಹೊಸದನ್ನು ಪಡೆದುಕೊಳ್ಳುವುದೆಂಬ

ನವೀನ ರೀತಿಯ ಅರ್ಥವನ್ನು ತಿಳಿಸುತ್ತದೆ. ವ್ಯಕ್ತಿ ನೆಲೆಯಲ್ಲಿ ಅಭಿವ್ಯಕ್ತವಾಗಿರುವ ಈ ವಚನ 'ಆತ್ಮಸಾಧನೆ'ಯ ಹಿನ್ನೆಲೆಯಲ್ಲಿ ವ್ಯಕ್ತಿತ್ವದ ವಿಕಾಸವನ್ನು ತಿಳಿಸುತ್ತದೆ.

೧೨ನೆಯ ಶತಮಾನದ ಶರಣರಂತೆ ಆಧುನಿಕ ವಚನಕಾರರು ಸಹ ವ್ಯಕ್ತಿತ್ವ ಬೆಳವಣಿಗೆಯಲ್ಲಿ ಸಮಾಜದ ಹಿತವನ್ನು ಕಂಡಿರುವುದನ್ನು ಅರಿಯಬಹುದು. ವ್ಯಕ್ತಿಯ ಬೆಳವಣಿಗೆಯನ್ನು ಕಾಣುವುದರೊಂದಿಗೆ ಸಾಮಾಜಿಕ

ಅಭಿವೃದ್ಧಿ ಆಗಬೇಕೆಂದು ಹಂಬಲಿಸುತ್ತಾರೆ. ಆ ಹಂಬಲದಲ್ಲಿ ಆತ್ಮಶೋಧನೆಯ ಕ್ರಿಯೆಯು ಜರುಗುತ್ತದೆ. ಅದು ವ್ಯಕ್ತಿಯ ಅಂತರಂಗ ಹಾಗೂ ಬಹಿರಂಗ ನೆಲೆಗಳಲ್ಲಿ ವ್ಯಕ್ತಗೊಂಡಿದೆ. ಇಲ್ಲಿ ವ್ಯಕ್ತಿ, ವ್ಯಕ್ತಿಗತವಾಗಿ ತನ್ನ ಮನಸ್ಸನ್ನು ತಾನೇ ಶೋಧಿಸುವ ಮೂಲಕ ತಿದ್ದಿಕೊಳ್ಳುವುದು ಒಂದು ತೆರನಾದರೆ, ಆ ಮೂಲಕ ಸಮಾಜದ ಸಮುದಾಯವನ್ನು ಪರಿವರ್ತಿಸುವುದು ಇನ್ನೊಂದು ತೆರನಾಗಿದೆ. ವ್ಯಕ್ತಿನೆಲೆಯ ಅಭಿವ್ಯಕ್ತಿಯಲ್ಲಿ '**ಆತ್ಮ ಚಿಂತನೆ**'ಯ ಕ್ರಿಯೆ ಬಹುಮುಖ್ಯವಾಗಿ ವ್ಯಕ್ತವಾಗಿದೆ.

ಎದುರಿದ್ದವರ ಹೊಗಳುವ ಮನ
ಮರೆಯಾದವರ ತೆಗಳುವುದಯ್ಯಾ
ಪಕ್ಕದವರಿಗೆ ಕೈ ಮುಗಿಯುವ ಮನ
ಸಿಕ್ಕದವರಿಗಾಗಿ ಕುದಿವುದಯ್ಯಾ
ಲೆಕ್ಕವಿರದ ಹೊಗಳಿಕೆಗೆ ಹಿಗ್ಗಿ, ತೆಗಳಿಕೆಗೆ ಕುಗ್ಗುವ
ಲಜ್ಜೆಗೇಡಿಯ ಒಯ್ದು ಬಲೆಯೊಳಗಿಕ್ಕು
ಸೋಮಲೋಚನ ಪ್ರಿಯ ಬಸವಣ್ಣ[೬]

ಇಲ್ಲಿ ಮನಸ್ಸಿನ ಚಂಚಲತೆಯನ್ನು ಕುರಿತು ಹೇಳುತ್ತ, ಅದರ ಲಜ್ಜೆಗೇಡಿತನವನ್ನು ತಿಳಿಸಲಾಗಿದೆ. ಮನದ ಮೂಲಕ ಆತ್ಮವಿರ್ಶೆ ಸಾಗಿರುವುದನ್ನಿಲ್ಲಿ ಗಮನಿಸಬಹುದು. ಬಸವಾದಿ ಶರಣರ ವಚನಗಳ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿರುವ ಇಂತಹ ವಚನಗಳಲ್ಲಿ ವ್ಯಕ್ತಿನೆಲೆಯ ಆತ್ಮವಿಮರ್ಶೆ ಕಾಣಸಿಗುತ್ತದೆ. ಮನುಷ್ಯನ ಆತ್ಮೋನ್ನತಿ ಹಾಗೂ ವ್ಯಕ್ತಿತ್ವದ ಶೋಧನೆಯೊಂದಿಗೆ ಅರಿವಿನ ಮಾರ್ಗದತ್ತ ಸಾಗುವಲ್ಲಿ ಇವು ಮಹತ್ವದ ಹೆಜ್ಜೆಗಳಾಗಿ ನಿಲ್ಲುತ್ತವೆ ಎನಿಸುತ್ತದೆ.

ಮನುಷ್ಯನ ವ್ಯಕ್ತಿತ್ವ ನಿರ್ಮಾಣದಲ್ಲಿ ಮನಶುದ್ಧಿ ಬೇಕು ಎಂಬುದನ್ನು ಆಧುನಿಕ ವಚನಕಾರರೂ ಹೇಳಲು ಮರೆಯುವುದಿಲ್ಲ.

"ಮಾತಿನ ಚತುರತೆಗೆ ಭಾಷೆ
ಕಲಿತರೆ ಸಾಕಯ್ಯಾ
ವ್ಯವಹಾರ ವೃದ್ಧಿಗೆ ಹಣದ ಕೊರತೆ
ಇರದಿದ್ದರೆ ಸಾಕಯ್ಯಾ
ದೇಹ ಆರೋಗ್ಯವಾಗಿರಲು ಮನವು
ಮಲಿನವಾಗದಿರಲು ಅನುಭಾವಿಗಳ
ಅರಿವು ಅಗತ್ಯವಯ್ಯಾ
ಸುವರ್ಣ ಮಹೋತ್ಸವದ ಸೂಗೂರೇಶ್ವರ[೭]

ಮನಶುದ್ಧಿಗೆ ಅನುಭಾವಿಗಳ ಅರಿವು ಪಡೆದುಕೊಳ್ಳುವ ಸೂಚನೆ ಈ ವಚನದಲ್ಲಿದೆ. ಇದು ದೇಹದ ಆರೋಗ್ಯಕ್ಕೂ ಮಾತಿನ ಚತುರತೆಗೂ, ವ್ಯವಹಾರ ವೃದ್ಧಿಗೂ ಅವಶ್ಯವೆಂಬ ಭಾವವನ್ನು ಇಲ್ಲಿ ಕಾಣಬಹುದು. ಆಧುನಿಕ

ವಚನಕಾರರಲ್ಲಿಯೂ ಮಾನವನ ವ್ಯಕ್ತಿತ್ವದ ನೆಲೆಯನ್ನು ಕುರಿತು ಆಲೋಚಿಸುವ ಚಿಂತನಕಾರರು ಕಾಣಸಿಗುತ್ತಾರೆ'' ೧೨ನೇಯ ಶತಮಾನದಲ್ಲಿ ಬಸವಣ್ಣನವರು ವ್ಯಕ್ತಿನೆಲೆಯ ಸಾಮರಸ್ಯದ ವಿಷಯದಲ್ಲಿ ತನ್ನ ಬಿಟ್ಟು ಅನ್ಯರ ಬಗ್ಗೆ ಮಾತನಾಡುವುದೇ ಇಲ್ಲ. ಆತನ ಆತ್ಮನಿವೇದನೆಯ ಮಾತುಗಳು ಕೇವಲ ಬಸವಣ್ಣನವರ ಮಾತುಗಳಾಗಿ ಉಳಿಯದೆ, ಸಮುದಾಯದ ಮಾತುಗಳಾಗಿ ನಿಂತು ಸಮಾಜಮುಖಿಯಾಗಿ ನಿಲ್ಲುವುದನ್ನು ಗಮನಿಸಬಹುದು.[೮] ಆದರೆ ಆಧುನಿಕ ವಚನಕಾರರಲ್ಲಿ ಸ್ವ ಆತ್ಮವಿಮರ್ಶೆಗಿಂತ ಹೆಚ್ಚಾಗಿ ಅನ್ಯರ ಕುರಿತು ಮಾತನಾಡುತ್ತ ಸಮಾಜಮುಖಿ ಚಿಂತನೆಗೆ ತೊಡುಗುವುದನ್ನು ಕಾಣಬಹುದು.

ಗುಡಿಯ ಸುತ್ತಿ ಸಮಯ ವ್ಯರ್ಥ ಮಾಡುವರಲ್ಲದೆ
ಜ್ಞಾನದ ನುಡಿಯ ಕೇಳಲು ಸಮಯವಿಲ್ಲಯ್ಯ
ಕಲ್ಲಿಗೆ ಹಾಲೆರೆದು, ಬೆಂಕಿಗೆ ತುಪ್ಪವ ಸುರಿದು
ವ್ಯರ್ಥ ಮಾಡುವರಲ್ಲದೆ ಹಸಿದವರಿಗೆ ನೀಡರಯ್ಯಾ
ಅತಿ ಆಹಾರ, ನಿರಾಹಾರದಿಂದ ದೇಹವ ದಂಡಿಸುವರಲ್ಲದೆ
ಮಿತಾಹಾರ ಉಂಡು ದೇಹವ ರಕ್ಷಿಸಿಕೊಳ್ಳರಯ್ಯ
ಇವರೆಲ್ಲರು ಅಜ್ಞಾನಿಗಳಲ್ಲದೆ, ಜ್ಞಾನಿಗಳೆಂತಯ್ಯ ಬಸವಲಿಂಗ[೯]

ಆಧುನಿಕ ಯುಗದಲ್ಲಿಯೂ ಅಜ್ಞಾನ ಅಂಧಃಕಾರಗಳಲ್ಲಿ ತೊಡಗಿಕೊಂಡು ಮೂಢನಂಬಿಕೆಯ ಆಚರಣೆಯಲ್ಲಿ ಒದ್ದಾಡುವವರನ್ನು ಕುರಿತು ಹೇಳುತ್ತ, ಹಸಿದವರೆಡೆಗೆ ಲಕ್ಷವಿಲ್ಲದ ಇವರು, ವ್ಯರ್ಥವಾಗಿ ತಿನ್ನುವ ಪದಾರ್ಥಗಳನ್ನು ಹಾಳುಮಾಡುತ್ತಿರುವುದನ್ನು ಈ ವಚನ ಎತ್ತಿತೋರುತ್ತದೆ. ಅದರೊಂದಿಗೆ ಅತಿ ಆಹಾರ, ನಿರಾಹಾರದಿಂದ ದೇಹವನ್ನು ದಂಡಿಸುವುದನ್ನೂ ತಿಳಿಸುತ್ತದೆ. ವ್ಯಕ್ತಿ ನೆಲೆಯಲ್ಲಿ ಚಿಂತಿಸುವ ಈ ವಚನದಲ್ಲಿ **'ಮಿತಾಹಾರ'** ಉಂಡು ದೇಹವನ್ನು ಸಂರಕ್ಷಿಸಿಕೊಳ್ಳುವ ವಿಚಾರಗಳಿವೆ. ತನ್ನ ಗರ್ಭದಲ್ಲಿ ಸಾರ್ವಕಾಲಿಕ ಸತ್ಯವನ್ನು ಹುದುಗಿಸಿಕೊಂಡು, ಚಿಂತಿಸಿದಷ್ಟು ಹೊಸ ಹೊಸ ಅನುಭೂತಿಯನ್ನು, ವೈಚಾರಿಕ ಬೆಳಕನ್ನು ನೀಡುತ್ತ ಮನುಷ್ಯನ ಬದುಕಿನಲ್ಲಿಯ ವ್ಯಕ್ತಿಯ ನಾನಾ ಮಗ್ಗಲುಗಳನ್ನು ಇಂಥ ವಚನಗಳು ಪರಿಚಯಿಸುತ್ತವೆ. ವಚನಕಾರರು ಇಲ್ಲಿ ಸಾಮಾಜಿಕ ನೆಲೆಯ ಮೂಲಕ ವ್ಯಕ್ತಿಗಳ ವ್ಯಕ್ತಿತ್ವವನ್ನು ವಿಮರ್ಶಿಸುತ್ತ ಸಾಮರಸ್ಯಕ್ಕೆ ನೆಲೆಯಾಗುವುದನ್ನು ಮನಗಾಣಬಹುದು.

ಎನ್ನ ಚಿತ್ತ ಅನ್ಯ ಚಿತ್ತದಲ್ಲಿರಿಸದೆ
ನಿಮ್ಮ ಚಿತ್ತದಲ್ಲಿರಿಸಯ್ಯಾ
ಎನ್ನ ಚಿತ್ತ ಲಿಂಗಧ್ಯಾನದಲ್ಲಿರಿಸಯ್ಯಾ
ಎನ್ನ ಚಿತ್ತ ಒಡಲೊಡೆಯನ ನೆನೆವಂತೆ ಮಾಡಯ್ಯಾ
ಎನ್ನ ಮೂಲದ ನೆಲೆಯನರಿವಂತೆ ಮಾಡಯ್ಯಾ
ಬಸವಾ ನಿಮ್ಮ ಶಿಶು ಸಿದ್ಧರಾಮ ಪ್ರಿಯಳ[೧೦]

ಎನ್ನುವಂತಹ ವಚನಗಳಲ್ಲಿ ಚಿತ್ತದ ಚಂಚಲತೆ, ಅದರ ಆಸೆ-ಆಮಿಷತ್ವ, ಶುಚಿಯಾಗಿರದ ಅದರ ಸ್ವರೂಪ ಮನದ ಒಡೆಯನ ನೆನೆಯದ ಚಿಂತೆ, ವ್ಯಕ್ತಿಯ ಮೂಲ ನೆಲೆಯನ್ನರಿಯಬೇಕೆಂಬ ಹಂಬಲ ಮೊದಲಾದ ವಿಷಯಯಗಳು

ಇಲ್ಲಿ ಅಭಿವ್ಯಕ್ತಗೊಂಡಿವೆ. ಕೇವಲ ಇಂದ್ರಿಯ ಸುಖಗಳಿಗೆ ಎಳೆಸುವ ಚಿತ್ತವನ್ನು ಅಂಕಿತದಲ್ಲಿರಿಸಿಕೊಂಡು, ಅದನ್ನು ನಿಯಂತ್ರಣಗೊಳಿಸಿಕೊಳ್ಳುವ ಪ್ರಯತ್ನ ಮಾಡುವ ನೆಲೆಯು ಇಂತಹ ವಚನಗಳಲ್ಲಿ ಕಾಣಸಿಗುತ್ತದೆ.

ಮನಸ್ಸು, ದೇಹ, ವ್ಯಕ್ತಿಯ ಅವಗುಣಗಳು, ಅಂತರಂಗ-ಬಹಿರಂಗದ ವೈರುಧ್ಯ, ನಡೆ-ನುಡಿ, ಆರೋಗ್ಯಚಿಂತನೆ, ವ್ಯಕ್ತಿಸಂಬಂಧದ ವಿಷಯಗಳ ಅವಲೋಕನೆಯನ್ನು ವ್ಯಕ್ತಿ ನೆಲೆಯಲ್ಲಿ ಚಿಂತಿಸಿರುವುದನ್ನು ಮನಗಾಣಬಹುದು. ವ್ಯಕ್ತಿ-ವ್ಯಕ್ತಿತ್ವದ ಮಧ್ಯ, ವ್ಯಕ್ತಿ-ವ್ಯಕ್ತಿಗಳ ಮಧ್ಯದಲ್ಲಿಯ ಹಲವು ಸಂದರ್ಭಗಳು ಈ ನೆಲೆಯ ವಚನಗಳಲ್ಲಿ ಅಭಿವ್ಯಕ್ತವಾಗಿವೆ.

**೫-೧-೧ ಮಾನಸಿಕ ನೆಲೆ**

ಆಧುನಿಕ ಮನುಷ್ಯ ಇಂದು ಹೆಚ್ಚು ನಾಗರಿಕವಾಗಿ, ಶೈಕ್ಷಣಿಕವಾಗಿ ಎಷ್ಟು ಮುಂದೆ ಹೋಗಿದ್ದಾನೋ, ಮಾನಸಿಕವಾಗಿ ಅಷ್ಟೇ ಹಿಂದೆ ಉಳಿಯುತ್ತಿದ್ದಾನೆ. ವ್ಯಕ್ತಿ-ವ್ಯಕ್ತಿಗಳ ಮಧ್ಯದ ಸಂಬಂಧ, ವ್ಯಕ್ತಿ ಕುಟುಂಬದ ಮಧ್ಯದ ಸಂಬಂಧ ಸಾಮರಸ್ಯವಿಲ್ಲದೆ ಕಲುಷಿತ ವಾತಾವರಣ ನಿರ್ಮಾಣವಾಗಿರುವುದನ್ನು ಎಲ್ಲೆಲ್ಲೂ ಕಾಣಬಹುದಾಗಿದೆ. ಇಂತಹ ಸಂದರ್ಭದಲ್ಲಿ ವ್ಯಕ್ತಿಯ ವೈಯಕ್ತಿಕತೆಯ ನಿಯಂತ್ರಣ ತುಂಬಾ ಮುಖ್ಯವೆಂಬುದನ್ನು ಮಾನಸಿಕ ನೆಲೆಯ ಅನೇಕ ವಚನಗಳು ಚರ್ಚಿಸುತ್ತವೆ.

‘ಅಂದು ನೀನು ಮಂಗಳಸೂತ್ರ ಕಸಿದುಕೊಂಡದ್ದರಿಂದ
ಇಂದು ನನಗೆ ಲಿಂಗಸೂತ್ರ ಗಟ್ಟಿಯಾಯಿತು
ಅಂದು ನೀನು ಬೆಂಡೋಲೆ ಕಸಿದುಕೊಂಡದ್ದರಿಂದ
ಇಂದು ನನ್ನ ಕಿವಿಗಳಿಗೆ ವಚನಗಳೇ ಶೃಂಗಾರವಾದವು
ಅಂದು ನೀನು ಕಾಲುಂಗರ ಕಸಿದುಕೊಂಡಿದ್ದರಿಂದ
ಇಂದು ನನ್ನ ಕಾಲಿಗೆ ಶರಣರ ಸಂಗಕ್ಕೆ ಹೋಗಲು ಸ್ವಾತಂತ್ರ್ಯಸಿಕ್ಕಿತು
ಜನರ ಕಣ್ಣಿಗೆ ನನ್ನಲ್ಲಿ ಯಾವ ಆಭರಣಗಳಿಲ್ಲದಿದ್ದರೂ
ಮನದ ಕಣ್ಣಿಗೆ ಸಕಲ ಸಂಪತ್ತು ನನ್ನಲ್ಲಿವೆ ನೋಡಾ
ಆಚಾರ ಪ್ರಿಯ ಬಸವಲಿಂಗ’[೧೧]

ತೀರಾ ವೈಯಕ್ತಿಕ ನೆಲೆಯಲ್ಲಿ ರಚನೆಗೊಂಡಿರುವ ಈ ವಚನ, ಅವರು ಸಾಮೂಹಿಕ ಬದುಕಿನಲ್ಲಿ ದಿಟ್ಟ ಹೆಜ್ಜೆಯನ್ನಿರಿಸಿದ್ದನ್ನು ತಿಳಿಸುತ್ತದೆ. ಗಂಡನಿಂದ ದೌರ್ಜನ್ಯಕ್ಕೊಳಗಾದ ಹೆಣ್ಣು, ಆತನಿಂದ ಅನುಭವಿಸಿದ ನೋವುಗಳನ್ನಿಲ್ಲಿ ಪಟ್ಟಿಮಾಡುತ್ತದೆ. ಮಂಗಳಸೂತ್ರ ಕಟ್ಟುಕೊಂಡದ್ದು, ಬೆಂಡೋಲೆ ಕಿತ್ತುಕೊಂಡದ್ದು, ಕಾಲುಂಗರ ಕಸಿದುಕೊಂಡದ್ದು, ಎಲ್ಲ ಮುತ್ತೈದೆತನದ ಆಭರಣಗಳನ್ನು ಕಿತ್ತುಕೊಂಡು ದೂರ ತಳ್ಳಿದ್ದನ್ನು ತಿಳಿಸುತ್ತ, ತಾನು ಗಂಡನಿಂದ ವಂಚಿತಳಾದರೂ, ಸತ್ಸಂಗದಲ್ಲಿ, ಲಿಂಗಸೂತ್ರ ಪಡೆದು, ವಚನಗಳನ್ನು ಉಸಿರಾಗಿಸಿಕೊಂಡು, ಸ್ವಮನದ ಕಣ್ಣಲ್ಲಿ ಸಕಲ ಸಂಪತ್ತು ಪಡೆದ ಪರಿಯನ್ನು ತುಂಬಾ ಪರಿಣಾಮಕಾರಿಯಾಗಿ ಹಾಗೂ ಅಷ್ಟೇ ಪ್ರಾಮಾಣಿಕವಾಗಿ

ನಿವೇದಿಸುವುದನ್ನು ಇಲ್ಲಿ ಕಾಣುತ್ತೇವೆ. ಬಸವಾದಿ ಶರಣರ ವಚನಗಳು ಅಂದಿನ ಕಾಲದ ಮಹಿಳೆಯರಿಗಷ್ಟೇ ಉದ್ಧರಿಸದೆ, ಇಂದಿನ ಶೋಷಿತರಿಗೂ ಬೆನ್ನೆಲುಬಾಗಿ ನಿಂತಿರುವುದನ್ನು ಇಲ್ಲಿ ಗುರುತಿಸಬಹುದು. ಬಸವಾದಿ ಶರಣರ ಜೀವನ, ಅವರ ವಚನಗಳು ಇಂದಿನ ಕಾಲದ ವ್ಯಕ್ತಿ-ವ್ಯಕ್ತಿತ್ವ ರೂಪಿಸಿಕೊಳ್ಳಲು, ಮಾನಸಿಕ ಸ್ಥಿಮಿತ ಪಡೆಯಲು, ಬದುಕನ್ನು ಸಹಜವಾಗಿ ಎದುರಿಸಲು ಮಾರ್ಗದರ್ಶಿಯಾಗಿ ನಿಂತಿರುವಂತೆ, ಅವರ ಸಾಹಿತ್ಯ ರಚನೆ ಹಾಗೂ ಸಾಮುದಾಯಿಕ ಬದುಕಿಗೂ ನೆಲೆಯಾಗಿ ನಿಂತಿರುವುದನ್ನು ಅರಿಯಬಹುದು.

'ಶರಣರ ನುಡಿಮುತ್ತುಗಳ ಊರುಗೋಲಿನಿಂದ
ಬಿದ್ದವಳಾನು ಎದ್ದೆ ನೋಡಾ
ಬಸವನ ವಚನ ಪರಿಮಳವನುಂಡು
ನಾನು ಬದುಕಿದೆನು ನೋಡಾ
ಶಿವಲಿಂಗೇಶ್ವರ ನಿನ್ನ ಸಂಗ ಮಾಡಿ
ಸುಜ್ಞಾನದ ಬೆಳಕ ನಾ ಕಂಡೆ ನೋಡಾ[೧೨]

ಸಂಸಾರದ ತಾಪತ್ರಯದಲ್ಲಿ ಕಂಗಾಲಾದಾಗ, ತೊಂದರೆಗಳ ಸುಳಿಯಲ್ಲಿ ಸಿಲುಕಿಕೊಂಡಾಗ ಅದರಿಂದ ಪಾರಾಗುವ ಯೋಚನೆಗಳು ಕಾಣದಾದಾಗ, ಶರಣರ ವಚನಗಳು ಊರುಗೋಲಾಗುತ್ತವೆ ಎಂಬ ಅಭಿಪ್ರಾಯ ಇಲ್ಲಿಯ ವಚನಕಾರರಲ್ಲಿದೆ. ತಾನು ಬಿದ್ದಾಗ ಎಬ್ಬಿಸಿದ್ದು, ನಿಜ ಜೀವನವನ್ನು ಬದುಕುತ್ತಿರುವುದು ಬಸವಾದಿ ಶರಣ ವಚನಗಳಿಂದ ಎಂಬ ಪ್ರೇರಣೆಯನ್ನು, ಅದಕ್ಕೆ ತಕ್ಕ ಧೋರಣೆಗಳನ್ನು ತಮ್ಮ ವಚನಗಳಲ್ಲಿ ಉಸಿರಾಗಿಸಿಕೊಂಡಿದನ್ನು ಇಲ್ಲಿ ಕಾಣುತ್ತೇವೆ. ವ್ಯಕ್ತಿಯ ವ್ಯಕ್ತಿತ್ವದ ಸ್ವರೂಪದಲ್ಲಿಯ ಇಂಥ ಹಲವು ನೆಲೆಗಳನ್ನಿಲ್ಲಿ ಗುರುತಿಸಬಹುದಾಗಿದೆ.

ಮನುಷ್ಯ ಈ ಭೂಮಿಗೆ ಬಂದ ಕಾರ್ಯ ಅವರಿಗೆ ತಿಳಿದಿಲ್ಲವೆಂಬ ಕೊರಗು ಆಧುನಿಕ ವಚನಕಾರರಿಗಿದೆ. ಡಾ. ನಾಗೇಂದ್ರ ಮಸೂತಿಯವರು ಹೇಳುವಂತೆ 'ನಾನು ಬಂದ ಕಾರ್ಯ ನನಗೆ ತಿಳಿದಿಲ್ಲ, ನಡೆಯುತ್ತಿದ್ದೇನೆ ಮನಬಂದಂತೆ' ಎಂಬ ಸಾಲು ಗಮನಾರ್ಹವಾಗುತ್ತದೆ. 'ಯಾರು ನಾನೆಂದು? ತಿಳಿದಿಲ್ಲ, ಮನೆಯ ಮಗನೋ, ತಮ್ಮನೋ, ಅಣ್ಣನೋ, ಗಂಡನೋ, ಅಪ್ಪನೋ, ಇವಾವುವು ನನಗೆ ತಿಳಿದಿಲ್ಲ, ನಡೆಯುತ್ತಿದ್ದೇನೆ ಮನಬಂದಂತೆ.' ಎನ್ನುವ ವಚನಕಾರರು, ಯಾರಿಗೋ ಸ್ನೇಹ, ಯಾರಿಗೋ ನೆಂಟ, ಇನ್ನಾರಿಗೂ ಪ್ರೀತಿ, ಪ್ರೇಮ, ಆಶೆ, ಆಕಾಂಕ್ಷೆ, ಕಾಮನೆಗಳು ಇವಾವವೂ ನನಗೆ ತಿಳಿದಿಲ್ಲ ನಡೆಯುತ್ತಿದ್ದೇನೆ ಮನಬಂದಂತೆ ಎನ್ನುತ್ತಾರೆ.[೧೩] ಹಿಂದಿನ ವಚನಕಾರರ ವಚನಗಳಲ್ಲಿ ವ್ಯಕ್ತವಾಗಿರುವ ಆತ್ಮ, ಪರಮಾತ್ಮ, ಜೀವ ಚೈತನ್ಯ ಇತ್ಯಾದಿಗಳ ಕುರಿತು ಏನೊಂದನ್ನು ತಿಳಿಯದೆ ನಡೆಯುತ್ತಿದ್ದೇನೆ ಎಂದಿರುವಲ್ಲಿ ಮನಸ್ಸಿಗೆ ಬಂದಂತೆ ನಡೆಯುವುದೇ ಇಲ್ಲಿ ಮುಖ್ಯವಾಗಿರುವ ನೆಲೆ ಕಾಣುತ್ತದೆ. ಆಧುನಿಕ ವಚನಕಾರರು ಮನಸ್ಸಿನ ಪರಿಯನ್ನು ತುಂಬಾ ವಾಸ್ತವಿಕ ನೆಲೆಯಲ್ಲಿ ಅಭಿವ್ಯಕ್ತಿಸಿದ್ದು ಇಲ್ಲಿದೆ. ಇಲ್ಲೆಲ್ಲ ಮನವನ್ನು ಸಂತೈಸಿಕೊಳ್ಳುವ, ತನ್ನ ಡೊಂಕನ್ನು ತಿದ್ದಿಕೊಳ್ಳಬೇಕೆಂಬ ಆಶಯಗಳಿಲ್ಲ. ಪರರಿಗೂ ಉಪದೇಶಮಾಡುವ ಭಾವವೂ ಇಲ್ಲ. ತನ್ನ ಮನಸ್ಸಿಗೆ ಬಂದಂತೆ ಮಾತ್ರ ನಡೆಯುವ ಕ್ರಿಯೆಯ ಅಭಿವ್ಯಕ್ತಿಯಿದೆ. ಆದರೂ

'ಕಾಣದ ಕಣ್ಣಿಗೆ ಬೆಳಕ ಕೊಡಿಸಬಹುದಯ್ಯಾ
ಮುರಿದ ಕಾಲಿಗೆ ಕೃತಕಾಂಗ ಜೋಡಿಸಬಹುದಯ್ಯಾ
ಕೇಳದ ಕಿವಿಗೆ ಶ್ರವಣೋಪಕರಣ ತೊಡಿಸಬಹುದಯ್ಯಾ

ಒಡೆದ ಮನಕೆ ಏನು ಮಾಡಬೇಕಯ್ಯಾ?
ಅದು ಕೈ ತಪ್ಪಿದ ಕನ್ನಡಿಯಂತೆ ನೋಡಾ
ವೀಪ್ರಬಾಧ ಪ್ರಿಯ ವರಗುರು ಬಸವೇಶ'[೧೪]

ಒಡೆದ ಮನದ ಚಿತ್ರ ಇಲ್ಲಿ ಕಣ್ಣಮುಂದೆ ನಿಲ್ಲುತ್ತದೆ. ಮನದ ಚಂಚಲತೆ ಅನನ್ಯವಾದುದು ಅದನ್ನು ನಿಯಂತ್ರಿಸುವುದು ಸುಲಭವಲ್ಲ. ಅರ್ಥೈಸಿಕೊಳ್ಳಲಾಗದ ಮನವನ್ನು ಒಡೆಯದಂತೆ ನೋಡಿಕೊಳ್ಳುವುದು. ಸರಳವಾದುದಲ್ಲವೆಂಬುದನ್ನು ಇಲ್ಲಿ ಅರಿಯಬಹುದು. ಆದರೂ ಮನವನ್ನು ಸೋಲಿಸಲು ನಂಬಿಕೆ ಬೇಕೆಂಬ ಮಾತೂ ಇದೆ.

'ನಂಬಿಕೆಯಿದ್ದಲ್ಲಿ ಮನ ಸೋಲುವುದು
ನಂಬಿಕೆಯಿದ್ದಲ್ಲಿ ಮೌನ ಮಾತಾಗುವುದು
ನಂಬಿಕೆಯಿದ್ದಲ್ಲಿ ಬದುಕು ಬಯಲಾಗುವುದು
ನಂಬಿಕೆ ಬದುಕು ಬಹು ದೊಡ್ಡ ಮೌಲ್ಯ
ಈಶ್ವರಿ ಪ್ರಿಯ ಶಿವಲಿಂಗ
ನಂಬಿಕೆ ಬಲವಾಗಿದ್ದಲ್ಲಿ ನೀನೇ ದೊರಕಬಹುದು'[೧೫]

ದೇವನ ಒಲುಮೆ ದೊರೆಯಲು ನಂಬಿಕೆ ಮುಖ್ಯ. ಆ ನಂಬಿಕೆಗೆ ಮನಸ್ಸೂ ಬಗ್ಗುತ್ತದೆ ಎಂಬುದನ್ನು ಆಧುನಿಕ ವಚನಕಾರರು ಹೇಳುತ್ತಾ ಮನಸ್ಸನ್ನು 'ನಾಯಿ'ಯ ಪ್ರತಿಮೆಯಾಗಿಸಿಕೊಂಡು ಅದನ್ನು ನಿಯಂತ್ರಣದಲ್ಲಿಡುವ ಬಗೆಯನ್ನು ಧ್ವನಿಪೂರ್ಣವಾಗಿ ತಿಳಿಸುವ ವಚನಗಳು ಆಧುನಿಕ ರಚನೆಗಳಲ್ಲಿ ಕಾಣಸಿಗುತ್ತವೆ.

'ನಾಯಿ ಬಂದು ಮುಂದೆ ಕುಳಿತು
ಬಾಲವಲ್ಲಾಡಿಸಿ ಜೊಲ್ಲು ಸುರಿಸಿತು
ಒಂದು ಚೂರು; ಎಸೆಯಲಿಲ್ಲ,
ಮತ್ತೆ ನಾಯಿ ಬಂದು, ಮುಂದೆ ಕುಳಿತು
ಬಾಲವಲ್ಲಾಡಿಸಿ, ಜೊಲ್ಲು ಸುರಿಸಿತು
ಒಂದು ಚೂರು ಎಸೆಯಲಿಲ್ಲ ॥
ಹಗಲು-ರಾತ್ರಿ ಕಾಯ್ದು, ಕಾಯ್ದು, ಮರೆಯಾಗಿತ್ತು
ಪ್ರಭು; ನಿಶ್ಚಿಂತ, ಪರಮಾನಂದ
ಪರಮ ಶೂನ್ಯದಲ್ಲಿಪ್ಪೆನು ನೋಡಾ'[೧೬]

ಎನ್ನುವ ಪ್ರತಿಮಾತ್ಮಕವಾದ ಈ ವಚನ, ಮನದ 'ನಾಯಿ' ತನವನ್ನು ವರ್ಣಿಸುವ ಬಗೆಯನ್ನು ಸೂಚಿಸುತ್ತದೆ. ಮತ್ತೆ, ಮತ್ತೆ ಎಲ್ಲದಕ್ಕೂ ಜೊಲ್ಲು ಸುರಿಸುತ್ತ ಕೂಡ್ರುವ ಮನಸ್ಸಿನ ಪರಿ ಎಲ್ಲರಿಗೂ ತಿಳಿದಿರುವ ವಿಷಯವೇ. ಆದರೆ ಅದೆಷ್ಟೇ ಕಾಯ್ದರು, ಪೀಡಿಸಿದರು, ಅದಕ್ಕೆ ಗಮನವಿಡದ ಪರಿ ಏಕಾಗ್ರತೆ

ಕಾಯ್ದುಕೊಳ್ಳಬೇಕಾಗಿರುವ ರೀತಿಯನ್ನು ಈ ವಚನ ವಿವರಿಸುತ್ತದೆ. ಕೆಲವೇ ಸಾಲುಗಳಲ್ಲಿ, ಪುನರಾವರ್ತನೆಯ ಶಬ್ದಗಳಲ್ಲಿ ವ್ಯಕ್ತವಾಗಿರುವ ಈ ಸಂಗತಿಯು ಪರಿಣಾಮಕಾರಿಯಾಗಿ ನಿರೂಪಿತವಾಗಿರುವುದನ್ನು ಅರಿಯಬಹುದು.

**೫-೧-೨ ಆತ್ಮವಿಮರ್ಶೆಯ ಚಿಂತನೆ**

**ಆತ್ಮ ವಿಮರ್ಶೆ** ಬಹುಮುಖ್ಯವಾದುದೆಂಬುದನ್ನು ಉಳಿದವರಿಗೆ ಉಪದೇಶ ಮಾಡುವುದಕ್ಕಿಂತ ತನ್ನ ತಾನು ವಿಮರ್ಶಿಸಿಕೊಂಡು ಬದುಕಬೇಕು. ಬೋಧಕನಾಗುವ ಮೊದಲು ಸಾಧಕನಾಗಬೇಕು ಎಂಬ ವಿಚಾರಗಳು ಇಲ್ಲಿವೆ. ಡಾ. ಬಸವರಾಜ ಸಬರದ ಅವರು ತನ್ನ ಹೆಸರನ್ನೇ ವಚನದ ಅಂಕಿತವಾಗಿರಿಸಿಕೊಂಡು ಆತ್ಮವಿಮರ್ಶೆ ಮಾಡಿಕೊಳ್ಳುವ ಪರಿ ನವೀನವಾಗಿರುವುದನ್ನಿಲ್ಲಿ ಅರಿಯಬೇಕು.

'ಜ್ಞಾನದ ಬಲದಿಂದ ಅಜ್ಞಾನದ ಕೇಡೆಂದು ಹೇಳಿದೆ
ಯಾವುದಯ್ಯಾ ನಿನ್ನ ಜ್ಞಾನ?
ಜ್ಯೋತಿಯ ಬಲದಿಂದ ತಮಂದದ ಕೇಡೆಂದು ಹೇಳಿದೆ
ಯಾವುದಯ್ಯಾ ನಿನ್ನ ಜ್ಯೋತಿ?
ನೀನು ಜ್ಞಾನಿಯಾಗಲೆಂದು ನಾವು ಮಂತ್ರ ಪಠಿಸುತ್ತೇವೆ
ನೀನು ಕತ್ತಲಲ್ಲಿರಬಾರದೆಂದು ನಾವು ಪಣತೆ ಹಚ್ಚುತ್ತೇವೆ
ಜ್ಞಾನಿಯಾಗಲು ನೀನು
ಒಂದು ದಿನವಾದರೂ ಪ್ರಯತ್ನಿಸುತ್ತಿರುವಿಯೇನಯ್ಯಾ?
ಕತ್ತಲೆ ಕಳೆಯಲು ನೀನು
ಒಂದು ದಿನವಾದರೂ ಪಣತೆ ಹಚ್ಚಿರುವೆಯೇನಯ್ಯಾ?
ನೀನೇ ಕತ್ತಲೆಯಲ್ಲಿದ್ದು ಬೇರೆಯವರಿಗೆ
ಹೇಗೆ ಬೆಳಕು ತೋರಿಸುವೆಯಯ್ಯಾ ಸಬರದ ಬಸವ'[೧೭]

ಬೇರೆಯವರಿಗೆ ಉಪದೇಶ ಮಾಡುತ್ತ ಕೂಡುವುದಕ್ಕಿಂತ ತನ್ನ ಕತ್ತಲೆಯನ್ನು ತಾನು ದೂರವಾಗಿಸಿಕೊಳ್ಳಲು ಪ್ರಯತ್ನಿಸಬೇಕೆಂಬ ಆಶೆಯ ಈ ವಚನದಲ್ಲಿದೆ. ಬಸವಣ್ಣನವರ ಉಪದೇಶಾತ್ಮಕವಾದ 'ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ' ಎಂಬ ವಚನದ ಎರಡು ಸಾಲುಗಳನ್ನು ಪ್ರಶ್ನಿಸುತ್ತ, ಅದರಲ್ಲಿ ವಾಸ್ತವಿಕ ಬದುಕಿನ ಹಿನ್ನೆಲೆಯಲ್ಲಿ ಉತ್ತರ ಹುಡುಕಲು ಪ್ರಯತ್ನಿಸುವ ವಿಚಾರವಾದಿ ನೆಲೆಯೊಂದು ಇಲ್ಲಿ ಕಾಣುತ್ತದೆ. ಜ್ಞಾನದ ಬಲದಿಂದ ಅಜ್ಞಾನದ ಕೇಡೆಂದು ಹೇಳಿದೆ ಯಾವುದಯ್ಯ ನಿನ್ನ ಜ್ಞಾನ? ಎನ್ನುವಲ್ಲಿ, ಯಾವ ಜ್ಞಾನದಿಂದ ಅಜ್ಞಾನ ಕೆಡುತ್ತದೆ ಎಂಬ ಪ್ರಶ್ನೆ ಇದೆ. ಜ್ಞಾನಗಳ ಶಾಖೆ ಅನಂತವಾಗಿವೆ.

ಜ್ಞಾನ ಬಹಳ ಶ್ರೇಷ್ಠವಾದುದು. ಅದಿಲ್ಲದಿದ್ದರೆ ಯಾವ ಸಾಧನಗಳೂ ಸಾಧ್ಯವಿಲ್ಲ. ಜ್ಞಾನದ ಬಲವೊಂದಿದ್ದರೆ ಸಾಕು, ಏನು ಬೇಕಾದರೂ ಸಾಧಿಸಬಹುದು. ಮಾನವತೆ ಮೈಗೂಡಬೇಕಾದರೆ ಮೊದಲಿಗೆ ಜ್ಞಾನಬೇಕು. ಸರ್ವಜ್ಞ ಕವಿಯು 'ಜ್ಞಾನವೇ ಜಗದೊಳಗೆ ಮಿಗಿಲು' ಎನ್ನುತ್ತಾನೆ. ಆದರೆ ಇಲ್ಲಿ ವಚನಕಾರರು ಪ್ರಶ್ನಿಸುವ ಜ್ಞಾನ ಯಾವುದು? ಇದಕ್ಕೆ ಕಾರಣವೆಂದರೆ ಪ್ರಪಂಚದಲ್ಲಿ ಹಲವು ಬಗೆಯ ಜ್ಞಾನಗಳಿರುವುದನ್ನು ಕಾಣುತ್ತೇವೆ. ಬಲ್ಲವರು ಅರವತ್ನಾಲ್ಕು ಬಗೆಯ ವಿದ್ಯೆಗಳನ್ನು ಗುರುತಿಸಿದ್ದಾರೆ. ಇವು ಲೌಕಿಕ ಜ್ಞಾನಗಳು ಇವುಗಳನ್ನು ಬಸವಣ್ಣನವರು ಮೂರು ವರ್ಗಗಳಲ್ಲಿ ವಿಂಗಡಿಸಿದ್ದಾರೆ.

'ಶ್ವಾನಜ್ಞಾನ ಗಜಜ್ಞಾನ ಕುಕ್ಕುಟ ಜ್ಞಾನವೆಂಬ
ಜ್ಞಾನತ್ರಯಂಗಳೇನಾದವು? ಕೂಡಲ ಸಂಗಮದೇವಾ
ನಿಮ್ಮನರಿಯದ ಜ್ಞಾನವೆಲ್ಲ ಅಜ್ಞಾನ'[೧೮] ಎಂದಿದ್ದಾರೆ.

ಅಂದರೆ ಇಲ್ಲಿ ಆಧುನಿಕ ವಚನಕಾರರು ಪ್ರಶ್ನಿಸುವ ಪ್ರಶ್ನೆಗೆ ಉತ್ತರವೆಂದರೆ 'ಕೂಡಲ ಸಂಗಮದೇವ'ನನ್ನು ಅರಿಯದ ಅಂದರೆ ಜಗತ್ತನ್ನು ಅಥವಾ ಸಮಾಜವನ್ನು ಅರ್ಥ ಮಾಡಿಕೊಳ್ಳದ ಜ್ಞಾನವೆಲ್ಲ ಅಜ್ಞಾನ. ಶ್ವಾನಜ್ಞಾನ, ಗಜಜ್ಞಾನ, ಕುಕ್ಕುಟ ಜ್ಞಾನಗಳೆಲ್ಲ ಹೊಟ್ಟೆ ಪಾಡಿನ ಜ್ಞಾನಗಳು. ಈ ಜ್ಞಾನಗಳ ಮಟ್ಟದಲ್ಲಿ ನಿಲ್ಲುವುದು ಶರಣರಿಗೆ ಸಮ್ಮತವಲ್ಲ. ಅವರ ಪ್ರಕಾರ ಈ ಜ್ಞಾನಗಳು ವ್ಯರ್ಥವಾದವುಗಳು. ಇವೆಲ್ಲ ಸಾವಿನೊಂದಿಗೆ ಪರ್ಯವಸಾನಗೊಳ್ಳುವವು. ಈ ಎಲ್ಲ ಜ್ಞಾನಗಳ ಹಿಂದಿರುವ, ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾದ, ಎಲ್ಲ ಪರಿವರ್ತನೆಗಳಿಗೆ ಕಾರಣವಾಗಿ, ತಾನು ಮಾತ್ರ ಪರಿವರ್ತನೆಯಾಗದೆ ಇರುವ ಪರಮಶಕ್ತಿ ಅಥವಾ ಪರಮಾತ್ಮನನ್ನು ಅರಿಯುವ ಜ್ಞಾನವೇ ನಿಜಜ್ಞಾನ'[೧೯] ಎನ್ನಲಾಗಿದೆ. ಜ್ಯೋತಿಯು ಸಹ ಇಲ್ಲಿ ನೈಜ ಜ್ಞಾನದ ಸಂಕೇತವಾಗಿ ಬಳಸಿಗೊಂಡು ವ್ಯಕ್ತಿ ತಾನು ಜ್ಞಾನಿಯಾಗಲು ಒಂದು ದಿನವಾದರೂ ಪ್ರಯತ್ನಿಸದಿರುವುದನ್ನು, ತಾನು ಕತ್ತಲಲ್ಲಿರಬಾರದೆಂದು 'ವ್ಯಕ್ತಿ ಜ್ಞಾನಿಯಾಗಬೇಕೆಂಬ ಸೂಚನೆಯನ್ನು ಈ ವಚನ ಅರ್ಥಪೂರ್ಣವಾಗಿ ನೀಡುವುದನ್ನು ಮನಗಾಣಬಹುದು.

ಈ ಜ್ಞಾನಕ್ಕಾಗಿ ಮನದ ಆನಂದ ಮುಖ್ಯವೆಂದು ಹೇಳಲಾಗುತ್ತದೆ. ಗಿರಿಜಾ ಧರ್ಮರಡ್ಡಿಯವರು –

'ಮನದ ಬಂಧನವೇ ದೊಡ್ಡ ಬಂಧನವಯ್ಯಾ
ಮನದ ಬಲವೇ ದೊಡ್ಡ ಬಲವಯ್ಯಾ
ಮನದ ವಿಜಯವೇ ದೊಡ್ಡ ವಿಜಯವಯ್ಯಾ
ಮನದ ಶಾಂತಿ ಆನಂದವೇ ಮಹಾದಾನಂದ'[೨೦]

ಎಂದು ಹೇಳುತ್ತಾರೆ. ಮಾನಸಿಕ ನೆಲೆಯು ಹಾಗೂ ಆತ್ಮ ನಿವೇದನೆಯು ವ್ಯಕ್ತಿಯ ವ್ಯಕ್ತಿತ್ವ ರೂಪಿಸುವಲ್ಲಿ ಮಹತ್ವದ ಪಾತ್ರವಹಿಸುತ್ತದೆ ಎಂಬ ಚಿಂತನೆ ಅನೇಕ ಆಧುನಿಕ ವಚನಗಳಲ್ಲಿ ಕಾಣಸಿಗುತ್ತದೆ.

"ಬಸವಯುಗದ ವಚನಕಾರರು ಬರೆದಂತೆ ಬದುಕಿದರು, ನುಡಿದಂತೆ ನಡೆದು ತೋರಿದರು, ಜ್ಞಾನವನ್ನು ಕ್ರಿಯೆಯಲ್ಲಿ ಅಳವಡಿಸಿ ತೋರಿದರು. ಅವರು ಬದುಕಿನಲ್ಲಿ ಕಂಡುಂಡ ಅನುಭವಗಳನ್ನೇ ಪ್ರಾಮಾಣಿಕವಾಗಿ ಅಭಿವ್ಯಕ್ತಪಡಿಸಿದರು. ತಮ್ಮ ವಚನಗಳ ಮೂಲಕ ತಮ್ಮ ನೈಜತೆಯನ್ನು ಮನಬಿಚ್ಚಿ ತೋರಿಸಿದರು. ಅವರ ಬದುಕು ತೆರೆದಿಟ್ಟ ಪುಸ್ತಕ, ಘನಮನ ಸಂಪನ್ನರು, ದಾರ್ಶನಿಕರು, ಅನುಭಾವಿಗಳಾಗಿದ್ದ ಶರಣರಿಗೆ ಬದುಕು ದೊಡ್ಡದಾಗಿ ಕಂಡಿದೆ. ನಡೆ–ನುಡಿಗಳ ಸಮನ್ವಯ ಸಾಧನೆಗೆ ಅವರು ಹೆಚ್ಚು ಒತ್ತುಕೊಟ್ಟಿದ್ದಾರೆ, ಮಹಾ ದೇವಿಯಕ್ಕ ತನ್ನೊಂದು ವಚನದಲ್ಲಿ 'ನಡೆಯದ ನುಡಿಗಡಣ, ಮಾಡದ ಕಲಿತನ, ಚಿತ್ರದ ಸತಿಯ ಶೃಂಗಾರವೇತಕ್ಕೆ ಪ್ರಯೋಜನ' ಎಂದಿದ್ದಾಳೆ.[೨೧] ಆದರೆ ಆಧುನಿಕ ವಚನಕಾರರು ಹಾಗಲ್ಲ. ಇವರು ಮುಖ್ಯವಾಗಿ ಸಾಹಿತಿಗಳು, ಕವಿಗಳು. ಇವರ ನಡೆಗೂ–ನುಡಿಗೂ ತಳಕು ಹಾಕಿ ಶರಣರಂತೆ ಇವರನ್ನು ನೋಡುವುದಾಗಲಿ, ವಿಮರ್ಶಿಸುವುದಾಗಲಿ ಸಾಧುವೆನ್ನಿಸದು. ಧಾರ್ಮಿಕ ಪ್ರವೃತ್ತಿ ಹಾಗೂ ಅದರ ಮೂಲ ಪ್ರೇರಣೆಯಿಂದಲೇ ವಚನಗಳನ್ನೇನು ಇವರು ಬರೆದವರಲ್ಲ. ಧಾರ್ಮಿಕ ದೃಷ್ಟಿ, ನೀತಿ, ವಿಷಯ ಇವರ ವಚನಗಳಲ್ಲಿ ಬಂದಿಲ್ಲವೆಂದಲ್ಲ. ಬಂದರೂ ಅವು

ಪ್ರಮುಖವಾಗಿಲ್ಲ. ಕೆಲವು ವಚನಕಾರರು ವಿಶೇಷವಾಗಿ ಮಠಾಧೀಶರಾಗಿರುವವರು ಹಾಗು ಬಸವತತ್ವಾಭಿಮಾನಿ ವಚನಕಾರರು ಮಾತ್ರ ತಮ್ಮ ವಚನಗಳ್ಲಲಿ ರೀತಿ–ನೀತಿ, ನಡಾವಳಿಗೆ ನೆಲೆಯೊದಗಿಸಿದ್ದಾರೆ ಎನ್ನಬಹುದು.

'ನೇರ ನಡೆ–ನುಡಿಗೆ ಸಾವಿರ ಆನೆಯ ಬಲವುಂಟು
ಸದ್ಗುಣಕೆ ಜಗವ ವ್ಯಾಪಿಸುವ ಬಲವುಂಟು
ಸತ್ಯ ಸುವಿಚಾರ ಉಳ್ಳೊಡೆ ನುಡಿದುದಾಗುವುದು
ಇದು ಪವಾಡವಲ್ಲ ಉಳ್ಳೊಡೆ ನುಡಿದುದಾಗುವುದು
ಶರಣ ಕಿರಣಪ್ರಿಯ ಮಾಣಿಕನು'[೨೨]

ಆಧುನಿಕ ರೀತಿಯಲ್ಲಿ ನೇರ ನಡೆ, ನೇರ ನುಡಿಗೆ ಮಹತ್ವವಿರುವುದನ್ನು, ಸದ್ಗುಣಕ್ಕೆ ಗೌರವ ಇರುವುದನ್ನು ಒಳ್ಳೆಯ ವಿಚಾರ ಹಾಗೂ ಸತ್ಯಕ್ಕೆ ಈಗಲೂ ಬೆಲೆ ಬರುವುದನ್ನು ಹೇಳುವ ವಚನಕಾರರು, ಇದು ಪವಾಡವಲ್ಲ ದಿಟ್ಟ ಮಾತೆಂದು ಭರವಸೆಕೊಡುತ್ತಾರೆ.

'ನುಡಿಗಿಂತ ನಡೆಗೆ ಮನ್ನಣೆಯುಂಟು
ವಿಚಾರಕ್ಕಿಂತ ಆಚಾರಕ್ಕೆ ಮನ್ನಣೆಯುಂಟು
ವಿದ್ಯೆಗಿಂತ ವಿನಯಕ್ಕೆ ಮನ್ನಣೆಯುಂಟು
ದಯೆಯುಳ್ಳ ಧರ್ಮಕ್ಕೆ ಜಗದೊಳು
ಹೆಚ್ಚು ಮನ್ನಣೆಯುಂಟು ನೋಡಾ
ವೀರಭದ್ರೇಶ್ವರಾ'[೨೩]

ಎಂದು ಹೇಳುವಲ್ಲಿ ಆಧುನಿಕ ವಚನಕಾರರಲ್ಲಿಯೂ ನುಡಿಗಿಂತ ನಡೆಗೆ, ವಿಚಾರಕ್ಕಿಂತ ಆಚಾರಕ್ಕೆ, ವಿದ್ಯೆಗಿಂತ, ವಿನಯಕ್ಕೆ ಹೆಚ್ಚು ಮನ್ನಣೆಯಿರುವುದನ್ನು ಕಾಣುತ್ತೇವೆ. ೧೨ನೆಯ ಶತಮಾನದ ಶರಣರ ವಚನ ಪರಂಪರೆಯನ್ನು ಮುಂದುವರಿಕೆಯಾಗಿ ಸ್ವೀಕರಿಸಿದ ಆಧುನಿಕ ವಚನಗಳನ್ನು ಈ ನೆಲೆಯಲ್ಲೂ ಗುರುತಿಸಬಹುದಾಗಿದೆ.

'ಗುರು ಎನಿಸಿದರೇನು? ತನು ಶುಚಿಯಿಲ್ಲದವನು
ಸ್ವಾಮಿ ಎನಿಸಿದರೇನು? ಮಠ ಶುಚಿಯಿಲ್ಲದವರು
ಜಂಗಮವೆನಿಸಿದರೇನು? ಮಾತು ಮನ ಶುಚಿಯಿಲ್ಲದವನು
ಜ್ಞಾನಿಯಾದರೇನು? ಮಾನ ಮರ್ಯಾದೆ ಇಲ್ಲದವನು
ಏನೆನಿಸಿದರೇನಯ್ಯಾ? ನಾನು–ನೀನೆಂಬ ಹಮ್ಮು
ಬಿಡದವನು ವೇಷಧಾರಿ ಎನಿಸನೇ? ನೀನೆ ಹೇಳು
ಸೋಮಲೋಚನ ಪ್ರಿಯ ಬಸವಣ್ಣ'[೨೪]

ಎನ್ನುವ ಈ ವಚನದಲ್ಲಿ ನಡೆ–ನುಡಿಯಲ್ಲಿರುವ ತಾರತಮ್ಯವನ್ನು ಹಿಡಿದಿಡಲಾಗಿದೆ. ಈ ತಾರತಮ್ಯವನ್ನು ನಿವಾರಿಸಿಕೊಂಡು ಬದುಕಿನಲ್ಲಿ ತಮ್ಮ ಆಚಾರ–ವಿಚಾರಗಳಲ್ಲಿ ಸಮನ್ವಯತೆ ಸಾಧಿಸಿಕೊಳ್ಳಬೇಕೆಂಬ ಆಶಯವು ಆಧುನಿಕ ವಚನಕಾರರಲ್ಲಿ ಕಾಣುತ್ತದೆ. ಆ ಕಾರಣಕ್ಕಾಗಿಯೇ ಎಂಥ ಜ್ಞಾನಿಯಾದರೂ, ವೈಯಕ್ತಿಕ ಬದುಕಿನಲ್ಲಿ 'ನೀನು–ನಾನೆಂಬ' ಭಾವವನ್ನು ಇರಿಸಿಕೊಳ್ಳಬಾರದೆಂಬ ಸೂಚನೆ ಇಲ್ಲಿದೆ. ಹಾಗಾಗದಿದ್ದರೆ ಅವರೆಲ್ಲರೂ

ವೇಷಧಾರಿಗಳು ಎಂಬ ನುಡಿಯಲ್ಲಿರುವ ಧ್ವನಿಯನ್ನು ಮನಗಾಣಬಹುದು. ಇದೇ ಭಾವವನ್ನು ವ್ಯಕ್ತಪಡಿಸುವ ಇನ್ನೊಂದೂ ವಚನವೊಂದು ಹೀಗಿದೆ.

'ರುಚಿಯನ್ನು ಕಂಡರು, ರುಚಿಯನ್ನರಿಯದೆ ಕೆಟ್ಟರು
ಜ್ಞಾನವನ್ನೇ ಕಂಡರು, ಜ್ಞಾನವನ್ನರಿಯದೇ ಕೆಟ್ಟರು
ಆತ್ಮವನ್ನೇ ಕಂಡರು, ಆತ್ಮವನ್ನರಿಯದೆ ಕೆಟ್ಟರು
ಶರಣರನ್ನು ಕಂಡರು, ಶರಣರನ್ನರಿಯದೆ ಕೆಟ್ಟರು
ಬಸವನನ್ನು ಕಂಡರು, ಬಸವಧರ್ಮವನ್ನರಿಯದೇ ಕೆಟ್ಟರು
ಶಿವಾನಂದ ಪ್ರಿಯ ಗುರು ಬಸವ ಪ್ರಭುವೇ'[೨೫]

ವ್ಯಕ್ತಿಯೊಬ್ಬನ ಅರುಹಿನಲ್ಲಿರಬೇಕಾದ ದ್ವಂದ್ವ ರಹಿತ ಜೀವನ, ಜ್ಞಾನದ ಪರಿಯನ್ನು ಈ ವಚನ ಹೇಳುತ್ತದೆ. ಕಾಣುವುದು ಮತ್ತು ಅದನ್ನು ಕೃತಿಯಲ್ಲಳವಡಿಸಿಕೊಳ್ಳುವಲ್ಲಿ ವಿಫಲವಾಗಿರುವ ವಿಚಾರವನ್ನು ಇಲ್ಲಿ ಅರಿಯಬಹುದು. ವ್ಯಕ್ತಿ ತನ್ನ ವ್ಯಕ್ತಿತ್ವದಲ್ಲಿನ ಇಬ್ಬಂದಿತನವನ್ನು ಕಳೆದುಕೊಂಡು ತನ್ನ ನಡೆ–ನುಡಿಯಲ್ಲಿ ಸಾಮರಸ್ಯ ಸಾಧಿಸಲು ಪ್ರಯತ್ನಿಸಬೇಕೆಂಬ ಕಡೆಗೆ ಇಂಥ ವಚನಗಳ ಗಮನವಿದೆ. ವ್ಯಕ್ತಿಯ ಪರಿಶುದ್ಧತೆ ಕಾಣುವುದು ದ್ವಂದ್ವಗಳಲ್ಲಲ್ಲ. ಸಾಮರಸ್ಯದ ಬದುಕಿನಲ್ಲಿ. ಅದಕ್ಕಾಗಿ ತನು–ಮನ, ಆಚಾರ–ವಿಚಾರಗಳಲ್ಲಿ ದೃಢನಿಷ್ಠೆ, ಅಹಂ ನಿರಸನ, ಸರ್ವಾರ್ಪಣ ಭಾವ ಬೇಕೆಂಬ ನೆಲೆಯಲ್ಲಿ ಈ ವಚನಗಳ ಆಶಯವಿರುವುದು. ವ್ಯಕ್ತಿ ತನ್ನ ವೈಯಕ್ತಿಕ ಜೀವನವನ್ನು ದೊಡ್ಡದು ಮಾಡಿಕೊಳ್ಳದ ಹೊರತು ಸಮಾಜವನ್ನು ದೊಡ್ಡದು ಮಾಡಲಾರ ಎಂಬ ಚಿಂತನೆಯು ಆಧುನಿಕ ವಚನಗಳಲ್ಲಿದೆ.

ಯಾರೇ ಆಗಲಿ, ಏನೇ ಮಾಡಲಿ ಎಷ್ಟೇ ದೊಡ್ಡವರಾಗಿರಲಿ, ಬುದ್ಧಿವಂತರಾಗಿರಲಿ, ಶ್ರೀಮಂತನಾಗಿರಲಿ, ಶಕ್ತಿವಂತನಾಗಿರಲಿ, ಅವನು ಇನ್ನೊಬ್ಬರ ಸಂಪರ್ಕ, ಸಹಾಯ, ಸಹಕಾರವಿಲ್ಲದೆ ತಾನೊಬ್ಬನೇ ತನ್ನ ಪಾಡಿಗೆ ತಾನು ಜೀವನ ಮಾಡಲು ಸಾಧ್ಯವೇ ಇಲ್ಲ. ಅಂದಾಗ ಪ್ರತಿಯೊಬ್ಬ ಮನುಷ್ಯನು ಸಮಾಜದ ಒಂದೊಂದು ಅವಿಭಾಜ್ಯ ಅಂಗವೇ ಆಗುತ್ತಾನೆ. ಉತ್ತಮ ಸಮಾಜ ನಿರ್ಮಾಣದಲ್ಲಿ ಉತ್ತಮ ವ್ಯಕ್ತಿಯೂ ಮುಖ್ಯವೆಂಬ ನಿಲವುಳ್ಳ ಆಧುನಿಕ ವಚನಗಳನ್ನೂ ನಾವಿಲ್ಲಿ ಗಮನಿಸಬಹುದು.

ಕಾವಿ ತೊಟ್ಟು ಕಾಯಕದಲ್ಲಿ ನಿರತರಾಗದಿದ್ದಡೆ
ಕಾವಿ ತೊಟ್ಟು ಫಲವೇನು?
ಖಾಕಿ ತೊಟ್ಟು ಕರ್ತವ್ಯ ಅರಿಯದಿದ್ದಡೆ
ಖಾಕಿ ತೊಟ್ಟು ಫಲವೇನು?
ಖಾದಿ ತೊಟ್ಟು ನಿಸ್ವಾರ್ಥ ಸಮಾಜಸೇವೆ ಮಾಡದಿದ್ದಡೆ
ಖಾದಿ ತೊಟ್ಟು ಫಲವೇನು?
ಭಕ್ತನಾದ ಬಳಿಕ ಲಿಂಗವನರಿಯದಿದ್ದಡೆ
ಡಂಭಾಚಾರದ ಆಟ ನೋಡಾ
ಗುರುನಂಜೇಶ್ವರಾ[೨೬]

ಅಧಿಕಾರ, ವೃತ್ತಿ, ಪ್ರವೃತ್ತಿಗೆ ತಕ್ಕಂತೆ ವೇಷಧಾರಿಯಾಗುವುದರಿಂದ ಪ್ರಯೋಜನವಿಲ್ಲ. ಕಾಯಕ, ಕರ್ತವ್ಯ, ನಿಸ್ವಾರ್ಥ, ಸಮಾಜ ಸೇವೆ ಮಾಡಬೇಕೆಂದು ಈ ವಚನ ಹೇಳುತ್ತದೆ. ಅರ್ಥಪೂರ್ಣ ಸಮಾಜ ನಿರ್ಮಾಣ ವಾಗಲು

ನಿಸ್ವಾರ್ಥ ವ್ಯಕ್ತಿಗಳ ಅವಶ್ಯಕತೆಯಿದೆ. ಡಂಬಾಚಾರಕ್ಕೆ ಹಾಗೆ ಮಾಡುವುದರಿಂದ ಏನೂ ಸಾಧಿಸಲು ಸಾಧ್ಯವಿಲ್ಲ. ಭಕ್ತನಾದ ಬಳಿಕ ಅಂದರೆ ನಿಜ ಪ್ರೀತಿಯನ್ನು ಉಳಿಸಿಕೊಂಡ ಮಾನವನಾಗಿದ್ದರೆ ಈ ಜಗತ್ತನ್ನು (ಲಿಂಗ) ಅರಿಯಬೇಕು. ವಿಶ್ವಪ್ರಜ್ಞೆಯಲ್ಲಿ ಬಾಳಬೇಕೆಂಬ ಹಿನ್ನೆಲೆಯಲ್ಲಿ ಈ ವಚನ ರಚನೆಗೊಂಡಿದೆ ಎನ್ನಬಹುದು.

ವ್ಯಕ್ತಿಗಳು ಅನುಕರಣೆ, ಸಲಹೆ ಮತ್ತು ಸಹಾನುಭೂತಿಗಳ ಮೂಲಕ ಪರಸ್ಪರ ಪ್ರಭಾವ ಬೀರುತ್ತಾರೆ. ವ್ಯಕ್ತಿಯು ಹೊಗಳಿಕೆ ಮತ್ತು ನಿಂದನೆ, ಸಹಕಾರ ಮತ್ತು ಘರ್ಷಣೆ, ದೀನತೆ ಮತ್ತು ಪ್ರಬಲತೆ ಮೊದಲಾದ ಸಮಾಜದಲ್ಲಿನ ಪ್ರಕ್ರಿಯೆಗಳಿಂದ ಪ್ರಭಾವಿತನಾಗುತ್ತಾನೆ. ಇವುಗಳು ಅವನ ವ್ಯಕ್ತಿತ್ವ ಮತ್ತು ವೈಯಕ್ತಿಕತೆಗಳನ್ನು ರೂಪಿಸಿಕೊಳ್ಳಲು ಸಹಾಯ ಮಾಡುತ್ತವೆ. ಇದರಿಂದಾಗಿಯೇ ವ್ಯಕ್ತಿಯು ತನ್ನಲ್ಲಿ ಸಮುದಾಯ ಭಾವನೆ ಮತ್ತು ಇತರರೊಡನೆ ಸಹಕರಿಸಿ ಬಾಳುವುದನ್ನು ವ್ಯಾಪಕವಾಗಿ ಕಲಿಯುತ್ತಾನೆ. ಹೀಗೆ ಸಮಾಜದಲ್ಲಿ ಎಲ್ಲರೂ ಹೊಂದಾಣಿಕೆಯಿಂದ ಬಾಳಲು ಪ್ರತಿ ವ್ಯಕ್ತಿಯ ವೈಯಕ್ತಿಕ ನೆಲೆಯೂ ಪ್ರಮುಖವಾಗುತ್ತದೆ. ಅಂತಹ ನೆಲೆಯಲ್ಲಿಯೇ ಆಧುನಿಕ ವಚನಗಳ ರಚನೆ ಮೂಡಿಬಂದಿರುವುದನ್ನು ಅರಿಯಬಹುದು.

ಮಧ್ಯರಾತ್ರಿ ಎದ್ದವರೆಲ್ಲ
ಬುದ್ಧರಾಗಬಲ್ಲರೇನಯ್ಯಾ
ಮಧ್ಯಮಾಂಸ ಬಿಟ್ಟವರೆಲ್ಲ
ಸಿದ್ಧರಾಗಬಹುದೇನಯ್ಯಾ
ಕದ್ದು ತಂದು ಹಣ ಹಂಚಿದವರೆಲ್ಲ
ಮಹಾದಾನಿಗಳಾಗಬಹುದೇನಯ್ಯಾ
ಅರಿವು ಆಚಾರದಲ್ಲಿ ಪರಿಶುದ್ಧನೇ
ಪರಿಪೂರ್ಣ ಮಾನವನಯ್ಯಾ
ಸುವರ್ಣ ಮಹೋತ್ಸವದ ಸೂಗೂರೇಶ್ವರ[೨೭]

ಇಲ್ಲಿ ಪರಿಪೂರ್ಣ ಮಾನವರಾರು? ಎಂಬುದನ್ನು ಕುರಿತು ಚಿಂತಿಸಲಾಗಿದೆ. ಅದಕ್ಕೆ ಬುದ್ಧ, ಸಿದ್ಧರ ಐತಿಹಾಸಿಕ ಸಂಗತಿಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ಮಧ್ಯರಾತ್ರಿ ಏಳುವುದರಿಂದ, ಮಧ್ಯಮಾಂಸ ಬಿಡುವುದರಿಂದ ವ್ಯಕ್ತಿ ಶ್ರೇಷ್ಠನಾಗುವುದಿಲ್ಲ. ವ್ಯಕ್ತಿಯ ವ್ಯಕ್ತಿತ್ವಕ್ಕೆ ಅರಿವು ಆಚಾರದಲ್ಲಿ ಪರಿಶುದ್ಧತೆ ಬೇಕು ಎಂಬುದನ್ನು ವಚನ ಹೇಳುತ್ತದೆ. ಜೀವನದಲ್ಲಿ ಏನು ಗಳಿಸಿದರೇನು? ಎಷ್ಟು ಗಳಿಸಿದರೇನು? ಭ್ರಷ್ಟನ ಬಾಳುವೆ ಕನಿಷ್ಠವೆನ್ನುವ ಮಾತೂ[೨೮] ಇದೆ. ಮಾನವನಿಗೆ ನಿಜದರಿವು ಮುಖ್ಯ ಅದನ್ನು ಕರುಣಿಸು ಎಂಬ ನೆಲೆಯ ವಚನವನ್ನು ಇಲ್ಲಿ ಗಮನಿಸಬಹುದು.

ನಿಶಿತಮತಿಯು ನಾನು
ಮಹಾಜ್ಞಾನಿಯು ನೀನು
ಬಾಯಿ ಮಾತಿಗೆ ನಂಬುವ ಮರುಳುಗೊಂಬೆ ನಾನು

ಹಾರು ಹಕ್ಕಿ ಪುಚ್ಚ ಎಣಿಸುವ ಚತುರ ನೀನು
ಹಿಂದು ಮುಂದನರಿಯದ ಮುಗ್ಧ ನಾನು
ಜಗದ ಜನರ ನೆಲೆ ಬೆಲೆಯನರಿತವನೀನು
ನಿನ್ನಂತೆ ಎನಗೂ ಅರಿವನ್ನಿತ್ತು ಸಲಹಾ
ನಿಜಗುರ ಮಹಾಂತ ಲಿಂಗ[೨೯]

ಮಹಾಂತಲಿಂಗನರಿಯುವ ಅರಿವು ವ್ಯಕ್ತಿಗೆ ಬೇಕು. ಅದು ಮೂಢಬೇಕಾದರೆ 'ನಾನು-ನೀನು' ಎಂಬ ಶಬ್ದಗಳ ಅರಿವು ಇರಬೇಕು. ದ್ವೈತ ಭಾವದ ಈ ವಚನ 'ನಾನು-ನೀನು' ಎನ್ನುವ ಚಿಂತನೆಯಲ್ಲಿನ ಭಿನ್ನತೆಗಳನ್ನು ತಿಳಿಸುತ್ತದೆ. ಆದರೂ ಜಗದ ಜನರ ನೆಲೆ ಬೆಲೆ ಅರಿಯಲು ವಚನಕಾರರು ಹಂಬಲಿಸುವುದನ್ನು ಅದಕ್ಕಾಗಿ ದೇವನೊಲುಮೆಯ ಅರಿವು ಬೇಕೆಂಬುದನ್ನು ತಿಳಿಸುತ್ತದೆ. ವ್ಯಕ್ತಿಯೋರ್ವನ ವ್ಯಕ್ತಿತ್ವವು ಮಾತ್ರ ಜಗತ್ತಿನ ಜನರನ್ನು ಅವರ ನೆಲೆ-ಬೆಲೆಗಳನ್ನು ಅರಿಯಲು ಸಾಧ್ಯವೆಂಬ ಚಿಂತನೆಯು ಇಲ್ಲಿ ಕಾಣಸಿಗುತ್ತದೆ.

ಇಂದು ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳಿಂದ ಸಮಾಜದಲ್ಲಿ ಅಸ್ಥಿರತೆ, ಆರ್ಥಿಕ ಹಿಂಜರಿತ, ಅಶಾಂತಿ, ಅಭದ್ರತೆ, ಭ್ರಷ್ಟತೆ, ವಂಚನೆ, ಸ್ವಾರ್ಥತೆ ಮೊದಲಾದವುಗಳು ತಾಂಡವವಾಡುತ್ತಿವೆ. ಹೀಗಾಗಿ ಸಮಾಜದಲ್ಲಿ ಸಾಮರಸ್ಯದ ಬದುಕಿಗಿಂತ ಸಂಘರ್ಷ, ತಲ್ಲಣಗಳು ಎದ್ದು ಕಾಣುತ್ತಿವೆ. ಇದಕ್ಕೆ ವ್ಯಕ್ತಿಗಳಲ್ಲಿಯ ಸ್ವಾರ್ಥ, ವಂಚನೆ, ಅಹಂಕಾರ, ಸಂಗ್ರಹಬುದ್ಧಿ, ಅಧಾರ್ಮಿಕತೆಗಳೇ ಕಾರಣವಾಗಿದ್ದು ಈ ವಿಷಯಗಳ ಚಿಂತನೆಯ ನೆಲೆಯನ್ನೂ ಆಧುನಿಕ ವಚನ ಸಾಹಿತ್ಯ ಉಳಿಸಿಕೊಂಡಿದೆ.

ವಿದ್ಯೆಯ ವಿಸ್ತಾರ ಮಾಡಿಕೊಂಡವರುಂಟು
ವಿವೇಕ ವಿಸ್ತಾರ ಮಾಡಿಕೊಂಡವರ ಕಾಣೆ
ಅಧಿಕಾರ ವಿಸ್ತಾರ ಮಾಡಿಕೊಂಡವರುಂಟು
ಅನುಭಾವ ವಿಸ್ತಾರ ಮಾಡಿಕೊಂಡವರ ಕಾಣೆ
ಮನೆ ವಿಸ್ತಾರ ಮಾಡಿಕೊಂಡವರುಂಟು
ಮನ ವಿಸ್ತಾರ ಮಾಡಿಕೊಂಡವರ ಕಾಣೆ
ಆಸ್ತಿ ವಿಸ್ತಾರ ಮಾಡಿಕೊಂಡವರುಂಟು
ಆತ್ಮ ವಿಸ್ತಾರ ಮಾಡಿಕೊಂಡವರ ಕಾಣೆನಯ್ಯಾ
ಬಸವಲಿಂಗ[೩೦]

ಈ ವಚನ ವಿದ್ಯೆ, ಅಧಿಕಾರ, ಮನೆ, ಆಸ್ತಿಯನ್ನು ಸಂಪಾದಿಸಿದವರನ್ನು ಕುರಿತು ಹೇಳುತ್ತದೆ. ಆದರೆ ಇವೆಲ್ಲ ಸ್ವಾರ್ಥ ಸಾಧನೆಗಳು. ಪರಾರ್ಥಕ್ಕಾಗಿ ಇವರು ವಿವೇಕ, ಅನುಭಾವ, ಮನಸ್ಸು ಹಾಗೂ ಆತ್ಮವನ್ನು ವಿಸ್ತಾರಮಾಡಿಕೊಂಡಿಲ್ಲವೆಂಬ ಕೊರಗು ವಚನಕಾರರಲ್ಲಿದೆ. ಹಣಗಳಿಸಿದವನ ಮಕ್ಕಳು ಗುಣಹೀನರಾದ ಸಂಗತಿಯನ್ನು ಸಿದ್ಧರಾಮ ಪೊಲೀಸ ಪಾಟೀಲರು ಹೇಳುತ್ತಾರೆ.

ಹಣವು ಗಳಿಸಲು ಈತ । ಕಣ್ಗೆ ನಿದ್ರೆಯು ಇಲ್ದೆ
ಹೆಣವಾದ ದುಡಿದು । ತಿಂದು ಕೊಬ್ಬಿದ ಮಕ್ಳು
ಗುಣ ಹೀನರಾದ್ರು ಸತ್ಯಜ್ಞ[೩೧]

ಸ್ವಾರ್ಥ, ಸಂಗ್ರಹಬುದ್ಧಿ, ವಂಚನೆಗಳೆಲ್ಲ ಅವಗುಣಗಳ ಮೂಲ. ಇಂದು ಮಾನವ ಸ್ವಕೇಂದ್ರಿತವಾಗುತ್ತಿದ್ದಾನೆ. ಸ್ವಾರ್ಥಕ್ಕಾಗಿ ಏನು ಬೇಕಾದರೂ ಮಾಡಲು ಸಿದ್ಧನಾಗಿರುತ್ತಾನೆ. ವ್ಯಕ್ತಿಯ ಈ ಸ್ವಾರ್ಥತನದಿಂದ ಸಮಾಜದ ಅಶಾಂತಿಗೆ ಕಾರಣವಾಗುವುದರೊಂದಿಗೆ, ಸ್ವಾರ್ಥಿಯ ಮುಂದಿನ ಪರಿವಾರವೂ ಹಾಳಾಗುವುದನ್ನು ಇಂಥ ವಚನಗಳು ವಿವರಿಸುತ್ತವೆ. ಸ್ವಾರ್ಥಿಗಳು ಹೊಟ್ಟೆಬಡುಕರು ಎಂದು ಹೇಳುವ ವೀರಶೆಟ್ಟಿ ಬಾವುಗೆಯವರು

ಹೊಟ್ಟೆ ಬಡುಕನೊಬ್ಬ ಜಗದೊಳಗೆ ಭ್ರಷ್ಟತನವನ್ನೇ ಸೃಷ್ಟಿಸಿ
ದಿನನಿತ್ಯ ಹಲವು ಪ್ರಾಣಿಯ ಕೊಂದು ತಿಂದು ನಲಿ–ನಲಿದಾಡುವ
ತನ್ನ ಮನೆಯಲ್ಲೊಬ್ಬ ಸತ್ತರೆ ಅದಕೇಕೆ ಮರುಗುವನು?
ಹೊಟ್ಟೆ ಬಡುಕನ ದುಃಖ ಎಮ್ಮ
ವೀಪ್ರಬಾಧ ಪ್ರಿಯ ವರಗುರು ಬಸವೇಶನಲ್ಲಿ ಸಲ್ಲ[೩೨]

ಎಂದು ಹೇಳುವಲ್ಲಿ ಹೊಟ್ಟೆ ಬಡುಕ ಸ್ವಾರ್ಥಿಗಳ ಹೀನತನವನ್ನು ಬಯಲಿಗೆಳೆಯುತ್ತಾರೆ. ಅತಿ ಭ್ರಷ್ಟನಾಗಿರುವ ಆತ ಪ್ರತಿನಿತ್ಯ ಹಿಂಸೆ ಮಾಡಿ, ಪ್ರಾಣಿಗಳ ಕೊಂದು ತಿಂದು ನಲಿ ನಲಿದಾಡುತ್ತಾನೆ. ಆದರೆ ತನ್ನ ಮನೆಯಲ್ಲೊಬ್ಬ ಸತ್ತರೆ ಅದೇಕೆ ಮರಗುತ್ತಾನೆಂದು ಪ್ರಶ್ನಿಸುವಲ್ಲಿ, ಪರರಿಗೆ ದುಃಖ ಕೊಡುವಲ್ಲಿ ಹಿಂಜರಿಯದ ಹೊಟ್ಟೆ ಬಡುಕರು ತಮ್ಮ ಮನೆಯಲ್ಲಿ ದುಃಖಿಸುವ ಪ್ರಸಂಗ ಬಂದಾಗ ಮಾತ್ರ ಮರುಗುತ್ತಾರೆ. ಆದರೆ ಇಂಥವರ ದುಃಖ ಯಾರಿಗೂ ಸಲ್ಲುವುದಿಲ್ಲವೆಂದು ಹೇಳುವಲ್ಲಿ, ಅಂಥವರ ಕುರಿತ ಆಕ್ರೋಶವಿರುವುದನ್ನು ಇಂಥ ವಚನಗಳಲ್ಲಿ ಕಾಣುತ್ತೇವೆ. ವ್ಯಕ್ತಿಯೊಬ್ಬನ ಭ್ರಷ್ಟತನದಿಂದ ದಿನನಿತ್ಯ ಸಮಾಜದ ಸಮುದಾಯಗಳಲ್ಲಿ ಉಂಟಾಗುವ ದುಷ್ಪರಿಣಮದ ಚಿತ್ರ ಇಲ್ಲಿ ಕಾಣುತ್ತದೆ.

**೫–೧–೩ ಅಂತರಂಗ–ಬಹಿರಂಗ ಚಿಂತನೆಯ ನೆಲೆ**

೧೨ನೆಯ ಶತಮಾನದ ವಚನಕಾರರಂತೆ ಆಧುನಿಕ ವಚನಕಾರರ ವಚನಗಳಲ್ಲಿ ಅಂತರಂಗ–ಬಹಿರಂಗ ಶುದ್ಧಿಯ ನೆಲೆಗಳೂ ಅಭಿವ್ಯಕ್ತಗೊಂಡಿವೆ. ಮಾನವನ ಪ್ರತಿಯೊಂದು ಚಟುವಟಿಕೆಯ ಹಿಂದೆ ಒಂದು ಶಕ್ತಿ ಇದೆ ಎಂಬ ಆಲೋಚನೆ ಇಲ್ಲಿಯ ಹೆಚ್ಚಿನ ವಚನಕಾರರಲ್ಲಿದೆ. ತನ್ನ ಕೈಕಾಲು, ದೇಹ, ಕಣ್ಣು, ಕಿವಿಗಳು ಹೊರಗೆ ಕಾಣುವ ಒಂದು ರೂಪವಾದರೆ, ಇವೆಲ್ಲವುಗಳ ಹಿಂದೆ ಕಾರ್ಯನಿರ್ವಹಿಸುವ ಚೈತನ್ಯ ಶಕ್ತಿಯೊಂದು ಮಾನವನಲ್ಲಿಯೇ ಇದೆ ಎಂಬುದನ್ನು ಆಲೋಚಿಸಿದರು. ಡಾ. ಸೋಮನಾಥ ಯಾಳವಾರ ಅವರ ಈ ವಚನವನ್ನಿಲ್ಲಿ ಗಮನಿಸಬಹುದು.

ಕಣ್ಣಿದ್ದೂ ನಿಜವ ಕಾಣದವನು ಕುರುಡ
ಕಿವಿಯಿದ್ದೂ ಒಳ್ಳೆಯದನ್ನು ಕೇಳದವನು ಕಿವುಡ
ಮಾತಿದ್ದೂ ಮೌನ ಮಹಿಮೆ ಅರಿಯದವನು ಮೂಕ
ಕಾಲಿದ್ದೂ ಸತ್ಪಥದತ್ತ ನಡೆಯದವನು ಕುಂಟ
ಏನಿದ್ದರೇನು? ಅಂತರಂಗದ ಕಣ್ಣು ತೆರೆದು
ನೋಡದವ ಅಜ್ಞಾನಿ ನೋಡಾ
ಸೋಮಲೋಚನ ಪ್ರಿಯ ಬಸವಣ್ಣ[೩೩]

ಮಾನವತೆಯ ಒಳನೋಟ ಮನುಷ್ಯನಾದವನಲ್ಲಿ ಸದಾ ಜಾಗೃತವಾಗಿರಬೇಕೆಂಬ ಆಶಯದ ನೆಲೆಯಲ್ಲಿ ಈ ವಚನದ ರಚನೆಯಾಗಿದೆ. ಜ್ಞಾನಿಯಾದವನ ಅಂತರಂಗದ ಕಣ್ಣು ಸದಾ ತೆರೆದಿರಬೇಕೆಂಬ ನಿಲುವು ಇಲ್ಲಿದೆ. ಹಾಗಿಲ್ಲದಿದ್ದರೆ ಮನುಷ್ಯ ಕಣ್ಣಿದ್ದೂ ಕುರುಡನಾಗುತ್ತಾನೆ. ಹಾಗೆಯೇ ಮೌನದ ಮಹಿಮೆ ಅರಿತವನು ಮಾತ್ರ ಮಾತುಬಲ್ಲವನಾದರೆ, ಸತ್ಯದ ಕಡೆಗೆ ನಡೆಯದವನ ಕಾಲುಗಳಿದ್ದರೂ ಅವನು ಕುಂಟನಾಗಿದ್ದಾನೆ ಎನ್ನುವ ಮಾತಿನ ಹಿನ್ನೆಲೆಯನ್ನು ಇಲ್ಲಿ ಅರಿಯಬೇಕು ಒಳ್ಳೆಯತನವೇ ಅಂತರಂಗದ ಸ್ಫುರಣೆಯಾಗಬೇಕು, ಇದನ್ನೇ ವಿಮರ್ಶಕರು ಹೀಗೆ ಹೇಳುತ್ತಾರೆ. "ಲಿಂಗಾಂಗ ಸಾಮರಸ್ಯದ ಮೌನದಲ್ಲಿ ತಮ್ಮೊಳಗಿನ ಘನದ ಜೊತೆ ಮಾತನಾಡಲರಿಯದವರು ಮಾತುಬಲ್ಲವರಾಗಿದ್ದರೂ

ಮೂಕರು. ಮಾನವ ಕುಲಕ್ಕೆ ಆದರ್ಶವಾದ ಶರಣ ಮಾರ್ಗವನ್ನು ಹಿಡಿಯದವರು ಕಾಲಿದ್ದೂ ಕುಂಟರು. ಸಕಲ ಜೀವರಾಶಿಯನ್ನು ಒಂದಾಗಿ ಕಾಣುವ ಅಂತರಂಗದ ಕಣ್ಣುಗಳನ್ನು ಅರಳಿಸದವರು ಅಜ್ಞಾನಿಗಳು ಎಂದು ಸೋಮನಾಥ ಅವರು ಭಾವಪೂರ್ಣವಾಗಿ ಮತ್ತು ಕಾವ್ಯಾತ್ಮಕವಾಗಿ ಹೇಳುವ ಮೂಲಕ ಓದುಗರ ಮನಸ್ಸಿನ ಮೇಲೆ ಆಳವಾದ ಪರಿಣಾಮ ಬೀರುತ್ತ ಶರಣರ ಮಹತ್ವವನ್ನು ಎತ್ತಿ ತೋರಿಸುತ್ತಾರೆ."[೩೪] ಎಂದಿರುವ ಮಾತಿನಲ್ಲಿಯ ವಾಸ್ತವಿಕ ನಲೆಯನ್ನು ಕಾಣಬಹುದು.

ಅಂತರಂಗದ ಚಿಂತೆ ಅತಿ ವೇದನಾತೀತ
ಕಣ್ಣಿದ್ದೂ ಕುರುಡನಾಗಿ, ಕಾಲಿದ್ದೂ ಹೆಳವನಾಗಿ
ಕೈಯಿದ್ದೂ ಕೆಲಸಕ್ಕೆ ಬಾರದ ಮೋಟನಾಗಿ
ನಾಲ್ಕು ಗೋಡೆಗಳ ಮಧ್ಯೆ
ತನ್ನ ತಾನೇ ಎದರಲ್ಲೋ ತೊಡಗಿಸಿಕೊಂಡವರ
ಬಳಗಕೆನಿತೂ ಕೊರತೆಯಿಲ್ಲ ನೋಡಾ
ನಿಜಗುರು ಮಹಾಂತಲಿಂಗ
ಬೆಳಕುಗಾಣದೆ ಹಾತೊರೆಯುತಿಹ ಜೀವಕೋಟಿಗಳಿಗೆ
ಮನೆ ಬೆಳಕಿನೊಂದಿಗೆ ಅವರವರ
ಇಚ್ಛಿತಾರ್ಥಗಳಿಗೆ ಮಾರ್ಗಮಾಡಿ ಕೊಡಾ
ಆಗಲಾದರೂ ಅವರ ಹುಟ್ಟು ಸಾರ್ಥಕವಾದೀತು[೩೫]

'ಅಂತರಂಗದ ಚಿಂತಿಯನ್ನು ಅತಿ ವೇದನಾತೀತ'ವೆನ್ನುವ ವಚನಕಾರ್ತಿಯು ಕಣ್ಣಿದ್ದೂ ಕುರುಡನಾಗಿ ಕಾಲಿದ್ದೂ ಹೆಳವನಾಗಿ, ಕೈಯಿದ್ದೂ ಕೆಲಸಕ್ಕೆ ಬಾರದ ಮೋಟನಾಗಿ, ನಾಲ್ಕು ಗೋಡೆಗಳ ಮಧ್ಯೆ ತನ್ನ ತಾನೇ ಎದರಲ್ಲೊ ತೊಡಗಿಸಿಕೊಂಡವರ ಬಳಗದ ನೆಲೆಯಲ್ಲಿ ವಚನ ರಚಿಸಿದ್ದಾರೆ. ಇಂತಹ ಅಂತರಂಗದ ಬೆಳಕು ಕಾಣದ ಜೀವ ಕೋಟಿಗಳಿಗೆ ಅವರ ಮನೆ ಬೆಳಕಿನೊಂದಿಗೆ, ಅವರ ಹುಟ್ಟು ಸಾರ್ಥಕವಾಗುವಂತೆ ಮಾಡಲು ಇಷ್ಟಗುರುವಿನಲ್ಲಿ ಮಾರ್ಗದರ್ಶನಕ್ಕಾಗಿ ಬೇಡುತ್ತಾರೆ. ಮನುಷ್ಯನ ಬಳಗನ್ನು ತಿಳಿಯುವ ಉತ್ಸುಕತೆಯ ಜೊತೆಗೆ, ಅದನ್ನು ಅರಿತುಕೊಂಡು ಮಾರ್ಗದರ್ಶಕನಾಗುವ ವಿಚಾರವೂ ಇಲ್ಲಿದೆ.

ಗಿರಿ ಸುತೆಯ ಮಾತು ನೀತಿಯಲ್ಲ?
ಮೊಗ್ಗರಳಿ ಹೂವಾದಂತೆ

ಅನುದಿನದ ಅನುಭವದ ಅಂತರಂಗದ ಸ್ಫೂರ್ತಿ

ಪ್ರಾಣ–ಪ್ರಾಣಗಳ ಸಂಘರ್ಷ ಸಂಪ್ರೀತಿ ಆತ್ಮರತಿ[೩೬]

ಹುಟ್ಟು ಆಕಸ್ಮಿಕವಾದರೆ ಸಾವು ನಿಶ್ಚಿತ. ಆದರೆ ಹುಟ್ಟು ಸಾಗುವಳ ಮಧ್ಯೆ ಇರುವ ಬದುಕು ಮಾತ್ರ ನಿರಂತರ. ಈ ನಿರಂತರ ಬದುಕಿನಲ್ಲಿ ಪ್ರೀತಿಯೇ ಮಿಗಿಲಾದ ರಕ್ಷಣೆ ಲೋಕದಲ್ಲಿ ತಾಯಿ ತೋರುವ ವಾತ್ಸಲ್ಯ, ಗುರುವಿನ ಮಮತೆ ಉಳ್ಳವರ ಸಹಾನುಭೂತಿ, ನೊಂದವರಿಗೆ ನೀಡುವ ಸಾಂತ್ವನ, ದೀನರಿಗೆ ತೋರುವ ಮರುಕ ಇತ್ಯಾದಿ

ರೂಪ ಬದಲಾದರೂ ಪ್ರೀತಿಯ ಸ್ವರೂಪ ಒಂದೇ ಆಗಿರುತ್ತದೆ. ಇವರ ವಚನಗಳು ವಿಚಾರ ಚಿಂತನೆಗಳ ಗಾಢತೆಯನ್ನು ಕಟ್ಟಿಕೊಡುವಲ್ಲಿ ಸಮರ್ಥವಾಗಿವೆ. ತತ್ವಪದಕಾರನ ತತ್ವಚಿಂತನದ ನಿಲುವಿನಿಂದ ಸಾಗುವ ಲೋಕಾನುಭವದ ವಿಭಿನ್ನ ಸ್ತೋತ್ರಗಳಂತಿವೆ. ಆದರೂ ಗಿರಿಸುತೆಯ ಮಾತು ನೀತಿಯಲ್ಲ; ಅನುದಿನದ ಅನುಭವದ ಅಂತರಂಗದ ಸ್ಫೂರ್ತಿ ಎಂಬ ಮಾತಿನ ಅರ್ಥವ್ಯಾಪ್ತಿ ವಿಶಾಲವಾದುದು. ಮೊಗ್ಗರಳಿ ಹೂವಾದಂತೆ ವಿಕಸನಗೊಂಡ ಜೀವನ ಮೌಲ್ಯಗಳನ್ನು ಇದು ಆದರಿಸುತ್ತದೆ. ಬಾಹ್ಯ ಮೋಹಗಳೆಲ್ಲವೂ ಕಳಚಿ, ಆತ್ಮದೊಂದಿಗೆ ಪ್ರೀತಿ ಬೆಳೆಸಿದಾಗ ತನ್ನತನದ ಅರಿವುಂಟಾಗುತ್ತದೆ. ಈ ಅಂತರಂಗದ ಸ್ಫೂರ್ತಿಗೆ ಅನುದಿನದ ಅನುಭವಗಳೇ ಮೂಲಾಂಶ. ಇದುವೇ ಜೀವದ ಜೀವನ ಧರ್ಮವೆನ್ನಬಹುದು. ಇಂಥ ಜೀವನ ಧರ್ಮದ ನೆಲೆ ಇಂತಹ ಅನೇಕ ಆಧುನಿಕ ವಚನಗಳಲ್ಲಿದೆ. ಈ ಹಿನ್ನೆಲೆಯಲ್ಲಿ ತನ್ನನ್ನು ತಾನು ವ್ಯಕ್ತಗೊಳಿಸುವ ರೀತಿಯಲ್ಲಿ ಪ್ರತಿಯೊಬ್ಬ ಲೇಖಕನೂ ತನ್ನ ಯುಗದ ಸಂಬಂಧವನ್ನು ಸ್ವಲ್ಪ ಮಟ್ಟಿಗೆ ತೋರಿಸಿಕೊಳ್ಳುತ್ತಾನೆ[೩೭] ಎಂಬ ಅಭಿಪ್ರಾಯವು ಭಾರತೀಯ ಚಿಂತನಾಕ್ರಮವನ್ನು ಹೋಲುತ್ತದೆ. ಒಳಹೊರಗಿನ ಜೀವ ಜಗತ್ತಿನಲ್ಲಿ ನಮ್ಮ ಪ್ರಜ್ಞಾತ್ಮ ಹೆಚ್ಚು ಅರ್ಥೈಸಿದಾಗ ಮರ್ತ್ಯಲೋಕದ ಬದುಕು ಕರ್ತಾರನ ಕಮ್ಮಟ ಶಾಲೆಯಲ್ಲಿ ಪ್ರಯೋಗಗೊಂಡು ಸಿದ್ಧವಾಗುತ್ತದೆ.

'ಅಡವಿಯೊಳು ಕುಳಿತು  
ಅಘೋರ ತಪವ ಮಾಡಿದರೆ  
ದೊರಕೊಳ್ಳುವಾತನೂ ಅಲ್ಲ  
ದಿನಗಟ್ಟಲೆ ಲಿಂಗದೆಡೆ ಕುಳಿತು  
ಪರಮ ಪೂಜೆ ಮಾಡಿದರೆ  
ಒಲಿದು ಬರುವವನೂ ಅಲ್ಲ  
ತನ್ನಂತರಂಗವನರಿದು  
ತನು ಶುದ್ಧಿ, ಮನಶುದ್ಧಿ, ಭಾವ ಶುದ್ಧಿಗೊಳಿಸಿ  
ನಡೆದರೆ  
ತಾನಾಗಿ ಬಳಿಗೆ ಬರುವ ನಮ್ಮ  
ಈಶ್ವರಿ ಪ್ರಿಯ ಶಿವಲಿಂಗ[೩೮]

ಒಳ–ಹೊರಗಿನ ತಿಳುವಳಿಕೆಯ ಒಳಗುಟ್ಟನ್ನು ಈ ವಚನದ ನೆಲೆಯಲ್ಲಿ ಗುರುತಿಸಬಹುದು. ತಪ್ಪಿನಿಂದ, ದಿನಗಟ್ಟಲೆ ಮಾಡುವ ಲಿಂಗಪೂಜೆಯಿಂದ ಏನೂ ಪ್ರಯೋಜನವಿಲ್ಲ. ವ್ಯಕ್ತಿ ತನ್ನಂತರಂಗಶುದ್ಧಿ ಹಾಗೂ ಬಹಿರಂಗದ ತನು ಶುದ್ಧಿಯನ್ನು ಹೊಂದಬೇಕು. ಆದರಿಂದ ಜಗದ ಪ್ರೀತಿಗೆ ವ್ಯಕ್ತಿ ಪಾತ್ರನಾಗುವುದನ್ನು ಈ ವಚನ

ತಿಳಿಸುತ್ತದೆ. ಅಂತರಂಗ-ಬಹಿರಂಗಗಳೆರಡನ್ನು ಏಕೀಭವಿಸಿದರೆ ಮನುಷ್ಯ ಜೀವನಕ್ಕೊಂದು ಹೊಸ ಅರ್ಥಬುವುದನ್ನು ಆಧುನಿಕ ವಚನಗಳ ನೆಲೆಯಲ್ಲಿ ಕಾಣಬಹುದು. ಇಂತಹ ಜೀವನ ಸಿದ್ಧಾಂತಕ್ಕೆ ಭದ್ರ ಬುನಾದಿ ಹಾಕಿದವರು ೧೨ನೇಯ ಶತಮಾನದ ಶರಣರು. ಅವರ ವಚನಗಳ ಪ್ರೇರಣೆ, ವಾಸ್ತವಿಕ ಬದುಕಿನ ಧೋರಣೆಗಳ ಸಮನ್ವಯದಲ್ಲಿ ಇಂತಹ ಆಧುನಿಕ ವಚನಗಳು ರಚನೆಯಾಗಿವೆ.

**೫-೧-೪ ಆಚಾರ - ವಿಚಾರಗಳ ನೆಲೆ**

ಆಧುನಿಕ ವಚನಕಾರರು ವೈಚಾರಿಕತೆಗೆ ತುಂಬಾ ಮಹತ್ವ ನೀಡಿದರು. ಅಂಧಶ್ರದ್ಧೆ, ಮೂಢನಂಬಿಕೆ, ಕುರುಡು ಭಕ್ತಿ, ಹೀನ ಆಚರಣೆಗಳನ್ನು ಖಂಡಿಸಿದ್ದಾರೆ. ಶರಣರು ತಾವು ಮಾಡಿದ ವಿಚಾರಗಳನ್ನು ತಮ್ಮ ಅನುಭವಕ್ಕೆ ಬರದ ಹೊರತು ಒಪ್ಪಿಕೊಳ್ಳುತ್ತಿರಲಿಲ್ಲ. ಆದರೆ ಆಧುನಿಕ ವಚನಕಾರರ ರಚನೆಗಳಲ್ಲಿ ಸ್ವಯಾನುಭವದ ಪರಿ ಕಾಣಸಿಗುವುದಿಲ್ಲ. ಇವರು ಯಾವುದೇ ಆದರ್ಶವನ್ನಾಗಲಿ ಅಥವಾ ಸಾಧನೆಯ ಬಗೆಗಾಗಲಿ ಹೇಳುವಾಗ ಅದರ ಯೋಗ್ಯತೆಯನ್ನು ಪರಾಮರ್ಶಿಸುವುದಿಲ್ಲ. ಅಂದರೆ ಅದಕ್ಕೆ ತಮ್ಮನ್ನು ಮೊದಲು ಸಮರ್ಪಿಸಿಕೊಂಡು ಹೇಳುವುದಿಲ್ಲ. ಅವು ಕೇವಲ ಬೋಧನೆಗಳಾಗುತ್ತವೆ. ಉದಾಹರಣೆಗೆ

'ಅನ್ಯೋನ್ಯತೆ ಅನುಕಂಪ
ದಯೆ, ಪ್ರೀತಿ, ಪ್ರೇಮ ಸಹಕಾರ ಸಾಂಗವು
ಬದುಕಿನ ಸೂತ್ರಗಳು
ಬದುಕಿನಲ್ಲಿ ಇವು ಇರದೆ ಹೋದರೆ
ಬದುಕೆಲ್ಲ ಅತಂತ್ರ
ಗುರು ಸಿದ್ಧಾರೂಢ[೩೯]

ಬದುಕಿನ ಸೂತ್ರಗಳನ್ನು ತಿಳಿಸುವ ಈ ವಚನದಲ್ಲಿ, ಅವು ಇರದೇ ಹೋದಾಗ ಬದುಕು ಅತಂತ್ರವೆಂಬ ವಿಚಾರ ಮಾತ್ರ ಇಲ್ಲಿರುವುದನ್ನು ಕಾಣುತ್ತೇವೆ. ಆದರೆ ಆ ಬದುಕಿನ ಸೂತ್ರಗಳನ್ನು ಅಳವಡಿಸಿಕೊಳ್ಳುವ ನೆಲೆಗಳು ಕಾಣುವುದಿಲ್ಲ. ಶೋಭಾ ಔರಾದೆಯವರು ಬದುಕನ್ನು ಕಟ್ಟಿಕೊಳ್ಳುವ ಬಗೆಯನ್ನು ಹೇಳುತ್ತಾರೆ.

ಹೊಗಳಿಕೆಯಿಂದ ಹಿಗ್ಗಬೇಡ
ತೆಗಳಿಕೆಗೆ ಕುಗ್ಗಬೇಡ
ಸುಳ್ಳು ಮಾತಿಗೆ ಮುಳ್ಳಾಗಬೇಡ
ಗೊಳ್ಳು ಮಾತನಾಡುವರ ಕಡೆಗೆ
ಹೊಳ್ಳಿ ನೋಡಬೇಡ
ಒಳ್ಳೆಯವ ಸಂಗ ಬಿಡಬೇಡ
ಆಚಾರ ಪ್ರಿಯ ಬಸವಲಿಂಗನ ಮರಿಬೇಡ[೪೦]

ಒಳ್ಳೆಯ ವಿಚಾರವನ್ನು ಹೇಳುವ ಈ ವಚನ ಆಚಾರದಲ್ಲಿ ಅದನ್ನು ಅಳವಡಿಸಿಕೊಳ್ಳುವ ಬಗೆಯನ್ನೂ ಬೇಡ, ಬೇಡ ಎಂಬ ನೆಲೆಯ ಮೂಲಕ ಅರುಹುತ್ತದೆ. ಆಧುನಿಕ ವಚನಕಾರರು ವೈಚಾರಿಕತೆಯ ಜೊತೆಗೆ ಆಚಾರಕ್ಕೂ ಸಮನಾದ ನೆಲೆಯೊದಗಿಸಿರುವುದು ಕೆಲವು ಕಡೆಗಳಲ್ಲಿ ಎದ್ದು ಕಾಣುತ್ತದೆ. ವಿಚಾರ ಸಾರ್ಥಕವಾಗುವುದು ಆಚಾರದಲ್ಲಿ ಅಳವಟ್ಟಾಗ ಮಾತ್ರ ಎಂಬ ಅನೇಕ ಸಂಗತಿಗಳು ವಚನಗಳಲ್ಲಿವೆ.

ಹಣವ ತುಂಬಿಕೊಂಡು
ಲೋಕ ಗೆಲ್ಲಬಹುದು
ಪ್ರೀತಿ ತುಂಬಿಕೊಂಡು
ಜಗವು ಜಯಿಸಬಹುದು
ವಿಶ್ವಾಸ ತುಂಬಿಕೊಂಡು
ವಿಶ್ವಕ್ಕೆ ಚಲಾಯಿಸಬಹುದು
ಆದರೆ
ದ್ವೇಷ ತುಂಬಿಕೊಂಡು
ಇಹವು ಗೆಲ್ಲಲಾಗದು ಮಾಣಿಕ್ಯ ವಿಠಲ[೪೧]

ವಿಚಾರಗಳು ಕೇವಲ ಬೌದ್ಧಿಕ ತರ್ಕ ಜಿಜ್ಞಾಸೆಯಲ್ಲಿ ಮಾತ್ರ ಉಳಿಯಬಾರದು ಅವು ಆಚಾರದಲ್ಲಿ ಪರ್ಯವಸಾನಗೊಳ್ಳಬೇಕು. ಮನುಷ್ಯ ತಾನು ಏನು ವಿಚಾರ ಮಾಡಿದರೂ, ಅದನ್ನು ಸರಿ ಎಂದು ಒಪ್ಪಿಕೊಂಡ ಮೇಲೆ ಅದನ್ನು ಆಚಾರಕ್ಕೆ ಅಳವಡಿಸಿಕೊಳ್ಳಬೇಕು. ಹಾಗಾಗದ ಸ್ಥಿತಿಯನ್ನು ಕುರಿತ ವಚನವೊಂದರ ವಿಚಾರವನ್ನಿಲ್ಲಿ ಗಮನಿಸಬಹುದು.

ಧರ್ಮ ಬೆಳೆಯಲಿಲ್ಲವಯ್ಯಾ
ಮತಧರ್ಮ ಬೆಳೆಯಿತು
ಮನಸ್ಸು ವಿಸ್ತಾರವಾಗಲಿಲ್ಲವಯ್ಯಾ
ಮೈಮನಸ್ಸು ಹುಟ್ಟಿತು
ಭಾವ ಬೆಳಕಾಗಲಿಲ್ಲವಯ್ಯಾ
ದುರ್ಬುದ್ಧಿ ಬೆಳೆಯಿತು
ದುರ್ಬುದ್ಧಿ ದುರಾಚಾರವನಳಿಸಿ
ಸದ್ಬುದ್ಧಿ ಸದಾಚಾರವ ಬೆಳೆಸಯ್ಯಾ
ಸಬರದ ಬಸವ[೪೨]

ಅಂತರಂಗದಲ್ಲೊಂದು ಬಹಿರಂಗದಲ್ಲೊಂದು ಆದರೆ ಅಲ್ಲಿ ಸಮಾನತೆ ಬೆಳೆಯಲಾರದು. ವಿಚಾರವೊಂದು ಆಚಾರ ಇನ್ನೊಂದಾದರೆ ಏನು ಪ್ರಯೋಜನ? ವಿಚಾರ ಮೊದಲಾದರೂ ಆಚಾರ ನಂತರದಲ್ಲಿ ಅಳವಡಬೇಕು. ಆ ಆಚಾರ ಅರಿವಿನಿಂದ ಕೂಡಿರಬೇಕು. ಆಚಾರ ವಿಚಾರಗಳ ಸಮನ್ವಯದಿಂದ ಅಂತರಂಗದ ಅರಿವು ಪರಿಪಕ್ವವಾಗುತ್ತದೆ. ಸಾಧಕನ ಜೀವನ ಹಾಗೂ ಸಾಮಾಜಿಕ ಬದುಕು ಸಫಲವಾಘುತ್ತದೆ. ನಡೆ-ನುಡಿಯಲ್ಲಿ ಏಕತೆ ಸಾಧಿಸಬೇಕೆಂಬ ವಿಚಾರಗಳು ಇಲ್ಲಿ ಪ್ರಸ್ತುತಗೊಂಡಿವೆ.

'ಕನ್ನಡಿ ಕೈಯಲ್ಲಿ ಹಿಡಿದು ಆಗಾಗ ನೋಡಿಕೊಳ್ಳುವುದಕ್ಕೆ
ಹಾಡುತ್ತೇನೆ, ನಡೆಯಲನುಕೂಲವಾಗಿ
ಆಡುವುದೊಂದು
ಮಾಡುವುದೊಂದಾದರೆ

ನಿನಗೆ ನೀನಲ್ಲದೆ
ಅನ್ಯರಿಗಲ್ಲ ನೋಡಾ
ಪ್ರಭು; ಜಾಗೃತಗೊಂಡಾಗ
ಕನ್ನಡಿಯಲ್ಲಿ ಹಿಡಿದಿಟ್ಟು
ಕಲ್ಲಿನಲ್ಲಿ ಹುಡುಕುತ್ತ ಅವರಿವರ
ಅರಸುತ್ತದ್ಯೃಧರೆ[೪೩]

ತಮ್ಮನ್ನು ತಾವು ಅರಿಸಿಕೊಂಡು ನಡೆಯಬೇಕಾದ ಕ್ರಮವನ್ನು ಈ ವಚನ ತುಂಬಾ ಆಧುನಿಕ ನೆಲೆಯಲ್ಲಿ ಕಂಡಿರಿಸುತ್ತದೆ. ಕೈಯಲ್ಲಿ ಲಿಂಗ ಹಿಡಿದುಕೊಂಡು, ಅದನ್ನು ನೋಡುತ್ತ, ನೋಡುವುದಕ್ಕಾಗಿ ಹಾಡುತ್ತಿರುವವರ ಸಂಖ್ಯೆ ಇಂದು ಅಪಾರವಾಗಿದೆ. ಆದರೆ ಈ ಲಿಂಗವೊಂದು ಕನ್ನಡಿ. ಅದು ತನ್ನ ಅಂತರಂಗವನ್ನು ಕಾಣುವ ಸಾಧನ. ಅದನ್ನು ಗಮನಿಸಿಕೊಂಡು ಜೀವನದಲ್ಲಿ ನಡೆಯಬೇಕು. ವ್ಯಕ್ತಿಯೋರ್ವನ ನಡೆಯಲನುಕೂಲಕ್ಕಾಗಿ, ತನ್ನ ಪರಿವೀಕ್ಷಣೆಗಾಗಿ ಇರುವ ಕನ್ನಡಿಯಿದು. ಅದನ್ನು ತಿಳಿಯದೆ ಆಡುವುದೊಂದು, ಮಾಡುವುದೊಂದಾದರೆ ಏನು ಪ್ರಯೋಜನ? ಅವನಿಗೆ ಅವನಲ್ಲದೆ, ಆತನು ಅನ್ಯರಿಗಿಲ್ಲ ನೋಡಾ. ಎಂಬ ಧ್ವನಿ ಅಲ್ಲಿರುವುದು ಗಮನಾರ್ಹ. ಎಚ್ಚರಿಕೆ ಇದೆ ಇಲ್ಲಿ. ತನ್ನ ತಾನು ಅರಿತುಕೊಳ್ಳದವನು ಬೇರೆಯವರನ್ನು ಅರಿತುಕೊಳ್ಳುವುದು ಹೇಗೆ ಸಾಧ್ಯ? ನಡೆ-ನುಡಿ ಒಂದಾಗದವರ ಪರಿ ಇದು ಎಂಬುದನ್ನು ಈ ವಚನ ತೋರಿಸುತ್ತದೆ.

"ವ್ಯಕ್ತಿಯ ಮಾತು ಮನುಷ್ಯನ ವ್ಯಕ್ತಿತ್ವದ ಕನ್ನಡಿ. ಆಡುವ ಮಾತುಗಳು, ಮಾಡುವ ಕೃತಿಯಲ್ಲಿದ್ದಾಗ ಮಾತ್ರ ಅವುಗಳಿಗೊಂಡು ಅರ್ಥ ಹಾಗೂ ಬೆಲೆಬರುತ್ತದೆ. ಅದಕ್ಕೆಂದೇ 'ಮಾತಿಗಿಂತ ಕೃತಿಲೇಸು' ಎಂದಿರುವುದು. ಅಂತಹ ಮಾತುಗಳು ಸತ್ವಯುತವಾಗುತ್ತವೆ. ಅಂತೆಯೇ ಶರಣರ ಮಾತುಗಳು ವಚನಗಳಾದವು"[೪೪] ಈ ನೆಲೆಯಲ್ಲಿ ಆಧುನಿಕ ವಚನಕಾರರೂ ಚಿಂತಿಸಿದ್ದಾರೆ. "ಹೊರಡುವ ಮಾತುಗಳು ಸಾಮಾನ್ಯವಲ್ಲವಯ್ಯಾ, ನಾಲಿಗೆಯಿಂದಲೇ ನಾಕ ನರಕ, ಪ್ರೀತಿ, ದ್ವೇಷ, ಶಾಂತಿ ಸನ್ಮಾನ ದೊರೆಯುವುದಯ್ಯಾ" ಎನ್ನುತ್ತಾರೆ ಸೂಗಯ್ಯ ಹಿರೇಮಠರು.[೪೫] ಆದರೆ ನುಡಿಗೆ ತಕ್ಕ ನಡೆಗಳೂ ಅವಶ್ಯವೆಂಬುದನ್ನು ಕೆಲವು ವಚನಕಾರರು ತುಂಬಾ ಗಟ್ಟಿಯಾಗಿ ಪ್ರತಿಪಾದಿಸುತ್ತಾರೆ.

'ನಡೆಯಿಲ್ಲದ ನುಡಿ ಏತಕಯ್ಯಾ? ಸಲ್ಲದು
ನಡೆ-ನುಡಿಗಳೆರಡು ಬಂಡಿಗೆ ಗಾಲಿಗಳಿದ್ದ ಹಾಗೆ।
ಒಂದು ಗಾಲಿಯಿಂದ ಬಂಡಿ ಚಲಿಸದು ನೋಡಾ
ನಡೆದು ನುಡಿವವನ ಜೀವನ
ಇಹದೊಳಗೆ ಮೌಲ್ಯವಾಗುವುದು ನೋಡಾ
ವೀಪ್ರಬಾಧ ಪ್ರಿಯ ವರಗುರು-ಬಸವೇಶ[೪೬]

ವ್ಯಕ್ತಿಯ ವ್ಯಕ್ತಿತ್ವ ಶೊಧನೆಯಲ್ಲಿ ಮಾತು ಮಹತ್ವದ್ದು. ಇದನ್ನು ಅಲ್ಲಮ ಪ್ರಭು 'ಮಾತೆಂಬುದು ಜ್ಯೋತಿರ್ಲಿಂಗವೆಂದರೆ, ಇಲ್ಲಿ ವೀರಶೆಟ್ಟಿಯವರು ಅದನ್ನು "ಇಹದೊಳಗಿನ ಮೌಲ್ಯ"ವೆಂದಿದ್ದಾರೆ. ಈ ಭೂಮಿಯ ಮೇಲಿ ಬಾಳುವೆ ಅರ್ಥಪೂರ್ಣವಾಗಿರಬೇಕಾದರೆ ಮಾತು ಮೌಲ್ಯವಾಗಬೇಕು.ಇದು ಮೌಲ್ಯವಾಗುವುದು ಕೇವಲ

ಆಡುವುದರಿಂದಲ್ಲ; ಆಡಿದಂತೆ ನಡೆಯುವುದರಿಂದ. ಅಂದರೆ ಪ್ರಪಂಚಕ್ಕೆ 'ಮಾತು' ಹಿತವಾಗಿರಬೇಕೆಂಬ ಸಂದೇಶವನ್ನು ಈ ನೆಲೆಯಲ್ಲಿ ಆಧುನಿಕ ವಚನಕಾರರು ನೀಡುತ್ತಾರೆನ್ನಬಹುದು.

ಮಾತು ಕೃತಿಗೂ ಸಂಬಂಧವಿಲ್ಲದಂತೆ ವರ್ತಿಸುವವರನ್ನು ಡಾ. ಸರಸ್ವತಿ ಚಿಮ್ಮಲಗಿಯವರು 'ಕೊಡಂಗಿಗಳು' ಎನ್ನುತ್ತಾರೆ.

'ಮುಂದೆ ಬಂದಾಗ ಮುಖ ಸುತ್ತಿ ಮಾಡುವ
ಹಣ ಬೇಕಾದಾಗ ಜೀ ಜೀ ಎಂದು ಬಾಲ ಬಡಿವ
ಕೆಲಸ ಮುದೊಡನೆ ಮುಖ ಮರೆಸಿ ಪರಿಚಯ ಹೂತು
ಅಪರಿಚಿತರಂತೆ ನಟಿಸುವ
ಮುಖ ನೋಡಿ ಮಣೆ ಹಾಕುವ
ಮಾರಿ ಇಚ್ಛೆ ಮಾತನಾಡುವ
ಅವಕಾಶವಾದಿ ಕೋಡಂಗಿಗಳಿಗೇನೆಂಬೆ
ಎಡಬಿಡಂಗಿ ದೇವ'[೪೭]

ತಮ್ಮ ಸ್ವಾರ್ಥ ಸಾಧನೆಗಾಗಿ ಮುಖಸ್ತುತಿ ಮಾಡುವ ಜನರು ನುಡಿದಂತೆ ನಡೆಯುವುದಿಲ್ಲ. ಹಣ ಬೇಕಾದಾಗ ಬಾಲ ಮುದುರಿಸಿಕೊಂಡು ಮಾತನಾಡಿ, ಕೆಲಸ ಮುಗಿದೊಡನೆ ಮುಖ ಮರೆಸಿಕೊಂಡು ಪರಿಚಯವಿಲ್ಲದವರಂತೆ ನಟಿಸುವವರನ್ನು ತರಾಟೆಗೆ ತಗೆದುಕೋಳ್ಳುವ ವಚನಕಾರ್ತಿ ಅಂಥವರನ್ನು ಮಾರಿ ಇಚ್ಚೆಗೆ ಮಾತನಾಡುವ ಅವಕಾಶವಾದಿಗಳು ಎಂದು ಜರೆಯುತ್ತಾರೆ. ವಾಸ್ತವಿಕ ನೆಲೆಯಲ್ಲಿ ನಡೆ-ನುಡಿಯ ವಿಚಾರವನ್ನು ಈ ವಚನ ನಿವೇದಿಸುತ್ತದೆ.

'ನುಡಿದಂತೆ ನಡೆಯುವುದು, ನಡೆದಂತೆ ನುಡಿಯುವುದು ಹಳೆಯ ಮಾತಾಗಿಹುದು, ನಡೆನುಡಿಗಳೊಂದಾಗೆ ಕೇಡಾಗುವಂತಿಹುದು ಎಂದು ನಡೆವವರಿಂದು ಹೆಚ್ಚಾಗಿ ಬೆಳೆದಿಹರು ಈ ಮಾತು ಸುಳ್ಳಲ್ಲ'ವೆನ್ನುತ್ತಾರೆ ಬಿ.ಎಸ್. ಖೂಬಾ ಅವರು.[೪೮] ನಡೆ-ನುಡಿ ಒಂದಾಗಿರಬೇಕೆಂಬ ಮಾತನ್ನೇ ಹಳೆಯದೆಂದು ಜರಿಯುವವರು ಬಹಜ ಜನ ಇರುವುದಾಗಿಯೂ ಇಲ್ಲಿ ಹೇಳಲಾಗಿದೆ.

ವ್ಯಕ್ತಿ ವ್ಯಕ್ತಿಗಳಲ್ಲಿಯ ಸ್ನೇಹ, ಪ್ರೀತಿ ಒಡನಾಟಕ್ಕೂ ಮಾತಿನ ಅವಶ್ಯಕತೆಯಿದೆ. ಮನೆಗ ಬಂದವರೊಡನೆ ವ್ಯವಹರಿಸುವಲ್ಲಿಯ ಸಭ್ಯತನ, ಆ ವ್ಯಕ್ತಿಯ ವ್ಯಕ್ತಿತ್ವ ಹಿರಿಮೆಯನ್ನು ತೋರಿಸುತ್ತದೆ. ಇಂದು ಅದನ್ನುನಾಗರಿಕತೆ ಎಂಬ ಅರ್ಥದಲ್ಲಿ ಗುರುತಿಸಲು ಪ್ರಯತ್ನಿಸುತ್ತೇವೆ. ಇದನ್ನು ವಚನಕಾರರೋರ್ವರು

'ವಿದ್ಯೆ ಇದ್ದು ಫಲವೇನು ವಿನಯ ತೋರದಿದ್ದಡೆ
ವಿನಯವಿದ್ದು ಫಲವೇನು ಸತ್ಪ್ರಜೆಯಾಗದಿದ್ದರೆ
ಬುದ್ಧಿಯಿದ್ದು ಫಲವೇನು, ಶ್ರದ್ಧೆ ಇಲ್ಲದಿದ್ದಡೆ
ಆಚಾರವಿದ್ದು ಫಲವೇನು ವಿಚಾರ ಮಾಡದಿದ್ದಡೆ
ಜ್ಞಾನವಿದ್ದು ಫಲವೇನು ಸಮಾಧಾನವಿಲ್ಲದಿದ್ದಡೆ
ನರನಾಗಿ ಫಲವೇನು ನಾಗರಿಕತೆ ಅರಿಯದಿದ್ದಡೆ
ಗುರುನಂಜೇಶ್ವರ'[೪೯]

ಎಂದು ಹೇಳಿರುವಲ್ಲಿ ಮನುಷ್ಯನಿಗೆ ಏನಿದ್ದರೇನು? ಮೊದಲು ಸಂಸ್ಕೃತಿಬೇಕು. ಆನಂತರ ನಾಗರಿಕತೆ ಅರಿಯಬೇಕೆಂದು ಕರೆಕೊಡುತ್ತಾರೆ. ವಿದ್ಯೆಯಿದ್ದರೂ, ವಿನಯಬೇಕು, ಬುದ್ಧಿ ಇದ್ದರೂ, ಶ್ರದ್ಧೆ ಇರಬೇಕು. ಆಚಾರವಿದ್ದಲ್ಲಿ ವಿಚಾರವೂ ಇರಬೇಕು. ಜ್ಞಾನದೊಂದಿಗೆ ಸಮಾಧಾನವೂ ಬೇಕು. ಎಂಬುದನ್ನು ತಿಳಿಸುವ ಇದು ಸಭ್ಯವರ್ತನೆಯ ಮಹತ್ವದ ನೆಲೆಯನ್ನು ಸಾರುತ್ತದೆ. ಈ ಗುಣಗಳನ್ನು ಅಳವಡಿಸಿಕೊಳ್ಳದ ಇಂದಿನ ಬಹುಜನ ವಿದ್ಯಾವಂತರು ಏಕಾಂಗಿತನದಿಂದ ಬಳಲುವುದನ್ನು ಮನಗಾಣಬಹುದು. ಸಂಬಂಧಗಳ ಸಡಿಲಿಕೆಗೆ ವ್ಯಕ್ತಿಯಲ್ಲಿನ ವಿನಯ, ಶ್ರದ್ಧೆ, ವಿಚಾರ, ಸಮಾಧಾನ ಹಾಗೂ ಎಲ್ಲಕ್ಕಿಂತ ನಾಗರಿಕತೆಯ ಕೊರತೆ ಕಾರಣವೆನ್ನಬಹುದು.

ಸ್ವಾರ್ಥ ಸ್ನೇಹ, ದುರಾಸೆಯ ಪ್ರೀತಿ ತುಂಬಿರುವ ಇಂದಿನ ಬದುಕಿನಲ್ಲಿ ಯಾರಿದ್ದರೂ ಇಲ್ಲದಂತಿರುವ ಸಂಗತಿಯನ್ನು ಡಾ. ಬಸವರಾಜ ಸಬರದ ಅವರು ಹೇಳುವ ರೀತಿ ಅನನ್ಯವಾಗಿದೆ.

'ಹೊಳೆಯ ನೀರು ಹಳ್ಳವಾಗಿ ಹರಿದಾಗ
ತೊರೆಯ ನೀರು ಕೆರೆಯ ತುಂಬಲಿಲ್ಲವಯ್ಯಾ
ಕೆರೆಗಳು ಬರಿದಾದಾಗ
ಭಾವಿಗಳಲ್ಲಿ ಬುಗ್ಗೆ ಕಾಣಿಸಲಿಲ್ಲವಯ್ಯಾ
ಸುತ್ತ ಮುತ್ತ ಜಲಸಾಗರಗಳಿದ್ದರೂ
ಕುಡಿಯಲು ಸಿಹಿನೀರು ಇಲ್ಲವಯ್ಯಾ ।
ಎತ್ತ ನೋಡಿದರತ್ತ ಬಂಧುಗಳೇ ಇದ್ದರೂ
ಕರೆದುಣ್ಣಿಸುವವರಾರೂ ಇಲ್ಲವಯ್ಯಾ,
ಇದ್ದಾಗ ಓಡಿ ಬರುವ ಇಲ್ಲದಾಗ ದೂರಸರಿವ
ಇಂತವರ ಮಧ್ಯ ನಾನ್ಹೇಗಿರಲಯ್ಯಾ ಸಬರದ ಬಸವ'[೩೦]

ಇಂದಿನ ವಾಸ್ತವ ಬದುಕಿನ ಅರ್ಥವತ್ತಾದ ಚಿತ್ರವನ್ನು ಈ ವಚನ ತೋರುತ್ತದೆ. ಎಲ್ಲವೂ ಇದ್ದರೂ ಒಂದಕ್ಕೊಂದು ಸಂಬಂಧವಿಲ್ಲದಂತಿರುವುದು. ಎತ್ತ ನೋಡಿದರೂ ಬಂಧುಗಳೇ ಬಳಗವೇ ತುಂಬಿದ್ದರೂ ಕರೆದುಣ್ಣಿಸುವವರೂ ಯಾರೂ ಇಲ್ಲದ್ದು, ಇವರ ಹತ್ತಿರ ಏನಾದರೂ ಇದ್ದಾಗ ಓಡಿ ಬರುವವರು ಇಲ್ಲದಾಗ ದೂರ ಸರಿಯು ಸಂದರ್ಭಗಳನ್ನು ಇಲ್ಲಿ ಯಥಾರ್ಥಿಕರಿಸಲಾಗಿದೆ. ಇಂದಿನ ವಾತಾವರಣದಲ್ಲಿರುವ ಸಂಬಂಧಗಳ ಸಡಿಲುವಿಕೆಯನ್ನು, ಎಲ್ಲರೂ ಇದ್ದರೂ ಇಲ್ಲದಂತಿರುವ ಒಂಟಿತನದ ಸ್ಥಿತಿಯನ್ನು ಈ ವಚನ ಕಟ್ಟಿಕೊಡುತ್ತದೆ. ಆದರೂ ಇವರೆಲ್ಲರನ್ನು ಬಂಧುಗಳೆನ್ನುವ ಮಾತಿನಲ್ಲಿ ಸ್ನೇಹದ ಸಿಂಚನಗೈದು ಒಂದುಗೂಡಿಸಲು ಯತ್ನಿಸುವ ರೀತಿ ಇಲ್ಲಿ ಮುಖ್ಯವಾಗುತ್ತದೆ. ವ್ಯಕ್ತಿಯ ವ್ಯಕ್ತಿತ್ವದ ಸಾಮರಸ್ಯದ ಹಿನ್ನೆಲೆಯಲ್ಲಿ ಆಧುನಿಕ ವಚನಗಳು ವ್ಯಂಗ್ಯವಾಗಿ, ಕಾವ್ಯಮಯವಾಗಿ, ವಿಮರ್ಶಾತ್ಮಕವಾಗಿ ಆ ಕಳಕಳಿಯನ್ನು ಇಲ್ಲಿ ತಂದಿವೆ ಎನ್ನಬಹುದು.

**೫-೧-೫ ವ್ಯಕ್ತಿ ಸಂಬಂಧದ ಚಿಂತನೆ**

ಮನುಷ್ಯ ಮೂಲತಃ ಕನಿಷ್ಠನಲ್ಲ; ಕೆಟ್ಟವನೂ ಅಲ್ಲ. ಆತ ಹುಟ್ಟಿದ ಪರಿಸರ, ಬೆಳೆದ ವಾತಾವರಣದಿಂದ ಸಮಾಜದಲ್ಲಿ ಶ್ರೇಷ್ಠತೆ-ಕನಿಷ್ಠತೆಗಳನ್ನು ಹೊಂದುತ್ತಾನೆ. ಒಳ್ಳೆಯ ಪರಿಸರ ಸಿಕ್ಕರೆ ಎಂಥವರೂ ಶ್ರೇಷ್ಠರಾಗಬಲ್ಲರೆಂಬುದನ್ನು ೧೨ನೇಯ ಶತಮಾನದಲ್ಲಿ ಶರಣರು ತೋರಿಸಿದರು. ಶತಶತಮಾನಗಳಿಂದ ಊರ ಹೊಲಗೇರಿಗಳಲ್ಲಿ ವಾಸಿಸುತ್ತ,

ಸತ್ತ ದನಗಳನ್ನು ಎತ್ತಿ ಹಾಕುತ್ತ, ಮಲವನ್ನು ದೂರಸಾಗಿಸುತ್ತ, ಪಾದರಕ್ಷೆಗಳನ್ನು ತಯಾರಿಸುತ್ತ, ಊರ ಮನೆಯವರ ಚಾಕರಿ ಮಾಡುತ್ತ ಪ್ರಾಣಿಗಳಂತೆ ಬದುಕುತ್ತಿದ್ದ ಮನುಷ್ಯರ, ಶೋಷಿತರ ಅಸ್ಪೃಶ್ಯರ ಕೀಳರಿಮೆಯನ್ನು ತೊಲಗಿಸಲು ಅವರು ತಮ್ಮ ತಮ್ಮ ವ್ಯಕ್ತಿ ನೆಲೆಯಲ್ಲಿ ಮುಂದಾದರು. ಆದರೂ ಆ ಜಾತಿ ಪದ್ಧತಿ, ವರ್ಗಪದ್ಧತಿ, ಲಿಂಗಬೇಧ ಪದ್ಧತಿ ಜೀವಂತವಾಗಿರುವುದು ಆಧುನಿಕ ವಚನಕಾರರನ್ನು ಕೆಣಕಿದೆ.

'ಈ ದೇಶದಲ್ಲಿ ಜಾತಿಗೆ ಬೆಲೆಯುಂಟು
ಈ ದೇಶದಲ್ಲಿ ಭಾಷೆಗೆ ಬೆಲೆಯುಂಟು
ಈ ದೇಶದಲ್ಲಿ ಧರ್ಮಕ್ಕೆ ಬೆಲೆಯುಂಟು
ಈ ದೇಶದಲ್ಲಿ ಹಣಕ್ಕೆ ಪ್ರಭಾವಕ್ಕೆ ಬೆಲೆಯುಂಟು
ಪ್ರಭು ಕಾಡ ಕೋಗಿಲೆ ಹಾಡಿದ್ದು ಕಂಡು
ನಾಡ ಕೋಳಿ ಮುಖತಿರುವಿತ್ತು ನೊಡಾ'[೫೧]

ಪ್ರತಿಮೆಯನ್ನು ಅಂತ್ಯದಲ್ಲಿ ಬಳಸಿಕೊಂಡ ಈ ವಚನ, ಈ ದೇಶದಲ್ಲಿದ್ದ ಜಾತಿ, ಧರ್ಮ, ಭಾಷೆಯಲ್ಲಿಯ ಭೇದಗಳನ್ನು ಹಾಗೂ ಅವುಗಳಿಗಿರುವ ಬೆಲೆಯ ನೆಲೆಯನ್ನು ತಿಳಿಸುತ್ತದೆ. ಕೆಳವರ್ಗದ, ಹಿಂದುಳಿದವರ, ಗಿರಿಜನರ, ಅರಣ್ಯವಾಸಿಗಳಾದ ಬುಟಕಟ್ಟುಗಳ ಪ್ರತಿಭೆ, ಕಲೆಗೆ ಮನ್ನಣೆ ನೀಡದ ನಾಡಿನ ಜನತೆಯನ್ನು ವ್ಯಂಗ್ಯಾತ್ಮಕವಾಗಿ ತೋರಿಸುವ ವಚನವಿದು. ವ್ಯಕ್ತಿ ಸಂಬಂಧದ ನೆಲೆಯಲ್ಲಿರುವ ಸಂಬಂಧದ ನಿರಾಕರಣೆಯನ್ನು, ಬೇಧ-ಭಾವವನ್ನು ಇದು ಎತ್ತಿ ತೋರಿಸುತ್ತದೆ.

'ಹೊಲೆ ಹೊಲೆಯೆಂಬರು
ಹೊಲೆಯಾವುದು? ಕೇಳಿರಯ್ಯಾ
ಪರಧನದಾಮಿಷವೇ ಹೊಲೆ
ಪರಸತಿಗೆಳೆಸುವುದೆ ಹೊಲೆ
ಪರನಿಂದೆ ಮಾಡುವುದೆ ಹೊಲೆ
ಪರದೈವಕ್ಕೆರಗುವುದೆ ಹೊಲೆ
ಇಂತಿವೆಲ್ಲವಬಿಟ್ಟು ಹೇಗೋ ಇರುವವನ
ಊರ ಪ್ರಮುಖನೆನ್ನುವರ ನೋಡಾ
ಆಚಾರ ಪ್ರಿಯ ಬಸವಲಿಂಗ[೫೨]

ಇಂದಿನ ಯುಗದಲ್ಲೂ ಜಾತಿಯತೆ ಜೀವಂತವಾಗಿರುವುದನ್ನು ಎತ್ತಿ ತೋರಿಸುವ ಈ ವಚನ, ಬಸವಣ್ಣನವರಂತೆ ಗುಣಗಳನ್ನೇ ಪ್ರಧಾನವಾಗಿಸಿ ವ್ಯಕ್ತಿಯ ವ್ಯಕ್ತಿತ್ವ ಸಂಬಂಧವನ್ನು ನಿರೂಪಿಸಲು ಯತ್ನಿಸುತ್ತದೆ. ನಿಜ ಜೀವನದ ಮೌಲ್ಯಗಳ ಹಿನ್ನೆಲೆಯಲ್ಲಿ ವ್ಯಕ್ತಿ ಸಂಬಂಧವನ್ನು ಗಟ್ಟಿಗೊಳಿಸಿಕೊಳ್ಳುವ ಸೂಚನೆಯನ್ನು ನೀಡುತ್ತದೆ. ಮನುಜ ಮನುಜರ ನಡುವೆ ಗೋಡೆಗಳಿರಬಾರದು, ಪ್ರೀತಿ ಪ್ರೇಮಗಳ ಮಧ್ಯದಲ್ಲಿ ಕರಾರುಗಳಿರಬಾರದು, ಸ್ನೇಹ ಸಂಬಂಧವಿದ್ದಾಗ ಯಾವುದೇ ತಕರಾರು ಬರಬಾರದು. ಈ ಎಲ್ಲ ಗೆರೆಗಳ ದಾಟಿ ಮನುಷ್ಯ ಮುನ್ನಡೆಯಬೇಕೆಂಬ ಆಶಯ ಆಧುನಿಕ ವಚನಕಾರರಲ್ಲಿದೆ.

'ಏನು ಓದಿ ಏನು ಫಲವಯ್ಯಾ
ವರದಕ್ಷಿಣೆ ಪಡೆದು ಮದುವೆಯಾದರೆ
ಏನು ತಿಳಿದು ಏನು ಫಲವಯ್ಯಾ
ಜಾತಿ ಜಂಜಾಟದಿಂದ ಹೊರಬರದಿದ್ದರೆ
ಏನು ನೋಡಿ ಏನು ಫಲವಲ್ಲವಯ್ಯಾ
ಸಮಾನತೆಯಿಂದ ಬದುಕದಿದ್ದರೆ
ಏನು ಓದಿದರೇನು ಎಷ್ಟು ಕೇಳಿದರೇನು
ನುಡಿದಂತೆ ನಡೆಯದಿದ್ದರೆ
ಕಡೆಗಾಗುವನು ನೋಡಾ
ನಮ್ಮ ಸಬರದ ಬಸವಾ[೫೩]

ನುಡಿದಂತೆ ನಡೆಯುವುದು, ನಡೆದಂತೆ ನುಡಿಯುವುದು, ಸಮಾನತೆ, ಸಾಮರಸ್ಯದಿಂದ ಇರುವುದು, ಜಾತ್ಯಾತೀತವಾಗಿ ಬಾಳುವುದು, ಮನಸ್ಸು-ಮನಸ್ಸುಗಳಲ್ಲಿ ಹೊಂದಾಣಿಕೆಯನ್ನು ತರುವ ಸಂಗತಿಗಳಾಗಿವೆ. ಈ ನೆಲೆಯಲ್ಲಿ ವ್ಯಕ್ತಿ ಸಂಬಂಧವನ್ನು ಅರುಹಲಾಗಿದೆ. ಆಧುನಿಕ ವನಕಾರರ ವ್ಯಕ್ತಿ ಸಂಬಂಧಿತ ನೆಲೆಯ ವಚನಗಳಲ್ಲಿ ನೈತಿಕತೆಯ ವಿಷವನ್ನು ಹೆಚ್ಚಾಗಿ ಪ್ರಸ್ತಾಪಿಸಲಾಗಿದೆ. ಪರಿಶುದ್ಧಿ ಬದುಕಿಗೆ ನೀತಿಯೇ ನೆಲೆಗಟ್ಟು ಎಂಬುದನ್ನು ಅವರು ಮತ್ತೆ ಮತ್ತೆ ಹೇಳಿದ್ದು ಕಂಡು ಬರುತ್ತದೆ.

ಮಠದ ನೆಚ್ಚಿನ ಶಿಷ್ಯ
ಕಾಯಕ ಒಳ್ಳೆಯದು
ಮನಸ್ಸು ಮಾತ್ರ ಅಶುದ್ಧ
ಗುಮ್ಮನ ಗುಸುಗ ಒಮ್ಮನಗೋದಿ ನುಂಗಿದ
ಅನ್ನುವಂತೆ ಒಳಗೊಳಗೇ ಏನನ್ನಾದರೂ
ಮಾಡುತ್ತಲೇ ಇರುವ ಹೀನನ ಕಂಡು
ಅಯ್ಯೋ! ಎನಿಸದೆ ಇರದು ನೋಡಾ
ನಿಜಗುರು ಮಹಾಂತಲಿಂಗ[೫೪]

ಮಠದ ಶಿಷ್ಯನೋರ್ವನ ಅನೈತಿಕತೆಯನ್ನು ಮಾರ್ಮಿಕವಾಗಿ ಬಿಂಬಿಸುವ ವಚನವಿದು. ಪವಿತ್ರ ಸ್ಥಾನದಲ್ಲಿದ್ದುಕೊಂಡು ಉನ್ನತ ವ್ಯಕ್ತಿತ್ವ ಪಡೆಯಬೇಕಾದ ಶಿಷ್ಯನ ಮನಸ್ಸು ಅಶುದ್ಧವಾಗಿದೆ. 'ಗುಮ್ಮನ ಗುಸುಗ ಒಮ್ಮನ ಗೋದಿ ನುಂದಿದ' ಅನ್ನುವಂತೆ ಎನ್ನುವ ಧ್ವನಿಪೂರ್ಣವಾದ ನುಡಿಗಟ್ಟಿನ ಮೂಲಕ ಆತನ ಅಶುದ್ಧವಾದ ಒಳಮುಖದ ಚಿತ್ರವನ್ನು ವಚನಕಾರರು ಬಯಲಿಗೆಳೆಯುತ್ತಾರೆ. ಒಳಗೊಳಗೆ ಏನನ್ನಾದರೂ ಮಾಡುತ್ತಿರುವ ಈತನನ್ನು 'ಹೀನನು' ಎಂದಿರುವಲ್ಲಿ ಅವನ ದುಷ್ಕಾರ್ಯಗಳ ಪಟ್ಟಿ ವ್ಯಕ್ತವಾಗುತ್ತದೆ.

'ಘಳಿಗೆಗೊಮ್ಮೆ ಮಾತು
ಬದಲಾಯಿಸುವವರ ತೋರದಿರು
ಘಳಿಗೆಗೊಮ್ಮೆ ತೊಟ್ಟ ವೇಷ

ಬದಲಾಯಿಸುವವರ ತೋರದಿರು
ಮುಖದ ಗೆರೆಗಳ, ಮುಖವಾಡಗಳನು
ಬದಲಾಯಿಸುವವರ ತೋರದಿರು
ನಿಜಗುಣ, ಸ್ವಭಾವ, ಶೀಲದವರ ತೋರಿ
ತತ್ಥವಿಸುವಂತೆ ಮಾಡು
ಶ್ರೀ ಗುರುಸಿದ್ಧ'[೫೫]

ನೀತಿಯಿಲ್ಲದವರು ಯಾರು? ಎಂಬುದನ್ನು ಈ ವಚನ ವಿವರಿಸುವುದರೊಂದಿಗೆ ಅನೀತಿವಂತರ ಲಕ್ಷಣಗಳನ್ನೂ ಹೇಳುತ್ತದೆ. ಘಳಿಗೆಗೊಮ್ಮೆ ಮಾತು ಬದಲಾಯಿಸುವವರು, ಘಳಿಗೆಗೊಮ್ಮೆ ವೇಷ ಬದಲಾಯಿಸುವವರು, ಮುಖವಾಡ ಹಾಕಿಕೊಳ್ಳುವವರು ನೀತಿವಂತರಲ್ಲ. ಇವು ಸುಳ್ಳಿನ ಸರದಾರರು, ಮುಖ ಮುಚ್ಚಿಕೊಂಡು ತಿರುಗುವ ಅನೈತಿಕರು ಇಂಥವರಲ್ಲಿ ನಿಜಗುಣವಿಲ್ಲ, ಸಹಜ ಸ್ವಭಾವವಿಲ್ಲ, ಚಾರಿತ್ರ್ಯವಿಲ್ಲವೆಂಬುದನ್ನು ಇಲ್ಲಿ ತಿಳಿಸಲಾಗಿದೆ. ಇಂಥ ವ್ಯಕ್ತಿಗಳಿಂದ ಒಳ್ಳೆಯ ಸಮಾಜ ನಿರ್ಮಿಸಲು ಹೇಗೆ ಸಾಧ್ಯ?ವೆಂಬ ಚಿಂತನೆ ಈ ನೆಲೆಯ ವಚನಕಾರರಲ್ಲಿದೆ 'ನೀತಿ ಕಲಿಸದ ತಂದೆ, ಪ್ರೀತಿ ಮಮತೆಯಿಲ್ಲದ ತಾಯಿ, ವಿದ್ಯೆ ಕಲಿಸದ ಗುರು, ಹೆಂಡತಿಯನ್ನು ಸಾಕಲಾಗದ ಗಂಡ ಜವಾಬ್ದಾರಿಯಿಲ್ಲದೆ ತಿಂದು ತಿರುಗುವ ಮಗ ಇವರೆಲ್ಲರೂ ನಾಗಿರಕತ್ವವಿಲ್ಲದ ಮನುಜರು, ಇಂಥವರು ಇದ್ದರೇನು? ಇಲ್ಲದಂತಿದ್ದರೇನು ಫಲವಯ್ಯಾ ಎಂಬಂತಹ ವಿಚಾರಗಳು ಇಲ್ಲಿ ಅನಾವರಣಗೊಂಡಿವೆ.

ಪ್ರತಿಯೊಬ್ಬ ವ್ಯಕ್ತಿಯು ತನ್ನ ಆತ್ಮ ಶೋಧನೆಗೊಳಪಟ್ಟು ಸಂಸ್ಕರಣಗೊಳ್ಳುತ್ತ ಬರಬೇಕೆಂಬ ಆಸೆಯ, ವ್ಯಕ್ತಿ ಹೇಗೆ ಉದಾತ್ತವಾಗಬೇಕೆಂಬುದರ ಚಿಂತನೆಗಳು ವ್ಯಕ್ತಿನೆಲೆಯ ವಚನಗಳಲ್ಲಿ ಕಾಣಸಿಗುತ್ತವೆ. ವ್ಯಕ್ತಿಯ ಮಿತಿಗಳು, ಬೆಳವಣಿಗೆಗಳು, ಸಮುದಾಯದ ಮತಿಗಳು ಹಾಗೂ ಬೆಳವಣಿಗೆಗಳಾಗುತ್ತವೆ. ವ್ಯಕ್ತಿ ತನ್ನ ಮಿತಿಗಳನ್ನು ಮೀರಬೇಕು. ತನು-ಮನವನ್ನು ಸಂತೈಸಬೇಕು ಆಧುನಿಕ ವಚನಕಾರಲ್ಲಿ ಮಾನಸಿಕ ನೆಲೆಯ ವಚನಗಳು ಕಾಣಸಿಗುವಂತೆ **'ದೇಹಾಲಯ ಮೀಮಾಂಸೆ'**ಯ ವಚನಗಳೂ ದೊರಕುತ್ತವೆ.

'ಕಾಯವೇ ಶರಣನ ಅನುಭವ ಮಂಟಪ
ಶಿವರೂಪ ಕಂಡು ಶರಣ ಹಚ್ಚಿದನು
ದಯೆಯ ನಂದಾದೀಪ, ಆ ದೀಪದಬೆಳಕಿನಲಿ
ಹೊಳೆಯಿತು ಸರ್ವಲೋಕ
ಕಳೆಯಿತು ಅಜ್ಞಾನದಿಂದೊಸರುವ ಶೋಕವೆಂದ
ಶರಣ ಕಿರಣ ಪ್ರಿಯ ಮಾಣಿಕ'[೫೬]

ಈ ಆಧುನಿಕ ವಚನಕಾರನು 'ಕಾಯ'ವನ್ನು ಶರಣನ 'ಅನುಭವಮಂಟಪ' ಎಂದಿರುವುದನ್ನು ಗಮನಿಸಬಹುದು. ೧೨ನೆಯ ಶತಮಾನದ ವಚನಕಾರರಂತೆ 'ದೇಹ'ಕ್ಕೆ ತುಂಬಾ ಪ್ರಾಶಸ್ತ್ಯ ಹಾಗೂ ಪವಿತ್ರ ಸ್ಥಾನ ನೀಡಿರುವುದನ್ನು ಮನಗಾಣಬಹುದು.

ಗೊಡ್ಡು ವೇದಾಂತಿಗಳು 'ಈ ಶರೀರ ನಶ್ವರ, ಇದಕ್ಕಾಗಿ ಚಿಂತಿಸಬೇಡಿ, ಆತ್ಮಕ್ಕೆ ಮುಕ್ತಿ ಸಿಗುವ ದಾರಿಯಲ್ಲಿ ನಡೆಯಿರಿ' ಎಂದು ಉಪದೇಶಿಸಿದ್ದು ಎಲ್ಲರಿಗೂ ಗೊತ್ತಿರುವ ಸಂಗತಿ. ಕಾಯದಿಂದ ಮಾನವನು

ಏನನ್ನೂ ಸಾಧಿಸಲಾರನೆಂಬ ನಕಾರಾತ್ಮಕ ಉಪದೇಶ ಮಾಡುವ ಇಂಥ ವೇದಾಂತಿಗಳಿಗೆ ೧೨ನೆಯ ಶತಮಾನದ ಶರಣರು **'ಕಾಯವೇ ಕೈಲಾಸ' 'ದೇಹವೇ ದೇವಾಲಯ'**ವೆಂಬ ಮಾತನ್ನು ಹೇಳಿದರು 'ಕಾಯಕ' ಮಾಡಲು 'ಕಾಯ' ಮುಖ್ಯ ಎಂಬುದನ್ನು ತಿಳಿಸುವುದರೊಂದಿಗೆ ದೇಹವನ್ನುರಕ್ಷಿಸಿಕೊಳ್ಳಲು ಸಲಹೆ ನೀಡಿದರು. 'ದೇವನೊಲಿಸಲು ಬಂದ ಪ್ರಸಾದ ಕಾಯ'ವಿದು ಇದನ್ನು ಅಲಕ್ಷಿಸದಂತೆ ಎಚ್ಚರಿಕೆ ನೀಡಿದರು. ಈ ಹಿನ್ನೆಲೆಯ ಪ್ರೇರಣೆಯ ಪ್ರಭಾವದಲ್ಲಿ ಬಂದಿರುವ ಆಧುನಿಕ ವಚನಕಾರರು ಈ **'ದೇಹಾಲಯ'** ನೆಲೆಯಲ್ಲಿ ವಚನಗಳನ್ನು ರಚಿಸಿದ್ದಾರೆ.

ಎಂ.ಜಿ. ಗಂಗನಪಳ್ಳಿ ಹೇಳಿರುವಂತೆ 'ದೇಹ'ವೇ ಶರಣನ ಅನುಭಾವ ಮಂಟಪ ಎಂಬ ಮಾತು ಮನನೀಯವಾಗುತ್ತದೆ. ಕಾಯದಲ್ಲಿ ಅರಿವು ಇದೆ ಅದು ಗುರುರೂಪ, ಅದೇ ಶಿವರೂಪವೂ ಹೌದು. ಆ ಶಿವರೂಪ ಕಂಡೇ ಶರಣನು ಕರುಣೆಯೆಂಬ ನಂದಾದೀಪ ಹಚ್ಚಿದ್ದಾನೆ. ಆ ದೀಪದ ಬೆಳಕಿನಲ್ಲಿ ಸರ್ವಲೋಕ ಹೊಳೆಯಿತು. ಅಜ್ಞಾನದಿಂದೊಸರುವ ಶೋಕ ಕಳೆಯಿತು ಎಂಬ ಅರ್ಥಪೂರ್ಣವಾದ 'ದೇಹ'ದ ಕಾರ್ಯವನ್ನು ವಚನಕಾರ ಇಲ್ಲಿ ವಿವರಿಸುತ್ತಾರೆ. ಕಾಯ ಶುದ್ಧಿಯನ್ನು 'ತನು ಶುದ್ಧಿ' ಎಂದೂ ಕರೆಯುತ್ತಾರೆ.

ತನು ಶುದ್ಧವಿದ್ದು ಕಲ್ಮಶ ಮನವ
ಒಪ್ಪಲಾಗದು
ಮನ ಶುದ್ಧವಿದ್ದು ಕೊಳಕು ದೇಹವ
ಒಪ್ಪಲಾಗದು
ತನು–ಮನ ಎರಡೂ ಶುದ್ಧವಿದ್ದ
ದೇಹವೇ ದೇವಾಲಯವೆಂದು
ಬಂದು ನೆಲೆಸುವ ನಮ್ಮ
ಈಶ್ವರೀಯ ಪ್ರಿಯ ಶಿವಲಿಂಗ[೫೭]

ತನು ಶುದ್ಧಿ, ಮನ ಶುದ್ಧಿ ಇದ್ದರೆ ಮಾತ್ರ 'ದೇಹವೇ ದೇವಾಲಯ'ವೆನಿಸುತ್ತದೆ ಎಂಬ ಹೇಳಿಕೆ ಈ ವಚನಕಾರರಲ್ಲಿದೆ. ಕೇವಲ ತನು ಶುದ್ಧಿಯಾಗಿದ್ದು ಮನಕಲ್ಮಶವಾಗಿದ್ದರೂ ಪ್ರಯೋಜನವಿಲ್ಲ, ಮನ ಶುದ್ಧಿಯಾಗಿದ್ದು ದೇಹ ಕೊಳಕಾಗಿದ್ದರೂ ಪ್ರಯೋಜನವಿಲ್ಲ. ಈ ಉಭಯ ಶುದ್ಧಿ ಇದ್ದಾಗ ಮಾತ್ರ 'ದೇಹ ದೇವಾಲಯ'ವೆನಿಸುತ್ತದೆ ಎಂಬುದನ್ನು ಇಲ್ಲಿ ಎತ್ತಿ ಹೇಳಲಾಗಿದೆ.

ವ್ಯಕ್ತಿಯ ಭಕ್ತಿ ಸಾಧನೆಯ ಮಹಾ ಪಥವೇ ಕಾಯ. ಹಾಗಾಗಿ ಅದನ್ನು ಪರಿಶುದ್ಧವಾಗಿರಿಸಿಕೊಳ್ಳುವ ಬಗೆಯನ್ನು ಕುರಿತು.

ದೇಹವೆಂಬ ದೇಗುಲದಲ್ಲಿ
ರಕ್ತ ಎಂಬ ಎಣ್ಣೆ ಹಾಕಿ
ಮನಸ್ಸೆಂಬ ಬತ್ತಿ ಉರಿಸಿ
ರೋಮ ರೋಮಗಳು ಶುದ್ಧತೆಯಿಂದ ಬೆಳಗಿದಡೆ
ಅದುವೇ ಪರಿಶುದ್ಧ ದೇವಾಲಯ ಅಲ್ಲವೇ?
ಸರ್ವೇಶ್ವರಾ ಎಂದಳು ಶಾಸನೇಶ್ವರಿ[೫೮]

ದೇಹವು ಪರಿಶುದ್ಧ ದೇವಾಲಯ ಅನ್ನಿಸಿಕೊಳ್ಳಲು ಮನಸ್ಸೆಂಬ ಬತ್ತಿಯನ್ನು ಉರಿಸಿ, ರೋಮ ರೋಮಗಳು ಪರಿಶುದ್ಧತೆಯಿಂದ ಬೆಳಗಬೇಕೆಂಬ ಮಾತು ಇಲ್ಲಿದೆ. ಜಗದೇವಿ ದುಬಲಗುಂಡೆ ಅವರು ದೇಹವನ್ನು ಮನೆ ಎನ್ನುತ್ತ, ಇದನ್ನು ದೇವರ ಮನೆಯಂದು ಕರೆದಿರುವುದು ಕುತೂಹಲಕಾರಿಯಾಗಿದೆ.

ಮನೆ ಇದು ದೇವರ ಮನೆಯಮ್ಮ
ಮನೆಯಲ್ಲಿ ಮನ ನೆಲೆಗೊಳ್ಳುವಂತೆ ಮಾಡಮ್ಮ
ಮಾನಿನಿ ನೀ ಹಸನ್ಮುಖಿಯಾಗಿರಮ್ಮ
ಒಳ ಹೊರಗು ಪರಿಶುದ್ಧಳಾಗಿರಮ್ಮ
ಉರಿ ಬರಲಿ ಸಿರಿ ಬರಲಿ ಸಿಡುಕದೆ ಸಿಟ್ಟಾಗದೆ
ನಿಟ್ಟುಸಿರು ಬಿಡದೆ ಬಟ್ಟ ಬಯಲ ಬಸವನ ನೆನೆ ಅನುದಿನ[೫೯]

ಎಂದು ಜನಪದದ ಹಾಡಿನ ದಾಟಿಯಲ್ಲಿ ವಚನ ರಚಿಸಿದ್ದಾರೆ. ದೇಹವನ್ನೇ ದೇವರ ಮನೆಯಂದು ಕರೆದಿರುವ ಪರಿ ತುಂಬಾ ಸೊಗಸಾಗಿದೆ. ಈ ಮನೆಯಲ್ಲಿರುವ ಮನವನ್ನು ಹಿಡಿತದಲ್ಲಿರಿಸಿಕೊಂಡು ಆತ್ಮ ಹಸನ್ಮುಖಿಯಾಗಿರಬೇಕು. ಈ ಮನೆಯ ಒಳಗೂ, ಹೊರಗೂ ಪರಿಶುದ್ಧವಾಗಬೇಕು. ಉರಿ ಬಂದರೂ, ಸಿರಿ ಬಂದರೂ ಬದಲಾಗಬಾರದು ಸದಾ ದೇವನ ಸ್ಮರಣೆ ಅದರಲ್ಲಿ ತುಂಬಬೇಕು ಎಂದು ಭಕ್ತಿ ಹಿನ್ನೆಲೆಯಲ್ಲಿ ವಿವರಿಸುತ್ತಾರೆ. ಡಾ. ಸೋಮನಾಥ ಯಾಳವಾರ ಅವರು 'ದಯೆಗಿಂತ ದೊಡ್ಡದೇನೋ ಧರ್ಮ? ಇಲ್ಲ ಕಾಣಯ್ಯಾ, ದೇಹಕ್ಕಿಂತ ದಿವ್ಯವೇನೋ ದೇಗುಲ ಇಲ್ಲ ಕಾಣಯ್ಯಾ' ಎಂದಿರುವುದು ಗಮನಾರ್ಹ ಅಂಶ. ಶರಣ ಧರ್ಮವನ್ನು 'ದೇಹಾಲಯ ಧರ್ಮ'ವೆಂದೂ ತಿಳಿಸುತ್ತಾರೆ.[೬೦]

ದೇಹವನ್ನು ವಾಸ್ತವ ಸ್ಥಿತಿಯಲ್ಲಿ ಗಮನಿಸುವ ರೀತಿಯೂ ಇಲ್ಲಿದೆ. ವಿಜಯಕುಮಾರ ಪರುತೆಯವರು 'ದೇಹ'ವನ್ನು ಒಂದು ವೃಕ್ಷಕ್ಕೆ ಹೋಲಿಸಿದ್ದಾರೆ.

ತನುವೆಂಬ ವೃಕ್ಷದಲ್ಲಿ ಮನವೆಂಬ ಪಕ್ಷಿ
ಅರಿಷಡ್ ವರ್ಗಗಳೆಂಬ ಶಾಖೆ ಶಾಖೆಗೆ
ಆಸೆಯೆಂಬ ರೆಕ್ಕೆ ಬಿಚ್ಚಿ ಹಾರಾಡುತ್ತಿದೆ
ಈ ಪಕ್ಷಿ ನಿನ್ನ ಪಾದ ಕಮಲದಲ್ಲಿ ಬಿದ್ದು
ಷಡಕ್ಷರಿ ಮಂತ್ರವ ಜಪಿಸುವಂತೆ
ಮಾಡಯ್ಯ ಗುರು ನಂಜೇಶ್ವರ[೬೧]

ಇಲ್ಲಿ ದೇಹವನ್ನು ಒಂದು ವಿಶಾಲವಾದ ವೃಕ್ಷದಂತೆ ಕಂಡಿರುವ ವಚನಕಾರರು ಅದರಲ್ಲಿಯ ಮನವನ್ನು ಪಕ್ಷಿಗೆ ಹೋಲಿಸಿದ್ದಾರೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಆರು ವರ್ಗಗಳು ಈ ಮರಕ್ಕೆ ರೆಂಬೆಗಳೆನ್ನುತ್ತಾರೆ. ಇಲ್ಲಿ ಆಸೆಯೆನ್ನುವ ರೆಕ್ಕೆ ಬಿಚ್ಚಿ ಪಕ್ಷಿ ಸ್ವಚ್ಛಂಧವಾಗಿ ಹಾರಾಡುತ್ತಿದೆ. ಅದಕ್ಕೆ ಷಡಕ್ಷರಿ ಮಂತ್ರ ಜಪಿಸುವಂತೆ ಮಾಡು ಎನ್ನುವಲ್ಲಿ ಮನದ ನಿಯಂತ್ರಣಕ್ಕೆ ಮಂತ್ರವೇ ಮದ್ದು ಎಂದು ಹೇಳುತ್ತಿರುವುದನ್ನು ಇಲ್ಲಿ ಗಮನಿಸಬಹುದು.

ಕಾಯದ ಬಗ್ಗೆ ವಿಪರೀತ ಭಾವನೆಗಳಿದ್ದ ಅತಿ ನಿರಾಕರಣೆ ಹಾಗೂ ಬಹುಸ್ವೀಕರಣೆಗಳೆರಡನ್ನೂ ಒಪ್ಪದ ಆಧುನಿಕ ವಚನಕಾರರು, ಅದರ ವಾಸ್ತವತೆಯನ್ನು ಬಿಚ್ಚಿಡಲು ಪ್ರಯತ್ನಿಸಿದರು ದೇಹದ ಸದುಪಯೋಗವನ್ನು ಕುರಿತು ಒತ್ತಿ ಹೇಳಿದರು. ಅದನ್ನು ಶುದ್ಧವಾಗಿರಿಸಿಕೊಳ್ಳಬೇಕು ಅದನ್ನೇ ಅತಿಯಾಗಿ ನಚ್ಚಬಾರದೆಂಬ ಸಂಗತಿಗಳನ್ನು ತಿಳಿಸಿದ್ದಾರೆ.

**೫-೧-೬ ಆರೋಗ್ಯ ಚಿಂತನೆ**

ಶರಣ ಸಂಸ್ಕೃತಿ ಮಾನವನ ಸರ್ವೋತಮುಖ ಬೆಳವಣಿಗೆಗೆ ನಾಂದಿ ಹಾಡಿತು. ಬದುಕಿಗೆ ಹಾಸುಹೊಕ್ಕಾಗಿ, ಪ್ರತಿಯೊಂದು ವಿಚಾರದಲ್ಲಿ ಸಕಾರಾತ್ಮಕ ಚಿಂತನೆ ನೀಡಿತು. ಆರೋಗ್ಯಕರ ಜೀವನಕ್ಕೆ ಬಸವಾದಿ ಶರಣರ ವಚನಗಳು ನೀಡಿರುವ ಸಂದೇಶಗಳು ಅತ್ಯದ್ಭುತವಾಗಿವೆ. ಇಂದಿನ ವಿಜ್ಞಾನಿಗಳನ್ನು ನಿಬ್ಬೆರಗುಗೊಳಿಸುವಂತಹ ಆಲೋಚನಗಳು ಅಲ್ಲಿವೆ. ಅಂತೆಯೇ ಆಧುನಿಕ ವಚನ ಸಾಹಿತ್ಯದಲ್ಲಿಯೂ 'ಆರೋಗ್ಯ ಚಿಂತನೆ'ಯ ನೆಲೆಯಲ್ಲಿ ಅನೇಕ ವಚನಗಳು ರಚನೆಯಾಗಿರುವುದನ್ನು ಮನಗಾಣಬಹುದು.

ಕಾಮ; ವಿದ್ಯುತ್ತಿನಂತೆ
ಹಿಡಿದರೆ ಬಿಡದು ಸಾಯುವವರೆಗೆ
ಓಡಿದರೂ ಕೂಡ, ಎಳೆದು ಕೊಲ್ಲುವುದು
ಮಿತವಾದಿಗಳು ಹಿತವಾಗಿರುವರು
ಪ್ರಭು; ಮೀರಿದವರು ಮುರಹರನಾಗುವರು ನೋಡಾ[೬೨]

ಕಾಮದ ಅತಿ ಆಸೆಯಲ್ಲಿ ತೊಡಗಿದರೆ ಏನಾಗುತ್ತದೆ ಎಂಬ ಪ್ರಜ್ಞೆಯನ್ನು ಈ ವಚನ ನೀಡುತ್ತದೆ. ಅದನ್ನು ವಿದ್ಯುತ್ಗೆ ಹೋಲಿಸಿರುವ ವಚನಕಾರ, ಅದು ಒಮ್ಮೆ ಹಿಡಿದುಕೊಂಡರೆ ಸಾಯುವವರೆಗೂ ಬಿಡಲಾರದು ಎನ್ನುತ್ತಾರೆ. ಮನುಷ್ಯನ ಆರೋಗ್ಯದ ದೃಷ್ಟಿಯಿಂದ ಇದರಲ್ಲಿಯೂ ಮಿತತೆಯಿದ್ದರೆ ಹಿತವಾಗಿರಲು ಸಾಧ್ಯವೆಂದು ಹೇಳಲಾಗಿದೆ. 'ಮನುಷ್ಯ ಕಾಮಕ್ಕಾಗಿ ಕುದಿದಷ್ಟು, ರಾಮಕ್ಕಾಗಿ ಕುದಿಯುವುದಿಲ್ಲವೆಂದೂ ವಚನಕಾರ ತಿಳಿಸುತ್ತಾನೆ.

ಆರೋಗ್ಯವಾಗಿರುವುದೆಂದರೆ ತನು-ಮನವನ್ನು ಕಾಹಿಲೆರಹಿವಾಗಿರಿಸಿಕೊಳ್ಳುವುದು ಎಂದರ್ಥ. ತನು ಅಂದರೆ ದೇಹ. ಕಾರ್ಯ ಮಾಡಲು 'ಕಾಯ' ಸದೃಢವಾಗಿರಬೇಕು. 'ಕಾಯ'ವನ್ನು ನಶ್ವರವೆಂದು ಅಲಕ್ಷಿಸಬಾರದು. ಕಾಯ ದುರ್ಬಲವಾದರೆ ಕಾಯಕ ಮಾಡುವುದಾದರೂ ಹೇಗೆ? ಆದ್ಧರಿಂದ ಶರೀರವನ್ನು 'ದೇವನೊಲಿಸಲು ಬಂದ ಪ್ರಸಾದಕಾಯ' ಎಂದರು ಶರಣರು. ಈ ದೇಹದಲ್ಲಿರುವ ಪಂಚೇದ್ರಿಯಂಗಳ ಉಪಟಳವೂ ಅತಿಯಾದುದು. ಇವುಗಳಿಂದ ಒಮ್ಮೊಮ್ಮೆ ದೇಹಕ್ಕೆ ರೋಗ, ಮತ್ತೊಮ್ಮೆ ಮನಸ್ಸಿಗೆ ರುಜೆ ಅಂಟಿಸಿಕೊಳ್ಳುತ್ತದೆ ಅದನ್ನು ದೂರವಿಡಲು ಆಧುನಿಕ ವಚನಕಾರರು ಬಯಸುತ್ತಾರೆ.

'ಕಣ್ಣು ಬೇಡವೆಂದರೂ ನೋಡಬಯಸುವುದಯ್ಯಾ
ಕಿವಿ ಬೇಡವೆಂದರೂ ಕೇಳಬಯಸುವುದಯ್ಯ
ನಾಲಿಗೆ ಬೇಡವೆಂದರೂ ಸವಿಯ ಬಯಸುವುದಯ್ಯಾ
ನಾಸಿಕ ಬೇಡವೆಂದರೂ ಮೂಸಬಯಸುವುದಯ್ಯ
ತ್ವಕ್ಕು ಬೇಡವೆಂದರೂ ಸ್ಪರ್ಶಿಸಬಯಸುವುದಯ್ಯ
ಈ ಪಂಚೇಂದ್ರಿಯಗಳ ಉಪಟಳವ ಕಳೆದು

ಮನ ನಿನ್ನನ್ನೇ ನೆನೆವಂತೆ ಮಾಡಯ್ಯ ಬಸವಲಿಂಗ[೬೩]

ಎನ್ನುವಲ್ಲಿ ಸತ್ಪಥದ ದಾರಿಯಲ್ಲಿ ಅಡ್ಡಗಾಲಾಗಿ ನಿಲ್ಲುವ ಪಂಚೇಂದ್ರಿಯಗಳಾದ ಕಣ್ಣು, ಕಿವಿ, ನಾಲಿಗೆ, ನಾಸಿಕತ್ವಕ್ಕುಗಳು ಹೇಗೆ ವರ್ತಿಸುತ್ತವೆ? ಎಂದು ತಿಳಿಸುತ್ತಾರೆ. ಇವುಗಳ ಉಪಟಳ ಅಂದರೆ ರುಜಿನತರುವ ತೊಂದರೆ ಸಾಮಾನ್ಯವಾದುದಲ್ಲವೆಂದು ವಚನಕಾರ್ತಿ ಇಲ್ಲಿ ನಿವೇದಿಸುತ್ತಾರೆ. ಅದರಲ್ಲೂ ಆರೋಗ್ಯದ ದೃಷ್ಟಿಯಿಂದ 'ನಾಲಿಗೆ'ಯ ಪಾತ್ರ ಹಿರಿದಾಗಿದೆ.

ಆರೋಗ್ಯ ಕಾಪಾಡುವುದು ನಾಲಿಗೆ
ರೋಗ ತರುವುದು ನಾಲಿಗೆ
ರಾಗ, ವಿರಾಗ ತರುವುದು ನಾಲಿಗೆ
ಸಮತೋಲನ ತಪ್ಪದ ನಾಲಿಗೆ
ನಾಡಿಗೆ ಒಪ್ಪುದಯ್ಯಾ[೬೪] ಎಂದಿರುವುದನ್ನಿಲ್ಲಿ ಅರಿಯಬಹುದು.

ಮಿತಿಯಲ್ಲಿದ್ದರೆ ಆರೋಗ್ಯ. ಮಿತಿಮೀರಿದರೆ ಅನಾರೋಗ್ಯ. ಹೀಗಾಗಿ ಈ ನಾಲಿಗೆಯನ್ನು ತುಂಬಾ ಎಚ್ಚರಿಕೆಯಿಂದ ಕಾಯ್ದುಕೊಳ್ಳಬೇಕಾದ ಪರಿಯನ್ನು ಇಲ್ಲಿ ಹೇಳಲಾಗಿದೆ.

'ದೇವ ನಿರ್ಮಿತ ಈ ದೇಹದ
ಬೆಲೆಯ ಕಟ್ಟಲಾಗದೋ ಮೂಢ ಮಾನವಾ
ಯಾವ ಅಂಗ ಶ್ರೇಷ್ಠವೆಂದ್ಹೇಳಲಿ?
ಒಂದಂಗ ಊನವಾದದೂ
ಅಂಗವಿಕಲತೆಯಿಂದ ಬಳಲುವೆವು.....[೬೫]

ಎನ್ನುತ್ತಾರೆ ಕಲಾವತಿ ಶಾಮಣ್ಣ ಬಿರಾದಾರ ಅವರು. ಇಂದಿನ ಯುಗದಲ್ಲಿ ಮಾನವ ದೇಹದ ಒಂದೊಂದು ಅಂಗಗಳು ಎಷ್ಟು ಪ್ರಮುಖ. ಅವುಗಳ ಬೆಲೆ ಕಟ್ಟಲಾಗದಂಥಹದ್ದು ಅವುಗಳನ್ನು ಕಾಪಾಡಿಕೊಳ್ಳುವ ಸಲಹೆ ನೀಡುತ್ತಾರೆ. ಕಣ್ಣಿನ ಬೆಲೆ ಕಟ್ಟಲಾಗದು, ಕಣ್ಣಿದ್ದವನಿಗೇನೂ ಗೊತ್ತು ಅದರ ಕಿಮ್ಮತ್ತು ಎಂದೂ ಅವರು ಹೇಳಿರುವುದನ್ನು ನಾವಿಲ್ಲಿ ಗಮನಿಸಬಹುದು.

'ಆಹಾರ ಪದ್ಧತಿ'ಯು ಆರೋಗ್ಯದ ಮಹಾಗುಟ್ಟು. ಆಹಾರ ಸೇವಿಸುವ ಪರಿಯನ್ನು ಅರಿಯಬೇಕಾಗಿದೆ ಎಂಬ ಚಿಂತನೆಗಳು ಇಲ್ಲಿವೆ. ಆಹಾರ ಮಹತ್ವವನ್ನು, ಅರಿಯದವರ ಸಂಖ್ಯೆ ನಮ್ಮ ದೇಶದಲ್ಲಿ ಹೆಚ್ಚುತ್ತಿದೆ. ಆಹಾರ ಪೋಲಾಗುವುದನ್ನು ನಿಯಂತ್ರಿಸಬೇಕು. ಅತಿ ತಿನ್ನುವುದನ್ನೂ ಬಿಡಬೇಕಂಬುದನ್ನು ಕುರಿತು ಸೂಗಯ್ಯ ಹಿರೇಮಠರು ಹೇಳುವ ಪರಿ ಹೀಗಿದೆ.

'ಮೊಟ್ಟೆ ತಿಂದವರು ಸಮಾಜದ ಮಾರಿಗಳೇನಯ್ಯಾ
ಮೀನು ತಿಂದವರು ಮೋಸಗಾರರೇನಯ್ಯಾ
ಮಾಂಸ ತಿಂದವರು ಮಂದಮತಿಗಳೇನಯ್ಯಾ
ಧಾನ್ಯ ತಿಂದವರು ಬುದ್ಧಿವಂತರೇನಯ್ಯಾ
ಪ್ರದೇಶ, ಪರಿಸರ, ಹವಾಮಾನಕ್ಕನುಗುಣವಾಗಿ
ಆಹಾರ ಸೇವಿಸುವರಯ್ಯಾ

ಆಹಾರ ಅತಿಯಾದರೆ ಆರೋಗ್ಯಕ್ಕೆ ಆಪತ್ತು ನೋಡಾ

ಸುವರ್ಣ ಮಹೋತ್ಸವದ ಸೂಗೂರೇಶ್ವರ[೬೬]

ಇಂದು ಬಹುಚರ್ಚಿತ ವಸ್ತುವಾಗಿರುವ 'ಆಹಾರ ಪದ್ಧತಿ'ಯ ಬಗ್ಗೆ ಮನದೆರೆದು ಮಾತನಾಡುವ ಈ ವಚನ ಯಾವುದೇ ಪ್ರಕಾರದ ಆಹಾರ ಸೇವಿಸಿದರೂ ತಪ್ಪಿಲ್ಲ. ಅದು ಅವರವರ ಪ್ರದೇಶ, ಪರಿಸರ, ಹವಾಮಾನಗುಣಕ್ಕನುಗುಣವಾದುದು. ಆದರೆ ಅತಿ ಆಹಾರ ಸೇವನೆ ಆರೋಗ್ಯಕ್ಕೆ ಹಾನಿಕರವೆಂದು ತಿಳಿಸುತ್ತಾರೆ. ಈ ವಿಷಯವನ್ನು ೧೨ನೇಯ ಶತಮನಾದಲ್ಲಿ ಅಕ್ಕಮಹಾದೇವಿ 'ಆಹಾರವ ಕಿರಿದು ಮಾಡಿರಣ್ಣ, ಆಹಾರವ ಕಿರಿದು ಮಾಡಿರಿ' ಎಂದು ಹೇಳಿದ್ದಾಳೆ. ಈ ಆಹಾರದಿಂದಲೇ ವ್ಯಾದಿ ಹಬ್ಬಿ ಬಲಿಯುವುದನ್ನು, ಆಹಾರದಿಂದ ನಿದ್ರೆ, ನಿದ್ರೆಯಿಂದ ತಾಮಸ, ಅಜ್ಞಾನ, ಮೈಮರವು, ಕಾಮವಿಕಾರ ಹೆಚ್ಚಿ, ಕಾಯ ವಿಕಾರ, ಮನೋವಿಕಾರ, ಇಂದ್ರಿಯವಿಕಾರ, ಭಾವವಿಕಾರ, ವಾಯುವಿಕಾರವುಂಟಾಗುವುದನ್ನು ತಿಳಿಸಲಾಗಿದೆ.

ದೇಹದ ವಿಕಾರತೆಯನ್ನು ತಗೆಯಲು ಅದನ್ನು 'ದಂಡಿಗೆ'ಯಾಗಿಸಬೇಕೆಂಬ ವಿಚಾರ ಆಧುನಿಕ ವಚನಕಾರರಲ್ಲಿದೆ.

ದೇಹವೆಂಬ ದಂಡಿಗೆಯಿಂದ
ಕಾಮ, ಕ್ರೋಧ, ಲೋಭ
ಮದ,, ಮೋಹ, ಮತ್ಸರಗಳೆಂಬ
ಅಪಸ್ವರಗಳ ಹೊಲಸು ಹೊರಹಾಕಿ
ಸತ್ಯ, ನ್ಯಾಯ ನೀತಿ
ಧರ್ಮ, ಆಚಾರ, ವಿಚಾರಗಳೆಂಬ
ಸುನಾದವ ನುಡಿಸಿ ಕಾಯವ
ಹಸನಗೊಳಿಸಯ್ಯಾ ತಂದೆ.........[೬೭]

ಕಾಯದ ಆರೋಗ್ಯ ಮುಖ್ಯ ಅದಕ್ಕಾಗಿ ಸತ್ಕ್ರಿಯೆಗಳು ಅವಶ್ಯವೆಂಬುದನ್ನು ಇಲ್ಲಿ ಹೇಳಲಾಗಿದೆ. ಆತ್ಮಶುದ್ಧಿಯಾದರೆ, ಸರ್ವೇಂದ್ರಿಗಳು ಏಕೇಂದ್ರಿಯವಾದಲ್ಲಿ ಸರ್ವಜ್ಞಾನ ಸಂಪನ್ನವಾಗುವುದು ಎನ್ನುತ್ತಾರೆ.

ದೇಹದ ಅನಾರೋಗ್ಯಕ್ಕೆ ಬಹಿರಂಗ ಚಿಕಿತ್ಸೆಗಿಂತ ಅಂತರಂಗದ ಚಿಕಿತ್ಸೆ ಹೆಚ್ಚು ಪರಿಣಾಮಕಾರಿ ಎಂಬುದನ್ನು ಕುರಿತು ಹೇಳಲಾಗಿದೆ. ಮಧ್ಯಪಾನ, ತಂಬಾಕು ಸೇವನೆಯಂತಹ ಗುಣಗಳನ್ನು ವರ್ಜಿಸುವ ಹಾಗೂ ಅನಾವಶ್ಯಕ ಚಿಂತೆಗಳನ್ನು ದೂರಮಾಡಲು ಹೇಳಲಾಗಿದೆ.

'ಉಂಡರೊಂದು ಚಿಂತೆ ಉಟ್ಟರೊಂದು ಚಿಂತೆ
ಉಣ್ಣದೆ ಇರಲಾಗದು, ಉಡದೆ ಬದುಕಲು ಆಗದು
ಉಂಡುಟ್ಟು ಎಲ್ಲರಿಗೂ ಬೇಕಾಗಿರುವಂತೆ ಕರುಣಿಸಾ'[೬೮]

ಎಂಬ ಸಂಗತಿಗಳನ್ನು ಇಲ್ಲಿ ಹಿಡಿದಿಡಲಾಗಿದೆ. ದಿನನಿತ್ಯದ ಒತ್ತಡಕ್ಕೆ ಕಾರಣ ಚಿಂತಾಕ್ರಾಂತರಾಗುತ್ತಿರುವುದು ಎಂಬುದನ್ನು ಖಣಡಿಜ-ಒಚಿಟಿಚಿರಜಟಜಟಣ ಹೇಳುತ್ತದೆ. ಇದನ್ನು ತಗ್ಗಿಸಬೇಕಾಗಿದೆ. ಚಿಂತೆ ಜನರನ್ನು ಚಿತೆಯೆಡೆಗೆ ಒಯ್ಯುತ್ತದೆ ಎನ್ನುವುದು ವೈಜ್ಞಾನಿಕ ಸತ್ಯವಾಗಿದೆ. ಚಿಂತೆಗಳ ಸಂತೆಯಲ್ಲಿ ಸಿಕ್ಕು ನಲುಗಿರುವ ವ್ಯಕ್ತಿಯನ್ನೊಮ್ಮೆ ಹೊರಗೆಳೆಯಲು ಕೇಳಿಕೊಳ್ಳಲಾಗುತ್ತಿದೆ.

'ಉಟ್ಟರು ಉಡದಿರುವ ಚಿಂತೆ
ಉಡದೆಯೂ ಉಟ್ಟಿರುವ ಚಿಂತೆ
ತೊಟ್ಟರೂ ತೊಡದಿರುವ ಚಿಂತೆ
ತೊಡದೆಯೂ ತೊಟ್ಟಿರುವ ಚಿಂತೆ
ಉಡುವ ತೊಡುವ ಸಂತೆಯಲ್ಲಿ ಸಿಕ್ಕು
ಬಡವಾಗಿದ್ದೇನೆ. ಎಳೆದೊಮ್ಮೆ ಹೊರಗೆ ಬಿಡು
ಸೋಮಲೋಚನ ಪ್ರಿಯ ಬಸವಣ್ಣ'[೧೯]

ಎಂದಿದ್ದಾರೆ ಡಾ. ಸೋಮನಾಥ ಯಾಳವಾರರು. ಹಲವು ಚಿಂತೆಗಳಲ್ಲಿ ಸಿಲುಕಿರುವ ಇಂದಿನ ಜನತೆಯ ಅನಾವಶ್ಯಕ ಚಿಂತೆಗಳನ್ನು ಕುರಿತು ಹೇಳಿರುವ ಇಲ್ಲಿಯ ವಚನಗಳು ಅನಾರೋಗ್ಯದ ನೆಲೆಯಲ್ಲಿ ಗಮನಾರ್ಹವಾಗುತ್ತವೆ. ಅತಿಯಾದ ಆಸೆಯಿಂದಲೂ, ಆರೋಗ್ಯಕ್ಕೆ ದಕ್ಕೆಯೊದಗುವ ನೆಲೆಗಳನ್ನು ಇಲ್ಲಿ ಅರಿಯಬಹುದಾಗಿದೆ.

'ಬರುವಾಗ ಜೊತೆಯಲ್ಲಿ
ಏನನ್ನು ತಂದಿಲ್ಲ
ಹೋಗುವಾಗಲು ಜೊತೆಗೆ
ಏನೂ ಬರುವುದಿಲ್ಲ
ಮಧ್ಯದಲ್ಲಿಯ ಬದುಕು
ಅದು ಬೇಕು ಇದು ಬೇಕು
ನನ್ನದದು ನನ್ನದಿದು ವ್ಯಾಮೋಹದಲಿ
ಸಿಲುಕಿ ತೊಳಲಾಡುವುದು....'[೨೦]

ಎನ್ನುವಂತಹ ಸ್ಥಿತಿ ನಿರ್ಮಾಣವಾಘಿದೆ. ಇಂಥ ಅನಾರೋಗ್ಯವನ್ನು ತಡೆಗಟ್ಟಿ, ಸಮಾಜಕ್ಕೆ ಫಲಕಾರಿಯಾದ ಆರೋಗ್ಯಕರ ಜೀವನವನ್ನು ವ್ಯಕ್ತಿ ನೆಲೆಯಲ್ಲಿ ಅನುಕರಿಸಿಕೊಳ್ಳಬೇಕೆಂಬ ಚಿಂತನೆಯೂ ಇಲ್ಲಿ ನಡೆದಿದೆ. ಎನ್ನುವುದನ್ನು ಈ ಹಿನ್ನೆಲೆಯಲ್ಲಿ ಮನಗಾಣಬಹುದು.

**೫-೨ ಸಾಮಾಜಿಕ ನೆಲೆ**

ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಒಪ್ಪಿಕೊಂಡಿರುವ ನಾವು ಇಂದು 'ಸಮಾಜವಾದ'ದ ಕಲ್ಪನೆಗೂ ಬದ್ಧರಾಗಿದ್ದೇವೆ. ಹೊಸ ಸಮಾಜವಾದದ ಪ್ರಸವ ವೇದನೆಯಲ್ಲಿ ನರಳುತ್ತಿದ್ದೇವೆ. ಸಮಾಜವಾದದ ಮೌಲ್ಯಗಳನ್ನೇನೋ ಒಪ್ಪಿಕೊಂಡಿದ್ದೇವೆ. ಆದರೆ ಅವುಗಳನ್ನು ಅನುಸಂಧಾನದಲ್ಲಿ ತರಲಾರದೆ ಕಂಗೆಟ್ಟಿದ್ದೇವೆ. ಇಂದಿಗೂ ನಮ್ಮಲ್ಲಿ ವರ್ಗ, ವರ್ಣ, ಲಿಂಗಭೇದ, ಜಾತಿಭೇದದ ವ್ಯವಸ್ಥೆ ಇರುವುದನ್ನು ಮರೆಯಲಾಗದು. ಆದರೆ ೧೨ನೆಯ ಶತಮಾನದಲ್ಲಿಯೇ ಬಸವಾದಿ ಶರಣರು ಈ ಭೇದ ವ್ಯವಸ್ಥೆಯನ್ನು ಮುರಿದು ಸಮಾನತೆಯ

ವ್ಯವಸ್ಥೆಯ ಸಮಾಜವನ್ನು ಕಟ್ಟಲು ಪ್ರಯತ್ನಿಸಿದರು. ವೈಜ್ಞಾನಿಕ ಸಮಾಜವಾದದ ಸ್ವರೂಪವನ್ನು ತಿಳಿದಿದ್ದ ಶರಣರು ಭಾರತದ ದೃಷ್ಟಿಯಿಂದ ಮೊಟ್ಟಮೊದಲ ಸಮಾಜವಾದಿಗಳೆನಿಸಿದ್ದಾರೆ.

೧೨ನೆಯ ಶತಮಾನ ವಚನಕಾರರ ಸಮಾಜವಾದದ ಗುರಿ ಬಹುಜನರ ಲೇಸಲ್ಲ; 'ಸಕಲ ಜೀವಾತ್ಮರಿಗೆ' ಲೇಸನೆ ಬಯಸುವ ಪರಿ' ಎಂಬುದನ್ನು ಮರೆಯುವಂತಿಲ್ಲ. ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಹಾಗೂ ಐಹಿಕ ಸುಖ ಈ ವ್ಯವಸ್ಥೆಯ ಮುಖ್ಯ ಲಕ್ಷಣಗಳು. ಇಂದಿನ ನಮ್ಮ ಸಂವಿಧಾನದಲ್ಲೂ ಇವು ಪ್ರಮುಖ ಸ್ಥಾನವನ್ನು ಪಡೆದಿದ್ದರೂ ಇವುಗಳನ್ನು ನಮಗೆ ಇಂದಿಗೂ ಆಚರಣೆಯಲ್ಲಿ ತರಲಾಗದೆ ಇರುವುದು ಗೊತ್ತಾಗುವಂತಹ ಸಂಗತಿಯಾಗಿದೆ.

ಅದರಂತೆಯೇ ಶೋಷಣೆಯನ್ನು ಪರಾವಲಂಬನೆಯನ್ನು ತೊಡೆದುಹಾಕಿ ಸರ್ವ ಸಮಾನತೆಯ ಆಧಾರದ ಮೇಲೆ ಸಮಾಜದ ವಿಕಾಸವನ್ನು ಬಯಸುವ ಆಧುನಿಕ ವಚನಕಾರರು, ಹಲವು ನೆಲೆಗಳಲ್ಲಿ ಚಿಂತನೆಗೈದಿದ್ದಾರೆ. ಅದರಲ್ಲೂ ಮೊದಲನೆಯದೆಂದರೆ ವರ್ಗ-ವರ್ಣ-ಜಾತಿ-ಲಿಂಗಭೇದಗಳನ್ನು ಇಲ್ಲವಾಗಿಸುವ ಪ್ರಯತ್ನ ಮೂಢನಂಬಿಕೆಯನ್ನು ದೂರಗೊಳಿಸುವ ಪ್ರಯತ್ನ, ಸಾಮಾಜಿಕ ಅರಿವನ್ನುಂಟು ಮಾಡುವ ಪ್ರಯತ್ನ ಈ ಹಿನ್ನೆಲೆಯಲ್ಲಿ, ಸಾಮಾಜಿಕವಾದ ಕೌಟುಂಬಿಕವಾದ ಏರು-ಪೇರುಗಳನ್ನು, ಅಂಕುಡೊಂಕುಗಳನ್ನು ನಿವಾರಿಸುವಂತಹ ಚಿಂತನೆಯ ನೆಲೆಗಳು ಇಲ್ಲಿಯ ಆಧುನಿಕ ವಚನಕಾರರ ರಚನೆಗಳಲ್ಲಿ ಮೂಡಿನಿಂತಿವೆ. ಇಂದಿನ ವಚನಕಾರರಿಗೆ ವಚನ ಪರಂಪರೆಯ ಪ್ರಜ್ಞೆಯಿದೆ ಎಂಬುದಕ್ಕೆ ಹಾಗೂ ಅವರಲ್ಲಿ ಬದುಕಿನ ಮೌಲ್ಯಗಳು ಹಾಗೂ ಸಾಮಾಜಿಕ ಚಿಂತನೆ ಇದೆ ಎಂಬುದಕ್ಕೆ ಈ ಕೆಳಗಿನಂತಹ ವಚನಗಳು ಸಾಕ್ಷಿಯಾಗುತ್ತವೆ.

'ಸಮಾಜ ಕಂಡು ಬಸವಣ್ಣ ರಚಿಸಿದ್ದನೋ ವಚನಗಳನ್ನಂದು
ವಚನಗಳು ಆಗಿದ್ದವು ವ್ಯಕ್ತಿಯನ್ನು ಎಚ್ಚರಿಸುವುದಕ್ಕೆ
ಸಮಾಜವನ್ನು ಉದ್ಧರಿಸಲಿಕ್ಕೆ, ಇಂದಿನ ವಚನಗಳು
ಅಗಿರುವವು ವೈಯಕ್ತಿಕ;
ಸಾಕು ಎತ್ತಿ ತೋರಿಸುವುದು ಸಮಾಜದ ಹುಳಕ;
ನೀಡಬೇಡ ಬರಿ ಆಶ್ವಾಸನೆ, ಅದರಿಂದ ಸಾಧ್ಯವೇ
ಸಮಾಜದ ಒಳಿತ
ಆಶ್ವಾಸನೆ ಕ್ರಿಯೆಯಾದಡೆ ಶ್ರೀ ಗವಿಸಿದ್ಧೇಶ್ವರ ತಾನು ಪ್ರೀತ
ನೀನಾಗಬೇಡ ನಯವಂಚಕ'[೭೧]

ವಿ.ಎಂ. ಬಡಿಗೇರ ಅವರು ಇಂದಿನ ವಚನಗಳ ನೆಲೆಯನ್ನು ವೈಯಕ್ತಿಕ ಹಿನ್ನೆಲೆಯಲ್ಲಿ ಗುರುತಿಸಿದ್ದರೂ, ಅವರ ಈ ವಚನವು ಸಾರ್ವತ್ರಿಕ ವಿಚಾರವನ್ನು ಅರುಹುವಲ್ಲಿ ಯಶಸ್ವಿಯಾಗಿದೆ ಎನ್ನಬಹುದು. ವ್ಯಕ್ತಿಯನ್ನು ಎಚ್ಚರಿಸುವುದಕ್ಕೆ ಇಂದಿನ ವಚನಗಳು ಹುಟ್ಟಿಕೊಂಡಿದ್ದರೂ, ಅವುಗಳಲ್ಲಿ ಸಾಮಾಜಿಕ ಬದುಕಿನ ಹುಳುಕನ್ನು ಎತ್ತಿ ತೋರಿಸುವುದರಿಂದ ಅವು ಸಾರ್ವತ್ರಿಕ ರೂಪ ಪಡೆಯುತ್ತವೆ. ಕೇವಲ ಹೇಳುವುದರಿಂದ ಪ್ರಯೋಜನ ಕಾಣುವುದಿಲ್ಲ; ಆಶ್ವಾಸನೆ ಕ್ರಿಯೆಯಾಗಿ ಮೂಡಬೇಕು ಎಂಬ ಪರಿಕಲ್ಪನೆ ಇಲ್ಲಿರುವುದು ಮುಖ್ಯವಾಗುತ್ತದೆ.

ಶೋಷಣೆಯನ್ನು ಪರಾವಲಂಬನೆಯನ್ನು ತೊಡೆದು ಹಾಕಿ ಸರ್ವಸಮಾನತೆಯ ಆಧಾರದ ಮೇಲೆ ಎಲ್ಲರ ವಿಕಾಸಕ್ಕೆ ಕಾರಣವಾಗುವ ಮುಕ್ತ ಸಮಾಜದ ರಚನೆಗಾಗಿ ಹೋರಾಡಬೇಕಾಗಿರುವ ಅವಶ್ಯಕತೆಯನ್ನೂ

ವಚನಗಳು ಹೇಳುತ್ತವೆ. ಇಂದು ಬೇರೆಯದಾದ ಹಲವುಗಳ ಬೆನ್ನು ಹತ್ತಿ ಸಮಾಜವನ್ನೇ ಮರೆತುಹೋಗಿರುವುದನ್ನು ಕುರಿತು ಹೇಳುವ ಒಂದು ವಚನ ಹೀಗಿದೆ.

'ಯಶಸ್ಸಿನ ಹಿಂದೆ ಬೀಳುವ ಜನ
ನೋವುಂಡ ಕಾಲುಗಳನ್ನು ಮರೆವರು
ಶ್ರಮದ ಹೆಜ್ಜೆಗಳನು ಮರೆವರು
ನಾಳೆಗಳ ಹಿಂದೆ ಬೀಳುವ ಜನ
ನಿನ್ನೆಯ ದಿನಗಳ ಮರೆಯುವರು
ಪರಿಣಾಮದ ಹಿಂದೆ ಬೀಳುವ ಜನ
ಕಾರಣಗಳನ್ನು ಮರೆವರು
ಮೋಕ್ಷದ ಹಿಂದೆ ಬೀಳುತ ಜನ
ಶ್ರೀ ಗುರುಸಿದ್ಧನ ಮರೆವರು'[೨೨]

ಯಶಸ್ಸು, ಸುಖದ ಹಿಂದೆ ಬಿದ್ದಿರುವವರು, ನೋವುಂಡವರನ್ನು ಶ್ರಮಪಟ್ಟವರನ್ನು ಮರೆತಿರುವುದು ಭವಿಷ್ಯದ ಕಡೆಗೆ ಗಮನವಿಟ್ಟವರು, ವರ್ತಮಾನದ ಸ್ಥಿತಿಯನ್ನು ಅರಿಯದಾಗಿರುವುದನ್ನು, ಮೋಕ್ಷಕ್ಕಾಗಿ ಹಂಬಲಿಸುವವರು, ತಮ್ಮ ಅಂತರಾತ್ಮವನ್ನೇ ಮರೆಯುವಂಥಹ ಸ್ಥಿತಿ ಸಮಾಜದಲ್ಲಿರುವುದನ್ನು ಇಲ್ಲಿ ತೋರಿಸಲಾಗಿದೆ. ಧ್ವನಿಪೂರ್ಣವಾಗಿರುವ ಈ ವಚನ ವಾಸ್ತವಿಕ ಸಾಮಾಜಿಕ ವಾತಾವರಣಕ್ಕೆ ಕನ್ನಡಿ ಹಿಡಿಯುತ್ತದೆ.

**೫-೨-೧ ಜಾತಿಭೇದದ ಚಿಂತನೆ**

ಮನುಷ್ಯ ಸಮಾಜ ಜೀವಿಯಾಗಿರುವುದರಿಂದ ಸಮಾಜದ ಘಟಕವಾಗಿರುವ ವ್ಯಕ್ತಿಯ ಜೀವನದ ವಿಕಾಸದಲ್ಲಿ ಸಮಾಜದ ಪಾಲಿರುವಂತೆ, ಸಮಾಜದ ಸ್ಥಿತಿಗತಿಗೆ, ಸಂಘರ್ಷ ಸಾಮರಸ್ಯಕ್ಕೆ ವ್ಯಕ್ತಿಗಳದ್ದೂ ಪಾಲಿರುತ್ತದೆ. ಅಂತೆಯೇ ವ್ಯಕ್ತಿಯನ್ನುಳಿದ ಸಮಾಜಕ್ಕಾಗಲಿ, ಇಲ್ಲವೇ ಸಮಾಜವನ್ನುಳಿದ ವ್ಯಕ್ತಿಗಾಗಲಿ ಮಹತ್ವವಿಲ್ಲ. ಅವೆರಡೂ ಒಂದಕ್ಕೊಂದು ಪೂರಕವಷ್ಟೇ ಅಲ್ಲ; ಪೋಷಕವೂ ಹೌದು, ಮನುಷ್ಯನ ಸುಖ ದುಃಖಗಳಿಗೆ, ಅನುವು ಆಪತ್ತುಗಳಿಗೆ ಸಮಾಜದ ವ್ಯವಸ್ಥೆಯಲ್ಲಿ ಕಾರಣಗಳು ದೊರೆಯುವಂತೆ, ವ್ಯಕ್ತಿಯ ಮಾತಿನಲ್ಲಾಗಲಿ, ಕೃತಿಯಲ್ಲಾಗಲಿ ಸಮಾಜದ ಬಗ್ಗೆ ಬೇಕಾದಷ್ಟು ಮಾಹಿತಿಗಳು ಸಿಗುತ್ತವೆ.[೨೩] ಅದರಲ್ಲೂ ಕವಿ ಹೃದಯದ ಆಧುನಿಕ ವಚನಕಾರರಲ್ಲಿ ತೀವ್ರ ಸಂವೇದನಾಶೀಲತೆಯಿರುವುದರಿಂದ ಇಂತಹ ಸ್ಪಂದನವು ಅವರ ಕೃತಿಗಳಲ್ಲಿ ಅರ್ಥಪೂರ್ಣವಾಗಿ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದು. ಜಾತಿಭೇದ ಜೀವಂತವಾಗಿರುವ ಸಮಾಜದಲ್ಲಿ ಒಂದು ಮಹಾರೋಗವಾಗಿ ಅದು ನಡೆದೆಯಿದೆ. ಅದನ್ನು ಕುರಿತು ಪುಷ್ಪಾ ಕನಕಾ ಹೇಳುವುದನ್ನು ಗಮನಿಸಬಹುದು.

'ಜಾತಿಭೇದಗಳನ್ನು ಮಾಡಿ ನೀತಿ ಒಡೆಯಬೇಡಿ
ಮತಗಳ ಆಸೆಗಾಗಿ ಮತಗಳನ್ನು ಒಡೆಯಬೇಡಿರಿ.
ಕಾಳೂರಲಿಂಗನು ಅಂತರಾತ್ಮಕ್ಕಾದರೂ ಅಂಜಿ
ಜಾತಿ ಮತಗಳನ್ನು ಮರೆತು ನೀತಿ ರಾಜ್ಯ ಸ್ಥಾಪಿಸಿರೆಂದ'[೨೪]

ಕರ್ನಾಟಕದ ಸಮಾಜ ಜೀವನದಲ್ಲಿ ಶರಣರ ಕಾಲದಲ್ಲಿ ಎರಡು ರೀತಿಯ ವ್ಯವಸ್ಥೆಗಳು ಕಾಣುತ್ತವೆ. ಈ ಹಿಂದಿನಿಂದಲೂ ಅನೂಚಾನವಾಗಿ ನಡೆದುಕೊಂಡು ಬಂದಿದ್ದ ಜಾತಿ-ಕುಲ-ವರ್ಗಗಳ ಬಗ್ಗೆ ಗೌರವವನ್ನು ಬೆಳೆಸಿಕೊಂಡು ಆ ವ್ಯವಸ್ಥೆಯನ್ನು ಪ್ರೋತ್ಸಾಹಿಸಿಕೊಂಡು ಬಂದದ್ದು ಒಂದು. ಅದೇ ಸಂದರ್ಭದಲ್ಲಿ ಈ ಹಿಂದೆಯೇ ರೂಪುಗೊಳ್ಳುತ್ತಿದ್ದ ಜಾತಿ ಕುಲಗಳ ಅಸಮಾನತಾ ಭಾವನೆಯ ಜೀವಂತಿಕೆ ಇದ್ದದ್ದು. ಇಂದೂ ಈ ಎರಡು ವ್ಯವಸ್ಥೆಗಳಿವೆ. ಪಟ್ಟಣಗಳಲ್ಲಿ ಜಾತಿವ್ಯವಸ್ಥೆಯ ಬಗ್ಗೆ ಅಷ್ಟೇನು ಭೇದಭಾವಗಳಿಲ್ಲ. ಆದರೂ ಇದು ಉಡುವಾಗ ಉಂಬಾಗಷ್ಟೇ ಎಂಬುದನ್ನು ಇಂದೂ ಕಾಣುತ್ತೇವೆ. ಇದನ್ನೇ ವಚನಕಾರರು ಖಂಡಿಸುತ್ತಾರೆ. ಇಂದಿನ ರಾಜಕಾರಣದಲ್ಲಿ ಮತಗಳ ಆಸೆಗಾಗಿ ಜನತೆಯಲ್ಲಿ ಜಾತೀಯತೆಯನ್ನು ಬಿತ್ತಿ, ಒಡೆದು ಆಳುವ ನೀತಿ ಬಂದಿದೆ. ಅದು ಬರಬಾರದೆಂಬ ವಿಚಾರವನ್ನು ತಿಳಿಸುತ್ತಾರೆ. ಇದನ್ನೇ ಬಂಡೆಪ್ಪ ಖೂಬಾ ಅವರು –

'ಜಾತಿ ಜಾತಿಗಳಲ್ಲಿ
ವೈಷಮ್ಯವನ್ನು ಬೆಳೆಸಿ
ಓಟು ಗಿಟ್ಟಿಸಿಕೊಂಡು
ಜಾತಿ ಜಾತಿಗಳಲ್ಲಿ
ಜಗಳವ ಬೆಳೆಯುವ ಹಾಗೆ
ಮಾಡಿ ಭುಗಿಲೆಬ್ಬಿಸುತ
ಸಂಚು ಹೊಂಚಿನ ನಡುವೆ
ಸ್ವಾರ್ಥ ಸಾಧಿಸುತಿಹುದಕ್ಕೆ
ಈಗೀಗ ಜಾತ್ಯಾತೀತತೆ
ಎಂದು ಕರೆಯುವರಲ್ಲ
ಇದು ಯಾವ ಜಾತ್ಯಾತೀತತೆ?'[೭೫]

ಎಂದು ಪ್ರಶ್ನಿಸುವಲ್ಲಿರುವ ವಾಸ್ತವಿಕತೆಯನ್ನು ಕಾಣಬಹುದು. ಓಟಿಗಾಗಿ ರಾಜಕಾರಣಿಗಳು ಇಂದೂ ಜಾತಿಯತೆಯ ಬೆಂಕಿ ಹಚ್ಚುತ್ತಿರುವುದನ್ನು ಇಲ್ಲಿ ಹೇಳಲಾಗಿದೆ. ಇಂದಿನ ರಾಜಕಾರಣ ಜಾತಿ ಜಾತಿಗಳನ್ನು ಎತ್ತಿ ತೋರಿಸಿದೆ. ಅವರಲ್ಲಿ ಮೀಸಲಾತಿಯ ಮಂತ್ರ ಹೇಳಿ, ಜಾತಿ-ಉಪಜಾತಿಗಳನ್ನು ಬಯಲಿಗೆಳೆದಿದೆ. ಪರಸ್ಪರ ಜಾತಿ-ಜಾತಿಗಳಲ್ಲಿ ಜಗಳ ಬೆಳೆಯುತ್ತಿದೆ. ಇದು ಸ್ವಾರ್ಥ ಸಾಧನೆ. ಆದರೂ ತಾವು 'ಜಾತ್ಯಾತೀತ' ಎಂದು ಹೇಳಿಕೊಳ್ಳುತ್ತಿರುವುದನ್ನು ಇದು ಯಾವ ಜಾತ್ಯಾತೀತವೆಂದು ವ್ಯಂಗವಾಗಿ ಪ್ರಶ್ನಿಸಲಾಗಿದೆ. ಜಾತಿ ಮತಗಳಿಗಾಗಿ ಜೀವ ಕೊಟ್ಟವರು ಇಂದು ಕೋಟಿ ಕೋಟಿ ಜನರಿದ್ದಾರೆ. 'ಧರ್ಮಗಳು ದೂರವಾಗಿ ಇಂದು ಜಾತಿಗಳೇ ಬೆಳೆಯುತ್ತಿದೆ ಎನ್ನುವ ಡಾ. ಬಸವರಾಜ ಸಬರದ ಅವರು ಇಂದಿನ ಸಮಾಜದಲ್ಲಿ ಮನುಜ ಮನುಜರ ನಡುವೆ ಈ ಜಾತಿಯ ಗೋಡೆಗಳು ಹಬ್ಬಿ ನಿಂತಿರುವುದನ್ನು ಸಾಕ್ಷೀಕರಿಸುತ್ತಾರೆ.

'ಮನುಜ ಮನುಜರ ನಡುವೆ
ಗೋಡೆಗಳೇಕಯ್ಯಾ
ಪ್ರೀತಿ-ಪ್ರೇಮದ ನಡುವೆ
ಕರಾರುಗಳೇಕಯ್ಯಾ

ಸ್ನೇಹ–ಸಂಬಂಧವಿದ್ದಾಗ
ತಕರಾರುಗಳೇಕಯ್ಯಾ
ಈ ಗೆರೆಗಳ ದಾಟಿ ಮುನ್ನಡೆಸೋ.....'೭೬

ಇಂದಿನ ಸಮಾಜದಲ್ಲುಂಟಾಗಿರುವ ಅಸಮಾನತೆಯ ಚಿತ್ರವನ್ನು ಈ ವಚನ ನೀಡುತ್ತದೆ. ಇದು ಯಾಕೆ? ಎಂಬ ಚಿಂತೆ ವಚನಕಾರರದು. ಮನುಷ್ಯ–ಮನುಷ್ಯರ ನಡುವೆ ಜಾತಿ ಗೋಡೆಗಳಿವೆ. ಪ್ರೀತಿ ಪ್ರೇಮದ ನಡುವೆ ಕರಾರುಗಳಿವೆ, ಸ್ನೇಹ–ಸಂಬಂಧದ ಮಧ್ಯತಕರಾರುಗಳಿವೆ. ಇವು ಇರಬಾರದು ಎಂಬ ವಿಚಾರವನ್ನು ಅವರು ಹೇಳುತ್ತಾರೆ.

ಯಾವುದೇ ಸಮಾಜದ ಸರ್ವಾಂಗೀಣ ಅಭಿವೃದ್ಧಿಯಾಗಿ ವಿಕಾಸವಾಗಬೇಕಾದರೆ ಆ ಸಮಾಜದಲ್ಲಿ ಸಮಾನತೆ, ಮಾನವೀಯತೆ, ಸಹಬಾಳ್ವೆ, ಸಹಕಾರ, ಸಾಮರಸ್ಯಗಳು ಇರಬೇಕು. ಯಾವ ಸಮಾಜದಲ್ಲಿ ಈ ಮಾನವೀಯ ಗುಣಗಳು ಮರೆಯಾಗಿ ಮೇಲು–ಕೀಳು. ಬಡವ–ಶ್ರೀಮಂತ, ಹೆಣ್ಣು–ಗಂಡು ಎಂಬ ಭೇದ ಭಾವವಿದ್ದು, ಅವರು ಈ ನೆಲೆಯಲ್ಲಿ ಪರಸ್ಪರ ಆ ಜಾತಿ, ಈ ಜಾತಿ, ಆವರ್ಗ–ಈವರ್ಗವೆಂದು ಕಿತ್ತಾಡುತ್ತಾರೋ ಅಂಥ ಸಮಾಜ ಸುಸಂಸ್ಕೃತ ಸಮಾಜವಾಗಲು ಸಾಧ್ಯವಿಲ್ಲ. ಕಾರಣ ಜಾತೀಯತೆಯನ್ನು ದೂರಗೊಳಿಸಿ ಮೇಲು ಕೀಳೆಂಬ ಭಾವನೆಗಳನ್ನು ಈ ಸಮಾಜದಿಂದ ಓಡಿಸಬೇಕೆಂಬ ಆಶಯ ವಚನಕಾರರಲ್ಲಿದೆ.

ಶರಣತತ್ವ ಹೇಳುವವರು, ಬಸವಣ್ಣನವರನ್ನು ಆರಾಧ್ಯದೇವತೆಯೆಂದು ತಿಳಿದಿರುವವರು, ಮಠ ಮಂದಿರಗಳಲ್ಲಿರುವವರೂ ಸಹ ಎಲ್ಲರನ್ನು ಸರ್ವಸಮಾನರು, ಎಲ್ಲರೂ ನಮ್ಮವರೆಂದು ಹೇಳಿಕೊಳ್ಳಿತ್ತಿಲ್ಲ. ಇಂದಿನ ಸ್ಥಿತಿಯಲ್ಲಿ ಬಸವಣ್ಣನವರ ವಚನಗಳನ್ನು ಪಠ ಪಠನೆ ಬಾಯಿಪಾಠ ಮಾಡಿ ಹೇಳುತ್ತಾರೆ. ಅವರು ಆಚಾರಣೆಯಲ್ಲಿ ಮಡಿವಂತರಾಗಿ ನಡೆದಿರುವುದನ್ನು ಆಧುನಿಕ ವಚನದಲ್ಲಿ ಕಾಣಬಹುದು.

'ಇವನಾರವ ಇವನಾರದ
ಎನ್ನದಿರೆಂದರು ಶರಣರು
ಶರಣರ ಬಳಗ ಕಟ್ಟಿಕೊಂಡು
ಇವನಾರವ ಇವನಾರವ
ಎನ್ನುವವರು ಇವರು
ನಿಜ ತತ್ವವವನರಿಯದೇ
ಶರಣನೆನ್ನುವವನ ಬಳಿ
ನೆರಳಿಗೂ ಸುಳಿಯಬೇಡೆಂದ
ಈಶ್ವರಿ ಪ್ರಿಯ ಶಿವಲಿಂಗ'೭೭

ಆಚಾರ ಜ್ಞಾನವಿಲ್ಲದೆ ವಿಚಾರ ಪ್ರಚಾರ ಮಾಡುವ ಆಧುನಿಕ ಶರಣರ ನೆಲೆಯನ್ನು ತೋರುವ ಈ ವಚನಕಾರರು ಅಂಥವರ ನೆರಳಿಗೆ ಸುಳಿಯಬಾರದು ಎನ್ನುತ್ತಾರೆ. ಜಾತೀಯತೆಯನ್ನು ಮಡಿ, ಮೈಲಿಗೆಯ ಇಂದಿನ ಸಂದರ್ಭಗಳನ್ನು, ಅಸಮಾನತೆಯ ಸನ್ನಿವೇಶಗಳನ್ನು ಹಲವಾರು ಸಂದರ್ಭಗಳ ಮೂಲಕ ಪ್ರಶ್ನಿಸುತ್ತ, ಅವುಗಳನ್ನು ಕುರಿತು ಚಿಂತಿಸಿರುವ ಪರಿ ಇಲ್ಲಿ ಕಾಣಸಿಗುತ್ತದೆ. ಇಂದಿನ ವೈಜ್ಞಾನಿಕ ಹಾಗೂ ವೈಚಾರಿಕ

ಯುಗದಲ್ಲೂ ಈ ಜಾತಿಯತೆಯ ವಿಷಯ ಜೀವಂತವಾಗಿರುವುದು ಸಾಹಿತಿಗಳನ್ನು ಕಾಡಿದೆ. ಅದರ ವಿವಿಧ ಸ್ವರೂಪಗಳನ್ನು ಇಲ್ಲಿ ದಾಖಲಿಸಲಾಗಿದೆ. ಅದು ದೂರವಾಗಬೇಕೆಂಬ ಸದಾಶಯದ ನೆಲೆ ಇಲ್ಲಿ ವ್ಯಕ್ತವಾಗಿದೆ.

'ವಿಶ್ವಮಾನವತೆಗೆ ದನಿಗೂಡಿಸು
ಅಲ್ಪತೆಯ ಕಾಳಿಕೆಯ ಸರಿಸು ಸರಿಸು
ಬಡವರ ಹಿತಕೆ ಕಣ್ಣೀರ ಸುರಿಸು
ಇತರರ ದುಃಖ ದುಮ್ಮಾನಗಳನು ಒರೆಸು
ನಿನ್ನ ಪಾಲಿನ ಕರ್ತವ್ಯ ಭರಿಸು, ಕಾಯಕ ಯೋಗಕೆ
ಮನವಿರಿಸು..........'[೨೮]

ಎಂದಿರುವಲ್ಲಿ ಜೀವನದಲ್ಲಿ ಮನುಷ್ಯ ವಿಶ್ವಮಾನವತೆಗೆ ದನಿಗೂಡಿಸಬೇಕು. ಮನದಲ್ಲಿಯ ಅಲ್ಪತನಗಳನ್ನು ಕಳೆದುಕೊಂಡು, ಬಡವರ ಹಿತ ಕಾಪಾಡಬೇಕು. ಇತರ ದುಃಖ ದುಮ್ಮಾನಗಳನ್ನು ದೂರಗೊಳಿಸಿಕೊಳ್ಳಬೇಕು. ಇದೇ ಮಾನವನ ಕರ್ತವ್ಯವೆಂದು ತಿಳಿದು ಕಾಯಕ ಯೋಗದಲ್ಲಿ ಮನವಿರಿಸಿ ನಡೆಯ ಬೇಕೆಂಬ ಜೀವನ ಮೌಲ್ಯಗಳನ್ನು ಹೇಳಲಾಗಿದೆ. ಜೀವನದಲ್ಲಿ ಎಲ್ಲರಿಗೆ ಒಳ್ಳೆಯದನ್ನು ಬಯಸುವವರು, ಒಳ್ಳೆಯದನ್ನೇ ಮಾಡುವವರು ನಿಜವಾದ ಕುಲವಂತರು ಎಂಬ ಮಾತಾಗಲಿ, ವಿಶ್ವ ಮಾನವತೆಯ ರೂಢಿಸಿಕೊಳ್ಳುವುದೇ ಸಾರ್ವಕಾಲಿಕ ಸತ್ಯವಾಗಿದೆ. ಜಾತಿ, ಧರ್ಮಕ್ಕಿಂತ ಮಿಗಿಲಾದುದು ಮಾನವತೆ ಎಂಬುದನ್ನಿಲ್ಲಿ ಹೇಳಲಾಗಿದೆ.

**೫-೨-೨ ನೈತಿಕ ನೆಲೆ**

ಸಮಾಜದ ಅಧೋಗತಿಗೆ ಅದರ ವ್ಯಕ್ತಿಗಳ ನಡತೆಗಳೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ವ್ಯಕ್ತಿಯ ಸಾಮಾಜಿಕ ವ್ಯವಹಾರದ ನೀತಿಯನ್ನು ತಿಳಿಸುವ ಈ ನೆಲೆಯ ಆಧುನಿಕ ವಚನಗಳು ಅನೀತಿ, ಅನ್ಯಾಯ, ವೇಷಗಾರಿಕೆ, ಮೋಸ, ವಂಚನೆ, ಅಸತ್ಯದ ಮಾರ್ಗದಲ್ಲಿ ನಡೆಯುವ ಸಂದರ್ಭಗಳನ್ನು ಯಥಾವತ್ತಾಗಿ ದಾಖಲಿಸಿವೆ.

ನೈತಿಕ ವಿಚಾರಗಳ ಅವಶ್ಯಕತೆ ಇಂದಿನ ಯಾಂತ್ರಿಕ ಯುಗದಲ್ಲಿ ಎಂದಿಗಿಂತಲೂ ಬಹಳ ಅನಿವಾರ್ಯವಾಗಿದೆ. ಜೀವನಕ್ಕೆ ಬೇಕಾಗಿರುವ ಆದರ್ಶ ಮೌಲ್ಯಗಳ ಕೊರತೆಯಿಂದಾಗಿ ಇಂದಿನ ಸಮಾಜದಲ್ಲಿ ಅಶಾಂತಿ, ಅತೃಪ್ತಿ, ಸ್ವೇಚ್ಛಮಯವಾದ ಜೀವನ ಶೈಲಿ ರೂಢಿಗೆ ಬಂದಿದೆ ಅದು ವಚನಕಾರರು ಗುರುತಿಸಿರುವಂತೆ.

'ಯಾಕಾದರೂ ಜೀವಿಸಬೇಕೋ? ಎನಿಸುತಿದೆ
ಇಂದಿನ ಜಗದಿರವ ಕಂಡು
ನೂರೆಂಟು ತರದ ಮುಖವಾಡ ಕಂಡು
ಹಿಂಸಾಚಾರ, ಅತ್ಯಾಚಾರ, ಹತಾಶಾ ಮನೋಭಾವ ಕಂಡು
ಮನ ಕೆಂಡವಾಗಿದೆ. ದಗ್ಧವಾಗುವ ಪರಿಯೆಂತು ಹೇಳಾ
ನಿಜಗುರು ಮಹಾಂತ ಲಿಂಗ'[೨೯]

ಎನ್ನುವಂತಹ ಪರಿಸ್ಥಿತಿ ಇಲ್ಲಿ ನೆಲೆಗೊಂಡಿರುವುದು ಕಾಣುತ್ತದೆ. ಇಂದಿನ ಜಗತ್ತಿನ ಇರುವು ನೂರೆಂಟು ತರದ ಮುಖವಾಡ ಧರಿಸಿದವರಿಂದ ಕೂರಿದೆ. ಎಲ್ಲೆಲ್ಲೂ ಉಗ್ರವಾದ ಹಿಂಸಾಚಾರ ಅತ್ಯಾಚಾರ, ಅನಾಚಾರ, ಭ್ರಷ್ಟ

ಜೀವನದಿಂದ ಎಲ್ಲೆಲ್ಲೂ ಹತಾಶೆ ತುಂಬಿ ತುಳುಕುತ್ತಿದೆ. ಇದನ್ನು ಕಂಡಿರುವ ವಚನಕಾರರ ಮನಸ್ಸು ಕೆಂಡದಂತಾಗಿರುವುದನ್ನು ಇಲ್ಲಿ ತಿಳಿಸಲಾಗಿದೆ. ಯಾರೂ ದೇಶವನ್ನು, ಸಮಾಜವನ್ನು, ಅನ್ಯ ಕುಟುಂಬಗಳನ್ನು ರಕ್ಷಿಸಬೇಕಾಗಿದೆಯೋ ಅವರೇ ಭಕ್ಷಕರಾಗಿದ್ದಾರೆ. ನಮ್ಮ ದೇಶದ ಮನೆಯಲ್ಲಿ ನಮ್ಮವರೇ ಕಳ್ಳರಾಗಿದ್ದಾರೆ. ಈ ಮನೆಯ ಯಜಮಾನರಾಗಿದ್ದವರೂ ಮುಖವಾಡ ಧರಿಸಿಕೊಂಡಿದ್ದಾರೆ. ಹೀಗಿರುವಾಗ ಶಾಂತಿ, ಸಮಾಧಾನ ಕಾಣುವುದು ಹೇಗೆ? ಎಂಬ ಪ್ರಶ್ನೆ ಇಲ್ಲಿ ಕಾಡಿದೆ.

ದೇಶದ ತುಂಬೆಲ್ಲಾ ಇಂದು ಭ್ರಷ್ಟಾಚಾರ ನೆಲೆನಿಂತಿದೆ. ಅದು ಇಡೀ ಪ್ರಜಾಪ್ರಭುತ್ವದ ವ್ಯವಸ್ಥೆಯನ್ನೇ ನುಂಗಿ ನೀರು ಕುಡಿಯುತ್ತಿದೆ. ಇಡೀ ದೇಶದಲ್ಲಿ ಭ್ರಷ್ಟಾಚಾರ ಯಾವ ರೀತಿಯಲ್ಲಿ ತಾಂಡವವಾಡುತ್ತಿದೆ ಎಂಬುದನ್ನು ಸೂಗಯ್ಯ ಹಿರೇಮಠರ ಮಾತುಗಳಲ್ಲಿ ತಿಳಿಯಬಹುದು.

'ಕೆರೆ ನೀರ ನುಂಗಿದ್ದು ಕಂಡೆ
ಸಾಲ ಹೊಲ ನುಗ್ಗಿದ್ದು ಕಂಡೆ
ಬ್ಯಾಂಕು ರೈತನ ನುಂಗಿದ್ದು ಕಂಡೆ
ಅಧಿಕಾರಿ ಕಚೇರಿ ನುಂಗಿದ್ದು ಕಂಡೆ
ರಾಜಕಾರಣಿ ದೇಶ ನುಂಗಿದ್ದು ಕಂಡೆ
ಭ್ರಷ್ಟಾಚಾರ ಪ್ರಜಾಪ್ರಭುತ್ವ
ನುಂಗಿದಂತೆ ನೋಡಾ
ಸುವರ್ಣ ಮಹೋತ್ಸವದ ಸೂಗೂರೇಶ್ವರ'[೮೦]

ಭ್ರಷ್ಟಾಚಾರದಿಂದ ದೇಶದಲ್ಲಿ ಆಗುತ್ತಿರುವ ಅನಾಚಾರ, ಅನೈತಿಕತೆಯನ್ನು ವಚನಕಾರರು ವ್ಯಕ್ತಗೊಳಿಸಿರುವ ಇಲ್ಲಿನ ನೆಲೆ ಚಿಂತನಾಪರವಾಗಿದೆ. ಇಂದು ನೋಟಿಗಾಗಿ, ಪ್ಲಾಟಿಗಾಗಿ, ಜಾತಿಗಾಗಿ, ಖ್ಯಾತಿಗಾಗಿ, ಹಣಕ್ಕಾಗಿ, ಆಸ್ತಿಗಾಗಿ, ಪ್ರಚಾರಕ್ಕಾಗಿ ಸತ್ತವರು ಕೋಟಿ, ಕೋಟಿ, ಆದರೆ ನೀತಿಗಾಗಿ ಮಾನವತೆಗಾಗಿ ಸತ್ತವರು ಯಾರಿದ್ದಾರೆ? ಎಂಬ ಪ್ರಶ್ನೆ ಮೇಲಿಂದ ಮೇಲೆ ಏಳುತ್ತದೆ. ಸಮಾಜದಲ್ಲಿರುವ ಪ್ರತಿಷ್ಠಿತ ಮೂರು ಗುರುತಿನ ಗುಂಪಿನವರು ನೀತಿ ಭ್ರಷ್ಟರು ಎಂಬುದನ್ನು ಶ್ರೀ ಶಿವಾನಂದ ಸ್ವಾಮಿಗಳು ಹುಲಸೂರ ಇವರು ಹೇಳುತ್ತಾರೆ.

'ಖಾದಿ ಖಾಕಿ ಕಾವಿ ಈ ಮೂರು
ನೀತಿ ಭ್ರಷ್ಟರ ಕುರುಹು ನೋಡಾ
ಖಾದಿಯ ಸುಳ್ಳು, ಮೋಸ, ವಂಚನೆ ಆಶ್ವಾಸನೆ ನೀಡಿ
ದೇಶ ಭ್ರಷ್ಟವಾಗಿದೆ ನೋಡಾ।
ಖಾಕಿಯ ಸುಲಿಗೆ, ಲಂಚ, ದರೋಡೆ, ಗಲಭೆ ಮಾಡಿ
ಕಾನೂನು ಬಾಹಿರ ಭ್ರಷ್ಟಾಚಾರವಾಗಿದೆ ನೋಡಾ
ಕಾವಿಯ ಹೆಣ್ಣು, ಮಣ್ಣು, ಹೊನ್ನುನಂಬಿ
ಧರ್ಮ ಭ್ರಷ್ಟವಾಗಿದೆ ನೋಡಾ
ಖಾದಿ ಖಾಕಿ ಕಾವಿ ಹಾದಿ ತಪ್ಪಿಸಿದೊಡೆ
ಇವರಿಗೆ ಯಾರು ಬುದ್ಧಿ ಹೇಳುವರಯ್ಯಾ

ಶಿವಾನಂದ ಪ್ರಿಯ ಗುರುಬಸವ ಪ್ರಭುವೇ'[೮೧]

ಪ್ರಸ್ತುತ ಸಮಾಜದಲ್ಲಿಯ ಸೇವಕ ವರ್ಗದವರೆನಿಸಿಕೊಂಡವರ ಅನೀತಿ, ಭ್ರಷ್ಟತೆಯನ್ನು ಈ ವಚನ ತನ್ನದೇ ಆದ ಪರಿಯಲ್ಲಿ ಅಭಿವ್ಯಕ್ತಿಸಿದೆ. ರಾಷ್ಟ್ರದ ಪ್ರಮುಖ ರಂಗಗಳಲ್ಲಿರುವ ಈ ಮೂರು ವರ್ಗ ಸಾಮಾಜಿಕ ರಂಗ, ಆರ್ಥಿಕ ಹಾಗೂ ಕಾನೂನು ರಂಗ ಹಾಗೂ ಧಾರ್ಮಿಕ ರಂಗಗಳನ್ನು ಹಾಳು ಮಾಡುವುದರೊಂದಿಗೆ ಸಾಮಾಜಿಕ ಪರಿಸರದಲ್ಲಿ ಅನೈತಿಕತೆಯ ಭದ್ರಬುನಾದಿ ಹಾಕುತ್ತಿರುವುದನ್ನು ಇಲ್ಲಿ ಗಮನಿಸಬಹುದು. ಇದನ್ನು ಖಂಡಿಸುವ ವಚನಕಾರರು ಇವರಿಗೆ ಯಾರು ಬುದ್ಧಿ ಹೇಳುವರಯ್ಯಾ ಎಂದು ತಮ್ಮ ಅಸಮಾಧಾನ ತೋರಿಕೊಂಡಿದ್ದಾರೆ. ಈಗ ಧರ್ಮ, ದೇವರು, ಉತ್ಸವ, ಜಾತ್ರೆಗಳ ಹೆಸರಲ್ಲಿ ಭ್ರಷ್ಟತನದಲ್ಲಿ ಮುಳುಗಿದವರೂ ಬೇಕಾದಷ್ಟು ಜನರು ಸಿಗುತ್ತಾರೆ. ಇದನ್ನೇ ಕುರಿತು

'ಹೋಗಿ ನೋಡು ಅಧಿಕಾರಿಗಳು ಭ್ರಷ್ಟರು
ಬಾಗಿ ನಮಿಸುವ ನಾಯಕರು ನಾಡಗಳ್ಳರು
ಉದ್ಯೋಗವಿರದೆ ಅಲೆವವರು ಸಾಮಾನ್ಯರು
ಕಾನೂನು ಮುರಿವವರೇ ಪೋಲೀಸರು
ಹೇಳಲೇನು? ತುಂಬಿಹರು ಕೃತಿಚೋರರು
ಸೋಮಲೋಚನ ಪ್ರಿಯ ಬಸವಣ್ಣ
ನಿನ್ನ ಹೆಸರಲಿ ಬಣ್ಣ ಹಚ್ಚಿಕೊಂಡವರೇ ಇಲ್ಲಿ ಶರಣರು'[೮೨]

ತುಂಬಾ ವ್ಯಂಗ್ಯ ವಿಡಂಬನೆ, ವಿಷಾದ, ವಿಷಯದ ಧ್ವನಿಪೂರ್ಣವಾದ ಅಭಿವ್ಯಕ್ತಿಯಿದು. ಇಂದಿನ ವಾಸ್ತವಿಕ ಬದುಕಿನ ಹಲವು ಮಗ್ಗಲುಗಳನ್ನು ಅನಾವರಣಗೊಳಿಸುತ್ತದೆ. ಎಲ್ಲಿ ಹೋಗಿ ನೋಡಿದರೂ ಅಧಿಕಾರಿಗಳು ಭ್ರಷ್ಟರಾಗಿರುವುದನ್ನು, ವಿನಯವಂತರೆನಿಸುವ ರಾಜಕೀಯ ನಾಯಕರೆಲ್ಲ ನಾಡಿನ ಬಹುದೊಡ್ಡ ಕಳ್ಳರೆಂದು ಹೇಳುತ್ತದೆ. ಭೂ ಹಗರಣ, ಗಣಿ ಹಗರಣ, ಕೆರೆ ಕಟ್ಟೆಗಳ ಹಗರಣ, ರಸ್ತೆ ನಿರ್ಮಾಣ, ವಾಹನಖರೀದಿ, ದನಗಳಿಗೆ ಮೇವು ಖರೀದಿ, ಭೋಪೋರ್ಸ್ ಹಗರಣ ಒಂದಲ್ಲ ಎರಡಲ್ಲ ನೂರೆಂಟು ಹಗರಣ ಮಾಡಿ ಅಪಾರ ಸಂಪತ್ತು ಗಳಿಸಿದವರು ನಾಡಗಳ್ಳರು. ಇಂದಿನ ಕಾನೂನು ಪರಿಪಾಲಕರೇ ಕಾನೂನು ಮುರಿಯುತ್ತಿರುವ ಪೋಲೀಸರು. ಒಬ್ಬರು ಬರೆದ ಕೃತಿಯನ್ನು ಅನಾಮತ್ತಾಗಿ ಎತ್ತಿಕೊಂಡು ತಮ್ಮ ಹೆಸರಲ್ಲಿ ಪ್ರಕಟಿಸುತ್ತಿರುವ ಕೃತಿಚೋರರು ಇಂದು ಅನೇಕರಿದ್ದಾರೆ. ಅಷ್ಟೇ ಅಲ್ಲ ಶರಣರ ಹೆಸರಲ್ಲಿ ಬಣ್ಣ ಹಚ್ಚಿಕೊಂಡ ವೇಷಧಾರಿ ಸ್ವಾಮಿಗಳೇ ಇಂದು ಅತಿಯಾಗಿರುವುದನ್ನು ಉಲ್ಲೇಖಿಸುವ ಈ ವಚನ ಅನೈತಿಕತೆಯಲ್ಲಿಯೇ ಮೆರೆಯುತ್ತಿರುವ ಇಂಥವರನ್ನು ಎಲ್ಲೆಲ್ಲೂ ತೋರಿಸುತ್ತದೆ.

ಸಮಾಜದ ಮುಖ್ಯ ಘಟಕ ವ್ಯಕ್ತಿ. ಒಬ್ಬ ವ್ಯಕ್ತಿಯ ಉನ್ನತ ಅಥವಾ ಅವನತಿಗಳೇ ಸಮಾಜದ ಉನ್ನತಿ ಅಥವಾ ಅವನತಿಗಳಾಗುತ್ತವೆ. ಹೀಗಾಗಿ ಈ ನೈತಿಕ ನೆಲೆಯನ್ನು ಕುರಿತ ವಚನಗಳಲ್ಲಿ ಬಹಳಷ್ಟು ವ್ಯಕ್ತಿಯ ಉನ್ನತಿಯನ್ನೂ ಬಯಸುತ್ತೇವೆ. ಆ ಉನ್ನತಿ ಯಾವುದೆಂದರೆ ಆತ್ಮೋನ್ನತಿ. ವ್ಯಕ್ತಿಯ ಆತ್ಮೋನ್ನತಿಯ ತತ್ವವನ್ನು ಆಧುನಿಕ ವಚನಕಾರರು ಇಂದಿನ ಸಮಾಜದಲ್ಲಿ ಬಿತ್ತಲು ಪ್ರಯತ್ನಿಸಿದ್ದೂ ಸಾಮಾಜಿಕ ನೆಲೆಯಲ್ಲಿ ಪ್ರಮುಖವಾಗುತ್ತದೆ.

'ಹೆಂಡವ ಕುಡಿದಷ್ಟು ಹಾಲು ಕುಡಿಯದ

ಭಂಡರನು ನೋಡಾ
ದಂಡ ಕೊಟ್ಟಿದಷ್ಟು ದಾನ ಕೊಡದ
ಹೀನರನು ನೋಡಾ
ರಂಡೆಯರಿಗೆ ಮಾಡಿದಷ್ಟು
ಹೆಂಡರಿಗೆ ಮಾಡದ ಜಗಭಂಡರನು ಕಂಡಡೆ
ನರಕದ ಕುಂಡದಲ್ಲಿಕ್ಕದೆ ಬಿಡುವನೇ
ನಮ ನಿರಂಜನೇಶ್ವನು'[೬೩]

ವ್ಯಕ್ತಿಗಳ ಅನೈತಿಕ ಸಂಬಂಧದ ವಿವರಣೆಯನ್ನು ಈ ವಚನ ನಿಷ್ಠುರವಾಗಿ ಬಿಚ್ಚಿಡುತ್ತದೆ. ಹೆಂಡ ಕುಡಿಯುವವರು, ದಂಡ ಕಟ್ಟುವವರು, ರಂಡೆಯರನ್ನು ಇಟ್ಟುಕೊಂಡವರ ಜೀವನದ ಹಿನ್ನೆಲೆಯನ್ನು ಅರುಹುತ್ತದೆ. ಇಂಥವರು ಸದಾ ದುಃಖದಲ್ಲಿಯೇ ಮುಳುಗಿರುತ್ತಾರೆಂದು ಈ ವಚನ ತಿಳಿಸುತ್ತದೆ. ನೈತಿಕ ಅಧಃಪತನವಾಗುತ್ತಿರುವ ಚಿತ್ರಣ ಇಲ್ಲಿದೆ.

ಇಂದು ಕುಡಕರ ಸಂಖ್ಯೆ ಹೆಚ್ಚಾಗಿದೆ. ಒಬ್ಬರು ಬಡತನದಲ್ಲಿ ಬಳಲಿ ನೊಂದು ಬೆಂದು ಕುಡಿದು ಜೀವನ ಹಾಳುಮಾಡಿಕೊಳ್ಳುವವರು, ಇನ್ನೊಬ್ಬರು ಪ್ರತಿಷ್ಠೆಗಾಗಿ, ಪರದೇಶ ಪ್ರೀತಿ, ಸಂಸ್ಕೃತಿಗೆ ಪ್ರೇರಿತರಾಗಿ ಹೆಣ್ಣು-ಗಂಡೆಂಬ ಭೇದವಿಲ್ಲದೆ ಕುಡಿದು, ಕುಣಿದು ರಾದ್ಧಾಂತ ಮಾಡಿಕೊಳ್ಳುವವರು. ಹೇಗೆ ಇರಲಿ ಇವರೀರ್ವರೂ ಕುಡುಕರಲ್ಲವೇ? ಅವರನ್ನು ಕುರಿತ ಈ ವಚನವನ್ನು ಗಮನಿಸಬಹುದು.

'ಧರೆ ಹತ್ತಿ ಉರಿಯುತಿದೆ
ಸುರೆಯ ಸಾಮ್ರಾಜ್ಯದಲಿ
ಸುಂದರಿಯರಂಗದಲಿ
ಭಂಗವಾಗಿದೆ ಜೀವ
ಹಂಗಿನಲಿ ಭಂಗಾಗಿ
ಬಾಳುತಿದೆ ತನು ಮನವು
ಆದರ್ಶ ಆಡುತಿದೆ
ಬರಿ ನಗ್ನ ದೃಶ್ಯವನೆ ಸಾಹಿತ್ಯ ತೋರುತಿದೆ
ಜೀವನವು ಮದ್ಯದಲ್ಲಿ
ಮಾಂಸದಲ್ಲಿ ಡಾನ್ಸಿನಲ್ಲಿ
ಮರಳಾಗಿ ಸುಡುಗಾಡು ಸೇರುವಂತಾಗಿದೆ
ಇದನೆಲ್ಲ ಕಂಡರೂ
ನೀ ಮೌನಿಯಾಗಿರುವಿ
ನಿನ್ನ ಮೌನ ಕಂಡು
ಮೌನಿಯಾಗಲೆ ನಾನು? ಹುಲಿಯಸಿದ್ಧೇಶ್ವರಾ'[೬೪]

ಎಂದುಸಿರಿರುವಲ್ಲಿ ವಾಸ್ತವಿಕ ಸಮಾಜದ ನೆಲೆಯಲ್ಲಿಯ ಅನೈತಿಕ ಬದುಕನ್ನು ಬಿಚ್ಚಿ ತೋರಿಸಿದ್ದಾರೆ. ಧರೆಯ ತುಂಬ ಸುರೆಯ ಆಟವಿದೆ. ಹೆಣ್ಣಿನ ಅಂಗಾಂಗ ಪ್ರದರ್ಶನ, ನಗ್ನ ದೃಶ್ಯದ ಸಾಹಿತ್ಯ, ಮಧ್ಯದಲ್ಲಿ ಮುಳುಗಿದ ಜೀವನ ಮಾಂಸಭಕ್ಷಣೆ, ಡಾನ್ಸಿನ ಸುಳಿಯಲ್ಲಿ ಸಿಕ್ಕಿ ಬಿದ್ದಿರುವ ಯುವಜನತೆ ಈ ಎಲ್ಲ ಚಿತ್ರಗಳು ವ್ಯಕ್ತಿಯ ಅಧೋಗತಿಯನ್ನು ತೋರುತ್ತವೆ.

ಶಾಸಕಾಂಗ ಕಾರ್ಯಾಂಗದಲ್ಲಷ್ಟೇ ಅಲ್ಲ ಇಂದಿನ ನ್ಯಾಯಾಂಗದಲ್ಲೂ ಅನೀತಿ ತುಂಬಿರುವುದನ್ನು ಕಾಣಬಹುದು. ಡಾ. ಸರಸ್ವತಿ ಚಿಮ್ಮಲಗಿಯವರು ನ್ಯಾಯದೇವತೆಯ ನೆಲೆಯಲ್ಲಿ ವಚನ ರಚಿಸಿದ್ದು ಹೀಗಿದೆ –

ಕಪ್ಪು ಕೋಟಿನಲ್ಲಿ ಕಾಣದಂತೆ
ಆದರ್ಶವ ಅವಸಾನಗೊಳಿಸಿ
ಕಾನೂನು ರಕ್ಷಕರೆ ಭಕ್ಷಕರಾಗಿ
ಸತ್ಯವನ್ನು ಸದೆ ಬಡೆದು ಸಾಯಿಸಿ
ಗಂಗೆಯಲ್ಲಿ ಹೋಮ ಮಾಡಿಸಿ
ಸುಳ್ಳಿಗೆ ಸತ್ಯದ ಸಾಚಾತನ ಜೋಡಿಸಿ
ಬಾರಾ ಖೂನ ಎಲ್ಲಾ ಮಾಫ್ ಮಾಡಿಸಿ
ನರಭಕ್ಷಕರಿಗೆ ರಕ್ಷಣೆ ನೀಡಿ
ನ್ಯಾಯವಾದಿಗಳೆಲ್ಲ ವ್ಯಾದಿಗಳಾಗಿರುವುದು ಕಂಡು
ಗಾಂಧಾರಿಯಾದ ನ್ಯಾಯದೇವತೆ.....'[೮೫]

ನ್ಯಾಯದೇವತೆಯ ವಾಸ್ತವ ಚಿತ್ರಣ, ನ್ಯಾಯವಾದಿಗಳಿಗಂಟಿದ ಭ್ರಷ್ಟತನದ ವ್ಯಾದಿಗಳನ್ನು ಈ ವಚನ ತೆರೆದಿಡುತ್ತದೆ. ಶಾಸಕಾಂಗ, ಕಾರ್ಯಾಂಗಕ್ಕೆ ಬಿಸಿ ಮುಟ್ಟಿಸಿ, ಸತ್ಪಥದಲ್ಲಿ ನಡೆಯುವಂತೆ ಪ್ರೇರೇಪಿಸಬೇಕಾದ ಮಹತ್ವದ ಕರ್ತವ್ಯವುಳ್ಳ 'ನ್ಯಾಯಾಂಗ'ಕ್ಕೂ ಇಂದು ಅನೈತಿಕತೆಯ ಸೋಂಕು ರೋಗ ತಗುಲಿರುವುದನ್ನು ಇಲ್ಲಿ ಹೇಳಲಾಗಿದೆ. ಬೀದರ ಜಿಲ್ಲೆಯ ವಚನಕಾರರಾದ ದೇಶಾಂಶ ಹುಡಗಿಯವರು ಇದನ್ನು ಕುರಿತು ಹೇಳುತ್ತ "ನೀತಿ ನ್ಯಾಯಗಳೆಲ್ಲ ತುಂಟ ಹುಡುಗರ ಕೈಗೊಂಬೆಯಯ್ಯಾ ಭಂಟ ದಿಗಂಬರ ಕರಿಬಸವೇಶ ಒಬ್ಬ ಕಾವವ ನೀನು, ಮರುಳರೆನಗೇನಯ್ಯ" ಎಂದು ಹೇಳಿರುವುದನ್ನು[೮೬] ಗಮನಿಸಬಹುದು. ಈ ಮಾತನ್ನು ಹೇಳುವಾಗ ಅವರು ಇಂದಿನ ಸಮಾಜ ಚಿತ್ರವನ್ನು ಹೀಗೆ ಬಿಚ್ಚಿಡುತ್ತಾರೆ. ಜೋಡು ಸೀಟಿಗೆ ಒಬ್ಬ ಅಹಂಕಾರಿ ಕುಳಿತರೆ ಸರಿ ಎನ್ನುವರಯ್ಯಾ, ಒಂಟಿ ಸೀಟಿಗೆ ಒಬ್ಬ ಬಡವ ಕುಳಿತರೆ ಏಳೂ ಏಳೆನ್ನುವರಯ್ಯಾ, ಊರನಾಳುವ ಪಂಚ ತಾ ಲಂಚ ತಿಂದರೆ ಸರಿ ಎನ್ನುವರಯ್ಯಾ, ಉದರ ತುಂಬಲು ಬಡವ ಊರ ಸೆಗಣಿಯ ಹಿಡಿಯೆ ಸರಿ ಎನ್ನರಯ್ಯಾ, ಸೆರೆ ಕುಡಿದ ಸಿರಿವಂತ ಊರಿಗೆಲ್ಲ ಬೈದರೂ ಸರಿ ಎನ್ನುವರಯ್ಯಾ, ಸರಿ ಕಂಡುದನು ನುಡಿದ ಕಡು ಬಡವನಿಗೆ ಹೆಡಮುರಿಗೆ ಕಟ್ಟುವರಯ್ಯ ಎಂದು ಹೇಳುತ್ತ ಇಂದಿನ ಸಮಾಜದಲ್ಲಿ ಜನರು ವರ್ತಿಸುವ ಪರಿಯನ್ನು ಕಣ್ಣು ಮುಂದೆ ಕಟ್ಟುವಂತೆ ಹಿಡಿದಿರಿಸಿದ್ದಾರೆ. ವ್ಯಕ್ತಿಯ ಅತ್ಮೋನ್ನತಿಯ ತತ್ವವನ್ನು ಇಂದಿನ ಜನಾಂಗ ಅನುಸರಿಸಬೇಕೆಂಬ ಮಹದಾಸೆ ಆಧುನಿಕ ವಚನಕಾರರಲ್ಲಿದೆ ಅದನ್ನಿಲ್ಲಿ ಅರಿಯಬಹುದು.

'ಧನವಂತನಾದರೇನು ದಾನವಂತನಾದರೇನು

ದೊರೆಯಾಗಿ ಮೆರೆದರೇನು ಧರೆಹೊತ್ತು ನಡೆದರೇನು

ತನ್ನ ತಾ ಅರಿಯದವನು ಯಾರು ಏನಾದರೇನು

ಮುಕ್ತಿ ಅವನಿಗಿಲ್ಲೆಂದ ಎನ್ನ ದತ್ತ ದಿಗಂಬರಾ'[೮೭]

ಎಂದು ಹೇಳಿರುವಲ್ಲಿ ವ್ಯಕ್ತಿ ಹೇಗಿದ್ದರೇನು? ಏನಾಗಿ ಮೆರೆದರೇನು? ಅವನು ಮೊದಲು ತನ್ನನ್ನು ತಾನು ಅರಿಯಬೇಕು

ಎಂಬ ಸಂದೇಶ ಇಲ್ಲಿದೆ. ತನ್ನನ್ನು ತಾನು ಅರಿಯುವುದೆಂದರೆ ತನ್ನ ಆತ್ಮೋನ್ನತಿಯನ್ನು ಆತ ಮಾಡಿಕೊಳ್ಳಬೇಕು ಎಂದರ್ಥ. ತನ್ನ ತಾನು ತಿಳಿದುಕೊಳ್ಳದ ಹೊರೆತು ಆತನು ಮುಕ್ತಿಪಥ ತಿಳಿಯಲಾರನೆಂಬ ಸಂಗತಿ ಇಲ್ಲಿರುವುದನ್ನು ಮನಗಾಣಬಹುದು.

**೫-೨-೩ ಆತ್ಮೋನ್ನತಿಯ ಚಿಂತನ ನೆಲೆ**

ಆತ್ಮೋನ್ನತಿಯ ತತ್ವವೆಂದರೆ ಹೊರಗೊಂದು, ಒಳಗೊಂದು, ಹೊಗಳೋದು ತೆಗಳೋದು, ಹಿಂದೊಂದು ಮುಂದೊಂದು ಇರದಂತಿರುವುದು ಇದನ್ನು ವಿಜಯಕುಮಾರ ಜೆ. ಪರುತೆ ಅವರು 'ಬರಹದಂತೆ ಬದುಕಬೇಕು ನುಡಿದಂತೆ ನಡೆಯಬೇಕು. ಬೋಧನೆಯಂತೆ ಸಾಧಿಸಬೇಕಯ್ಯಾ ಗುರುನಂಜೇಶ್ವರ'[೮೮] ಎಂದು ಹೇಳಿರುವಲ್ಲಿಯ ನೆಲೆಗಳಲ್ಲಿ ಆತ್ಮೋನ್ನತಿಯ ಲಕ್ಷಣಗಳನ್ನು ಅರಿಯಬಹುದು. ವ್ಯಕ್ತಿಯ ಆತ್ಮೋನ್ನತಿಯ ತತ್ವವನ್ನು ಆಗಿನ ಸಮಾಜದ ಕೊನೆಯ ಸ್ತರದವರೆಗಿನ ಮನುಷ್ಯನಿಗೆ ಮುಟ್ಟಿಸಿದ ಕೀರ್ತಿ ಬಸವಣ್ಣನವರದು. ಅದು ಅಂದಿನ ಹೆಣ್ಣು ಮಕ್ಕಳನ್ನು ತಲುಪಿರುವಂತೆ ಆಧುನಿಕ ವಚನಕಾರ್ತಿಯರ ಮನ ಪರಿವರ್ತನೆಗೆ ಮಾದರಿಯಾಗಿರುವುದನ್ನು ಅಲ್ಲಗಳೆಯಲಾಗುವುದಿಲ್ಲ. ಕರುಣಾ ಸಲಗರ ಅವರ ವಚನದಲ್ಲಿಯ ಈ ನೆಲೆಯನ್ನು ಮನಗಾಣಬಹುದು.

'ಮಾನ ಮುಚ್ಚಿಕೊಳ್ಳಲು

ರೇಷ್ಮೆಯಾದರೇನು ನೂಲಾದರೇನು

ಹೊಟ್ಟೆ ತುಂಬಿಕೊಳ್ಳಲು

ಅಮೃತವಾದರೇನು ಅಂಬಲಿಯಾದರೇನು

ಮಣ್ಣಿನಲ್ಲಿ ಮಣ್ಣಾಗಿ ಹೋಗುವ ಈ ದೇಹ

ಇಂದೇ ಹೋದರೇನು, ಇನ್ನೆಂಟು ದಿನವಿದ್ದು

ಹೋದರೇನು ಎಲ್ಲಕ್ಕೂ ಕಾರಣನು ನೀನೇ

ಶಿವಲಿಂಗೇಶ್ವರ'[೮೯]

ಇಲ್ಲಿಯ ಒಂದೊಂದು ನುಡಿಗಳು ಅನುಭವದ ಆಳದಿಂದ ಒಡಮೂಡಿಬಂದಂತಿವೆ. ನಿರಾಡಂಬರವಾಗಿ ಜೀವನ ಸಾಗಿಸುತ್ತಿರುವ ವಚನಕಾರ್ತಿಯ ಬದುಕಿನ ನೆಲೆಯನ್ನು ಈ ವಚನ ತೋರುತ್ತದೆ ಎನ್ನಬಹುದು.

"ಪ್ರಜಾಪ್ರಭುತ್ವದ ರೂಪುರೇಷಗಳ ಚಿಂತನೆ, ಶರಣರ ವಚನಗಳನ್ನು ಬದುಕಿನ ಸಂವಿಧಾನವನ್ನಾಗಿಸುವ ಬಯಕೆ, ಕಾಯಕ ಜೀವಿಗಳ ಮಕರಂದವನ್ನು ಸೈದ್ಧಾಂತಿಕವಾಗಿ ಕ್ರೂಢೀಕರಿಸಿ ಅನುಭಾವದ ಮಧುವನ್ನು ಸೃಷ್ಟಿಸುವುದು ಮುಂತಾದವುಗಳು ಅನುಭವ ಮಂಟಪದ ಧ್ಯೇಯೋದ್ದೇಶಗಳಾಗಿದ್ದವು"[೯೦] ಆ ನೆಲೆಯ ತಾತ್ವಿಕತೆಯನ್ನು ಮುಂದುವರೆಸಿಕೊಂಡು ಬಂದಿರುವ ಚಿಂತನೆಗಳು ಆಧುನಿಕ ವಚನಗಳಲ್ಲಿವೆ.

'ಕುರಿ-ಕೋಳಿ-ಮೀನು-ದನ ತಿಂದವರು

ಶಾಸಕರಾಗಿ ಮೆರೆವರಯ್ಯಾ
ಕಲ್ಲು-ಮಣ್ಣು-ಕಟ್ಟಿಗೆ ತಿಂದವರು
ಉದ್ದಿಮೆಗಳಾಗಿ ಮೆರೆವರಯ್ಯಾ
ಹೊಲ-ಮನೆ-ಬ್ಯಾಂಕು ನುಂಗಿದವರು
ಬಂಡವಾಳಗಾರರಾಗಿ ಮೆರೆವರಯ್ಯಾ
ದನಗಳ ಮೇವು ತಿನ್ನಲು ಹೋಗಿ
ಲಾಲು ಜೇಲಿಗೆ ಹೋದನು ನೋಡಾ
ಲೂಟಿ ಮಾಡಿದವರಿಗೆ ಕೋರ್ಟಿಗೆಳೆದು ಶಿಕ್ಷಿಸಬೇಕಯ್ಯಾ
ಸುವರ್ಣ ಮಹೋತ್ಸವದ ಸೂಗೂರೇಶ್ವರ'[೧]

ಇಂದಿನ ಕಾಲದ ಪ್ರಮುಖರೆನಿಸಿಕೊಂಡವರ ಭ್ರಷ್ಟತೆಯನ್ನು ನಿರ್ಭಿಡೆಯಿಂದ ವ್ಯಂಗ್ಯವಾಗಿ ನಿರೂಪಿಸುವ ವಚನವಿದು. ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯ ವಚನದ ಸಾಲುಗಳನ್ನಿಟ್ಟುಕೊಂಡು ಅತಿ ವ್ಯಂಗ್ಯವಾಗಿ ಇಂದಿನ ನೇತಾರರ ಜೀವನವನ್ನು ತೋರಿಸುತ್ತದೆ. ಇಂದು ಅತಿ ಶ್ರೀಮಂತರಾಗಿರುವವರು, ಬಂಡವಾಳಗಾರರು ಲೂಟಿ ಮಾಡಿದವರು. ಪ್ರಜಾಪ್ರಭುತ್ವದ ಹಿನ್ನೆಲೆಯಲ್ಲಿ ಈ ದರೋಡೆಕೋರರಿಗೆ ಶಿಕ್ಷೆಯೂ ಆಗುತ್ತಿಲ್ಲವೆಂಬ ಕೊರಗು ಇಲ್ಲಿದೆ. ಇಂದು ಸಂಪತ್ತಿಗಾಗಿ ಬದುಕಿರುವ ಇವರು ದುಃಖವನುಭವಿಸಬೇಕು. ಅಂಥ ಎಚ್ಚರಿಕೆಯನ್ನು ಗಿರಿಜಾ ಧರ್ಮರಡ್ಡಿಯವರು ನೀಡುತ್ತಾರೆ.

'ಹಸಿವು ಹಿಂಗಿಸುವಷ್ಟು ಉಂಡರೆ ಆರೋಗ್ಯ
ಹೊಟ್ಟೆ ತುಂಬುವಷ್ಟು ಉಂಡರೆ ಅನಾರೋಗ್ಯ
ಬದುಕುವುದಕ್ಕಾಗಿ ಸಂಪತ್ತಿದ್ದರೆ ಸುಖ
ಸಂಪತ್ತಿಗಾಗಿ ಬದುಕಿದರೆ ದುಃಖ
ಬೇರು ತೋಯುವಷ್ಟು ನಿರು ಹಾಕಿದರೆ ಸಸಿ ಬೆಳೆವುದು
ಸಸಿಯೇ ಮುಳುಗುವಷ್ಟು ನೀರು ಹಾಕಿದರೆ ಅದು ಉಳಿಯದು
ಆಯುಷ್ಯವಿದ್ದಾಗಲೇ ಬಸವಲಿಂಗನ ಅರಿಯಬೇಕಲ್ಲದೆ
ಅರಿಯುವವರೆಗೂ ಆಯುಷ್ಯವಿರಲಾರದು'[೨]

ಎಂಬಂತಹ ತಿಳುವಳಿಕೆ ಹೇಳಿ, ಸಮಾಜ ಕಳಕಳಿ ಮೆರೆವ ವಚನಗಳಿರುವುದು ಗಮನಾರ್ಹ. ಜೀವನದಲ್ಲಿ ಯಾವುದೂ ಅತಿಯಾಗಬಾರದು, ಊಟ, ಸಂಪತ್ತು, ಮುಂತಾದವುಗಳು. ಇವುಗಳನ್ನು ಬೇಗನೆ ಅರಿತುಕೊಂಡು, ಸಮಾಜದ ಹಿತಕಾಯಬೇಕು. ಆಯುಷ್ಯ ಚಿಕ್ಕದಿದೆ ಅದರಲ್ಲಿಯೇ ಸಾಮಾಜಿಕ ಸ್ವರೂಪದ ಬಸವಲಿಂಗನನ್ನು ತಿಳಿಯಬೇಕೆಂಬ ಮಾತು ಇಲ್ಲಿ ಮೂಡಿಬಂದಿದೆ. ಇಂಥ ತಿಳುವಳಿಕೆಯೇ ಆತ್ಮೋನ್ನತಿಯ ಮಾರ್ಗವೆನ್ನಬಹುದು.

ಅಂಬಿಗರ ಚೌಡಯ್ಯನವರಂತೆ ತಮ್ಮ ಹೆಸರನ್ನೇ ತಮ್ಮ ವಚನಾಂಕಿತವಾಗಿರಿಸಿಕೊಂಡಿರುವ ಬಸವರಾಜ ಸಬರದ ಅವರು ಸಮಾಜಪರ ಒಲವುಳ್ಳ, ಅದರಲ್ಲೂ ಸಾಮಾನ್ಯ ಕಾಯಕ ಜೀವಿಗಳ ಪರವಾಗಿರುವ ವಚನವನ್ನು ರಚಿಸಿರುವುದು ವಿಶೇಷವಾಗಿದೆ.

'ಅಧಿಕಾರಕ್ಕಾಗಿ ಹೊಡೆದಾಡಿ ಸತ್ತವರು ಕೋಟಿ ಕೋಟಿ
ಅಂತಸ್ಥಿಗಾಗಿ ಸತ್ತವರು ಕೋಟಿ ಕೊಟಿ
ಜಾತಿ ಮತಗಳಿಗಾಗಿ ಜೀವಕೊಟ್ಟವರು ಕೋಟಿ ಕೋಟಿ
ಪ್ರತ್ಯೇಕತೆಗಾಗಿ ಪರಿತಪಿಸುವವರು ಕೋಟಿ ಕೋಟಿ
ಓ ಜನ ಸಾಮಾನ್ಯ
ನಿನಗಾಗಿ ಸತ್ತವರನಾರನೂ ಕಾಣೆ ನೋಡಾ
ಸಬರದ ಬಸವ'[೯೩]

ಜನಪದ ನಿಲುವಿನ ಈ ವಚನದಲ್ಲಿ ಬಂಡಾಯ ಸಾಹಿತ್ಯದ ಆಶಯವೂ ಮಡುಗಟ್ಟಿ ನಿಂತಿರುವುದನ್ನು ಮನಗಾಣಬಹುದು. ಅಧಿಕಾರಕ್ಕಾಗಿ, ಅಂತಸ್ಥಿಗಾಗಿ, ಜಾತಿ ಮತಗಳಿಗಾಗಿ, ಪ್ರತ್ಯೇಕತೆಗಾಗಿ ಪರಿತಪಿಸುವವರು, ಸತ್ತವರು ಕೋಟಿ ಕೋಟಿ ಜನರಿದ್ದಾರೆ, ಆದರೆ ಜನ ಸಾಮಾನ್ಯರಿಗಾಗಿ ಸತ್ತವರನ್ನು ಇಲ್ಲಿ ಕಾಣಲಾಗದು ಎಂಬ ಸಾಮಾಜಿಕ ಸತ್ಯದ ಆಶಯವನ್ನು ಈ ವಚನ ನಿಡುತ್ತದೆ. ತನ್ನ ಬಗ್ಗೆ, ತನ್ನವರ ಬಗ್ಗೆ ಆಲೋಚಿಸಬೇಕಾದ ಜವಾಬ್ದಾರಿಯನ್ನು ಈ ವಚನ ತಿಳಿಸಿಕೊಡುತ್ತದೆ.

**೫-೨-೪ ಸಮಾಜಿಕ ವಿಡಂಬನೆ**

ಸಮಗ್ರ ಮನುಕುಲದ ಬಗೆಗೆ ಜನಪರ ಕಳಕಳಿ ಹೊಂದಿರುವ ಆಧುನಿಕ ವಚನಕಾರರ ವಚನಗಳಲ್ಲಿ ಸಮಾಜ ಸುಧಾರಣೆ ನೆಲೆಗಳು ವ್ಯಾಪಕವಾಗಿ ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಅವರು ತಮ್ಮ ವಚನಗಳಲ್ಲಿ ಸಮಕಾಲೀನ ಸಮಾಜದ ವಿದ್ಯಮಾನಗಳ ವೈಪರೀತ್ಯಗಳನ್ನು ಕಂಡು ವಿಡಂಬಿಸಿದ್ದಾರೆ. ಅದರಲ್ಲೂ ವಿಶೇಷವಾಗಿ ದೇವರು, ಧರ್ಮ, ಮೂಢನಂಬಿಕೆ, ಸ್ತ್ರೀ ಪುರುಷ ಸಮಾನತೆ, ಧಾರ್ಮಿಕ ಆಚರಣೆಗಳು ಮುಂತಾದ ವಿಷಯಗಳನ್ನು ಕುರಿತ ವಿಡಂಬನೆಯನ್ನು ಇಲ್ಲಿ ಗುರುತಿಸಬಹುದು.

'ಧನಮಧಾಂದರು, ಅಧಿಕಾರಾಂಧರು
ಕಾಮಾಂಧರು, ಚೆಲುವಿನಾಂಧರು
ಜ್ಞಾನಾಂಧರು
ಧರ್ಮಾಂಧರು ಲೋಕದೊಳಗೆ
ಎಲ್ಲೆಲ್ಲೂ ಅಂಧರೇ ತುಂಬಿಹರು
ಹೃದಯ ನಯನಗಳಲಿ ನೋಡುವ
ಒಬ್ಬರನ್ನೂ ಕಾಣೆ ಮಾಣಿಕ್ಯ ವಿಠಲ'[೯೪]

ಸಮಾಜದ ಪ್ರತಿಯೊಂದು ಸ್ತರದಲ್ಲೂ ಹೃದಯದ ಕಣ್ಣಿಂದ ನೋಡುವ ಒಬ್ಬರೂ ಇಲ್ಲ. ಧನಮಧ, ಅಧಿಕಾರ ಮಧ, ಕಾಮಮಧ, ಚೆಲುವಿನಮಧ, ಜ್ಞಾನಮಧ, ಧರ್ಮಮಧದ ಅಂಧರೇ ತುಂಬಿನಿಂತಿರುವುದನ್ನು ವಚನಕಾರರು ವಿಡಂಬನಾತ್ಮಕವಾಗಿ ವಿವರಿಸುತ್ತಾರೆ. "ವಿಡಂಬನೆ ಸಾಹಿತ್ಯ ಪ್ರಪಂಚದ ಪ್ರಬಲ ಅಸ್ತ್ರ. ಇದು ಸಾಹಿತ್ಯ ಪ್ರಕಾರದಲ್ಲಿ ಕಾಣಿಸುವಂತೆ, ಆಧುನಿಕ ವಚನಗಳಲ್ಲೂ ವ್ಯಾಪಕವಾಗಿ ಬಂದಿದೆ ಜನತೆಯ ಲೋಪದೋಷಗಳನ್ನು, ಅವಗುಣಗಳನ್ನು ಎತ್ತಿ ಆಡಿ ಅವರನ್ನು ಅಪಹಾಸ್ಯಕ್ಕೆ ಗುರಿ ಮಾಡುವುದರ ಮೂಲಕ ಅವರನ್ನು ಒಳ್ಳೆಯವರನ್ನಾಗಿ ಮಾಡುವುದು ಇದರ ಗುರಿ"[೯೫] ಎನ್ನುತ್ತಾರೆ. ಡಾ. ವ್ಹಿ.ಜಿ. ಪೂಜಾರ ಅವರು.

ವಿಡಂಬಿಸುವವರ ಮುಖ, ಲೇಖನಿಯಲ್ಲಿ ಕೋಪ, ಆಕ್ರೋಶ ಕಾಣಿಸಿಕೊಂಡರೂ ಅವರ ಮನದಾಳದಲ್ಲಿ ಸಾತ್ವಿಕತೆ ಮನೆಮಾಡಿಕೊಂಡಿರುತ್ತದೆ.

'ಮಠ ಬೆಳೆಸುವವರು ಪಕ್ಕದ ಮನೆಗಳ ಉಳಿಸುವರೇ?
ಪೀಠ ಬೆಳೆಸುವವರು ಜನತೆಯ ಪ್ರೀತಿ ಗಳಿಸುವರೇ?
ಅಂದಣಕ್ಕೆ ಅಂಟಿಕೊಂಡವರು ಮನುಜರ ಹೆಗಲನೋವನರಿವರೇ?
ಮಾನವ ಧರ್ಮಕ್ಕೆ ಸಲ್ಲದ ಇವರು
ದೇವ ಧರ್ಮಕ್ಕೆ ಹೇಗೆ ಸಲ್ಲುವರು? ನೀನೇ ಹೇಳು
ಸೋಮಲೋಚನ ಪ್ರಿಯ ಬಸವಣ್ಣ'[೬೬]

ಇಂದಿನ ಮಠ, ಪೀಠಾಧಿಪತಿಗಳು ಸಮಾಜ ಸೇವೆ ಮರೆತು ಮಠ, ಪೀಠ ಬೆಳೆಸುವುದರಲ್ಲಿ ತಲ್ಲೀನನಾಗಿರುವುದು ಕೆಲವರು ಪಲ್ಲಕ್ಕಿಯಲ್ಲಿ ಮೆರೆಯಲು ಹಾತೊರೆಯುತ್ತಿರುವುದು, ಸ್ವಾರ್ಥ ಪ್ರತಿಷ್ಠೆಗಾಗಿ ಎಂಬುವುದನ್ನು ಕಡೆಗಣಿಸಲಾಗದು. ಇಂಥವರಿಗೆ ಎಲ್ಲಿದೆ ಸಾಮಾಜಿಕ ಕಳಕಳಿ. ಇವರು ಮಾನವಧರ್ಮವನ್ನೇ ಅರಿತಿಲ್ಲ; ದೇವ ಧರ್ಮವನ್ನು ಹೇಗೆ ಅರಿಯಲು ಸಾಧ್ಯವೆಂಬ ವಿಡಂಬನೆ ಇಲ್ಲಿದೆ.

"ವಸ್ತುವನ್ನು ಕೆದಕಿ, ಬೆದಕಿ ಅದರಲ್ಲಿರುವ ಕುಂದನ್ನು ಕಂಡು ಹಿಡಿದು, ಅದನ್ನು ಪ್ರಕಟಿಸುವುದರ ಮೂಲಕ ವಸ್ತುವನ್ನು ಪರಿಹಾಸ್ಯಕ್ಕೆ ಗುರಿ ಮಾಡುವುದೇ ವಿಡಂಬನೆ ಎನ್ನುತ್ತಾರೆ. ಪ್ರೊ. ಎಸ್.ವಿ. ರಂಗಣ್ಣನವರು"[೬೭] ಇಂಥ ವಿಡಂಬನೆಯಲ್ಲಿ ಇನ್ನೊಬ್ಬರ ತಪ್ಪನ್ನು ಬಯಲಿಗೆಳೆದು ಅವರಿಗೆ ತೊಂದರೆ ಕೊಡಬೇಕು. ಅಸಹ್ಯ ಮಾಡಬೇಕೆಂಬ ಉದ್ದೇಶ ವಿಡಂಬಿಸುವವರಲ್ಲಿ ಇರದೆ, ಅವರು ತಮ್ಮ ತಮ್ಮ, ಲೋಪದೋಷಗಳನ್ನು ತಿದ್ದಿಕೊಂಡು ಸಮಾಜಕ್ಕೆ ಒಳಿತನ್ನು ಬಯಸಬೇಕೆಂಬ ಸದುದ್ದೇಶವಿರುತ್ತದೆ.

'ನಡೆಯಿಲ್ಲದ ನುಡಿ
ಕೇಶವಿಲ್ಲದ ಮುಡಿಯ ಬಾಚಿ
ಹೂ ಮುಡಿದಂತೆಂದ ನಮ್ಮ
ಶಿವಲಿಂಗೇಶ್ವರ'[೬೮]

ಎಂಬಂತಹ ವಚನಗಳಲ್ಲಿ ಉಪದೇಶವಿಲ್ಲ. ನೀತಿ ಬೋಧೆಯೂ ಇಲ್ಲ. ಅದು ತಪ್ಪಿತಸ್ಥರನ್ನು ತಿದ್ದಬಹುದಾದ ನಗೆಬಾಣವಿದೆ. ವಿಡಂಬನೆ ಹಾಸ್ಯಮಯವಾಗಿದ್ದಷ್ಟು ಕ್ಷೇಮ. ಅಪಹಾಸ್ಯ, ಕೊಂಕು ನುಡಿ, ವಕ್ರೋಕ್ತಿ ಮೂದಲಿಕೆ, ಅವಹೇಳನ, ಗೇಲಿ, ಲೇವಡಿ, ಚತುರೋಕ್ತಿ, ಬೈಗುಳ, ನಿಂದೆ ಈ ಮುಂತಾದ ರೂಪಗಳಲ್ಲಿ ಸಮಾಜ ವಿಡಂಬನೆಯನ್ನು ಆಧುನಿಕ ವಚನಕಾರರು ಬಳಸಿಕೊಂಡಿದ್ದಾರೆ.

'ನಿರ್ಮಲ ಪರಿಸರದೊಳಗೆ
ಅರಳಲು ಕಾತರಿಸಿ ನಿಂತಿರು ಮೊಗ್ಗುಗಳ
ಅರಳುವ ಮುನ್ನವೆ ಹೊಸೆದು
ಹಾಕುತ್ತಿರುವಿರಿ. ಅದೆಂಥ ಧೈರ್ಯವೋ ನಿಮಗೆ
ಬರುವಿರಿ ಮಿಡಚೆ, ಜಿರಲೆ, ಕೋತಿ, ನಾಯಿಗಳಂತೆ
ಬಂದು ಸೇರುವಿರಿ. ಹಾಳುಗೆಡವುತ್ತಿರುವಿರಿ

ಪ್ರಸಾದವೆಲ್ಲವ, ವಾತಾವರಣವೆಲ್ಲವ

ಇದೆಂತಹ ನೀತಿಯೋ? ಅಂತ್ಯವೆಂತೋ ತಿಳಿಸಿಕೊಡಾ

ನಿಜಗುರು ಮಹಾಂತ ಲಿಂಗ’[೯೯]

ಸಮಾಜದ ಪರಿಸರವನ್ನು ಹಾಳುಮಾಡುತ್ತಿರುವ ಹೀನ ಮನುಜರನ್ನು ಮಿಡಚೆ, ಜಿರಲೆ, ಕೋತಿ ಹಾಗೂ ನಾಯಿಗಳಿಗೆ ಹೋಲಿಸಲಾಗಿದೆ. ಪ್ರತಿಮಾತ್ಮಕ ಕಾವ್ಯದಂತಿರುವ ಈ ವಚನ ಮೂದಲಿಕೆಯಲ್ಲಿ ಸಮಾಜದಲ್ಲಿ ಅನ್ಯಾಯ, ಅತ್ಯಾಚಾರ, ಸೋಗಲಾಡಿತನದ ವ್ಯಕ್ತಿಗಳ ಗುಣಸ್ವಭಾವಗಳನ್ನು ಅನಾವರಣಗೊಳಿಸುತ್ತದೆ. ದೇವ ನಿರ್ಮಿತ ಪ್ರಸಾದ ರೂಪದಲ್ಲಿರುವ ವಸ್ತುಗಳನ್ನು, ಎಚ್ಚರಿಕೆಯಿಂದ ಬಳಸಬೇಕಾಗಿರುವ ಕ್ರಮವನ್ನು ಹೇಳುವುದರೊಂದಿಗೆ ಅದನ್ನು ಕೆಡೆಸುವವರ ಬಗ್ಗೆ ವ್ಯಂಗೋಕ್ತಿಯ ಮಾತುಗಳನ್ನು ಬಳಸಿಕೊಂಡು ಅಂಥಹ ಕೃತ್ಯಕ್ಕೆ ಅಂತ್ಯ ನೀಡುವ ದಾರಿಯನ್ನು ಹುಡುಕಲು ಪ್ರಯತ್ನಿಸುವ ನೆಲೆಯನ್ನು ಒಳಗೊಂಡಿದೆ.

ತಾನು ಮಾಡಿರುವ ತಪ್ಪುಗಳನ್ನು ಮುಚ್ಚಿಡಲೆತ್ನಿಸುವ ವ್ಯಕ್ತಿ ಒಳಗೊಂದು ಹೊರಗೊಂದು ಬಗೆಯಾಗಿ ವರ್ತಿಸುತ್ತಾನೆ. ಡಂಭಾಚಾರದ ಆಚರಣೆಗಳನ್ನು ತೋರುತ್ತಾನೆ. ಅಂಥ ಪ್ರಸಂಗಗಳ ಉಲ್ಲೇಖಗಳು ಹಲವು ಆಧುನಿಕ ವಚನಗಳಲ್ಲಿವೆ.

‘ಹುಡುಗಿಯ ಬಣ್ಣ–ರೂಪಕ್ಕೆ ಮನಸೋತು

ಹಿಂದೆ ಸುತ್ತುವ ಯುವಕರು

ಸೂಳೆಯ ಮಗಳೆಂದರೆ ಮದುವೆಯಾಗರು ನೋಡಾ

ಹಣವಿದ್ದವರು ಮಾಡುವ ಮಂಗಾಟಕ್ಕೆ

ತಾಯಿ ಬಲಿಯಾದಂತೆ

ಮಗು ಬಲಿಯಾಗಬಾರದು ನೋಡಾ

ಹಣ ಕೊಟ್ಟರೆ ಹಸಿಮಣೆ ಏರುವವರು

ಹಸಿ ಮೈಯಲ್ಲೇ ಬಿಟ್ಟೋಡಿದರೆ

ಯಾರು ಕೇಳುವರಯ್ಯಾ

ಸುವರ್ಣ ಮಹೋತ್ಸವದ ಸೂಗೂರೇಶ್ವರ’[೧೦೦]

ವಾಸ್ತವತೆಯನ್ನು ಬಿಚ್ಚಿಡುವ ಈ ವಚನ ಇಂದಿನ ಯುವಕರ ಮನೋಸ್ಥಿತಿಗೆ ಕನ್ನಡಿ ಹಿಡಿಯುತ್ತದೆ. ಹುಡಗಿಯ ಅಂದ ಚೆಂದ–ಬಣ್ಣಕ್ಕೆ ಮನಸೋತು ಅವಳ ಹಿಂದೆಯೇ ಸುತ್ತುವ ಯುವಕರು ಅವಳು ಸೂಳೆಯ ಮಗಳೆಂದು ತಿಳಿದ ತಕ್ಷಣ ಮದುವೆಗೆ ಒಪ್ಪುವುದಿಲ್ಲ, ವರದಕ್ಷಿಣೆಗಾಗಿ ಹಸಿ ಮಣೆ ಹತ್ತುವವರೂ, ಹಣಸಿಗದಾದಾಗ ಹಸಿಮೈಯಲ್ಲೇ ಓಡುವಂತಹ ಪ್ರಸಂಗಗಳನ್ನು, ಹಣವಂತರ ಅನಾಚಾರದಿಂದ ಹಾಳಾಗುವ ಹೆಣ್ಣು ಮಕ್ಕಳ ಸ್ಥಿತಿಗತಿಗಳನ್ನೆಲ್ಲ ಈ ವಚನ ಧ್ವನಿಸುತ್ತದೆ. ಒಳಗೊಂದು, ಹೊರಗೊಂದು ಗುಣ ಹೊಂದಿದವರ ಸ್ಥಿತಿಯನ್ನು ಇಲ್ಲಿ ಮನಗಾಣಬಹುದು.

ಭಾವ, ಭಕ್ತಿಯು ಇಲ್ಲ! ಸೇವೆ ಗುಣ ಮೊದಲಿಲ್ಲ

ಕಾವಿ ಧರಿಸಿದೊಡೆ ಸನ್ಯಾಸಿಯಾಗುವನೇ?

ದೇವ ಮೆಚ್ಚನೈ ಸತ್ಯಜ್ಞ (ಸತ್ಯಜ್ಞನ ವಚನಗಳು – ಪು.೭೫)

ಬೀಗ ನಮ್ಮವನಂತ । ಬೀಗುತ್ತ ನೀ ಹೋದೆ

ಬಾಗಿಲಲಿ ನಿಲ್ಲಿ ಕಳಿಸಿದನು ಇಂಥವನು

ಗೂಗೆ ಸಮವೆಂದ ಸತ್ಯಜ್ಞ'[೧೦೧]

ಇಂಥ ವಚನಗಳಲ್ಲಿಯ ಡಂಭಾಚಾರದ ಬದುಕನ್ನು ವಚನಕಾರರು ಹಿಡಿದಿಟ್ಟಿದ್ದಾರೆ. ವೇಷಧರಿಸಿ ಆ ವೇಷದ ಮಹತ್ವ ಅರಿಯದೆ, ಮನಸ್ಸಿಗೆ ಬಂದಂತೆ ವರ್ತಿಸುವ ಡಂಭಾಚಾರಿಗಳನ್ನು ಇಲ್ಲಿ ಖಂಡಿಸಲಾಗಿದೆ.

'ದ್ರೋಹ, ಮೋಸ, ವಂಚನೆ, ನೀನನಗೇನಾದರೂ ಮಾಡಬಹುದು

ಹೊತ್ತು, ಹೆತ್ತು ಸಲಹಿದ ತಂದೆ-ತಾಯಿಗೆ

ತನ್ನ ಹೊತ್ತ ಭೂಮಿಗೆ, ಅನ್ನ ಕೊಡುವ ಕಾಯಕಕ್ಕೆ

ದ್ರೋಹವೆಸಗಲಾರ, ಮೋಸಮಾಡಲಾರ, ಜ್ಞಾನಸುಧೆಯನ್ನು

ಧಾರೆಯೆರೆದ ಗುರುಗಳಿಗೆ ವಂಚಿಸಲಾರ, ಮಾಡಿದ್ದಾದರೆ

ಶ್ರೀ ಗವಿಸಿದ್ಧೇಶ್ವರಾ ನಿನಗೆ ದ್ರೋಹ ಮಾಡಿಕೊಳ್ಳಬಹುದೂ ನೀನು

ಅದು ನನಗಲ್ಲ'[೧೦೨]

ಎನ್ನುವಾಗಿನ ವಚನದ ನೆಲೆಯನ್ನು ತಿಳಿಯಬಹುದು. ಈ ಬದುಕಿನಲ್ಲಿ ಏನೆಲ್ಲ ಮೋಸಗಳಿವೆ, ವಂಚನೆಗಳಿವೆ. ಆದರೆ ಮನುಷ್ಯ ಮೋಸ, ವಂಚನೆಯನ್ನು ಪರರಿಗೆ ಮಾಡಬಹುದು, ಆದರೆ ಹೆತ್ತು-ಹೊತ್ತು ಸಲಹಿದ ತಂದೆ-ತಾಯಿಗಾಗಲಿ, ಹೊತ್ತುಕೊಂಡಿರುವ ಭೂಮಿಗಾಗಲಿ, ಅನ್ನಕೊಡುವ ಕೆಲಸಕ್ಕಾಗಲಿ, ದ್ರೋಹವೆಸಗಲಾರ ಎಂಬ ನಂಬಿಕೆಯಿದೆ. ಆದರೆ ನಂಬಿಕೆ ಮೀರಿ ದ್ರೋಹ ಎಸಗುವುದನ್ನು ವಚನಕಾರ ಕಂಡಿದ್ದಾನೆ. ಡಂಭಾಚಾರದ ಭಕ್ತಿಯ ಆಚರಣೆಯಲ್ಲಿ ತೊಡಗಿದವರೂ ಆಧೂನಿಕ ವಚನಕಾರರ ಕಣ್ಣಿಂದ ಮರೆಯಾಗಿಲ್ಲ. "ಗುಡಿಗುಂಡಾರ ಸುತ್ತಿದರೇನು, ಜಡೆ ಬಿಟ್ಟಡೇನು, ಅಜಾನ್ ಕೊಟ್ಟಡೇನು, ಚರ್ಚಿಗೆ ವ್ಯರ್ಥ ತಿರುಗಿದರೇನು, ತನ್ನ ತಾನು ಅರಿಯದಿದ್ದಡೆ' ಎನ್ನುವ ವಿಜಯಕುಮಾರ ಪರುತೆಯವರ ವಚನ ಡಾಂಬಿಕ ಭಕ್ತಿಯನ್ನು ತರಾಟೆಗೆ ತಗೆದುಕೊಳ್ಳುತ್ತದೆ ಅಷ್ಟೇ ಅಲ್ಲ; ಇಂದು ಮಾನವ ಧರ್ಮ ಹಾಳಾಗುವುದನ್ನು ತಿಳಿಸುತ್ತಾರೆ.

'ಸತ್ಯದ ಗೋರಿಯ ಮೇಲೆ ಸುಳ್ಳು ಚಿಗುರಿತು

ಶ್ರದ್ಧೆಯ ಸಮಾಧಿಯ ಮೇಲೆ ಸಂಶಯ ಬೆಳೆಯಿತು

ಸದಾಚಾರ ಹೋಗಿ ವ್ಯಭಿಚಾರ ಬಂತು

ಭಕ್ತಿ ನಶಿಸಿತು ಬಲ ಹೆಚ್ಚಾಯಿತು

ಮಿತ್ರರು ದೂರಾಗುತ್ತಿರುವರು, ಶತ್ರುಗಳು ಸಮೀಪಿಸಿದರು

ಮಾನವಧರ್ಮ ಅಳಿಯುತ್ತಿದೆ, ಪಶುಧರ್ಮ ಬೆಳೆಯುತ್ತಿದೆ

ನೋಡಾ ಗುರುನಂಜೇಶ್ವರ'[೧೦೩]

ಎಂದು ಅವರು ಹೇಳುವಲ್ಲಿ ಇಂದಿನ ಸಮಾಜದಲ್ಲಿ ನಡೆಯುತ್ತಿರುವ ಅನೈತಿಕತೆಗಳ ಪಟ್ಟಿ ಕಾಣುವುದರೊಂದಿಗೆ ಬದುಕು ಹೇಗೆ ಭೂಟಾಟಿಯಲ್ಲಿ ಸಾಗುತ್ತಿದೆ ಎಂಬುದರ ಅರಿವಾಗುತ್ತದೆ. ತಮ್ಮ ಸ್ವಾರ್ಥಕ್ಕಾಗಿ ಅರ್ಥಹೀನವಾದ

ಸಂಪ್ರದಾಯ, ಆಚರಣೆಗಳನ್ನು ಮುಂದುವರೆಸಿಕೊಂಡು ಬಂದಿರುವ ಕೆಲವು ವರ್ಗದವರು, ಪಶುಧರ್ಮ ಬೆಳೆಸುತ್ತಿರುವುದನ್ನು ಎತ್ತಿ ತೋರಿಸಿದ್ದಾರೆ. ಇಂಥವರಾರೂ ಆಧುನಿಕ ವಚನಕಾರರ ವಿಡಂಬನಾಸ್ತ್ರದಿಂದ ಪಾರಾಗಿಲ್ಲ. ವಚನಕಾರರು ಸಮಾಜದಲ್ಲಿ ಅನಾಚಾರ, ಅನೈತಿಕತೆ, ಅರ್ಥಹೀನ ಸಂಪ್ರದಾಯಗಳನ್ನು ಬಿತ್ತುವವರ ಟೊಳ್ಳುತನವನ್ನು ಸೋಗಲಾಡಿತನವನ್ನು ನಿರ್ಭಯದಿಂದ, ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆದಿದ್ದಾರೆ.

ಇಂಥ ಸಂದರ್ಭಗಳನ್ನು ಕಂಡ ವಚನಕಾರರಿಗೆ ಅವರ ಆಚರಣೆಗಳು ಒಮ್ಮೆ ಅರ್ಥಹೀನವೆನಿಸಿದರೆ, ಇನ್ನೊಮ್ಮೆ ಈ ಮೌಢ್ಯತೆ ಇಂದಿನ ವೈಚಾರಿಕ ಯುಗದಲ್ಲೂ ಉಳಿದದ್ದು ನೋಡಿ ಮರುಕವೆನಿಸಿದೆ. ಕೆಲವೆಡೆ ಕೋಪಗೊಂಡು ಅವುಗಳನ್ನು ನಿಂದಿಸಿದರೆ, ಹಲವು ಸಲ ವ್ಯಂಗೋಕ್ತಿಯಿಂದ ವಿಡಂಬಿಸಿದ್ದುದೂ ಕಂಡುಬರುತ್ತದೆ. ಇದು ಜನತೆಯ ಹಾಗೂ ಸಮಾಜದ ಹಿತದೃಷ್ಟಿಯಿಂದಲೇ ಹೊರತು ಮತ್ತಾವ ದೃಷ್ಟಿಯಿಂದಲೂ ಅಲ್ಲವೆಂಬುದನ್ನು ಈ ವಿಡಂಬನೆಯಲ್ಲಿ ಅರಿಯಬಹುದಾಗಿದೆ.

'ಕಂಭ ನಿಲಿಸಿ, ಛಾವಣಿ ಇರಿಸಿ
ನಿಂತ ಕಂಭಕ್ಕೆ ಜಡವೆನ್ನುವರು
ಬೇರನಿಳಿಸಿ ಟೊಂಗೆ ಹರಿಸಿ
ಚಿಗುರು ಹೊತ್ತ ಮರಕ್ಕೆ ಜಡವೆನ್ನುವರು
ಇಂದಿಗಿಲ್ಲದ, ನಾಳೆಗಿಲ್ಲದ
ಶುಷ್ಕ ವೈಚಾರಿಕತೆಗೆ ಜಡವೆನ್ನುವರು
ಭೂತದಲ್ಲಿ ಮುಖವಿಟ್ಟವರನು, ಭವಿಷ್ಯದಲ್ಲಿ ಇಣುಕುವವರನು
ಇಂದು ಬದುಕದವರನು ಜಡವೆನ್ನುವರು
ಶ್ರೀ ಗುರುಸಿದ್ಧ ನೀನಿಲ್ಲದ ಆನು
ಜಡವ ಹೊತ್ತುಕೊಂಡು ಓಡಾಡುವನೆಂಬುವರು'[೧೦೪]

ಲೋಕದಲ್ಲಿಯ ಹಲವು ವಸ್ತುಗಳನ್ನಿರಿಸಿಕೊಂಡು 'ಜಡವೆನ್ನುವರು' ಎಂಬ ದಾಟಿಯಲ್ಲಿ ಚೇತನಶೀಲವಲ್ಲದ ಬದುಕಿನ ರೀತಿಯನ್ನು ವಿಡಂಬಿಸಿದ್ದು ಇಲ್ಲಿ ಗಮನಾರ್ಹವಾಗುತ್ತದೆ ಸಮಾಜದ ಪರಿಕಲ್ಪನೆಯಿಲ್ಲದ ಗುರುವಿನ ಸಿದ್ಧಮಾರ್ಗವಿಲ್ಲದ ಬದುಕೂ ಜಡವೆನಿಸುವುದನ್ನು ಈ ವಚನ ತಿಳಿಸುತ್ತದೆ.

ಸಮಾಜದಲ್ಲಿ ಸತ್ಯ, ನ್ಯಾಯ, ನೀತಿ, ಪ್ರಾಮಾಣಿಕತೆ, ಸದ್ಗುಣ, ಸದಾಚಾರಗಳನ್ನು ವಿಡಂಬನಾಸ್ತ್ರದ ಮೂಲಕ ವಚನಕಾರರು ಸ್ಥಿರಗೊಳಿಸಲು ಯತ್ನಿಸಿರುವುದನ್ನು ತಿಳಿಯಬಹುದು. ೧೨ನೇಯ ಶತಮಾನದ ಶರಣರ ಮಾದರಿಯಲ್ಲಿ ಆಧುನಿಕ ವಚನಕಾರರೂ ಸಹ ನೈಜ, ವಾಸ್ತವ, ಸರಳ, ಸಮಾನತೆಯ ಬದುಕನ್ನು ಪ್ರೀತಿಸಿದ್ದಾರೆ. ಬದುಕಿನಲ್ಲಿ ತಾರತಮ್ಯ ಮಾಡುವವರು ಮಡಿ ಹುಡಿ ಮಾಡುವವರು, ಮೇಲು-ಕೀಳು ಎನ್ನುವವರನ್ನು ಕಟುವಾಗಿ ನಿಂದಿಸುತ್ತಾರೆ.

'ತುತ್ತು ಅನ್ನಕ್ಕಾಗಿ ಎತ್ತಿ ಆಡುವ ಜನ
ಬಿಡಿಕಾಸಿಗಾಗಿ ಬಡಿದಾಡುವ ಮನಸ್ಸು
ಗೇಣು ಹೊಲಕ್ಕಾಗಿ ಗೋಣು ಕೊಯ್ಯುವ ವೈರ
ಗಂಟೆಯ ಅಧಿಕಾರದಲ್ಲಿ ಸ್ನೇಹ ನಂಟು ಮರೆವ ಜನ

ಚೋಟು ಆಸ್ತಿಗಾಗಿ ಕೋರ್ಟು ಕಛೇರಿ ಹತ್ತುವ ಕಥೆ

ಎಲ್ಲೆಲ್ಲೂ ಇದೆ ಯಾವಾಗಲೂ ಇದೆ'[೧೦೫]

ಆಸ್ತಿ, ಅಂತಸ್ತು, ಅಧಿಕಾರದ ಮೋಹದಿಂದ ಏನೂ ಮಾಡಲು ಹಿಂಜರಿಯದವರ ಚಿತ್ರವನ್ನು ಈ ವಚನ ನೀಡುತ್ತದೆ. ಸ್ನೇಹ, ಪ್ರೀತಿ, ಸಮಾನತೆ, ಸರಳತೆ, ಮಮತೆಯನ್ನೆಲ್ಲ ಮರೆತು ವೈರಿಗಳಾಗಿ ಕಾದಾಡುವ ಜನರ ಸ್ವಭಾವವನ್ನು ಈ ವಚನದಲ್ಲಿ ಸಹಜವಾಗಿ ತರಲಾಗಿದೆ. ಬದುಕಿನಲ್ಲಿ ತಾರತಮ್ಯವೆಸಗುವವರ ಮನಸ್ಥಿತಿಯ ಚಿತ್ರಣ ಇಲ್ಲಿದೆ. ಅರ್ಥಹೀನ ಆಚರಣೆಯಲ್ಲಿ ಮುಳುಗಿರುವವರ ನೆಲೆಯನ್ನು ಕಾಣಿಸುವ ವಚನವೊಂದು ಹೀಗಿದೆ.

'ತಿನ್ನಲು ಕೂಳು ಇಲ್ಲದ ದಾರಿದ್ರ್ಯ ಇಲ್ಲಿ
ಕಲ್ಲು ದೇವರಿಗೆ ಕೋಟಿ ಕೋಟಿಯ
ಕಿರೀಟ ತೊಡಿಸುವರು ಅಲ್ಲಿ
ಬಡಕಲು ದೇಹ ಮುಚ್ಚಲು
ಹರಕಲು ಬಟ್ಟೆಯೂ ಇಲ್ಲ ಇಲ್ಲಿ
ಕಲ್ಲಿನ ಗೋಪುರಕ್ಕೆ
ಚಿನ್ನದ ಬಟ್ಟೆ ತೊಡಿಸಿಹರು ಅಲ್ಲಿ
ಜಂಗಮಕ್ಕಿಲ್ಲದ ಸ್ಥಾವರಕ್ಕೆ ನೀಡುವ
ಭಂಡ ಭಕ್ತಿಯು ಯಾವ ಧರ್ಮಕೆಂದ
ಈಶ್ವರಿ ಪ್ರಿಯ ಶಿವಲಿಂಗ'[೧೦೬]

ತಿನ್ನಲು ಅನ್ನ ಇಲ್ಲದ ಬಡವರಿಗೆ ದಾಸೋಹ ಮಾಡಲು ಹಿಂದು ಮುಂದು ನೋಡುವ ಸಿರಿವಂತರು ಕಲ್ಲುದೇವರಿಗೆ ಕಿರೀಟ ತೊಡಿಸಿ ಸಂತೋಷಗೊಳ್ಳುವುದು, ಇಲ್ಲಿ ಮೈಮೇಲೆ ಹರಕು ಬಟ್ಟೆಯಿಲ್ಲದ ನಿರ್ಗತಿಕರಿಗೆ ಏನನ್ನೂ ನೀಡದವರು, ಕಲ್ಲಿನ ಗುಡಿ ಗೋಪುರಗಳಿಗೆ ಚಿನ್ನದ ಬಟ್ಟೆ ತೊಡಿಸುವ ವಿಪರ್ಯಾಸವನ್ನು ಇಂಥ ವಚನಗಳು ಅನಾವರಣಗೊಳಿಸಿವೆ. ಜಡ ವಸ್ತುಗಳನ್ನು ದೇವರು, ದೇವಾಲಯವೆಂದು ತಿಳಿದು ಅಜ್ಞಾನದಿಂದ ವರ್ತಿಸುವವರನ್ನು ವಿನಮ್ರವಾಗಿ ಇಲ್ಲಿ ವಿಡಂಬಿಸಲಾಗಿದೆ.

'ಅಂಗದ ಮೇಲೆ ಶಿವಲಿಂಗವ ಧರಿಸಿ
ಸಾಗರದಷ್ಟು ಆಡಂಬರ ಪೂಜೆಯ ಮಾಡಿ
ಸಾಸಿವೆಯಷ್ಟು ಭಕ್ತಿಯನಿಟ್ಟು
ನಾನ್ ಶಿವಯೋಗಿಯೆಂದು
ಮೃಷ್ಟಾನ್ನವೇ ನೈವೇದ್ಯವಿಡಿದ
ತನ್ನ ಸತಿಯನಗಲಿ
ಪರಸ್ತ್ರೀಯ ಮುಟ್ಟಿದಡೆ
ಹಂದಿಯೊಂದು ಹೊಲಸು ಮೂಸಿ
ಮೇಯಿದಂತೆ ಕಾಣಾ ವಿಶಾಲಪ್ರಿಯ ಚನ್ನಬಸವ'[೧೦೭]

ತೋರಿಕೆಯ ಪೂಜೆ, ಭಕ್ತಿಯಿಲ್ಲದ ಧ್ಯಾನ, ತಾನೆಂಬ ಅಹಂಕಾರದಲ್ಲಿ ಮೆರೆವ, ಧರ್ಮಾನುಯಾಯಿ ತಾನು, ತಾನೇ ಶಿವಯೋಗಿಯೆಂದು ಹೆಮ್ಮೆ ಪಡುವವರು, ಹೆಂಡತಿಯಿಂದ ಮೃಷ್ಟಾನ್ನ ಸಿಗುತ್ತಿದ್ದರೂ, ಅನ್ಯಸ್ತ್ರೀಯರತ್ತ ವಾಲುವುದನ್ನು ಕಂಡ ಹೆಣ್ಣು ಮಗಳೊಬ್ಬಳು ಹೇಳುವ ರೀತಿ ಇಲ್ಲಿ ಎಚ್ಚರಿಕೆ ಹಾಗೂ ಅದರ ಹೇಸಿತನವನ್ನು ತೋರುತ್ತದೆ. ಶರಣರ ವಚನಗಳ ದಾಟಿಯನ್ನು ಅನುಸರಿಸಿ ರಚಿತವಾಗಿರುವ ಈ ವಚನವು ಡೊಂಗಿ ಶಿವಯೋಗಿಯ ಹೀನತನವನ್ನು ಬಯಲುಮಾಡುತ್ತದೆ. ಅಂಥವರನ್ನು ಹೊಲಸು ಮೇಯುವ ಹಂದಿಗೆ ಹೋಲಿಸಿರುವುದು ಯಥಾರ್ಥವಾಗಿದೆ. ಜನರ ಆಚಾರವೊಂದು ವಿಚಾರವೊಂದು ಇರುವುದನ್ನು, ಆ ವ್ಯಕ್ತಿಗಳ ನಡತೆಯಲ್ಲಿರುವ ಹುಸಿತನವನ್ನು ವಿಡಂಬಿಸುವ ನೆಲೆಯನ್ನು ಇಲ್ಲಿ ಮನಗಾಣಬುದು.

**೫-೨-೫ ಕೌಟುಂಬಿಕ ಚಿಂತನೆ**

ಮಾನವನ ಬದುಕಿನ ಸರ್ವಾಂಗೀಣ ಸಮೃದ್ಧಿಗೆ ನಾಂದಿ ಹಾಡಿದ್ದ ಶರಣರ ಸಂಸ್ಕೃತಿಯ ಮಾದರಿಯಲ್ಲಿಯೇ ಇಂದಿನ ಸಮಾಜದಲ್ಲಿಯ ಕುಟುಂಬ ವ್ಯವಸ್ಥೆಯನ್ನು ಆಧುನಿಕ ವಚನಕಾರರು ಕಾಣಲು ಪ್ರಯತ್ನಿಸಿದ್ದು ಹೆಚ್ಚಿನ ನೆಲೆಯಲ್ಲಿ ಕಂಡು ಬರುತ್ತದೆ. 'ವಿಶ್ವತೋ'ಮುಖ ತೋರುವ ಕುಟುಂಬ ಸಂಸ್ಕೃತಿ ಶರಣರಲ್ಲಿದೆ. ಮಾನವ ಕುಟುಂಬಗಳು ಆದರ್ಶ ಕುಟುಂಬಗಳಾಗಿರಬೇಕು ಅವು ಇತರರಿಗೆ ಮಾದರಿ ಎನಿಸಬೇಕೆಂಬ ಆಶಯದ ಹಿನ್ನೆಲೆಯಲ್ಲಿ ಹಲವು ವಚನಗಳ ರಚನೆಯಾಗಿರುವಂತಿದೆ.

'ಹೆಂಡತಿ ಹೆಂಡತಿಯಲ್ಲ
ಗಂಡ ಗಡನಲ್ಲ
ತಂದೆ-ತಾಯಿ, ಬಂಧು-ಬಳಗ
ಸರ್ವವೂ ಸಂಬಂಧವಲ್ಲ
ಪ್ರಭು; ಸಮಸ್ತವೂ ಶಿವಮಯ ನೋಡಾ'[೧೦೮]

ಇಡೀ ಕುಟುಂಬವನ್ನೇ ಶಿವಮಯವಾಗಿ ಕಾಣುವ ದೃಷ್ಟಿಕೋನ ಸುಂದರವಾಗಿದೆ. ಪರಸ್ಪರರ ಸಂಬಂಧ ಶ್ರೇಷ್ಠ ಕುಟುಂಬದಲ್ಲಿ ಸಮಸ್ತವೂ ಶಿವಮಯವಾಗಿರಬೇಕೆಂಬ ಹಂಬಲ ಆಧುನಿಕ ವಚನದಲ್ಲಿದೆ.

ಒಂದೇ ತಂತಿಯ ಸಪ್ತಸ್ವರಗಳು ಒಂದೇ ಉಸಿರು ಅಗಣಿತಲಯ, ಸಾವಿರಾರು ಹಾಡು ಹೊರಟಾಗ ಅನಂತ ಆನಂದವಿರುವಂತೆ ಕುಟುಂಬದ ಇರವು ಆಗಿರಬೇಕು. ತಂದೆ ತಾಯಿಯರನ್ನು ದೇವಸಮಾನವಾಗಿ ಗುರುತಿಸುವುದನ್ನು ಅರಿಯಬೇಕಾಗಿದೆ. ಇಲ್ಲಿ ಕುಟುಂಬವನ್ನು 'ಕೂಡಲಸಂಗಮ'ವೆನ್ನುವ ಪರಿ ಅದ್ವಿತೀಯವೆನಿಸುತ್ತದೆ.

'ನನ್ನವರು ನಿನ್ನವರೆಂಬ ತಾರತಮ್ಯವೇಕಯ್ಯ?
ಹೊರಗಿನವರು ಒಳಗಿನವರೆಂಬ ಭೇದವೇಕಯ್ಯ?
ಮೇಲಿನವರು ಕೆಳಗಿನವರೆಂಬ ವ್ಯತ್ಯಾಸವೇಕಯ್ಯ?
ಮೇಲೆ ಸುರಿದ ಮಳೆ ಕೆಳಗೆ ಬೀಳುವುದಿಲ್ಲವೇ?
ಆಚೆ ದಡದ ನೀರು ಈಚೆಗೆ ಹರಿಯುವುದಿಲ್ಲವೇ?
ನಮ್ಮ, ನಮ್ಮೊಳಗೆ ಭಿನ್ನಭೇದ ಮಾಡಬೇಡಿರಯ್ಯ

ಎಲ್ಲರೂ ಕೂಡುವ ಸ್ಥಳವೇ ಕೂಡಲಸಂಗಮವಯ್ಯ
ಸಬರದ ಬಸವ'[೧೦೯]

ಹಲವು ನೆಲೆಗಳಲ್ಲಿ ಅರ್ಥೈಸಬಹುದಾದ ಈ ವಚನ ಕುಟುಂಬದ ನೆಲೆಯ ಹಿನ್ನೆಲೆಯಲ್ಲೂ ಅರ್ಥಪೂರ್ಣವಾಗಿ ಮೂಡಿಬಂದಿದೆ ಎನಿಸುತ್ತದೆ. ಒಂದು ಸಮಾಜ, ದೇಶ, ಊರು, ಕೇರಿಗಳಿಗೆಲ್ಲ ಅನ್ವಯಿಸಿ ಹೇಳಬಹುದಾದ ಈ ವಚನದ ನೆಲೆಯನ್ನು ಕೌಟುಂಬಿಕ ಹಿನ್ನೆಲೆಯಲ್ಲೂ ಗುರುತಿಸಬಹುದು. ಒಂದು ಮನೆಯಲ್ಲಿರುವ ತಂದೆ–ತಾಯಿ, ಅತ್ತೆ–ಸೊಸೆ, ನಾದಿನಿ–ನೆಗಣ್ಣಿ, ಅಕ್ಕ–ತಂಗಿ, ಅಣ್ಣ–ತಮ್ಮ, ಭಾವ–ಮೈದುನ ಮುಂತಾದ ಸಂಬಂಧಗಳಲ್ಲಿ ನನ್ನವರು, ನಿನ್ನವರು ಎನ್ನುವ ತಾರತಮ್ಯ ಬರಬಾರದು, ಹೊಸಗಿನಿಂದ ಬಂದವರು, ಒಳಗಿನಿಂದ ಹೋದವರು ಎಂಬ ಭೇದ ಬರಕೂಡದು, ಅದರಲ್ಲಿಯೇ ಕೆಲವರು ಮೇಲೆ, ಕೆಲವರು ಕೆಳಗೆ ಎಂದು ವ್ಯತ್ಯಾಸಮಾಡಬಾರದು. ಎಲ್ಲರೂ ಸಮಾನರು, ಈ ಮನೆಯ ಬಂಧುಗಳೇ ಆ ಎಲ್ಲರೂ ಕುಳಿತುಕೊಳ್ಳುವ ಸ್ಥಳವೇ ಕುಟುಂಬ. ಅದೇ 'ಕೂಡಲ ಸಂಗಮ'ವೆಂಬ ಧ್ವನಿಪೂರ್ಣವಾದ ಮಾತನ್ನು ಇಲ್ಲಿ ಹೇಳಿರುವುದು ಗಮನಾರ್ಹ ಅಂಶ ಎನ್ನಬಹುದು.

ಆದರೂ ಕುಟುಂಬದಲ್ಲಿ ನೂರೆಂಟು ಆಸೆಗಳು ಹುಟ್ಟಿ, ಮನುಷ್ಯ ಆಧ್ಯಾತ್ಮದ ಕಡೆಗೆ ಹಂಬಲಿಸುವ ನೆಲೆಯಲ್ಲಿ ತಂದೆ–ತಾಯಿ ಇತರರನ್ನು ಹೇಗೆ ಕಾಣುತ್ತಾರೆಂಬ ರೀತಿಯೂ ಇಲ್ಲಿದೆ.

'ತಾಯಿಯೆಂಬುದು ಕಾಯಕ್ಕೆ ಮೂಲ
ತಂದೆಯೆಂಬುದು ಜೀವಕ್ಕೆ ಮೂಲ
ಸೋದರನೆಂಬುದು ಕದನಕ್ಕೆ ಮೂಲ
ಬಂಧುವೆಂಬುದು ಹರುಷಕ್ಕೆ ಮೂಲ
ಸಂಸಾರವೆಂಬುದು ಬಂಧನಕ್ಕೆ ಮೂಲ
ಸತಿಯೆಂಬುದು ಕಾಮಕ್ಕೆ ಮೂಲ
ಸುತರೆಂಬುದು ಮೋಹಕ್ಕೆ ಮೂಲ
ಶ್ರೀ ಗುರುಸಿದ್ಧನೆಂಬುದು ಪ್ರೀತಿಗೆ ಮೂಲ'[೧೧೦]

ಕುಟುಂಬದಲ್ಲಿಯ ಸದಸ್ಯರು ಒಂದೊಂದು ಗುಣಕ್ಕೆ ಮೂಲವಾಗುವ ಪರಿಯನ್ನು ಹೇಳುವ ಈ ವಚನ ಸಂಸಾರ ಬಂಧನಕ್ಕೆ ಮೂಲ, ಪ್ರೀತಿಗೆ ತನ್ನ ನಂಬಿಕೆಯ ಗುರುಸಿದ್ಧನೇ ಮೂಲವೆಂದು ಸಾರುತ್ತದೆ. ತಂದೆ–ತಾಯಿ, ಸತಿ–ಸುತ, ಸೋದರರನ್ನು ಜನರು ಕಾಣುವ ಬಗೆ ಸಂಸಾರದಲ್ಲಿ ಹೇಗಿದೆ ಎಂಬುದರ ಚಿತ್ರ ಇಲ್ಲಿ ಕಾಣಸಿಗುತ್ತದೆ. ಕುಟುಂಬಗಳಲ್ಲಿ ಅಳಿಯನ ಬಗ್ಗೆ ವಾಸ್ತವಿಕತೆಯನ್ನು ದೇಶಾಂಶ ಹುಡಗಿಯವರು ಬಿಚ್ಚಿಡುತ್ತಾರೆ.

'ನಾಯಿ ಗುಣದ ಅಳಿಯನಿಗೆ
ಅಡಿಗಿ ಮನೆ ತೋರಿಸಬಾರದು
ಪೂಜೆಯ ಮನೆ ತೋರಿಸಬಾರದು
ಹಿರಿ ಮನೆ ತೋರಿಸಬಾರದು
ಕೆರವಿನಿಂದ ಹೊಡೆದ ಹೊರಬಾಗಿಲಲ್ಲಿಕ್ಕಬೇಕೆಂದ
ದಿಗಂಬರ ಕರಿಬಸವೇಶ್ವರ'[೧೧೧]

ಸಹೋದರನನ್ನು ಕದನಕ್ಕೆ ಮೂಲವೆಂದು ಒಬ್ಬರು ಕರೆದರೆ ಇಲ್ಲಿಯ ಅಳಿಯನನ್ನು ನಾಯಿಗುಣದವನು ಎಂದು

ಇನ್ನೊಬ್ಬರು ಕರೆದಿದ್ದಾರೆ. ತಾವು ಕುಟುಂಬದಲ್ಲಿ ಕಂಡುಂಡಿರುವ ಅನುಭವಗಳನ್ನು ಇಂಥ ವಚನಗಳ ಮೂಲಕ ಕಟ್ಟಿಕೊಟ್ಟಿದ್ದಾರೆ. ಹಾಗೆಯೇ ಕುಟುಂಬದಲ್ಲಿ ಗೃಹಿಣಿಯಾಗಿ ಬರುವವಳು ಆ ಮನೆಯ 'ಮಾನಿನಿ' ಅವಳು ಹೇಗಿರಬೇಕೆಂಬುದನ್ನು ಜಗದೇವಿ ದುಬಲಗುಂಡಿಯವರು ಹೀಗೆ ಹೇಳುತ್ತಾರೆ.

'ಮನೆ ಇದು ದೇವರ ಮನೆಯಮ್ಮ
ಮನೆಯಲ್ಲಿ ಮನ ನೆಲೆಗೊಳ್ಳುವಂತೆ ಮಾಡಮ್ಮ
ಮಾನಿನಿ ನೀ ಹಸನ್ಮುಖಿಯಾಗಿರಮ್ಮ
ಒಳ ಹೊರಗು ಪರಿಶುದ್ಧಳಾಗಿರಮ್ಮ
ಉರಿ ಬರಲಿ, ಸಿರಿ ಬರಲಿ ಸಿಡುಕದೆ ಸಿಟ್ಟಾಗದೆ
ನಿಟ್ಟುಸಿರು ಬಿಡದೆ ಬಟ್ಟ ಬಯಲ ಬಸವನೆನೆ ಅನುದಿನ'[೧೧೨]

ಹಳ್ಳಿಯ ಗರತಿಯೊಬ್ಬಳು ಹೊಸದಾಗಿ ಗಂಡನ ಮನೆಗೆ ಹೋಗುವ ಮಗಳಿಗೆ ನೀತಿ ಪಾಠ ಹೇಳುತ್ತಿರುವ ರೂಪದಲ್ಲಿ ಈ ವಚನ ರಚನೆಯಾಗಿದೆ. ಮನೆಯ ಮಾನಿನಿಯಾದವಳು ಏನೇ ಬಂದರೂ ಸಿಡುಕದೆ, ಸಿಟ್ಟಾಗದೆ, ನಿಟ್ಟುಸಿರು ಬಿಡದೆ ಇರಬೇಕು ಎಂದು ತಿಳಿಸುತ್ತಿರುವುದು ಭಾರತೀಯ ಸಂಸ್ಕೃತಿಯ ಒಂದು ಅಂಗವಾಗಿದೆ ಎನ್ನಬಹುದು. ಆದರೆ ಗಂಜಿ ಕುಡಿದರೂ ಗಂಡನ ಮನಿಯೇ ಲೇಸೆಂದು ಬಾಳುವ ಹೆಣ್ಣಿಗೆ ಗಂಡನೆ ವಿಷವನಿಕ್ಕುವಾಗ ಯಾರ ಮನೆಗೆ ಹೋಗಬೇಕಯ್ಯಾ ಎಂದು ಕೇಳುವ ಶೊಭಾ ಔರಾದೆಯವರು ಗಂಡನ ದೌರ್ಜನ್ಯದಿಂದ ದೂರವಾಗಿ ಧೈರ್ಯದಿಂದ ಸ್ವತಂತ್ರವಾಗಿ ಬದುಕುತ್ತಿರುವ ಹೆಣ್ಣುಮಗಳ ಜೀವನವನ್ನು ತಾನು ಅನುಭವಿಸಿ ಹೀಗೆ ಅಭಿವ್ಯಕ್ತಿಸಿದ್ದಾರೆ.

ಅಂದು ನೀನು ಮಂಗಳಸೂತ್ರ ಕಸಿದುಕೊಂಡಿದ್ದರಿಂದ
ಇಂದು ನನಗೆ ಲಿಂಗಸೂತ್ರ ಗಟ್ಟಿಯಾಯಿತು
ಅಂದು ನೀನು ಬೆಂಡೋಲೆ ಕಸಿದುಕೊಂಡಿದ್ದರಿಂದ
ಇಂದು ನನ್ನ ಕಿವಿಗಳಿಗೆ ವಚನಗಳೇ ಶೃಮಗಾರವಾದವು
ಅಂದು ನೀನು ಕಾಲುಂಗರ ಕಸಿದುಕೊಂಡಿದ್ದರಿಂದ
ಇಂದು ನನ್ನ ಕಾಲಿಗೆ ಶರಣರ ಸಂಗಕ್ಕೆ ಹೋಗಲು ಸ್ವಾತಂತ್ರ್ಯ ಸಿಕ್ಕಿತು
ಜನರ ಕಣ್ಣಿಗೆ ನನ್ನಲ್ಲಿ ಯಾವ ಆಭರಣಗಳಿಲ್ಲದಿದ್ದರೂ
ಮನದ ಕಣ್ಣಿಗೆ ಸಕಲ ಸಂಪತ್ತು ನನ್ನಲ್ಲಿವೆ ನೋಡಾ
ಆಚಾರ ಪ್ರಿಯ ಬಸವಲಿಂಗ'[೧೧೩]

ಗಂಡ-ಹೆಂಡಿರ ಮಧ್ಯದ ಸಂಬಂಧ ಹದೆಗೆಟ್ಟು ಗಂಡ ಹೆಂಡತಿಯಿಂದ ಮಾಂಗಲ್ಯ ಸರ ಕಸಿದುಕೊಂಡು ನೀನು ನನ್ನ ಹೆಂಡತಿ ಅಲ್ಲ ಹೋಗು, ಎಂದಾಗ ಆ ಹೆಣ್ಣುಮಗಳು ಪಟ್ಟ ಪಾಡು ಹೇಗಿರಬಹುದು? ಆದರೆ ಈಗ ಹೆಣ್ಣುಮಕ್ಕಳು ತುಂಬಾ ಧೈರ್ಯದಿಂದ ಬದುಕುತ್ತಿರುವ ನೆಲೆಯೊಂದನ್ನು ಈ ವಚನ ತೋರಿಸುತ್ತದೆ. ಗಂಡನಿಂದ ಆಗಿರುವ ಅನ್ಯಾಯವನ್ನು ಒಂದೊಂದಾಗಿ ಬಿಡಿಸಿ ಹೇಳುವಂತಿರುವ ಇಲ್ಲಿಯ ಸಾಲುಗಳು, ಅದರೊಂದಿಗೆ ಅವಳು

ಬದುಕಿನಲ್ಲಿ ಗಟ್ಟಿಗೊಳ್ಳುತ್ತಾ ಬಂದು, ಈಗ ತಾನು ಹೇಗೆ ಸಜ್ಜನಳಾಗಿ, ಸುಸಂಸ್ಕೃತಳಾಗಿ ಬದುಕುತ್ತಿದ್ದೇನೆ ನೀನೇ ನೋಡು ಬಾ ಎಂದು, ಆ ಜಿಟ್ಟಗಂಡನಿಗೆ ಪಶ್ಚಾತ್ತಾಪವಾಗುವಂತೆ ಈ ವಚನದಲ್ಲಿ ನಿರೂಪಿಸಲಾಗಿದೆ. ಜನರಿಗಂಜಿ ಸಂಸಾರ ಮಾಡುವುದಕ್ಕಿಂತ ಮನಕ್ಕಂಜಿ ಸಂಸಾರಮಾಡಬೇಕೆಂಬುದನ್ನು ಅನೇಕ ವಚನಗಳು ಉಸುರುತ್ತವೆ.

ಕೌಟುಂಬಿಕ ಜೀವನದಲ್ಲಿ ಸಂಸಾರದಲ್ಲಿದ್ದುಕೊಂಡು ಅದರ ಸಾರ್ಥಕತೆಯನ್ನು ಪಡೆದುಕೊಳ್ಳಬೇಕೆಂಬ ಆಶೆಯ ನೆಲೆಯಲ್ಲಿ ಕೆಲವು ವಚನಗಳು ರಚನೆಯಾಗಿವೆ.

'ತಂದೆ ಯಾರೆಂಬುದು ತಿಳಿಯದಿರುವಾಗ
ತಾಯಿ ಯಾರೆಂಬುದು ತಿಳಿಯದಿರುವಾಗ
ನಿನ್ನ ಹುಡುಕುತ ಹೊರಡುವುದು
ಪ್ರಭು; ಮೂರ್ಖತನವಲ್ಲದೆ ಮತ್ತೇನು ಹೇಳಾ'[೧೧೪]

ಕುಟುಂಬದಲ್ಲಿ ಮೊದಲು ನಮ್ಮವರನ್ನು ಚನ್ನಾಗಿ ಅರಿತುಕೊಳ್ಳಬೇಕು. ಸಂಬಂಧಗಳನ್ನು ಸಂಸಾರದಲ್ಲಿ ಉಳಿಸಿಕೊಳ್ಳಬೇಕು. ಇದನ್ನು ಅರಿಯದಿದ್ದರೆ ದೇವನನ್ನು ಹುಡುಕುತ್ತ ಹೊರಡುವುದು ಮೂರ್ಖತನವಾಗುತ್ತದೆ ಎಂಬ ಮಾತು ಮನೆ, ಸಮಾಜವನ್ನು ಮೊದಲು ಅರಿಯಬೇಕೆಂಬುದನ್ನು ಹೇಳುವುದಿಲ್ಲವೇ?

'ಸಂಸಾರ'ವೆಂದರೆ ಸಾಮರಸ್ಯದಿಂದ ಬಾಳುವುದು. ಇದನ್ನು ಕುರಿತು ಸೂಗಯ್ಯ ಹಿರೇಮಠರು ಹೇಳುವ ವಚನವಿದು.

'ಕಳೆದುಹೋದ ವಸ್ತು ಪಡೆಯಲು
ಪ್ರಯತ್ನಿಸಬಹುದಯ್ಯಾ
ಬಂದುದ್ದನ್ನು ಆನಂದದಿಂದ ಅನುಭವಿಸಬೇಕಲ್ಲದೆ
ಬಾರದಕ್ಕೆ ದುಹಖಿಸಬಾರದಯ್ಯಾ
ಸಿಗದ ವಸ್ತುವಿಗೆ ಆಸೆಪಟ್ಟು ಇದ್ದ ಸುಖ
ಕಳೆದುಕೊಳ್ಳುವದು ಹಿತವಲ್ಲವಯ್ಯಾ
ಸುಖ ದುಃಖ ಸಮಾನವಾಗಿ ಸ್ವೀಕರಿಸಿ
ಸಾಮರಸ್ಯದಿಂದ ಬಾಳುವುದೇ
ಜೀವನದ ಪರಮಗುರಿ ನೋಡಾ'[೧೧೫]

ಸಂಸಾರದ ಗುರಿಯೇ ಜೀವನದ ಪರಮಗುರಿ, ಅದರಲ್ಲಿ ಆನಂದ ಬಹುಮುಖ್ಯವಾಗಿದೆ. ಸುಖ ದುಃಖಗಳನ್ನು ಸಮನಾಗಿ ಸ್ವೀಕರಿಸಿ, ಸಾಮರಸ್ಯದಿಂದ ಬಾಳಬೇಕು ಎನ್ನುವುದೇ ನಿಜ ಜೀವನದ ಗುರಿ ಎಂಬುದನ್ನು ಈ ವಚನ ಸಾರುತ್ತದೆ. ೧೨ನೇಯ ಶತಮಾನದ ವಚನಕಾರರು ಸಂಸಾರದಲ್ಲಿ ನಿರ್ಮೋಹ, ನಿರಹಂಕಾರ, ನಿರ್ಭಯ, ನಿರಪೇಕ್ಷ ಇರಬೇಕೆಂದು ಹೇಳಿದುದನ್ನು ಇಲ್ಲಿ ಸೂಗಯ್ಯನವರು ಬೇರೆ ಬೇರೆ ಶಬ್ದಗಳ ಮೂಲಕ ವಿವರಿಸಿರುವುದು ಎದ್ದು ಕಾಣುತ್ತದೆ. ಈ ಮಾತು ಕುಟುಂಬದ ಸಾರ್ಥಕತೆಯಿರುವುದು ಸಾಮಾಜಿಕತೆಯಲ್ಲಿ ಎಂಬುದನ್ನು ಹೇಳುತ್ತದೆ. ಕುಟುಂಬದ ಶ್ರೇಷ್ಠತೆಯನ್ನು ಎಚ್ಚರಿಕೆಯ ಸಂಸಾರ ಮಾಡುವುದರಲ್ಲಿದೆ. ಕೌಟುಂಬಿಕ ನೆಲೆಯನ್ನು ಎಚ್ಚರಿಕೆಯಿಂದ ರಕ್ಷಿಸಿಕೊಳ್ಳಬೇಕಾಗಿದೆ. ಹಾಗಾಗದಿದ್ದಲ್ಲಿ

'ಸಂಸಾರವೆಂದರೆ
ಗಂಡ, ಹೆಂಡತಿ, ಮಕ್ಕಳು, ಮನೆಯಲ್ಲ
ಆಸೆಯೆ, ಸಂಸಾರ ನೋಡಾ
ಅಜ್ಞಾನವೇ ಸಂಸಾರ ನೋಡಾ
ಪ್ರಭು; ಅಸತ್ಯವೇ ಸಂಸಾರ ನೋಡಾ'[೧೧೬]

ಎಂಬಂತಾಗುತ್ತದೆ ಈ ಸಂಸಾರ, ಕುಟುಂಬ, ಸಮಾಜಗಳ ಪರಿಕಲ್ಪನೆಯಲ್ಲಿ ಶರಣರ ಪ್ರೇರಣೆಯ ಹಿನ್ನೆಲೆಯಲ್ಲಿ ಹೆಚ್ಚಾಗಿ ರಚನೆಗೊಂಡಿರುವ ಆಧುನಿಕ ವಚನಗಳು ತಮ್ಮದೇ ಆದ ಧೋರಣೆಗಳಿಂದ ಕೂಡಿವೆ. ಇಲ್ಲಿ 'ಶರಣ– ಸತಿ–ಲಿಂಗ ಪತಿ' ಧೋರಣೆಯಿಲ್ಲ. ಸಂಸಾರದ ಬಗೆಗೆ ಅನಾದರಗಳೂ ಇಲ್ಲ; ಸನ್ಯಾಸಕ್ಕಿಂತ ಸಂಸಾರದ ಜೀವನಕ್ಕೆ ಬೆಂಬಲವಿತ್ತಿರುವ ಆಧುನಿಕ ವಚನಕಾರರು ಮಾನವನ ಎಲ್ಲ ಸಾಧನೆಗೂ ಸಂಸಾರಿಕ ಜೀವನ ಅಡ್ಡಬರಬಾರದೆಂಬ ನೆಲೆಯನ್ನು ನೀಡಿದ್ದಾರೆ. ಕುಟುಂಬದ ಸುಭದ್ರತೆ, ಸುದೀರ್ಘತೆ ಸಾಧಿತವಾಗಲು ಸತಿ–ಪತಿ ಭಾವ, ಸ್ತ್ರೀ ಗೌರವ ಹಾಗೂ ಸಾಮರಸ್ಯದ ಕುರಿತು ಚಿಂತನೆ ಮಾಡಿದ್ದು ತಿಳಿದುಬರುತ್ತದೆ. ಅವಿಭಕ್ತ ಕುಟುಂಬಗಳು ಇಂದು ಅಣು ಕುಟುಂಬಗಳಾಗುತ್ತಿದ್ದು ಅವುಗಳ ಚಿಂತನೆಯೂ ಅಲ್ಲಲ್ಲಿದೆ. ಆದರ್ಶ ಸಮಾಜದ ಮೂಲ ಘಟಕ ಕುಟುಂಬ. ಆ ಕುಟುಂಬದಲ್ಲಿಯ ಸಾಮರಸ್ಯ ಕೆಡದ ಹಿನ್ನೆಲೆಯಲ್ಲಿಯೇ ಇಲ್ಲಿಯ ವಚನಗಳ ನೆಲೆ ಇರುವುದನ್ನು ಗಮನಿಸಬಹುದು.

**೫–೨–೬ ಸಮಾಜವಾದ ಮತ್ತು ಬದುಕುವ ಕಲೆಯ ನೆಲೆ**

ಆದರ್ಶ ಬದುಕಿಗೆ ಅತಿ ಆಸೆ ಆಮಿಷಗಳು ವಿನಾಶಕಾರಿ. ಅವು ಮನುಷ್ಯನ ಬದುಕನ್ನು ಬರಡು ಮಾಡುವುದು ಸುಳ್ಳಲ್ಲ. ಅದಕ್ಕಾಗಿ ಸುಳ್ಳು, ಕುಟಿಲ, ಕುಹಕ, ಕ್ರೋಧ, ನಿಂದನೆ, ಮುಂತಾದ ಅವಗುಣಗಳನ್ನು ಕಳೆದುಕೊಳ್ಳುವ ನೆಲೆಯ ಚಿಂತನೆಗಳು ಇಲ್ಲಿ ಅಭಿವ್ಯಕ್ತಗೊಂಡಿವೆ. ಮನುಷ್ಯನಾದವನು ಪಂಚಶೀಲಗಳನ್ನು ಪಾಲಿಸಬೇಕೆಂದು ಈ ವಚನ ಹೇಳುತ್ತದೆ.

'ಪ್ರಾಣಿ ಹತ್ಯ, ಕಳ್ಳತನ, ವ್ಯಭಿಚಾರ, ಸುಳ್ಳು
ಮತ್ತು ಹೆಂಡ ಸೇವನೆ ಮಾಡದಿರುವುದೆ ಪಂಚಶೀಲಗಳು
ಇವು ಬೌದ್ಧ ಧರ್ಮದ ಪಂಚಸೋಪಾನದ
ಮೆಟ್ಟಿಲುಗಳೆಂದ ನಮ್ಮ ಯೋಗಿಶ್ವರ'[೧೧೭]

ಎನ್ನುವಲ್ಲಿ ಪಂಚ ವಿಷಯದಿ ಶಿಲುಕಿದ ಮನವು ಚಂಚಲವಾಗಿ ಆತನ ಬದುಕು ಹದಗೆಡುವುದಲ್ಲದೆ, ಬದುಕುವ ಒಳ್ಳೆಯ ಕಲೆಯೇ ಮಾಯವಾಗುತ್ತದೆ. ಸಮಾಜ ಸುಧಾರಣೆಯ ಮೊದಲ ಹಂತದಲ್ಲಿ ವ್ಯಕ್ತಿಯ, ಕುಟುಂಬದ ಸುಧಾರಣೆಯಾಗಬೇಕು ಆ ನೆಲೆಯಲ್ಲಿ ಇಲ್ಲಿ ಬುದ್ಧನ ತತ್ವಗಳನ್ನು ಈ ವಚನಕಾರ ತಿಳಿಸುತ್ತಿದ್ದಾನೆ. ಗುರು–ಹಿರಿಯರ ಮಾತನ್ನು ಕೇಳದೆ, ತಮ್ಮತನದಲ್ಲಿಯೇ ಮುಂದುವರೆಯುವ ಇಂದಿನ ಯುವಜನಾಂಗ ದಾರಿ ತಪ್ಪಿ ನಡೆಯುತ್ತಿರುವ ದೃಶ್ಯಗಳು ಅಪಾರವಾಗಿ ಕಾಣಸಿಗುತ್ತವೆ. ಇಂಥ ಸಂದರ್ಭಗಳ ಕಡೆಗೂ ನಮ್ಮ ವಚನಕಾರರು ದೃಷ್ಟಿ ಹಾಯಿಸಿರುವ ಪರಿ ಅನನ್ಯವಾಗಿದೆ.

'ಹಿರಿಯರ ಮಾತು ಕೇಳದವರು
ತಿರುಗಿ ಕೆಟ್ಟರು, ಕೆಟ್ಟ ಚಟಕ್ಕಂಟಿಕೊಂಡರು

'ಬೈದು ಹೇಳುವವರು ಬುದ್ಧಿಗಾಗಿ
ನಕ್ಕು ಹೇಳುವವರು ಕೆಡಕಿಗಾಗಿ'
ಎಂಬುದರ ಮರ್ಮವನರಿಯದೇ
ಮತ್ತೆ ತಮ್ಮ ಕೆಲಸದಲ್ಲಿ ಲಜ್ಜೆಗೆಟ್ಟು
ಮುಂದುವರೆಯುವರು. ಇದ ಕಂಡು
ಇವರಿಗೆ ನೈತಿಕ ಮೌಲ್ಯ
ಎಂದು ಬರುವುದೋ? ಎಂದು
ಕಾಯುತಿಹರು ನೋಡಾ ಆ ಹಿರಿಯರು
ನಿಜಗುರು ಮಹಾಂತಲಿಂಗ'[೧೧೮]

ನಿರುದ್ಯೋಗಿಗಳಾಗಿ, ಹಿರಿಯರ ಮಾತು ಕೇಳದೆ ತಿರುತಿರುಗಿ ಕೆಟ್ಟವರು, ಕೆಟ್ಟ ಚಟಕ್ಕೆ ಬಿದ್ದವರಿಂದ ಮನೆತನವಾಗಲಿ, ಸಮಾಜವಾಗಲಿ ಕೆಡುವುದನ್ನು ತಿಳಿಸುವ ಈ ವಚನ, ಲಜ್ಜೆಗೇಡಿ ಕೆಲಸ ಮಾಡುತ್ತಿರುವ ಇಂಥವರಿಗೆ ನೈತಿಕ ಮೌಲ್ಯ ಯಾವಾಗ ಬರುವುದೆಂದು ಕೆಲವರು ಹಿರಿಯರು ಕಾಯುತ್ತಿರುವುದನ್ನು ತಿಳಿಸುತ್ತದೆ. ಸ್ವಾತಂತ್ರ್ಯವಿದೆ ಎಂದು ಸ್ವೇಚಾಚಾರದಲ್ಲಿ ಮುಳುಗಿರುವ ಯುವಕರನ್ನು ಇಂದೂ ದಾರಿಗೆ ತರುವುದು ದುಸ್ತರವಾಗಿರುವ ನೆಲೆ ಇಲ್ಲಿದೆ. ಆದರೂ ನೀತಿಗೆಟ್ಟವರ ಹಿಂದೆ ಹೋಗಬಾರದು.

'ನೀತಿಗೆಟ್ಟವರ ಹಿಂದೆ
ಕೋತಿಯಂಗೆ ಕುಣಿದರೆ
ಮುಂದೆ ಲತ್ತೆ ತಿನ್ನೋದು
ಗ್ಯಾರಂಟಿ ಎಂದ ಗುರುಸಿದ್ಧಾರೂಢ'[೧೧೯]

ನೀತಿಗೆಟ್ಟವರು ಒಮ್ಮಿಲ್ಲಾ ಒಮ್ಮೆ ಪೆಟ್ಟು ತಿನ್ನುತ್ತಾರೆ. ಅವರಿಗಿಂತ ಮೊದಲು ಅವರ ಹಿಂದೆ ಕುಣಿಯುವವರೂ ಒದೆ ತಿನ್ನುತ್ತಾರೆಂದು ಮುಂದಿನ ಆಗುಹೋಗುಗಳನ್ನು ತಿಳಿಸುತ್ತಾರೆ. ಇಲ್ಲಿ ಸಕಲರನ್ನು ಸಮಾನತೆಯ ದೃಷ್ಟಿಯಲ್ಲಿ ನೋಡಬೇಕಾಗಿರುವ ಈ ಸಮಾಜದಲ್ಲಿ ಭಾತ್ರತ್ವ, ಸ್ವಾತಂತ್ರ್ಯ, ಒಳ್ಳೆಯ ನಡತೆ ಮುಖ್ಯವಾಗಿರಬೇಕೆಂಬ ನೆಲೆಯಲ್ಲಿ ಹಲವು ವಚನ ರಚನೆಗಳಿವೆ.

'ಭಕ್ತನಾದರೇನಂತೆ ಮೂಢನಾಗಬಾರದಯ್ಯ
ಧರ್ಮದಲ್ಲಿ ನಂಬಿಕೆಯಿಟ್ಟರೇನಂತೆ ಮತಾಂಧನಾಗಬಾರದಯ್ಯ'
ಎನ್ನುವಲ್ಲಿಯೂ ಹಾಗೆಯೇ ಮುಂದುವರೆದು
ಕಿಡಿ ಕಿಡಿ ಕೂಡಿ ಬೆಂಕಿ ಬರಬಹುದಲ್ಲದೆ
ತಂಗಾಳಿ ಬೀಸಬಹುದೇನಯ್ಯಾ?
ದ್ವೇಷದಿಂದ – ದ್ವೇಷ ಹುಟ್ಟಬಹುದಲ್ಲದೆ
ಪ್ರೀತಿ ಹುಟ್ಟಬಹುದೇನಯ್ಯಾ?
ಸೇಡಿನಿಂದ ಸೇಡು ಬೆಳೆಯಬಹುದಲ್ಲದೆ
ಶಾಂತಿ ಲಬಿಸುವುದೇನಯ್ಯಾ?

ಸಹನೆ, ಸ್ನೇಹವ ಉಳಿಸಿ. ಪ್ರೀತಿ ಪ್ರೇಮವ ಬೆಳಿಸಿ

ಸಮತೆಯ ದಾರಿ ತೋರಯ್ಯ-ಸಬರದ ಬಸವ'[೧೨೦]

ಎಂದು ಹೇಳಿರುವಲ್ಲಿ ಇಂದಿನ ಬದುಕುವ ಕಲೆಯನ್ನು ತಿಳಿಸಲಾಗಿದೆ. ಸಮಾಜವಾದ ಎಂದರೆ ಕೂಡಿ ಬದುಕುವುದು, ಪ್ರೀತಿಯಿಂದ ಬಾಳುವುದು, ಸ್ನೇಹದಿಂದ ಇರುವುದು ಸಹನೆ, ಸಹಬಾಳ್ವೆಯನ್ನು ಉಳಿಸಿಕೊಂಡು ಸಮತೆಯ ದಾರಿಯಲ್ಲಿ ಸಾಗುವುದಾಗಿದೆ. ಈ ನೆಲೆಯಲ್ಲಿ ಶೋಷಣೆ ಪರಾವಲಂಬನೆಯನ್ನು ತೊಡೆದು ಹಾಕಿ ಸರ್ವ ಸಮಾನತೆಯ ಮೇಲೆ ಸಮಾಜ ಕಟ್ಟುವುದಾಗಿದೆ. 'ಮನೆಗೆ ಬಂದವರನ್ನು ಮನಗೊಟ್ಟು ಮಾತಾಡಿಸಬೇಕು. ಬಂದವರ ಮನಸ್ಸನ್ನು ತಣಿಸಬೇಕು ಅವನೇ ನಿಜವಾದ ಗುಣವಂತನಾಗುತ್ತಾನೆ' ಎನ್ನುತ್ತಾರೆ ಸಿದ್ಧರಾಮ ಪೋಲೀಸ ಪಾಟೀಲರು.'[೧೨೧]

ಹಳ್ಳಿಯ ಬದುಕು ಸಿಟಿಯ ಬದಕು ಎರಡೂ ದಾರಿ ತಪ್ಪುತ್ತಿವೆ. ಎಲ್ಲಕಡೆಗೂ ಮಾನವತೆ ಮರೆಯಾಗುತ್ತಿರುವ ಕಳವಳವು ಇಲ್ಲಿ ಕಾಣುತ್ತದೆ.

'ಹಳ್ಳಿಗೆ ಸಿಟಿ ಫ್ಯಾಷನ್
ಸಿಟಿಗೆ ಹಳ್ಳಿಯೂ ಫ್ಯಾಷನ್
ಒಳಹೊಕ್ಕರೆ ಹುಲಿ ನರಿಗಳುಂಟು
ಕತ್ತಿಗೆ ಸವರಿದ ಜೇನುಂಟು
ಬರ್ಬರತೆ, ಭೀಕರತೆಯುಂಟು
ಪ್ರಭು ನೋಟ, ಆಟ-ಕೂಟಗಳಲಿಲ್ಲ ನೋಡಾ'[೧೨೨]

ಇಂದಿನ ಹಳ್ಳಿ ಹಾಗೂ ಸಿಟಿಯಲ್ಲಿ ತುಂಬಿಕೊಂಡಿರುವ ಕ್ರೂರತನ, ಮೋಸ, ವಂಚನೆ, ಭೀಕರತೆಯ ಹಿಂಸಾಚಾರ, ಅನ್ಯಾಯ, ಅತ್ಯಾಚಾರಗಳನ್ನೆಲ್ಲ ಈ ವಚನ ಸಾಕ್ಷಿಗೊಳಿಸುತ್ತದೆ. ಇದೆಲ್ಲ ದೂರವಾಗುವುದು ಯಾವಾಗ? ಇಂದಿನ ಅವೈಜ್ಞಾನಿಕ ಆಚರಣೆಗಳು, ಜಾತಿಯಭೂತ, ವರ್ಗ ವರ್ಣ-ಲಿಂಗ ಭೇದ ಮೂಢನಂಬಿಕೆಯ ಅಟ್ಟಹಾಸಗಳನ್ನೆಲ್ಲ ದೂರಗೊಳಿಸುವ ಚಿಂತನೆ ಆಧುನಿಕ ವಚನಗಳಲ್ಲಿದೆ. 'ಅತಿ ಶೂರತನ, ಅತಿ ಬುದ್ಧಿವಂತಿಕೆ, ಅತಿ ಜಾಣತನ, ಅತಿ ನಂಬಿಕೆ, ಅತಿ ದಡ್ಡತನ, ಅತಿ ದಾನ ಇವೆಲ್ಲವುಗಳಲ್ಲಿ ಹಿತ-ಮಿತವಾಗಬೇಕು. ಆವಾಗ ಈ ಜೀವನ ಈ ಬದುಕು ಮನುಷ್ಯನನ್ನು ಮನುಷ್ಯನನ್ನಾಗಿಸುತ್ತದೆ. ಸಾಮಾಜಿಕ ಬದುಕಿಗೆ ಒಂದು ಬೆಲೆಬರುತ್ತದೆ ಎಂಬ ಆಸೆಯದ ಅನೇಕ ವಚನಗಳು ಈ ನೆಲೆಯಲ್ಲಿ ಅಭಿವ್ಯಕ್ತಗೊಂಡಿವೆ ಎಂಬುದನ್ನಿಲ್ಲಿ ಗಮನಿಸಬಹುದು.

**೫-೩ ಧಾರ್ಮಿಕ ನೆಲೆ**

ಬದುಕಿನ

ಎಲ್ಲ ರಂಗಗಳಲ್ಲಿ ಸಾಮರಸ್ಯ ಕಾಣುವ ದೃಷ್ಟಿ ೧೨ನೇಯ ಶತಮಾನದ ವಚನಕಾರರದಾಗಿತ್ತು. ಅವರು ಇಹ ಪರ, ಭಕ್ತಿ ಜ್ಞಾನ, ಜ್ಞಾನ-ಕ್ರಿಯೆ, ಆಚಾರ-ವಿಚಾರ, ನಡೆ-ನುಡಿ, ಅರಿವು-ಅನುಭಾವ ಈ ಮೊದಲಾದ ದ್ವಂದ್ವಗಳಲ್ಲಿ ಸಮಾನತೆಯನ್ನು ಸಾಧಿಸಿರುವ ಮನೋಭಾವ ಎದ್ದು ಕಾಣುತ್ತದೆ. ಇಂಥ ಸಮನ್ವಯತೆಯನ್ನು ಧಾರ್ಮಿಕವಾಗಿಯೂ ಕಾಣಲು ಆಧುನಿಕ ವಚನಕಾರರು ಚಿಂತಿಸಿದ್ದನ್ನು ಗಮನಿಸಬಹುದು.

**ಧರ್ಮ**

ಶರಣರ ಕಾಲದಂತೆ ಇಂದಿನ ಸಾಮಾಜಿಕ ಜೀವನವು ಅತ್ಯಂತ ಸಂಕೀರ್ಣವಾಗಿದ್ದರೂ ಇಲ್ಲಿ ಧರ್ಮವೇ ಪ್ರಧಾನವಾಗಿಲ್ಲ. ಧರ್ಮ ಎಂಬುದನ್ನು ಇಂದು ಮತಧರ್ಮಗಳ ಹಿನ್ನೆಲೆಯಲ್ಲಿ ಪರಿಗಣಿಸದೆ ಅದನ್ನು ವಿಶಾಲವಾದ ಅರ್ಥದಲ್ಲಿ ಮಾನವನ ಮೌಲಿಕ ನಡೆಯಾಗಿ ಗುರುತಿಸಲಾಗಿದ್ದು, ಸಾಮಾಜಿಕ ಸಾಮರಸ್ಯದ ಹಿನ್ನೆಲೆಯಲ್ಲಿ ಇಂದಿನ ಧಾರ್ಮಿಕ ನೆಲೆಗಳನ್ನು ಆಧುನಿಕ ವಚನಕಾರರು ಹೇಗೆ ಕಂಡಿರಿಸಿದ್ದಾರೆಂಬುದನ್ನು ಇಲ್ಲಿ ಅರಿಯಬಹುದಾಗಿದೆ.

ಆದರೂ ೧೨ನೇಯ ಶತಮಾನದ ವಚನಕಾರರ ಕಾಲದ ಧಾರ್ಮಿಕ ಪರಿಸ್ಥಿತಿಯಂತೆ, ಇಂದೂ ಸಹ ಧರ್ಮ–ದೇವರು–ದೇವಾಲಯಗಳು, ಪುರೋಹಿತ–ಪೂಜಾರಿ, ಊರ ಪ್ರಮುಖರು, ಸಂಘ ಸಂಸ್ಥೆಗಳ ಕಪಿಮುಷ್ಠಿಯಲ್ಲಿವೆ. ಜನಸಾಮಾನ್ಯರ ಮೇಲೆ ಅಂಧಾಚರಣೆ, ಮೂಢ ನಂಬಿಕೆ, ಸಂಪ್ರದಾಯಗಳನ್ನು, ಮಾಧ್ಯಮಗಳ ಮೂಲಕ ಹೇರಿ ಸ್ವಾರ್ಥಿಗಳು ತಮ್ಮ ಹೊಟ್ಟೆ ಹೊರೆಯುವುದಷ್ಟೇ ಅಲ್ಲ; ಕೊಬ್ಬಿದ ಶ್ರೀಮಂತರಾಗಿ ಕುಳಿತಿದ್ದಾರೆ. ಭಾರತದ ಪ್ರಾಚೀನ ಧರ್ಮ, ಮಾರ್ಗದ ಹಾದಿಯಲ್ಲಿ ಪಯಣಿಸುತ್ತಿರುವುದನ್ನು ನಮ್ಮ ಆಧುನಿಕ ವಚನಕಾರರು ಗಮನಿಸಿದ್ದಾರೆ. ಹೀಗಾಗಿ ಇಂದು ಧಾರ್ಮಿಕವಾಗಿ ವ್ಯಕ್ತಿ ನಡೆಯಬೇಕಾಗಿರುವ ಮಾರ್ಗವನ್ನು ಹೇಳುವ ರೀತಿ ಇಲ್ಲಿ ಮನಮುಟ್ಟುವಂತಿದೆ.

ಮನವೆಂಬ ಮಂದಿರದಲ್ಲಿ
ಆಚಾರವೆಂಬ ಹಣತೆಯನಿಕ್ಕಿ
ವಿಚಾರವೆಂಬ ತೈಲವನೆರೆದು
ನೀತಿಯೆಂಬ ಬತ್ತಿಯ ಹೊಸೆದು
ನ್ಯಾಯವೆಂಬ ಬೆಂಕಿಯ ಕಡ್ಡಿಯಿಂದ
ಸತ್ಯವೆಂಬ ಜ್ಯೋತಿಯ ಹಚ್ಚಿ
ದುರಾಚಾರವೆಂಬ ಮಂಪರು ಬರದಂತೆ
ನಿಷ್ಠೆಯಿಂದ ಮನುಕುಲವ ಬೆಳಗುವಂತೆ
ಮಾಡಯ್ಯ ವಿಶಾಲಪ್ರಿಯ ಚನ್ನಬಸವ[೧೨೩]

ಮನುಷ್ಯನ ಧಾರ್ಮಿಕ ನೆಲೆ ಮನುಕುಲ ಬೆಳಗುವಂತಿರಬೇಕು ಎಂಬ ಸಂದೇಶ ಈ ವಚನದಲ್ಲಿದೆ. ಮಾನವನ ಧರ್ಮದ ನಡೆಯೆಂದರೆ ಸತ್ಯವೆಂಬ ಜ್ಯೋತಿಯ ಬೆಳಕು ಹಚ್ಚುವುದು. ಆ ಜ್ಯೋತಿಗೊಂದು ದುರಾಚಾರದ ಕುಡಿ ಬರದಂತೆ ನೋಡಿಕೊಳ್ಳುವುದಾಗಿದೆ. ಅದಕ್ಕಾಗಿ ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲಿ ಆಚಾರ, ವಿಚಾರ, ನೀತಿ, ನ್ಯಾಯ, ನಿಷ್ಠೆಗಳಂತಹ ಮೌಲ್ಯಗಳು ಆಚರಣೆಯಲ್ಲಿರಬೇಕೆಂಬುದನ್ನು ಈ ವಚನ ನಿವೇದಿಸುತ್ತದೆ. ಮನುಷ್ಯ ಈ ನಡೆಯನ್ನು ರೂಪಿಸಿಕೊಳ್ಳಬೇಕಾದರೆ ಎಂದೂ ಜಾತಿ–ವಿಜಾತಿ ಎಂದು ಎಣಿಸಬಾರದು, ಮೇಲು ಕೀಳುಗಳೆಂಬ ಭಾವನೆ ಇರಬಾರದು, ಕುಲ–ಕುಲವೆಂದು ಹೊಡೆದಾಡಬಾರದು, ಇರುವುದೊಂದು ಕುಲ, ಅದು ಮನುಜಕುಲ,

ಧರ್ಮ-ಧರ್ಮವೆಂದು ಕಾದಾಡಬಾರದು ಇರುವುದೊಂದೇ ಧರ್ಮ ಅದು ಮಾನವ ಧರ್ಮ ಎಂಬುದನ್ನು ಅರಿತು ನಡೆಯಬೇಕೆಂಬಂಥ ವಿಚಾರಗಳನ್ನು ಇವರ ವಚನಗಳಲ್ಲಿ ಕಾಣಬಹುದು. ಆದರೆ 'ಧರ್ಮ' ಎಂದರೇನು? ಎಂಬುದನ್ನು ಮಹಾದೇವ ಬಡಿಗೇರ ವ್ಯಾಖ್ಯಾನಿಸುವ ರೀತಿ ಹೀಗಿದೆ.

'ಧರ್ಮವೆಂಬುದೊಂದು ಕಲ್ಪನೆ
ದೇವರೆಂಬುದೊಂದು ಕಲ್ಪನೆ
ಒಂದು ಎರಡಾದದ್ದು, ಎರಡು ನೂರಾದದ್ದು ಮಹಾಕಲ್ಪನೆ
ಪ್ರಭು; ಓತಿಕಾಟಿಗೆ ಬೇಲಿಯೇ ಸಾಕ್ಷಿ
ಸಿಕ್ಕಲಿಲ್ಲ ! ದಕ್ಕಲಿಲ್ಲ'[೧೨೪]

ಧರ್ಮವನ್ನು ತುಂಬಾ ನೈಜ ನೆಲೆಯಲ್ಲಿ ಅರ್ಥೈಸುವ ವಚನಕಾರರು ಅದನ್ನು ಕಲ್ಪನೆ ಎನ್ನುತ್ತಾರೆ. ದೇವರೆಂಬುದು ಒಂದು ಕಲ್ಪನೆ ಎಂದು ಹೇಳಿ, ಒಂದು ಇದ್ದುದ್ದು, ಎರಡಾದದ್ದು, ಎರಡು ಇದ್ದದ್ದು, ಇಂದು ನೂರೆಂಟು ನಾಮದಲ್ಲಿ ಹೆಸರಾಗಿದೆ ಎಂದು, ಇದೊಂದು ಮಹಾಕಲ್ಪನೆ ಎನ್ನುತ್ತಾರೆ. ಆಸ್ತಿಕವಾಗಿರುವ ಈ ವಿಷಯವನ್ನು ಕುರಿತು ಹೇಳಿದ್ದು ನೋಡಿ ಇವನೊಬ್ಬ 'ನಾಸ್ತಿಕ' ಎನ್ನಬಹುದಾದರೂ ಪರವಾಗಿಲ್ಲ. ಅವರು ಹೇಳುವ ಆ ದೇವರು, ಧರ್ಮ ಕುರಿತ ನೂರೆಂಟು ಕಲ್ಪನೆಯ ಹೇಳಿಕೆ-ದಾಖಲೆಗಳನ್ನು ಓತಿಕಾಟಿಗೆ ಬೇಲಿಯೇ ಸಾಕ್ಷಿ ಎಂದು ಯಾಮಾರಿಸುತ್ತಾರೆ. ಇದಕ್ಕೆ ಕಾರಣ ಅವರೇ ಹೇಳುವಂತೆ ದೇವರು ಯಾರಿಗೂ ಸಿಕ್ಕಲಿಲ್ಲ, ಧರ್ಮದಕ್ಕಲಿಲ್ಲ ಎಂಬುದರ ಹಿಂದಿರುವ ವೈಚಾರಿಕ ಸತ್ಯವನ್ನು ಅರಿಯಬಹುದು.

'ಧರ್ಮ'ದ ದಾರಿಗಳು ನೂರಾರು. ಅವು ಒಂದರೊಳಗೊಂದು ಹೆಣೆದುಕೊಂಡಿವೆ. ಮತ್ತೆ ಮೂರು ದಾರಿಗಳನ್ನು ಕೆಲವರು ಹೇಳುತ್ತಾರೆ. ಆದರೆ ಅವು ಕೂಡುವುದೆಲ್ಲಿಯೆಂದು ಯಾರಿಗೂ ತಿಳಿದಿಲ್ಲ. ''ಸಂಗಯ್ಯನೊಳಗೊಬ್ಬ ನಿಂಗಯ್ಯ ಕುಳಿತಾನು, ನಿಂಗಯ್ಯ ಎನಗೊಂದು ಅಂಗೈಯ ಕೊಟ್ಟಾನು ಪ್ರಭು; ನೋಡಿರೆ ಮೂರು ದಾರಿಗಳ ಕೂಟ, ನೂರಾರು ದಾರಿಗಳ ಆಟ' ಇಲ್ಲಿದೆ ಎಂಬುದನ್ನು ಅವರೇ ಹೇಳುತ್ತಾರೆ. ಆದರೆ ಎಂಜಿ. ದೇಶಪಾಂಡೆ ಅವರು ಈ ಧರ್ಮದ ಅರ್ಥದ ಗೊಡವೆಗೆ ಹೋಗದೆ ಸಾಮರಸ್ಯದ ಬಗ್ಗೆ ಬರೆಯುತ್ತಾರೆ.

'ಎಲ್ಲ ಧರ್ಮಗಳು
ನಮಗೆ ಬಾಳನ್ನು ಕಲಿಸಿದವು
ಆದರೆ ನಮ್ಮ ಸ್ವಾರ್ಥ ಬಾಳಿಗೆ, ನಾವು
ಎಲ್ಲ ಧರ್ಮ ಹಾಳುಗೆಡುಹಿದೆವು'[೧೩೫]

ಎನ್ನುತ್ತಾರೆ. ಭಾರತದ ಎಲ್ಲ ಧರ್ಮಗಳ ಗುರಿ ಒಂದೇ. ಅವು ಮಾನವನ ಬದುಕಿಗೆ ಒಳ್ಳೆಯದನ್ನು ಬಯಸುವುದಾಗಿದೆ. ಆದರೆ ಇಂದಿನ ಕಾಲದಲ್ಲಿ ತಮ್ಮ ಸ್ವಾರ್ಥ ಭಾವನೆಯಿಂದ ಧರ್ಮಾಂಧತೆ ತುಂಬಿಕೊಂಡು ನಾವು 'ಧರ್ಮ' ಎಂಬುದನ್ನೇ ಹಾಳುಮಾಡಿರುವುದಾಗಿ ಹೇಳುತ್ತಾರೆ. ಧರ್ಮದ ನಡೆ ಎಂದರೆ ಸರಳ ಬದುಕು.

''ಸರಳ ಬದುಕಿನಲಿ
ಸರಳ ನಡೆನುಡಿಯಿರಲಿ
ಅಂಕು ಡೊಂಕಿನ ಹಾದಿ ಹಾವಿಂಗೆ
ಸತ್ಯದ ಸರಳತೆಯು ಶಿವನಿಗೆ ಪ್ರಿಯವೆಂದ

ಶರಣ ಕಿರಣ ಪ್ರಿಯ ಮಾಣಿಕನು'[೧೨೬]

ಸರಳ ಬದುಕು ಸರಳ ನಡೆ, ಸರಳ ನುಡಿ, ಸತ್ಯದ ದಾರಿ, ಶಿವನಿಗೆ ಪ್ರಿಯವಾಗಿರುವುದರಿಂದ ಇದೇ ನಿಜಧರ್ಮದ ನಡೆ ಎಂಬ ವಿವೇಚನೆ ಇಲ್ಲಿದೆ. ಅಧರ್ಮ ಯಾವುದು? ಎಂಬುದರ ಚಿಂತನೆಯನ್ನು ಇಲ್ಲಿ ಕಾಣಬಹುದು. ಹಸಿಯದವನಿಗೆ ಅನ್ನವನು ಇಕ್ಕುವುದು ಅಧರ್ಮ, ಮೂರ್ಖನಿಗೆ ವಿದ್ಯೆಯನಿಕ್ಕುವುದು ಅಧರ್ಮ, ಕೇಳದ ವ್ಯಕ್ತಿಗೆ ಸಲಹೆ-ಸೂಚನೆಗಳನು ಕೊಡುವುದು ಅಧರ್ಮ. ಗುರಿಯಿಲ್ಲದವನಿಗೆ ದಾರಿಯನು ತೋರುವುದು ಅಧರ್ಮ, ಅಧರ್ಮ. ಧರ್ಮ ಮಾಡಿಕೊಂಡವರಿಗೆ ಹೇಳುವುದು ಅಧರ್ಮವೆನ್ನುತ್ತಾರೆ. ಡಾ. ನಾಗೇಂದ್ರ ಮಸೂತಿಯವರು.[೧೨೭] ಇಂಥವರನ್ನು ಧರ್ಮಲಂಡರೆನ್ನುವುದನ್ನೂ ಇನ್ನೊಂದು ಆಧುನಿಕ ವಚನದಲ್ಲಿ ಗಮನಿಸಬಹುದು.

'ನೀತಿ ನೇಮದಿ ಅಡ್ಡಗೋಡೆ ಕಟ್ಟುವವ
ಭಿತಿಯಿಲ್ಲದೆ ಊರ ಲೂಟಿ ಮಾಡುವವ
ಪ್ರೀತಿಯ ಹೆಸರಲ್ಲಿ ಹೆಣ್ಣಿಗೆ ಮೋಸ ಮಾಡುವವ
ಜಾತಿಯ ಬೆಂಕಿ ಹಚ್ಚಿ ಕೈ-ಮೈ ಕಾಸಿಕೊಳ್ಳುವವ
ಯಾತಕ್ಕೂ ಹೇಸದ ಜಗಭಂಡ, ಧರ್ಮಲಂಡನೋಡಾ'[೧೨೮]

ನೀತಿ ನೇಮಗಳೆಂಬ ಗೋಡೆ ಕಟ್ಟಿ ತನ್ನ ಬೇಳೆ ಬೇಯಸಿಕೊಳ್ಳುವವರು ದೇವನ ಹೆದರಿಕೆಯಿಲ್ಲದೆ ಊರನ್ನೇ ಕೊಳ್ಳೆ ಹೊಡೆಯುವವರು, ಪ್ರೀತಿಯ ಹೆಸರಲ್ಲಿ ಹೆಣ್ಣಿಗೆ ಮೋಸ ಬಗೆಯುವವರು, ಜಾತಿಯ ಹೆಸರಲ್ಲಿ ಊರಲ್ಲಿ ಬೆಂಕಿ ಹಚ್ಚಿ, ತಾವು ಮೋಜು ನೋಡುವವರು ಧರ್ಮಲಂಡರು ಎನ್ನುವಲ್ಲಿ, ಅವರ ಅಧರ್ಮ ಕಾರ್ಯಗಳ ಪಟ್ಟಿಯನ್ನು ಇಲ್ಲಿ ವಚನಕಾರರು ನೀಡಿದ್ದಾರೆ. ಧರ್ಮದ ಹೆಸರಿನಲ್ಲಿಯೇ ನಡೆಯುತ್ತಿರುವ ಈ ಕೃತ್ಯಗಳನ್ನು ಆಧುನಿಕ ವಚನಕಾರರು ನಿರ್ಭಿತಿಯಿಂದ ಬಯಲಿಗೆಳೆಯುತ್ತಿರುವುದನ್ನು ಇಲ್ಲಿ ಮನಗಾಣಬಹುದು. ಇಂಥವರನ್ನು ಕುರಿತು ಸೂಗಯ್ಯ ಹಿರೇಮಠರು 'ಧರ್ಮದ ಬಗ್ಗೆ ಗಂಟೆಗಟ್ಟಲೆ ಮಾತಾಡುವವರು ಧರ್ಮದ ನೀತಿ ಪಾಲಿಸರು ನೋಡಾ' ಎನ್ನುತ್ತಾರೆ. ಅವರು ಮುಂದುವರೆದು ಹೇಳುತ್ತಾ –

'ಜಾತ್ಯಾತೀತ ಸಮಾಜದ ಬಗ್ಗೆ ಪಾಠ ಹೇಳುವವರು
ಜಾತಿ ನೋಡಿ ಸಂಬಂಧ ಬೆಳೆಸುವವರಯ್ಯಾ
ಮಾತಿನಂತೆ ಮನವಿಲ್ಲದೆ ನ್ಯಾಯಕ್ಕೆ ನಿಷ್ಠರಾಗದ
ತತ್ವಭ್ರಷ್ಟರಯ್ಯಾ
ಜನ ಪ್ರಜ್ಞಾವಂತರಾಗಿ ಬುದ್ಧಿ ಕಲಿಸಿದಾಗಲೆ
ದೇಶಕ್ಕೆ ಒಳ್ಳೆಯದಾಗುವುದಯ್ಯಾ'[೧೨೯] ಎಂದಿದ್ದಾರೆ.

'ಧರ್ಮ' ಎಂಬುದನ್ನು ಕೇವಲ ಬಾಯಿ ಮಾತಿಗಾಗಿ ಬಳಸಿಕೊಂಡು ಅದನ್ನು ಅರ್ಥಮಾಡಿಕೊಳ್ಳದೆ ನಡೆವವರನ್ನು ತತ್ವಭ್ರಷ್ಟರು ಎಂದಿರುವುದನ್ನು ಗಮನಿಸಬಹುದು. ಧರ್ಮ ಮಾರ್ಗಾವಲಂಬಿಗಳು ಹೇಗಿರಬೇಕು? ಎಂಬುದನ್ನು ವಿಶ್ವನಾಥ ಬಿರಾದಾರ ಅವರು –

'ಹಮ್ಮು ಬಿಮ್ಮುಗಳೇಕೆ? ಅಹಂಕಾರ ನಿನಗೇಕೆ?
ಜಾತಿ ಪಾತಿಯ ಗೋಜು ನಿನಗೇಕೆ ಹೇಮರುಳೆ

ಪ್ರೀತಿಯೊಂದಿದ್ದರೆ ಸಾಕು ಗುರು ಚರಣದಲ್ಲಿ'[೧೩೦]

ಎನ್ನುತ್ತಾರೆ. ಪ್ರೀತಿಯೇ ಧರ್ಮದ ಜೀವಾಳ. ಬಸವಣ್ಣನವರು 'ದಯೆಯೇ ಧರ್ಮದ ಮೂಲ ಎಂದಿರುವರು. ಆ ದಯೆಯೇ ಪ್ರೀತಿ ಎಂಬುದು ಗಮನೀಯ ಅಂಶ. ಇದನ್ನೇ ಡಾ. ಸಬರದ ಅವರು

ಧರ್ಮ ಧರ್ಮವೆಂದು ದಿಕ್ಕೆಟ್ಟಾಗ
ಧರ್ಮ ದಯೆಯಾಗಿತ್ತಯ್ಯಾ
ಬಸವಣ್ಣನ ಕಾಲದಲ್ಲಿ ।
ಕರ್ಮ ಕರ್ಮವೆಂದು ಪರಿತಪಿಸುತ್ತಿದ್ದಾಗ
ಕರ್ಮ ಕ್ರಿಯೆಯಾಗಿತ್ತಯ್ಯ
ಸಿದ್ಧರಾಮನ ಸಂದರ್ಭದಲ್ಲಿ ।
ಧರ್ಮ ಕರ್ಮಗಳ ಕಗ್ಗಂಟು ಬಿಡಿಸಿ
ದಾಸೋಹದ ದೀಪ ಹಚ್ಚಿಟ್ಟ
ಶಿವಶರಣರ ಬೆಳಕೀಗ
ಎಲ್ಲಿ ಹೋಯಿತಯ್ಯಾ ಸಬರದ ಬಸವ'[೧೩೧]

ಧರ್ಮದ ಅಧರ್ಮದ ಚರ್ಚೆನಡೆದು, ಅದಕ್ಕೆ ಅರ್ಥೈಸಿದ ಬಸವಣ್ಣನವರು ಧರ್ಮವನ್ನು 'ದಯೆ' ಎಂದು ವ್ಯಾಖ್ಯಾನ್ನಿಸಿದರು. ಹಾಗೆಯೇ ಕರ್ಮವೆಂಬುದು ಸಿದ್ಧರಾಮನ ಸಂದರ್ಭದಲ್ಲಿ ಕ್ರಿಯೆಯಾಯಿತು. ಈ ಧರ್ಮ–ಕರ್ಮಗಳ ಕಗ್ಗಂಟನ್ನು ಬಿಡಿಸಿದ ಶರಣರು ಧರ್ಮದ ಕಾವಲಿಗೆ ದಾಸೋಹದ ದೀಪ ಹಚ್ಚಿಟ್ಟರು. ಆದರೆ ಆ ಬೆಳಕೀಗ ಮರೆಯಾಗಿದ್ದು, ಧರ್ಮಾಂಧತೆ ತುಂಬಿದೆ ಇಲ್ಲಿ ಎನ್ನುವ ಭಾವನೆಯನ್ನು ಈ ವಚನ ನಿರೂಪಿಸುತ್ತಿದೆ. ಕೆಲವರು ಧರ್ಮದ ಹೆಸರಿನಲ್ಲಿಂದು ಉಗ್ರವಾದ, ಹಿಂಸಾಚಾರ, ಅನ್ಯಾಯ, ಅವಹೇಳನದ, ಪ್ರಸಂಗಗಳಲ್ಲಿ ತೊಡಗುತ್ತಿರುವುದನ್ನು ಈ ಮಾತು ಸಾಕ್ಷೀಕರಿಸುತ್ತದೆ.

ಈ ಧರ್ಮಾಧರ್ಮದ ವಿಷಯ ಬಂದಾಗ ಇಂದಿನ ಸಮಾಜದಲ್ಲಿ ನಡೆಯುತ್ತಿರುವ ಹಲವು ಅಧಾರ್ಮಿಕ ಕಾರ್ಯಗಳು ನಡೆಯುವುದನ್ನೂ ಆಧುನಿಕ ವಚನಗಳು ಉಲ್ಲೇಖಿಸುತ್ತದೆ.

'ಕಲ್ಲು ಹನುಮನಿಗೆ ಕೈ ಮುಗಿವರು
ಜೀವಂತ ಹನುಮನಿಗೆ ಕಲ್ಲೆತ್ತುವರಯ್ಯಾ
ಮನೆಗೆ ಬಂದ ಬಿಕ್ಷುಕನಿಗೆ ಹೋಗೆನ್ನುವರು
ಮಹಾಮನೆಯಲ್ಲಿ ದಾಸೋಹ ಮಾಡುವರಯ್ಯಾ
ಸಜ್ಜನರು ಜೀವಿಸುವಾಗ ಅವರು ಟೀಕೆ ಮಾಡುವರು
ಸತ್ತಾಗ ಸಂತ್ತಾಪಿಸಿ ಅವರ
ಆತ್ಮಕ್ಕೆ ಶಾಂತಿ ಕೋರುವರಯ್ಯಾ
ಈ ಲೋಕದಾಟ ನೀನೇ ಬಲ್ಲೆ ಗುರುನಂಜೇಶ್ವರ'[೧೩೨]

ಧರ್ಮದ ಹೆಸರಿನಲ್ಲಿ ನಡೆಯುವ ಅಧಾರ್ಮಿಕ ಸಂದರ್ಭಗಳ ಚಿತ್ರಣ ಇಲ್ಲಿದೆ. ಬಸವಣ್ಣನವರ 'ಕಲ್ಲನಾಗರ ಕಂಡರೆ ಹಾಲೆರೆಯಂಬರಯ್ಯಾ...' ಎಂಬ ವಚನವನ್ನು ಸ್ಮರಣೆಗೆ ತರುತ್ತದೆ. ಈ ಲೋಕದಾಟದಲ್ಲಿ

ತಮ್ಮ ಮನಸ್ಸಿಗೆ ಬಂದಂತೆ ನಡೆವ ಪರಿ ಈ ಧರ್ಮದ ಹೆಸರಿನಲ್ಲಿ ಸಾಗುತ್ತಿದೆ ಎಂಬ ನೆಲೆಗಳಲ್ಲಿ ಇಂಥ ವಚನಗಳ ರಚನೆಯಿದೆ ಎನ್ನಬಹುದು.

**೫-೩-೧ ದೇವರ ಕುರಿತ ಚಿಂತನೆ**

ಜ್ಞಾನ ಮಾರ್ಗವನ್ನು ಕಡೆಗಣಿಸಿ ಸಮಾಜದಲ್ಲಿ 'ಕರ್ಮ' ಮಾರ್ಗವನ್ನು ಬಿತ್ತಲು ಪ್ರಯತ್ನಿಸಿದ ಹಲವು ಸಂಘಟನೆಗಳು, ಧಾರ್ಮಿಕ ಸಂಸ್ಥೆಗಳು, ಬಹುದೇವೋಪಾಸನೆಯನ್ನು ಪ್ರಚುರಗೊಳಿಸಿದವು. ಇವುಗಳೊಂದಿಗೆ ನೂರೆಂಟು ಕ್ಷುದ್ರ-ದೇವತೆಗಳ ಪೂಜೆ-ಪುನಸ್ಕಾರಗಳೂ ಸಮಾಜದಲ್ಲಿ ನೆಲೆನಿಂತವು. ಆ ದೇವತೆಗಳ ಪೂಜಾಚರಣೆಗಾಗಿ ಹೋಮ, ಯಜ್ಞ, ಯಾಗ, ಹವನಗಳ ಹೆಸರಿನಲ್ಲಿ ತಿನ್ನುವ ಪದಾರ್ಥಗಳ ನಾಶ, ಪ್ರಾಣಿ ಬಲಿ, ಮೊದಲಾದ ಹಿಂಸಾಚಾರದ ಕರ್ಮಾಚರಣೆಗಳು ರೂಢಿಗೆ ಬಂದವು. ದೇವರ ಹೆಸರಿನಲ್ಲಿ ಬಡಜನರ ಆದಾಯದ ಬಹುಭಾಗ ಅಭಿಷೇಕ, ಬಿಲ್ವಾರ್ಚನೆ, ಕುಂಕುಮಾರ್ಚನೆ, ದಾನ, ಪ್ರಸಾದ ವಿತರಣೆ, ಪೂರ್ವಜರ ಕರ್ಮಸಿದ್ಧಾಂತಗಳ ಹೆಸರಿನಲ್ಲಿ ಖರ್ಚಾಗುತ್ತದೆ. ಇದರಿಂದ ಯಾರಿಗೆ ಲಾಭ? ಎಂಬ ಆಲೋಚನೆಯಿಲ್ಲದೆ ಈ ಕಾರ್ಯನಡೆಯುತ್ತದೆ ಇದನ್ನು ಆಧುನಿಕ ವಚನಕಾರರು ಖಂಡಿಸುತ್ತಾರೆ.

'ಹುತ್ತಕ್ಕೆ ಹಾಲು ಸುರಿಯುವವರು ಲಕ್ಷ ಲಕ್ಷ
ಕಲ್ಲು ನಾಗರಕ್ಕೆ ಹಾಲೆರೆಯುವವರು ಲಕ್ಷ ಲಕ್ಷ
ನಿಜದ-ನಾಗರ ಕಂಡರೆ ಕಲ್ಲು ಹೊಡೆವವರು ಲಕ್ಷ ಲಕ್ಷ
ಹಸಿದ ಬಡಮಗುವಿಗೆ ಹಾಲು ಕುಡಿಸುವವರೊಬ್ಬರನ್ನು
ಕಾಣೆ ಆಚಾರ ಪ್ರಿಯ ಬಸವಲಿಂಗ'[೧೩೩]

ಹಸಿದು ಬಂದವರಿಗೆ ಉಣಲಿಕ್ಕದ, ಸ್ಥಾವರಲಿಂಗಕ್ಕೆ ಮೃಷ್ಟಾನ್ನ ಮಾಡಿ ನೈವೇದ್ಯ ಅರ್ಪಿಸುವವರು ಇಂದು ಸಾಕಷ್ಟು ಜನ ಸಿಗುತ್ತಾರೆ. ಸ್ಥಾವರವನ್ನು ನಂಬಿದವರು ನಿಜವನ್ನು ನಂಬುವುದು ಹೇಗೆ ಸಾಧ್ಯ? ಎಂಬ ಪ್ರಶ್ನೆ ಇವರನ್ನು ಕಾಡುತ್ತಿದೆ. ಜನಸಾಮಾನ್ಯರ ಮನದಲ್ಲಿ 'ದೇವರ'ಬಗ್ಗೆ ನೂರೆಂಟು ಪವಾಡಗಳನ್ನು ತುಂಬಿ, ಇಲ್ಲದ ಸುಳ್ಳೆಲ್ಲ ಬಿತ್ತಿ, ಅವರನ್ನು ಬಲಿಪಶುವಾಗಿರಿಸಿಕೊಂಡಿರುವ 'ದೇವ ಕಲ್ಪನೆ'ಯನ್ನು ಇವರು ಖಂಡಿಸುತ್ತಾರೆ.

'ನೆಲದೊಳಗಿಂದ ಹುಟ್ಟಿದವನೊಬ್ಬ
ಕಲ್ಲೊಳಗಿಂದ ಹುಟ್ಟಿದವನೊಬ್ಬ
ಕುಂಭದೊಳಗಿಂದ ಹುಟ್ಟಿದವನೊಬ್ಬ
ಹೊಕ್ಕುಳದೊಳಗಿಂದ ಹುಟ್ಟಿದವನೊಬ್ಬ
ಮಾನವರಿಂದ ಮಾನವರಾಗಿ ಹುಟ್ಟಿದವರಿಗೆ
ಹೇಗೆ ಹೇಗೋ ಹುಟ್ಟಿದರೆಂಬುವವರು.....
ಖೊಟ್ಟಿ ಕಳ್ಳರು ಇವರಲ್ಲವೇ?'[೧೩೪]

ದೇವತೆಗಳನ್ನು ನೂರೆಂಟು ತರದ ಅಸಹಜ ರೀತಿಯಲ್ಲಿ ಹುಟ್ಟಿಸಿದ ಇವರು ಖೋಟ್ಟಿಕಳ್ಳರೆನ್ನುವ ವಚನಕಾರ, ಆ ದೇವತೆಗಳು ವೈಜ್ಞಾನಿಕವಾಗಿ ಹೀಗೆ ಹುಟ್ಟಲು ಸಾಧ್ಯವೇ? ಎಂದೂ ಪ್ರಶ್ನಿಸುತ್ತಾನೆ. ಅದಕ್ಕೆ ಅವರೇ ಸರಿಯಾದ ಉತ್ತರ ನೀಡಿರುವಂಥಹ ಇನ್ನೊಂದು ಅಲ್ಲಿಯ ವಚನದಲ್ಲಿ – 'ಬುದ್ಧ ಬಸವ ಕಾರ್ಲಮಾರ್ಕ್ಸ ಹುಟ್ಟಿದ್ದು ತಾಯಿ ತಂದೆಯರಿಂದ, ದಯಾನಂದ ವಿವೇಕಾನಂದ, ಅಂಬೇಡ್ಕರ ಹುಟ್ಟಿದುದು

ತಾಯಿತಂದೆಯರಿಂದ. ಈ ಮಿರಿ ಮಿರಿ ಮಿರುಗುವ ದೇವಕೋಟಿಗಳು ತಾಯಿ ತಂದೆ ಇಲ್ಲದೆ ಎಲ್ಲಿಂದ ಬಂದರು ಹೇಳಾ ದಿಗಂಬರ ಕರಿಬಸವೇಶ್ವರ? ಎಂದು ಪ್ರಶ್ನಿಸುತ್ತ ಅವುಗಳ ಹುಟ್ಟನ್ನು ನಿರಾಕರಿಸುತ್ತಾರೆ.

**ಬಹುದೇವೋಪಾಸನೆಯನ್ನು** ನಿರಾಕರಿಸುವ ಆಧುನಿಕ ವಚನಕಾರರು 'ದೇವ'ನೊಬ್ಬನೇ ಎಂದು ಭಾವಿಸುತ್ತಾರೆ. ಅದರಲ್ಲೂ 'ಬಸವಧರ್ಮ'ವನ್ನು ಅನುಸರಿಸಿರುವ ಹೆಚ್ಚಿನ ವಚನಕಾರರು ಈ ನೆಲೆಯಲ್ಲಿಯೇ ಚಿಂತಿಸಿದ್ದನ್ನು ಕಾಣಬಹುದು.

'ದೇಗುಲದಲ್ಲಿಯ ಸ್ಥಾವರ ಲಿಂಗವ ಕಂಡು ಪೂಜಿಸುವರಯ್ಯಾ
ದೇಗುಲದ ಮುಂದಿನ ಗುಂಡವನೋಡಿ ತೀರ್ಥವೆಂದು
ಸೇವಿಸುವರಯ್ಯಾ
ಗುರು ಕೊಟ್ಟ ಲಿಂಗವ ಬಿಟ್ಟು ದೇಗುಲದ ನೆಟ್ಟಲಿಂಗವ
ಮುಟ್ಟಿ ಪೂಜಿಸುವ ಹೊಲೆಯರಿಗೆ ಸದ್ಭಕ್ತರೆಂದಡೆ ಭವ ಹಿಂಗದಯ್ಯಾ
ತನ್ನ ಕರಸ್ಥಲದಲ್ಲಿಯ ಲಿಂಗವನ್ನರಿಯದೆ ಬೇರೆ ಲಿಂಗ
ಉಂಟು, ಬೇರೆ ತೀರ್ಥ ಉಂಟು ಎಂದು ತಿರುಗುವ
ಕುನ್ನಿ ಮಾನವರಿಗೆ ಗುರು, ಲಿಂಗ, ಜಂಗಮ, ಪಾದೋದಕ
ಪ್ರಸಾದ ಮುಕ್ತಿಯೆಂಬುದು ಎಂದೆಂದಿಗೂ ಇಲ್ಲ ಕಾಣಾ
ಶಿವಾನಂದ ಪ್ರಿಯ ಗುರು ಬಸವ ಪ್ರಭುವೇ'[೧೩೫]

ಗುರು ಕೊಟ್ಟ ಲಿಂಗವನ್ನಲ್ಲದೆ ಅನ್ಯಯದನ್ನು ಪೂಜಿಸಬಾರದು, ಬೇರೆ ಬೇರೆ ವಸ್ತುಗಳನ್ನು ದೇವರೆಂದು ಭಾವಿಸಬಾರದು. ಹಾಗೆ ಮಾಡಿದವರನ್ನು ಕುನ್ನಿ ಮಾನವರು ಎಂದು ವಚನ ಜರಿಯುತ್ತದೆ. ಆದರೂ ದೇವರ ನಾಮಗಳು ಇಂದು ಅಸಂಖ್ಯಯಲ್ಲಿವೆ. ಅದನ್ನು ಒಪ್ಪಿಕೊಳ್ಳುವ ವಚನಕಾರರು ಹೀಗೆ ಹೇಳುತ್ತಾರೆ.

'ದೇವರ ನಾಮಗಳು ಹಲವಾದರೂ
ಧ್ಯಾನಿಸಸುವ ದೇವನೊಬ್ಬನೋಡಯ್ಯಾ
ಪೋಣಿಸಿದ ಹೂಗಳು ಹಲವಾದರೂ
ಕಾಣಿಸುವ ಹಾರ ಒಂದೇ ನೋಡಯ್ಯಾ
ಸೇರಿಸಿದ ಮುತ್ತುಗಳು ಹಲವಾದರೂ
ತೂರಿಸಿದ ದಾರ ಒಂದೇ ನೋಡಯ್ಯಾ
ನಮ್ಮಿಬ್ಬರ ನಾಮ ರೂಪಗಳು ಹಲವಾದರೂ
ಇಬ್ಬರ ಉಸಿರಾಟ ಒಂದೇ ನೋಡಾ'[೧೩೬]

ಎಂದಿದ್ದಾರೆ ಡಾ. ಬಸವರಾಜ ಸಬರದ ಅವರು. ಈ .ವಚನದಲ್ಲಿರುವ ವೈಚಾರಿಕತಯನ್ನು ತಿಳಿಯಬಹುದು. ಹೂವಿನ ಹಾರ, ಮುತ್ತಿನಹಾರಗಳ ದೃಷ್ಟಾಂತಗಳನ್ನು ಕೊಟ್ಟು ದೇವರ ಹೆಸರುಗಳು ಎಷ್ಟೇ ಇದ್ದರೂ ಆತನೊಬ್ಬನೇ ಎಂಬುದನ್ನು ಸಾರಿದ್ದಾರೆ. ಆದರೆ ಆ ದೇವನನ್ನು ಕರೆಯುವ ಅನಂತ ಹೆಸರುಗಳಲ್ಲಿ 'ಭಗವಂತ' ಎಂಬುದೂ ಒಂದು. ಹಾಗಾದರೆ ಆ ಭಗವಂತ ಯಾರು? ಎಂಬುದನ್ನು ಕುರಿತು ಚಿಂತಿಸಿದ ವಚನವೊಂದು ಹೀಗಿದೆ.

'ಭಗವಂತ ಎಂದರೆ ವ್ಯಕ್ತಿಯಲ್ಲ
ಭಗವಂತ ಎಂದರೆ ಕ್ಯಾಲೆಂಡರ ಚಿತ್ರವಲ್ಲ
ಭಗವಂತ ಎಂದರೆ ಮೂರ್ತಿಯಲ್ಲ
ಸೋಮಲೋಚನ ಪ್ರಿಯ ಬಸವಣ್ಣ
ಭಗವಂತ ಎಂಬುದು, ಪ್ರೀತಿ, ಪಾವಿತ್ರತೆ, ಸ್ವಾತಂತ್ರ್ಯದ
ಸ್ಥಿತಿಯಲ್ಲವೇ ಗುರುವೆ?'[೧೩೭]

ಎಂದಿರುವ ಡಾ. ಸೋಮನಾಥ ಯಾಳವಾರರ ಚಿಂತನೆಯನ್ನು ಗಮನಿಸಬಹುದು. ದೇವರು ಎಂದರೆ ಪ್ರೀತಿ, ಪ್ರೇಮ, ಪಾವಿತ್ರತೆ, ಸ್ವಾತಂತ್ರ್ಯದ ಸ್ಥಿತಿ ಎಂಬ ನವೀನ ಅರ್ಥಗಳನ್ನು ಇಲ್ಲಿ ಅರಿಯಬೇಕು. ಈ ದೇವಗುಣಗಳುಳ್ಳ ವ್ಯಕ್ತಿಯೂ ದೇವಮಾನವನಾಗಿ ಕಾಣಿಸುತ್ತಾನೆ. ಇಂದು ದೇವಸ್ವರೂಪದಲ್ಲಿರುವ ಶರಣರು, ಸಂತರು, ಸಾಧುಗಳು, ಸನ್ಯಾಸಿಗಳನ್ನು ಕುರಿತು, ಅವರ ಅವಗುಣಗಳನ್ನು ಕುರಿತ ಹಲವು ನೆಲೆಯ ವಚನಗಳೂ ಕಾಣಸಿಗುತ್ತವೆ. "ಕಾವಿ ತೊಟ್ಟವರೆಲ್ಲ ಕಾರಣ ಪುರುಷರಲ್ಲ ವೇಷ ತೊಟ್ಟ ಢಾಂಬಿಕರು"[೧೩೮] ಎಂದು ಕೆಲವರೆಂದರೆ

'ಚಿನ್ನದ ಕಿರೀಟ, ಸಿಂಹಾಸನವುಳ್ಳಂಥ
ಕಾವಿ ಪೀತಾಂಬರ, ಕುಸುರಿನ ಕಾಲ್ಮರಿ ಧರಿಸುವಂಥ
ಗುರು ಜಂಗಮ, ಪುರೋಹಿತ ಆಚಾರ್ಯಾದಿಗಳು
ಬಡಕೋಟಿ ಭಾರತೀಯರ ರಕ್ತ ಹೀರುವ ಸೊಳ್ಳೆಗಳೆಂದ
ದಿಗಂಬರ ಕರಿಬಸವೇಶ್ವರ'[೧೩೯]

ಎಂದು ಅವರ ವರ್ತನೆಯನ್ನು, ತೆಗಳುತ್ತಾರೆ. ಸಮಾಜದ ಧರ್ಮವೊಂದರ ನೇತಾರಾಗಿ ಹೀನಕಾರ್ಯ ಮಾಡುವ ಇಂಥವರನ್ನು ಲಾಂಛನಕ್ಕೆ ಶರಣೆನ್ನದೆ ಕಟುವಾಗಿ ಟೀಕಿಸುವುದನ್ನು ಮನಗಾಣಬಹುದು.

'ತನುವಿನ ತುಂಬ ಹುಸಿತುಂಬಿ
ಮನದ ತುಂಬ ಹೇಸಿ ಗುಣತುಂಬಿ
ವಿಚಾರಗಳಲ್ಲಿ ಪರಬಾಧೆ ತುಂಬಿ
ಲಿಂಗವಂತನೆಂದು ಬೀಗುವ
ಸಮಾಜದ ಕರುಣೆ ಕನಿಕರಕೆ
ಪಾತ್ರನಾಗಿ ಮೆರೆದ ಮಾತ್ರಕೆ
ಲಿಂಗವಂತನಾಗಲಾರ. ಸ್ವಾರ್ಥಕ್ಕಾಗಿ
ಧರ್ಮ-ನ್ಯಾಯ-ನೀತಿಯನ್ನೇ ಕಾಸಿಗೆ
ಮಾರುವ ದುಷ್ಕರ್ಮಿಗಳಿಗೆಲ್ಲಿ ಸ್ಥಾನ ದೇಳಾ
ನಿಜಗುರು ಮಹಾಮತಲಿಂಗ'[೧೪೦]

ತನು ಮನದಲ್ಲಿ ಹುಸಿ ಹಾಗೂ ಹೇಸಿತನಗಳನ್ನು ತುಂಬಿಕೊಂಡು, ವಿಚಾರಗಳಲ್ಲಿ ಪರಬಾಧೆಯನ್ನೇ ತುಂಬಿ ನಿಂತಿರುವ ವ್ಯಕ್ತಿ ಎಂದೂ ಲಿಂಗಾಯತನಾಗಲಾರ. ಸಮಾಜದ ಕರುಣೆ, ಕನಿಕರಕ್ಕೆ ಪಾತ್ರನಾದ ಮಾತ್ರಕ್ಕೆ ಅವನೆಂದೂ ಮುಖಂಡನೆನಿಸುವುದಿಲ್ಲ. ತನ್ನ ಸ್ವಾರ್ಥಕ್ಕಾಗಿ ಧರ್ಮ, ನ್ಯಾಯ, ನೀತಿಯನ್ನೇ ಹಣಕ್ಕೆ ಮಾರಿಕೊಳ್ಳುವ ದುಷ್ಕರ್ಮಿ ಇವನೆನಿಸುತ್ತಾನೆ. ಇಂಥವರಿಗೆ ಧರ್ಮದಲ್ಲಿ ಸ್ಥಾನ–ಮಾನಗಳಿರಬಾರದೆಂದು ವಚನಕಾರ್ತಿ ಹೇಳುತ್ತಾರೆ. ಅದರಲ್ಲೂ ಬಸವತತ್ವದ ಮಾರ್ಗದಲ್ಲಿರುವವರು ಶರಣತತ್ವವನ್ನು ರೂಢಿಸಿಕೊಂಡಿರಬೇಕು. ಆ ಧರ್ಮ ಮನುಷ್ಯನನ್ನು ಅಸತ್ಯದಿಂದ ಸತ್ಯದ ಕಡೆಗೆ, ಅಧರ್ಮದಿಂದ ಧರ್ಮದ ಕಡೆಗೆ, ಕತ್ತಲೆಯಿಂದ ಬೆಳಕಿನ ಕಡೆಗೆ ನಡೆಸುವಂತಹದ್ದು. ಜ್ಞಾನಾಗ್ನಿಯ ಬೆಳಕಿನಲ್ಲಿ ಸದಾ ವಿಹರಿಸಬೇಕು. ಆಶೆ, ಆಕಾಂಕ್ಷೆ, ಕೀರ್ತಿ ವರ್ಚಸ್ಸಾದಿಗಳೆಡೆಗೆ ಮುಖಮಾಡಬಾರದೆಂಬಂತಹ ಮಾತುಗಳನ್ನು ಇಲ್ಲಿ ಹೇಳಲಾಗಿದೆ. ಈ ಬಸವಧರ್ಮದ ಗುರುವಾಗುವವನು ಕೇವಲ ಜಾತಿಯಿಂದ ಜಂಗಮನಾದರೆ ಸಾಲದು ಎಂಬ ಮಾತುಗಳು ಇಲ್ಲಿವೆ.

'ಜಾತಿಯಿಂದ ಜಂಗಮನಾದರೆ ಸಲ್ಲದು
ಕಾಯಕದಿಂದ ಜಂಗಮನಾಗಬೇಕು
ಧರ್ಮದಿಂದ ಲಿಂಗಾಯತನಾದರೆ ಸಲ್ಲದು
ಸಾಧನೆಯಿಂದ ಲಿಂಗಾಯತನಾಗಬೇಕು
ಜನ್ಮದಿಂದ ಗುರುವಾದರೆ ಸಾಲದು
ಕರ್ಮದಿಂದ ಗುರುವಾಗಬೇಕಯ್ಯಾ
ಗುರುನಂಜೇಶ್ವರ'[೧೪೧]

ಧಾರ್ಮಿಕ ನೇತಾರರು ಕಾಯಕ, ಸಾಧನೆ, ಕರ್ಮದಿಂದಾಗಬೇಕೆ ಹೊರತು ಜಾತಿಯಿಂದ ಜಂಗಮನಾದರೆ ಪ್ರಯೋಜನವಿಲ್ಲ ಎಂಬ ಅಂಶವು ಇಲ್ಲಿ ವ್ಯಕ್ತಗೊಂಡಿದೆ. ಧರ್ಮದ ಹೆಸರಲ್ಲಿ ಜಾತ್ರೆಗೊಂದು ದೇವರ ಮಾರಿ, ಊರಿಗೊಂದು, ಕೇರಿಗೊಂದು ದೇವರ ಮಾಡಿ, ದೇವಾಲಯಕ್ಕೊಂದು, ದೇಹಕ್ಕೊಂದು ದೇವರ ಮಾಡಿ ಜನರಲ್ಲಿ ತಪ್ಪು ಕಲ್ಪನೆ ಬಿತ್ತಬಾರದು. ಅವರಿಗೆ ದುಡಿಮೆಯೇ ದೇವರೆಂದು ಕಾಯಕ ಕಲಿಸಬೇಕು. ಜನರಲ್ಲಿ ನೀತಿ ತುಂಬಬೇಕಾಗಿದೆ.

'ಕೊರಳಲ್ಲಿ ಲಿಂಗವ ಕಟ್ಟಿಕೊಂಡು
ಬೆರಳಲ್ಲಿ ಅನ್ಯದೈವದ ಮುದ್ರೆಯನ್ನಿಡುವರು
ಮತ್ತೆ ಕೊರಳಲ್ಲಿ ಹಲವು ದೇವರ ಪದಕ ಧರಿಸುವರು
ಹರನಲ್ಲದನ್ಯ ಮೂರ್ತಿಗಳ ಸ್ಥಾಪಿಸಲು ಹೆಣಗುವರು
ಮಾರಿ ಗುಡಿಯ ಕಟ್ಟಿ ಮೂಕ ಪಶುವ ಬಲಿ ಕೊಡವರು'[೧೪೨]

ಇಂಥವರನ್ನು ಲಿಂಗವಂತರು ಎಂದು ಹೇಗೆ ಹೇಳಬೇಕೆಂದು ಖಂಡಿಸುವ ವಚನಕಾರ್ತಿಯು ಲಿಂಗವಂತ ದೇವರು ತಾನಾಗಬಲ್ಲ ಆದುದರಿಂದ ಲಿಂಗವನ್ನು ನಂಬಿ, ನಡೆ–ನುಡಿ ಒಂದಾಗಿ ಬಾಳಬೇಕೆಂದು ಸಂದೇಶ ನೀಡುತ್ತಾರೆ. ಇಂದಿನ ಧರ್ಮದ ನೇತಾರರಾಗುವವರು ಹೇಗಿರಬೇಕೆಂಬುದರ ವಿವರವೂ ವಚನಗಳಲ್ಲಿದೆ.

ಬುದ್ಧ ಬಂದನಯ್ಯಾ
ಬೆಳಕು ಕೊಟ್ಟನಯ್ಯಾ

ಬಸವ ಬಂದನಯ್ಯಾ
ವಿಷವ ತಗೆದನಯ್ಯಾ
ಅಂಬೇಡ್ಕರ ಬಂದನಯ್ಯಾ
ಅಸ್ಪೃಶ್ಯತೆ ತಡೆದನಯ್ಯಾ
ಇಲ್ಲಿಂದ ಮುಂದೆ ಸಾಗಿದ
ಮಾರ್ಕ್ಸ್‌ನ ಮೌಲ್ಯ ಸಿದ್ಧಾಂತಗಳ ತೋರಯ್ಯಾ'[೧೪೩]

ಎನ್ನುವ ಬಸವರಾಜ ಸಬರದ ಅವರ ವಚನ ಇಂದಿನ ಸಮಾಜಕ್ಕೆ ಬೆಳಕು ಕೊಟ್ಟ ಬುದ್ಧ, ವಿಷವ ತಗೆದ ಬಸವ, ಅಸ್ಪೃಶ್ಯತೆ ತಡೆದ ಅಂಬೇಡ್ಕರರ, ತತ್ವಗಳ ಜೊತೆಗೆ ಮಾರ್ಕ್ಸ್‌ನ ಸಿದ್ಧಾಂತಗಳು ಬೇಕು ಎನ್ನುತ್ತಾರೆ. ಸರ್ವರನ್ನು, ಸಮಾನತೆಯಲ್ಲಿ ನಡೆಸುವ, ಸರ್ವಜನಾಂಗಕ್ಕೂ ಹಿತವನ್ನುಂಟುಮಾಡುವ ಸಾರ್ವಕಾಲಿಕ ಧರ್ಮ, ಧರ್ಮಗುರುಗಳು ಅವಶ್ಯವಿರುವುದನ್ನಿಲ್ಲಿ ಅರಿಯಬಹುದಾಗಿದೆ.

**೫-೩-೨ ಭಕ್ತಿ ನೆಲೆ**

ಮಾನವನಲ್ಲಿ ತುಂಬಿ ತುಳುಕಬೇಕಾಗಿರುವ ಕರುಣೆ, ವಿನಯ, ಸಮತೆಯಂಬ ಗುಣಗಳಿಂದ ಕೂಡಿದ ಭಕ್ತಿ ಬೆಳೆಯಬೇಕಾಗಿದೆ. ಭಕ್ತಿಯೆಂಬುದು ಇಂದಿಗೂ ತೋರುಂಭುವ ಲಾಭವಾಗಿರುದನ್ನು ಆಧುನಿಕ ವಚನಕಾರರು ಖಂಡಿಸುತ್ತಾರೆ. ಭಕ್ತಿಯಲ್ಲಿ ನಂಬಿಕೆ ಮುಖ್ಯ ಎಂಬುದು ಅದರ ಮೊದಲ ಲಕ್ಷಣವೆನ್ನುವುದನ್ನು ಇಲ್ಲಿ ಅರಿಯಬಹುದು.

'ನಂಬಿಕೆಯಿಲ್ಲದ ಸ್ನೇಹ ಗಾಳಿಗಿಟ್ಟ ದೀಪದಂತೆ
ನಂಬಿಕೆಯಿಲ್ಲದ ಸಂಬಂಧ ನೀರಿಲ್ಲದ ನದಿಯಂತೆ
ನಂಬಿಕೆಯಿಲ್ಲದ ಭಕ್ತಿಯು ತಳವಿಲ್ಲದ ಮಡಿಕೆಯಂತೆ
ಕಾಣಾ ಬಸವಲಿಂಗ'[೧೪೪]

ಭಕ್ತಿಯಲ್ಲಿ ನಂಬಿಕೆಯೇ ಬಲು ಮುಖ್ಯವೆಂಬುದನ್ನಿಲ್ಲಿ ಗಮನಿಸಬಹುದು. ಅದು ಹೇಗಿರಬೇಕೆಂದರೆ ಅರ್ಚಿಸಲರಿಯೆ, ಪೂಜಿಸಲರಿಯೆ, ಸ್ತುತಿಸಲರಿಯೆ, ಬೇಡಲರಿಯೆ, ನುಡಿಲರಿಯೆ, ನಡೆಯಲರಿಯೆ, ಸತ್ಯವನರಿಯೆ, ಮಿಥ್ಯವನರಿಯೆ, ತತ್ವವನರಿಯೆ, ಎನ್ನನರಿಯೆ, ನಿನ್ನನರಿಯೆ, ಏನೊಂದನರಿಯೆನಯ್ಯಾ, ನಾನಿದ್ದಂತೆಯೇ ಕೈಕೋ ತಂದೆ ಬಸವಲಿಂಗ' ಎನ್ನುವಂತಹ ನಂಬಿಕೆ ಇರಬೇಕೆಂದು ಅವರು ಅಲ್ಲಿಯೇ ಇನ್ನೊಂದು ವಚನದಲ್ಲಿ ಹೇಳುತ್ತಾರೆ.

ಈ ಭಕ್ತಿಯಲ್ಲಿ ನಂಬುಗೆ ಹುಟ್ಟಬೇಕಾದರೆ ಮನುಷ್ಯ ಸುಧಾರಿಸಬೇಕು. ಹೇಗೆ? ಸುಧಾರಿಸಬೇಕು ಎಂಬುದನ್ನು ವಚನಕಾರರು ಹೇಳುವುದನ್ನಿಲ್ಲಿ ಗಮನಿಸಬಹುದು.

'ಕಾಯವೆಂಬ ಗುಡಿಯಲ್ಲಿ
ಭಕ್ತಿಯೆಂಬ ತೊಟ್ಟಿಲ ಕಟ್ಟಿ
ಮನಸ್ಸೆಂಬ ಲಿಂಗವ ಅದರೊಳಗಿಟ್ಟು
ಚಿತ್ತವನ್ನು ಹಗ್ಗವ ಮಾಡಿ ಬಿಗಿದು
ಏಕಾಗ್ರತೆಯೆಂಬ ನಿಷ್ಠೆಯನರ್ಪಿಸಿ

ಭಾವನೆಗಳೆಂಬ ಹೂ ಪತ್ರೆಗಳನರ್ಪಿಸಿ
ಹಿತನುಡಿಗಳೆಂಬ ಲಾಲಿಯನಾಲಿಸುತ
ಶಾಂತಿಯಿಂದ ಜೋಗುಳವಾಡುವುದನ್ನು
ಕಲಿಸಯ್ಯ ವಿಶಾಲ ಪ್ರಿಯ ಚನ್ನಬಸವ'[೧೪೫]

ಅಲ್ಲಮನ ವಚನವಾದ 'ಅಜ್ಞಾನವೆಂಬ ತೊಟ್ಟಿಲೊಳಗೆ...' ಎಂಬ ವಚನದ ಪರಿಯಲ್ಲಿ ರಚನೆಗೊಂಡಿರುವ ಇದು ಭಕ್ತಿಯ ತೊಟ್ಟಿಲೊಳಗೆ ಇರಲು ಹಂಬಲಿಸುವ ನೆಲೆಯನ್ನು ಒಳಗೊಂಡಿದೆ. ದೇಹವನ್ನು ಗುಡಿಯೆನ್ನುವ ಈ ವಚನದಲ್ಲಿ ಭಕ್ತಿಯ ತೊಟ್ಟಿಲು ಕಟ್ಟಿ ಮನಸ್ಸೆಂಬ ಲಿಂಗವನ್ನು ಅದರಲ್ಲಿಟ್ಟು, ಚಿತ್ತರ ಹಗ್ಗದಿಂದ ಬಿಗಿದು, ಏಕಾಗ್ರತೆಯ ನಿಷ್ಠೆಯಿಂದ ಭಾವನೆಗಳ ಪತ್ರೆಗಳನರ್ಪಿಸಿ, ಹಿತನುಡಿಯನಾಲಿಸುತ, ಶಾಂತಿಯಿಂದ ಜೋಗುಳವಾಡುವುದನ್ನು ಕಲಿಸಲು ಇಷ್ಟದೈವದಲ್ಲಿ ನಿವೇದಿಸಲಾಗಿದೆ. ಭಕ್ತರಾಗಬಯಸುವವರ ಎಲ್ಲ ಲಕ್ಷಣಗಳನ್ನು ಆಧುನಿಕ ರೀತಿಯಲ್ಲಿ ಹೇಳುವ ಈ ವಚನ, ಅದರಿಂದ ದೊರೆಯುವ ಶಾಂತಿಯನ್ನು ತಿಳಿಸುತ್ತದೆ.

ಭಕ್ತಿಗೆ ವಿಧಿ-ವಿಧಾನಗಳಿರಬಾರದು. ಪೂಜೆಗೆ ಮಡಿಮೈಲಿಗೆಗಳಿಲ್ಲ. ಧ್ಯಾನಕ್ಕೆ ಆಚಾರ ವಿಚಾರಗಳು ಬೇಕಿಲ್ಲವೆನ್ನುವ, ವಿಶಾಲಾಕ್ಷಿಯವರು ಪ್ರತಿಯೊಬ್ಬನು ಶಿವಭಕ್ತನಾಗಿರಬೇಕೆಂದರೆ ಕುಲ-ಛಲಂಗಳನು ಅರಿಯಬೇಕಿಲ್ಲವೆಂದು ಸಾರುತ್ತಾರೆ. ಆದರೆ ಇಂದು ಡಾಂಭಿಕ ಭಕ್ತಿಯ ನೆಲೆಗಳೇ ಹೆಚ್ಚಾಗಿರುವುದನ್ನು ಅಲ್ಲಗಳೆಯುವಂತಿಲ್ಲ.

'ಪ್ರಚಾರಕ್ಕಾಗಿ ಪರಮಾತ್ಮನ
ಅಧಿಕಾರಕ್ಕಾಗಿ ಅಲ್ಲಾನ
ಧನಕ್ಕಾಗಿ ದೇವನ
ಬೆನ್ನ ಬಿದ್ದರೆ
ಮರೀಚಿಕೆಯ ಕಂಡು
ನರಿ ಓಡಿದಂತಾಯಿತ್ತು
ಪ್ರಭು; ಆಶೆ ಹರಿಯದ ಹೊರತು
ಈಶನೆಲ್ಲಿ? ಹೇಳಾ'[೧೪೬]

ಎನ್ನುತ್ತದೆ ಒಂದು ವಚನ. ಪ್ರಚಾರಗಿಟ್ಟಿಸಲೋ? ಅಧಿಕಾರಕ್ಕಾಗಿಯೋ? ಹಣದ ದಾಹಕ್ಕಾಗಿಯೇ ಭಕ್ತಿ ಮಾಡಿದರೆ ಏನೂ ಪ್ರಯೋಜನವಿಲ್ಲ. ಹಾಗೇನಾದರೂ ಮಾಡಿದರೆ ಮರೀಚಿಕೆಯ ಕಂಡು ನೀರೆಂದು ತಿಳಿದು ಅದರೆಡೆಗೆ ಓಡುವ ನರಿಯಂತಾಗುತ್ತದೆ ಎಂಬ ಉಪಮೆಯ ಹಿನ್ನೆಲೆಯಲ್ಲಿ ನಿಜ ಭಕ್ತಿ ಆಶಾರಹಿತವಾಗಿರಬೇಕೆಂಬ ಹೇಳಿಕೆ ಇಲ್ಲಿ ಒಡಮೂಡಿದೆ. ಆದರೂ ಈ ಭೂಮಿಯಲ್ಲಿ ಡಾಂಭಿಕರೇ ಮಹಾಭಕ್ತರೆನಿಸಿಕೊಂಡಿರುವುದೊಂದು ವಿಪರ್ಯಾಸ. ಅದನ್ನು ಕುರಿತು ಡಾ. ಯಾಳವಾರ ಅವರ ವಚನ ಹೀಗೆ ಹೇಳುತ್ತದೆ. 'ನಿನಗೆ ಗುಡಿಕಟ್ಟಿದವರೆಲ್ಲ ಇಲ್ಲಿ ಮನೆಯಿಲ್ಲದವರು, ನಿನಗೆ ಹಡದಿ ಹಾಸುವವರೆಲ್ಲ ಇಲ್ಲಿ ಬಟ್ಟೆಯಿಲ್ಲದವರು, ನಿನ್ನ ಪಲ್ಲಕ್ಕಿ ಹೊರುವವರೆಲ್ಲ ಇಲ್ಲಿ ಕೆಲಸವಿಲ್ಲದವರು. ನಿನ್ನನು ಜಾತ್ರೆಯಲ್ಲಿ ಮೆರೆಸಿ ಜೈಕಾರ ಹಾಕುವವರೇ ನಿನ್ನ ಮಹಾಭಕ್ತರು ಎನಿಸಿಕೊಂಬರು ನೋಡಾ ಸೋಮಲೋಚನ ಪ್ರಿಯ ಬಸವಣ್ಣ'[೧೪೭] ಎಂದಿರುವಲ್ಲಿ ಈ ಮಾತನ್ನು

ಅರಿಯಬಹುದು. 'ತನು ಮನ ಭಾವದಿಂದ ಕೂಡಿದ ಪ್ರೀತಿಯೇ ಸದ್ಭಕ್ತಿ ಎನ್ನಲಾಗಿದೆ. ಅಂಥ ಭಕ್ತಿಯನ್ನು ಬೆಳೆಸಿಕೊಳ್ಳಬೇಕೆಂಬ ನೆಲೆಯೂ ವ್ಯಕ್ತವಾಗಿದೆ.

'ಪರಮಾತ್ಮನಿಂದ ಬೇರೆಯಾದವನೆ ಭಕ್ತ
ಪುನಃ ಪರಮಾತ್ಮನಲ್ಲಿ ಬೆರೆಯಲು
ಮಾಡುವ ಸಾದನವೆ ಭಕ್ತಿ
ಭಕ್ತ ಸಾಧಕ, ಭಕ್ತಿ ಸಾಧನ
ಪ್ರೀತಿ, ವಿಶ್ವಾಸ, ನಂಬಿಕೆಗಳೆಂಬ ಸಾಧನಗಳಿಂದ
ಪರಮಾತ್ಮನನ್ನು ಬೆರೆಯೆಂದ ನಮ್ಮ
ಆಚಾರ ಪ್ರಿಯ ಬಸವಲಿಂಗ'[೧೪೮]

ಈ ವಚನ ಭಕ್ತ ಹಾಗೂ ಭಕ್ತಿಯನ್ನು ಕುರಿತು ವಿಶ್ಲೇಷಿಸುತ್ತದೆ. ಭಕ್ತ ಬೇರೆಯಲ್ಲ ಆತನು ಪರಮಾತ್ಮನಿಂದ ಬೇರೆಯಾಗಿ ನಿಂತವನು. ಅಂದರೆ ಭಕ್ತನೊಬ್ಬ ಸಾಧಕ ಪುನಃ ಪರಮಾತ್ಮನಲ್ಲಿ ಬೆರೆಯಲು ಆತ ಮಾಡುವ ಸಾಧನೆಯನ್ನು ಭಕ್ತಿ ಎಂದು ಕರೆಯಲಾಗಿದೆ. ಆದರೆ ಈ ಭಕ್ತಿಯಲ್ಲಿ ಅಂದರೆ ಸಾಧನೆಯಲ್ಲಿರಬೇಕಾದ ಪ್ರಮುಖ ಗುಣಗಳೆಂದರೆ, ಪ್ರೀತಿ, ವಿಶ್ವಾಸ, ನಂಬಿಕೆ ಎನ್ನುವುದನ್ನು ಈ ವಚನ ನಿವೇದಿಸುತ್ತದೆ. ಇಂಥ ಪ್ರೀತಿಯ ಭಕ್ತಿಯೊಂದೇ ದೇವರಿಗೆ ಬೇಕಾಗಿರುವಂಥಹದ್ದು, ಆತನಿಗೆ ಉಳಿದದ್ದೇನು ಬೇಡವೆನ್ನುತ್ತಾರೆ ಚನ್ನಪ್ಪ ಮೋರ್ಗೆಯವರು.

'ದೇವರಿಗೆ ಮಾಡಬೇಕಿಲ್ಲ ಹರಕೆ
ದೇವರು ವ್ಯಾಪಾರಿಯಲ್ಲ ಲೋಭಕ್ಕೆ
ಆದರೆ ನಮಗಿಲ್ಲ ಅದರ ತಿಳುವಳಿಕೆ
ಅವನಿಗೆ ಬೇಕಿಲ್ಲ ನಾವು ಗಳಿಸುವ ಇಂಥ ಗಳಿಕೆ
ಗುರು ಚನ್ನಬಸವಾ ಅವನಿಗೆ ಬೇಕು
ಶ್ರದ್ಧಾ ಭಕ್ತಿಯ ಕಾಣಿಕೆ'[೧೪೯]

ಎಲ್ಲವೂ ದೇವನದೇ ಆಗಿರುವಾಗ ಆತನಿಗೆ ನಾವೇನೂ ಮಾಡಬೇಕಾಗಿಲ್ಲ. ಹರಕೆ ಹೊರುವುದು, ವ್ಯಾಪಾರದ ವರ ಕೇಳುವುದು, ಏನೇನೋ ಮಾಡುತ್ತೇವೆಂದು ಹೇಳುವುದು ಇದು ಲೋಭಿಗಳಾದ ಮಾನವರ ವ್ಯಾಪಾರಿ ಬುದ್ಧಿ. ಇದರ ತಿಳುವಳಿಕೆ ನಮಗಿರಬೇಕೆನ್ನುವ ವಚನಕಾರರು ತಮ್ಮ ಗುರು ಚನ್ನಬಸವನ ಸಾಕ್ಷಿಯಾಗಿ ಶ್ರದ್ಧಾಭಕ್ತಿಯೊಂದೇ ಅವನಿಗೆ ನಾವು ಕೊಡುವ ಕಾಣಿಕೆ ಎಂದು ತಿಳಿಹೇಳುತ್ತಾರೆ. ಶ್ರದ್ಧಾ ಭಕ್ತಿಯಲ್ಲಿ ಏನಿರಬೇಕು, ಏನಿರಬಾರದು ಎಂಬುದನ್ನು ಕುರಿತು ಚನ್ನಪ್ಪ ಮೋರ್ಗೆಯವರು 'ಅಪ್ರಮಾಣಿಕತೆ, ಡಾಂಭಿಕತೆ, ಹುಸಿ, ಪ್ರತಿಷ್ಠೆ ಎಲ್ಲಿದೆಯೋ ಅದು ಹೀನತೆ, ಪ್ರಾಮಾಣಿಕತೆ, ತ್ಯಾಗ, ಸಹಿಸ್ನುತೆ, ದಯಾ, ವಿನಮ್ರತೆ ಇವು ಇದ್ದಲ್ಲಿ ಮಾನವೀಯತೆ ಇದರಿಂದ ತಿಳಿಯುವುದು ವಾಸ್ತವಿಕತೆ, ನಡೆಯಲ್ಲಿ ಕಾಯಕ ನಿಷ್ಠತೆ ಇದ್ದರೆ ಅದೇ ಮಾನವನ ಘನತೆ, ಎಂದು ಅಲ್ಲಿಯೇ ಹೇಳಿರುವುದನ್ನಿಲ್ಲಿ ಸ್ಮರಿಸಬಹುದು. ಈ ಭಕ್ತಿಯಲ್ಲಿ ಆರು ಪ್ರಕಾರಗಳಿರುವುದನ್ನು ಜಗದೇವಿಯವರು ತಿಳಿಸುತ್ತಾರೆ.

'ದೇವನೊಬ್ಬನೆಂದರಿದು ಮಾಡುವುದು ಶ್ರದ್ಧಾಭಕ್ತಿ
ಬೇಕು ಬೇಡೆಂಬುದು ಬಿಟ್ಟು ಲಿಂಗವ ಪೂಜಿಸುವುದು ನಿಷ್ಠಾಭಕ್ತಿ
ಎಲ್ಲವೀ ದೇವನದು ಎನ್ನುವ ಭಾವವೇ ಅವಧಾನ ಭಕ್ತಿ
ಗುರುವಿನ ವಚನದಲ್ಲಿ ನಡೆಯುವುದೆ ಅನುಭವ ಭಕ್ತಿ
ವಚನಗೀತನಾದ ಮನದಿ ಕೇಳಿ ಅನುಭವಿಸುವುದೆ ಆನಂದ ಭಕ್ತಿ
ಆನಂದದಿ ತೇಲಾಡಿ ಪರವಶನಾಗುವುದೇ ಸಮರಸಭಕ್ತಿ
ಎಂದ್ಹೇಳಿದ ಶರಣೋಕ್ತಿಯನ್ನು ತಿಳಿದು ಮತಿವಂತನಾಗು'[೧೫೦]

೧೨ನೇಯ ಶತಮಾನದ ಶರಣರು ತಮ್ಮ ವಚನಗಳಲ್ಲಿ ಹೇಳಿರುವ ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಅವಧಾನ ಭಕ್ತಿ, ಅನುಭಾವ ಭಕ್ತಿ, ಆನಂದ ಭಕ್ತಿ ಹಾಗೂ ಸಮರಸಭಕ್ತಿಯನ್ನು ಇಲ್ಲಿ ಹೇಳಲಾಗಿದೆ. 'ಮಾನವನು ಶಾಂತಿ ಸಮಾಧಾನವನ್ನು ಇಂದು ಹೊರಗೆ ಹುಡುಕುತ್ತಿದ್ದಾನೆ. ಅದು ನಮ್ಮ ಅಂತರಂಗದಲ್ಲಿಯೇ ಇದೆ. ನಮ್ಮೊಳಗಿರುವ ಅಮೂಲ್ಯ ಶಾಂತಿಯನ್ನು ಸತ್ಯವಸ್ತುವನ್ನು ಕಂಡುಕೊಳ್ಳಬೇಕು. ಬಹಿರಂಗದಿಂದ ಅಂತರಂಗದತ್ತ ಮುಖಮಾಡಿಕೊಂಡು ತನ್ನ ತಾನರಿದು ನೋಡಿಕೊಳ್ಳುವುದು ಆಧ್ಯಾತ್ಮ ಮಾರ್ಗ ಇದವೇ ಷಟ್‌ಸ್ಥಲಮಾರ್ಗ, ಅದನ್ನೇ ಇಷ್ಟಲಿಂಗಯೋಗ ಎನ್ನುತ್ತಾರೆ.[೧೫೧] ಈ ಯೋಗದ ಸಾಧನೆಯಲ್ಲಿಯ ಆರು ಹಂತಗಳನ್ನು ಅಥವಾ ಆರು ಹಂತದ ಭಕ್ತಿಯನ್ನು ಮೇಲಿನಂತೆ ಕ್ರಮವಾಗಿ ಆರು ರೀತಿಯಲ್ಲಿ ಗುರುತಿಸಲಾಗಿದೆ. ಭಕ್ತ ಸ್ಥಳಲದಲ್ಲಿ ಶ್ರದ್ಧಾ ಭಕ್ತಿಯನ್ನು, ಮಹೇಶ ಸ್ಥಲದಲ್ಲಿ ನಿಷ್ಠಾಭಕ್ತಿಯನ್ನು, ಪ್ರಸಾದಿ ಸ್ಥಲದಲ್ಲಿ ಅವಧಾನ ಭಕ್ತಿಯನ್ನು, ಪ್ರಾಣಲಿಂಗಿ ಸ್ಥಲದಲ್ಲಿ ಅನುಭಾವ ಭಕ್ತಿಯನ್ನು, ಶರಣ ಸ್ಥಲದಲ್ಲಿ ಆನಂದ ಭಕ್ತಿಯನ್ನು, ಐಕ್ಯಸ್ಥಲದಲ್ಲಿ ಸಮರಸ ಭಕ್ತಿಯನ್ನು ತಿಳಿಸಲಾಗಿದೆ. ಮಾನವನ ಅಂತರಂಗದ ವಿಕಾಸ ಕ್ರಮವು ಇಲ್ಲಿ ಅಡಗಿರುವುದನ್ನು ಕಾಣಬಹುದು. ಇಲ್ಲಿ ವ್ಯಕ್ತಿ ನೀನು-ನಾನೆಂಬ ಭಾವ ಅಡಗಿಸಿಕೊಂಡು ಸ್ವಯಂ ಲಿಂಗವಾಗಿ ಎಲ್ಲ ಕ್ರಿಯೆಗಳನ್ನು ಕೈಗೊಳ್ಳುವ ಸಾಧನಾ ಪಥವಿರುವುದನ್ನು ಅರಿಯಬಹುದು. ಆ ದಾರಿಯನ್ನು ವಚನಕಾರರು ಇಲ್ಲಿ ತಮ್ಮದೇ ಆದ ವಿಚಾರಗಳ ಹಿನ್ನೆಲೆಯಲ್ಲಿ ವಿವರಿಸಿದ್ದುದು ಕಂಡುಬರುತ್ತದೆ. ಆದರೆ ಭಕ್ತನಾದವನು ಭಂಡಭಕುತಿ ಮಾಡಬಾರದೆಂಬ ಸಲಹೆಯೂ ಇಲ್ಲಿ ವ್ಯಕ್ತವಾಗಿದೆ.

'ಕಂಡಲಿ ಕೈ ಮುಗಿಯುವ
ಭಂಡ ಭಕುತಿಯು ಬೇಡ
ಕಾವಿಯ ತೊಟ್ಟವರೆಲ್ಲರಲಿ
ಕೈ ಮುಗಿಯಬೇಡ
ಸದಾಚಾರ ಸದ್ಗುಣಗಳ ಕಂಡು
ತನು ಮನದಿ ಶರಣಾಗು
ಈಶ್ವರಿ ಪ್ರಿಯ ಶಿವಲಿಂಗ
ಶರಣ ಸಂಕುಲದಲ್ಲಿ'[೧೫೨]

ಲಾಂಛನಕ್ಕೆ ಶರಣೆನ್ನಬಾರದು. ಅವರ ಸದಾಚಾರ, ಸದ್ಗುಣಗಳನ್ನು ಕಂಡು ಅವರಿಗೆ ತನು-ಮನದಿಂದ ಶರಣಾಗಬೇಕು. ಭಕ್ತನಾದವನು ಕಂಡಲ್ಲಿ ಕೈ ಮುಗಿಯಬಾರದೆಂಬ ಎಚ್ಚರಕೆಯನ್ನೂ ಇಲ್ಲಿ ನೀಡಲಾಗಿದೆ.

ಭಕ್ತಿಯಲ್ಲಿ ಅಜ್ಞಾನವಿರಬಾರದು ಮೂಢನಂಬಿಕೆಗಳು ಇರಬಾರದೆಂಬ ಸಂದೇಶದ ನೆಲೆಗಳನ್ನು ಇಲ್ಲಿನ ಕಾಣಬಹುದು.

**೫-೩-೩ ಮೂಢನಂಬಿಕೆಗಳ ನಿರಾಕರಣೆ**

'ಲಕ್ಷ ದೀಪೋತ್ಸವಕ್ಕೆಂದು
ಲಕ್ಷಗಟ್ಟಲೆ ಹಣ ಸುರಿಸುವ ಅಣ್ಣಗಳಿರಾ
ಎಣ್ಣೆಯಿಲ್ಲದೆ ತಲೆ ಒಣಗಿ ಹೋಗಿವೆ
ಅನ್ನವಿಲ್ಲದೆ ಮುಖ ಬಾಡಿ ಹೋಗಿವೆ
ತಲೆಗೊಂದಿಷ್ಟು ಎಣ್ಣೆ, ಹೊಟ್ಟೆಗೊಂದಿಷ್ಟು ಅನ್ನ ನೀಡಿ
ಕೊಡ ಪುಣ್ಯ ಗಳಿಸಿಕೋ....'[೧೫೩]

ಎಂದು ಹೇಳುವ ವಚನಗಳನ್ನು ಲಕ್ಷಿಸಬೇಕು. ಭಕ್ತಿಯ ಹೆಸರಿನಲ್ಲಿ ದೇವರಿಗೆ ಲಕ್ಷ, ಲಕ್ಷ ದೀಪ ಹಚ್ಚಿಸಿ, ಎಣ್ಣೆ ಹಾಗೂ ಶ್ರಮವನ್ನು ಹಾಳುಗೆಡುವುತ್ತಾರೆ. ಇದೊಂದು ಮೂಢಭಕ್ತಿಯ ನೆಲೆ. ಇದರಿಂದ ಏನು ಪ್ರಯೋಜನ? ಅದೇ ಸಾವಿರಾರು ಬಡಬಗ್ಗರು, ಎಣ್ಣೆಯಿಲ್ಲದೆ ಜೀವನ ಸಾಗಿಸುತ್ತಿದ್ದಾರೆ. ಹಾಗೆಯೇ ಪ್ರಸಾದದ ಹೆಸರಿನಲ್ಲಿ ಅನ್ನ ಹಾಳುಮಾಡುವುದೂ ತರವಲ್ಲ. ಬಡವರಿಗೆ ನೀಡಿದರೆ ಒಳ್ಳೆಯದಲ್ಲವೇ? ಎಂಬ ವೈಚಾರಿಕ ಮಾತನ್ನಿಲ್ಲಿ ಹೇಳಲಾಗಿದೆ. ನೇಮ, ಜಪ, ತಪಗಳ ಹೆಸರಿನಲ್ಲಿ ಮೂಢಾಚರಣೆಗೆ ಬಲಿಯಾಗುವುದನ್ನು ಆಧುನಿಕ ವಚನಕಾರರು ಪ್ರಶ್ನಿಸುತ್ತಾರೆ.

'ನೇಮ ನೇಮವೆಂದು
ನಾಮ ಹಾಕುವುದೇಕೆ ಪಂಗ
ನಾಮ ಹಾಕುವುದೇಕೆ?
ಹೋಮ ಹೋಮವೆಂದು
ತುಪ್ಪ ಸುರಿಯುವುದೇಕೆ ಜೇನು
ತುಪ್ಪ ಸುರಿಯುವುದೇಕೆ?
ನೇಮ ಹೋಮವ ಬಿಟ್ಟು
ಜೀವ ಪ್ರೀತಿಯ ಕೊಟ್ಟು
ಜೀವವಿದ್ದವರೆಲ್ಲಾ ಒಂದಾಗಲಾರರೆ....'[೧೫೪]

ಎನ್ನುವ ಈ ವಚನ ವೈಚಾರಿಕ ನೆಲೆಯಲ್ಲಿ ಮೂಡಿಬಂದಿದೆ ನೇಮದ ಹೆಸರಲ್ಲಿ ನಾಮ ಹಾಕುವುದನ್ನು ಹೋಮದ ಹೆಸರಲ್ಲಿ ತುಪ್ಪ, ಜೇನುತುಪ್ಪ ಸುಡುವುದನ್ನು ಪ್ರಶ್ನಿಸುತ್ತ ಧರ್ಮದ ಹೆಸರಲ್ಲಿರುವ ನೇಮ ಹೋಮಗಳನ್ನು ಬಿಟ್ಟು ಜೀವ ಪ್ರೀತಿಯನ್ನು ಕೊಡಬೇಕೆಂದು ಸಾರುತ್ತದೆ. ಜೀವವಿದ್ದವರೊಂದಿಗೆಲ್ಲಾ ಒಂದಾಗಬೇಕೆಂಬ ಸೂಚನೆಯನ್ನು ನೀಡುತ್ತದೆ. ಭಕ್ತಿಯ ಹೆಸರಿನಲ್ಲಿ ಬಡವರ ಸುಲಿಗೆ ತಪ್ಪಬೇಕು. ಜೀವನಕ್ಕೆ ಜೀವಿಗಳಿಗೆ ಅವಶ್ಯವಿರುವ ತುಪ್ಪ-ಜೇನುತುಪ್ಪದಂಥ ವಸ್ತುಗಳು ದೊರಕಬೇಕೆಂಬ ಸದಾಶಯದ ನೆಲೆಯಲ್ಲಿ ಈ ವಚನ ಅಭಿವ್ಯಕ್ತಗೊಂಡಿದೆ.

'ಧಾರ್ಮಿಕ ಶೋಷಣೆ ಸಮಾನತೆಗೆ
ಶರಣರು ಹೋರಾಡಿದರಯ್ಯಾ
ಮಾನವರಲ್ಲಿ ಮೇಲು ಕೀಳೆಣಿಸದೆ
ಕಾಯಕವೇ ಕೈಲಾಸವೆಂದರಯ್ಯಾ
ವೇಶ್ಯರಿಗೂ ಭಕ್ತರಾಗಿಸಿ ಸಮಾನತೆ ಸಾರಿದರಯ್ಯಾ
ಆಧುನಿಕ ಯುಗದಲ್ಲಿ
ಶರಣರ ವೇಷ ಹಾಕಿ ಹೊಟ್ಟೆ
ತುಂಬಿಸಿಕೊಳ್ಳುವ ಡಂಭರ ನೋಡಿ
ನಗು ಬರುವುದಯ್ಯಾ....'[೧೫೫]

ಎನ್ನುವಲ್ಲಿಯೂ ಡಂಭಾಚಾರಿ ವೇಷಧಾರಿ ಶರಣರನ್ನು ತರಾಟೆಗೆ ತಗೆದುಕೊಳ್ಳಲಾಗಿದೆ. ಹಿಂದೆ ಆಗಿ ಹೋಗಿರುವ ಬಸವಾದಿ ಶರಣರು ಶೊಷಣೆ, ಅಸ್ಪೃಶ್ಯತೆಗಾಗಿ ಹೋರಾಡಿ ಧರ್ಮದಲ್ಲಿ ಸಮಾನತೆ ತರಲು ಹೆಣಗಿದರು. ಮಾನವರಲ್ಲಿ ಮೇಲು-ಕೀಳೆನಿಸಲಿಲ್ಲ. ಕಾಯಕವೇ ಕೈಲಾಸವೆಂದು ಸಾರಿದರು. ಆದರೆ ಇಂದಿನ ಯುಗದಲ್ಲಿರುವ ಶರಣವೇಷಧಾರಿಗಳನ್ನು ಹೊಟ್ಟೆ ತುಂಬಿಸಿಕೊಳ್ಳುವ ಡಂಭರು ಎನ್ನುವಲ್ಲಿ ಅವರ ಅನಾಚಾರಗಳನ್ನು ಬಯಲಿಗೆಳೆದಿದ್ದಾರೆ. ವಿಜ್ಞಾನ ಯುಗದಲ್ಲಿರುವ ನಾವು ಚಂದ್ರನ ಮೇಲೆ ಕಾಲಿರಿಸಿದ್ದೇವೆ. ಆಣೆಕಟ್ಟುಗಳನ್ನು ಕಟ್ಟಿಸಿದ್ದೇವೆ. ಕ್ಯಾನ್ಸರ್, ಏಡ್ಸನಂತಹ ರೋಗಗಳಿಗೆ ಔಷಧಿ ಕಂಡುಹಿಡಿಯಲಾಗಿದೆ. ಅಣುಬಾಂಬ ಸ್ಫೋಟಿಸಿ ಹೆಣಗಳ ರಾಶಿ ಹಾಕುತ್ತಿದ್ದೇವೆ. ಆದರೆ ಇಷ್ಟೆಲ್ಲ ವೈಜ್ಞಾನಿಕತೆ ಬೆಳೆದರೂ, ವೈಚಾರಿಕತೆ ಬೆಳೆಯದೇ ದೇವರ ಹೆಸರಿನಲ್ಲಿ ಮೂಕ ಪ್ರಾಣಿಗಳ ಬಲಿ ಕೊಡುವ ಮೌಢ್ಯತೆ ನೋಡಿ ನಾಚಿದೆನಯ್ಯಾ'[೧೫೬] ಎಂದಿರುವುದನ್ನು ಗಮನಿಸಿದರೆ, ನಾವು ಇನ್ನೂ ಎಷ್ಟೊಂದು ಧಾರ್ಮಿಕ ಮೌಢ್ಯತೆಯಲ್ಲಿದ್ದೇವೆ ಎಂಬ ಅರಿವಾಗದಿರದು. ಧರ್ಮದ ಹೆಸರಲ್ಲಿ ಆಧುನಿಕ ಯುಗದಲ್ಲಿ ನಡೆಯುವ ಇನ್ನೂ ಹಲವು ಕ್ರಿಯೆಗಳನ್ನು ಡಾ. ಸೋಮನಾಥ ಯಾಳವಾರ ಅವರ ವಚನ ಹಿಡಿದಿಟ್ಟಿರುವುದು ಹೀಗಿದೆ.

'ಬೆಳ್ಳಿ ಬಾಬಾಗೆ ಹಾಲು ಕುಡಿಸಿದವರು ಕೋಟಿ, ಕೋಟಿ
ಕಲ್ಲಿನ ಗಣಪತಿಗೆ ತೀರ್ಥ ಹಾಕಿದವರು ಕೋಟಿ, ಕೋಟಿ
ಹುಲ್ಲು ಬೆಳೆದ ಹುತ್ತಕ್ಕೆ ಹಾಲೆರೆದವರು ಕೋಟಿ, ಕೋಟಿ
ದಿಗಂಬರ ಶಿಲೆಗೆ ಮಜ್ಜನ ಮಾಡಿಸಿದವರು ಕೋಟಿ, ಕೋಟಿ
ಹಸಿದ ಬಡವರ ಹಟ್ಟಿಗೆ ಹೋಗಿ ಅನ್ನ, ನೀರು
ನೀಡಿದವರನೊಬ್ಬರನೂ ಕಾಣೆ
ಸೋಮಲೋಚನ ಪ್ರಿಯ ಬಸವಣ್ಣ'[೧೫೭]

ಇತ್ತೀಚಿನ ದಿನಮಾನಗಳಲ್ಲಿ ನಡೆದ ನೈಜ ಘಟನೆಗಳನ್ನು ಇಲ್ಲಿ ವಚನವಾಗಿರಿಸಲಾಗಿದೆ. ಮೂಢ ನಂಬಿಕೆಯನ್ನು ಸೃಷ್ಟಿಸಿ, ಮೂಢ ಭಕ್ತರ ಮನದಲ್ಲಿ ಇಲ್ಲಸಲ್ಲದ ವಿಚಾರ ತುಂಬಿ, ತಾವು ತೋರಿದ ಆಚಾರದಲ್ಲಿ ಭಾಗಿಯಾಗುವಂತೆ ಮಾಡಿ, ಹಣ ಸುಲಿದು ತಮ್ಮ ಬೇಳೆ ಬೇಯಿಸಿಕೊಳ್ಳುವ ಧರ್ಮಾಂಧರನ್ನು ಇಲ್ಲಿ

ಬಯಲಿಗೆಳೆಯಲಾಗಿದೆ. ಭಕ್ತಿಯಲ್ಲಿ ವೈಚಾರಿಕತೆ ಮೂಢಬೇಕು. ಅದರಲ್ಲಿ ಮೂಢತನ ಸೇರಬಾರದೆಂಬ ಆಲೋಚನೆಯ ನೆಲೆಯ ವಚನಗಳೂ ಇಲ್ಲಿ ರಚನೆಯಾಗಿವೆ.

'ಕಾಯವೇ ಶರಣನ ಅನುಭವಮಂಟಪ
'ಅರಿವೇ ಗುರು' ಶಿವರೂಪ
ಶಿವರೂಪ ಕಂಡು ಶರಣ ಹಚ್ಚಿದನು
ದಯೆಯ ನಂದಾದೀಪ, ಆ ದೀಪದ
ಬೆಳಗಿನಲಿ ಹೊಳೆಯಿತು ಸರ್ವಲೋಕ
ಕಳೆಯಿತು ಅಜ್ಞಾನದಿಂದೊಸರುವ ಶೊಕವೆಂದ
ಶರಣ ಕಿರಣ ಪ್ರಿಯ ಮಾಣಿಕ'[೧೫೮]

**೫-೩-೪ ಸಮಾಜೋ-ಧಾರ್ಮಿಕ ಚಿಂತನೆ**

ಶರಣ ಸಂಸ್ಕೃತಿಯಲ್ಲಿ ಜೀವನದ ಎಲ್ಲ ನೆಲೆಗಳು ಆಧ್ಯಾತ್ಮೀಕರಣಗೊಳ್ಳಬೇಕೆಂಬ ಸದಾಶಯ ವ್ಯಕ್ತವಾಗಿದೆ. ಆ ನೆಲೆಯಲ್ಲಿ ಆಧುನಿಕ ವಚನಕಾರರ ಕೆಲವು ಚಿಂತನೆಗಳು ಒಡಮೂಡಿದ್ದು, 'ಧಾರ್ಮಿಕ ಸಮಾಜ' ನಿರ್ಮಾಣವಾಗಬೇಕೆಂಬ ಆಸೆಯ ಅಲ್ಲಿ ವ್ಯಕ್ತವಾಗಿರುವಂತಿದೆ. ಒಂದು ಸಮಾಜ ಆರೋಗ್ಯವಂತ ಸಮಾಜವಾಗಬೇಕಾದರೆ ಅದು ಆಧ್ಯಾತ್ಮಿಕರಣಗೊಳ್ಳಬೇಕೆಂಬ ವಿಚಾರಗಳಿವೆ. 'ಆರೋಗ್ಯ ಎಂದರೆ ಕೇವಲ ನಿರೂಗಿಯಾಗಿ, ರೋಗವಿಲ್ಲದೆ ಇರುವುದಲ್ಲ WHO (World Health Organisation) ಹೇಳುವಂತೆ ಆರೋಗ್ಯ ಎಂದರೆ ಮಾನಸಿಕ ಮತ್ತು ದೈಹಿಕವಾಗಿ ಬಲವಾಗಿರುವದಷ್ಟೇ ಅಲ್ಲ; ಆರ್ಥಿಕವಾಗಿ, ಸಾಮಾಜಿಕವಾಗಿ ಫಲಕಾರಿ ಜೀವನ ನಡೆಸುವ ಸಾಮರ್ಥ್ಯ ಇರುವುದೇ ಆರೋಗ್ಯದ ಲಕ್ಷಣ. ಇಂಥ ಫಲಕಾರಿ ಜೀವನವನ್ನು ಕಲ್ಯಾಣದಲ್ಲಿ ಶರಣರು ನೀಡಿದರು. ಧರೆಯನ್ನೇ ಕೈಲಾಸವಾಗಿ ಮಾರ್ಪಡಿಸಲು ಅವರು ಮುಂದಾದರು'[೧೫೯] 'ದೇವಲೋಕ ಮರ್ತ್ಯಲೋಕ' ಬೇರಿಲ್ಲವೆಂದದ್ದಲ್ಲದೆ ಸತ್ಯ ನುಡಿಯುವುದೇ ದೇವಲೋಕ, ಮಿಥ್ಯ ನುಡಿಯುವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂದು ದೇವ ಪ್ರಮಾಣವಾಗಿಟ್ಟುಕೊಂಡು ನುಡಿದಂಥ ಬಸವಣ್ಣವರ ಮಾತುಗಳು ಹಲವು ಆಧುನಿಕರ ಚಿಂತನೆಗಳಲ್ಲಿ ಬೇರೆ ಬೇರೆ ಸ್ವರೂಪದಲ್ಲಿ ವ್ಯಕ್ತಗೊಂಡಿವೆ ಎನ್ನಬಹುದು. ಸತ್ಯ ಎಂದರೇನು? ಎಂಬುದನ್ನು ಕುರಿತ ಆಲೋಚನೆ ಹೀಗಿದೆ.

'ಸ್ವಾಮಿ ನನಗೆ ಸತ್ಯವೇ ಪುಣ್ಯ
ಸ್ವಾಮಿ ನನಗೆ ಸತ್ಯವೇ ಭಾಗ್ಯ
ಸ್ವಾಮಿ ನನಗೆ ಸತ್ಯವೇ ಆಧ್ಯಾತ್ಮ
ಸ್ವಾಮಿ ನನಗೆ ಸತ್ಯವೇ ಭಕ್ತಿ
ಸ್ವಾಮಿ ನನಗೆ ಸತ್ಯವೇ ಶಕ್ತಿ
ಸ್ವಾಮಿ ನನಗೆ ಸತ್ಯವೇ ಮುಕ್ತಿನೋಡಾ
ಸತ್ಯಂ ಶಿವಂ ಸುಂದರಂ ಎಂದ ಕಾರಣ
ಸತ್ಯವೇ ಸಾಕ್ಷಾತ್ ಗುರುನಂಜೇಶ್ವರ'[೧೫೯]

ಸತ್ಯವೆಂಬುದನ್ನು ಪುಣ್ಯ, ಭಾಗ್ಯ, ಆಧ್ಯಾತ್ಮ, ಭಕ್ತಿ ಶಕ್ತಿ, ಮುಕ್ತಿ ಸಾಕ್ಷಾತ್ ಗುರುನಂಜೇಶ್ವರ ಎಂಬ ಹಲವು ನೆಲೆಗಳಲ್ಲಿ ಗುರುತಿಸಿದ್ದನ್ನಿಲ್ಲಿ ಮನಗಾಣಬಹುದು. ಮರ್ತ್ಯಲೋಕದಲ್ಲಿದ್ದುಕೊಂಡೇ ದೇವಸಾನಿಧ್ಯವನ್ನು ಪಡೆದುಕೊಂಡಿರುವ ಹಾಗೂ ಅದಕ್ಕಾಗಿ ಹಂಬಲಿಸುವ ಸಮಜೋ–ಧಾರ್ಮಿಕ ಚಿತ್ರಣಗಳು ಆಧುನಿಕ ವಚನದಲ್ಲಿವೆ.

'ನಿತ್ಯ ನೆನೆ ದೇವರನು
ದಾರಿ ತೋರುವನವನು
ಕೈ ಹಿಡಿದು ನಡೆಸುವನು
ಆಧ್ಯಾತ್ಮದನುಭಾವ ಇದ್ದಲ್ಲೇ
ನೀಡುವನು ನಿನಗೆಂದ
ಶರಣ ಕಿರಣಪ್ರಿಯ ಮಾಣಿಕನು'[೧೬೦]

ತಾನಿದ್ದ ಸ್ಥಾನದಲ್ಲಿಯೇ ದೇವನ ನೆನೆದರೆ ಆತನು ಕೈಹಿಡಿದು ನಡೆಸುವನಲ್ಲದೆ ಇದ್ದಲ್ಲೇ ಆಧ್ಯಾತ್ಮದನುಭಾವ ನೀಡುತ್ತಾನೆಂಬ ಭರವಶೆ ಕೊಡುತ್ತಾನೆ ವಚನಕಾರ. ಆಚಾರವಿಂದು ಯಾವ ತೆರನಾಗಿರಬೇಕು. ಅದು ವೈಚಾರಿಕ ಆಚಾರವಾಗಿರಬೇಕು ಎನ್ನುತ್ತಾರೆ ಸಬರದ ಅವರು ಆ ವಚನ ಹೀಗಿದೆ.

'ಗ್ರಹಣ ಹಿಡಿದಾಗ ಬಂದು
ಪೂಜೆ ಮಾಡುವವರು
ಅವರೆಂತಹ ವಿಜ್ಞಾನಿಗಳಯ್ಯಾ?
.................................
.................................
ವೈಚಾರಿಕತೆ ಇರಬೇಕಾದದ್ದು
ಆಚರಣೆಯಲ್ಲೇ ಹೊರತು
ಬರಿಮಾತಿನಲ್ಲಿ ಅಲ್ಲವಯ್ಯಾ...'[೧೬೧] (ಡಾ. ನಾಗೇಂದ್ರ ಮಸೂತಿ–ಬೂದಿಗರ್ಭದಕೆಂಡ ಪು.೩೫–೩೬)

ಆಚಾರವೇ ಸ್ವರ್ಗವೆಂದರೆ, ವೈಚಾರಿಕ ಆಚಾರವೇ ಹೊರತು, ಡಂಬಾಚಾರ ಅಜ್ಞಾನಾಚಾರವಲ್ಲ ಎಂಬುದನ್ನು ಈ ವಚನದಲ್ಲಿ, ಮನಗಾಣಬಹುದು. ವಿಜ್ಞಾನಿಗಳ, ವೈದ್ಯರ, ವೈಚಾರಿಕ ಭಾಷಣಕಾರರ ಮನಸ್ಸುಗಳಿಗೆ ಗ್ರಹಣ ಹಿಡಿದದ್ದನ್ನು ತಿಳಿಸುವ ಈ ವಚನ, ವಿಚಾರಗಳು ಕೇವಲ ಬಾಯಲ್ಲಿರಬಾರದು ಅವು ಸತ್ಯ ಶುದ್ಧ ಆಚಾರದಲ್ಲಿರಬೇಕೆಂದು ಸಾರುತ್ತದೆ. ಪರಮ ಆತ್ಮವೇ ನಮ್ಮೊಂದಿಗಿದೆ ಎಂದು ಭಾವಿಸಿಕೊಂಡಿರುವಾಗ ಯಾವ ಆಸೆಯೂ ಇರಬೇಕಾಗಿಲ್ಲ ಎಂಬ ನೆಲೆಯ ವಚನವೊಂದು ಹೀಗಿದೆ.

'ಪರದಲ್ಲಿಯ ಕೈಲಾಸ, ವೈಕುಂಠಕ್ಕೆ ಏಣಿ ಹಾಕಬೇಕಿಲ್ಲ
ಪರದ ಭೋಗ, ವೈಭೋಗಗಳಿಗೆ ಹಾಸುಗೆ ಹಾಕಬೇಕಿಲ್ಲ
ಪರಧನದ ಚಾಂಚಲ್ಯದ ಪದಕ್ಕೆ ವ್ಯಾಮೋಹ ಬೇಕಿಲ್ಲ
ಪರಸತಿಯ ಸೊಬಗು ಸೌಂದರ್ಯಕ್ಕೆ ಆಸೆ ಬೇಕಿಲ್ಲ

ಪರತತ್ವದ ಪಾಠಗಳನ್ನು ಓದಲು ಭಾಷೆ ಬೇಕಿಲ್ಲ

ಪರಮ ಆತ್ಮ ಶ್ರೀ ಗುರುಸಿದ್ಧನೇ ನನ್ನೊಂದಿಗಿರುವಾಗ'[೧೬೨]

ಪರಮ ಆತ್ಮವೇ ನನ್ನೊಂದಿಗಿದೆ ಎಂಬ ನಂಬಿಕೆ ಪ್ರಬಲವಾಗಿದ್ದರೆ ಸಾಕು ಧಾರ್ಮಿಕವಾದ ಯಾವ ಆಸೆಯೂ ಬೇಕಿಲ್ಲವೆನ್ನುತ್ತದೆ ಈ ವಚನ. ಕೈಲಾಸ, ವೈಕುಂಠಗಳಿಗೆ ಏಣಿ ಹಚ್ಚುವ ಆಸೆ ಬೇಡ, ಸ್ವರ್ಗದ ಭೋಗ, ವೈಭೋಗದ ಹಾಸಿಗೆ ಬೇಡ, ಪರಧನ, ಪರಸತಿ, ಪರತತ್ವಗಳ ವ್ಯಾಮೋಹವೂ ಬೇಕಾಗಿಲ್ಲ. ಆ ನಂಬುಗೆ ನಮ್ಮೊಂದಿಗಿದ್ದಾಗ ಇವೆಲ್ಲವೂ ಉಂಟು ಎಂಬ ವೈಚಾರಿಕ ಸಂಗತಿಯನ್ನು ಇಲ್ಲಿ ನೀಡಲಾಗಿದೆ. ಆದರೆ ವೈಚಾರಿಕತೆ ಮರೆತು ಹೋದರೆ 'ಅತ್ತ ಸ್ವರ್ಗ ಕಾಣದೆ, ಇತ್ತ ನರಕ ಸೇರದೆ, ಅತಂತ್ರವಾದ ಅತೃಪ್ತ ಆತ್ಮಗಳೇ, ಕಾಡು, ಮೇಡು, ಊರು, ಕೇರಿ, ಹಾದಿ-ಬೀದಿಗಳಲ್ಲಿ, ಗಾಳಿ, ಮಳಿ, ಧೂಳು-ಬಿಸಿಲುಗಳಲ್ಲಿ ಕಂಗಾಲಾಗಿ ಬಿದ್ದಿವೆಯೆನ್ನುತ್ತಾರೆ. ದೇಶಾಂಶ ಹುಡಗಿಯವರು.'[೧೬೩] ಇಂಥ ದೇವತೆಗಳನ್ನು ಕುರಿತು ಮಾತನಾಡುತ್ತ

'ಆಗಿನ ದೇವತೆಗಳು ಧರ್ಮದ ಹೆಸರಿನಲ್ಲಿ ಸುಲಿದವು

ಈಗಿನ ದೇವತೆಗಳು ಪಕ್ಷದ ಹೆಸರಿನಲ್ಲಿ ಸುಲಿವವು

ಅವರೂ ಕಳ್ಳರು, ಇವರೂ ಕಳ್ಳರು

ಈ ಕಳ್ಳರನ್ನು ಮೆರೆಸುವವರು ಮಹಾಕಳ್ಳರು

ಇವರಲ್ಲಿ ಸಾತ್ವಿಕತೆಯ ಹಿಂದಡಗಿದ ತಾಮಸಿಗಳೆಂದ

ದಿಗಂಬರ ಕರಿಬಸವೇಶ್ವರ'[೧೬೪]

ಆಗಿನ ಈಗಿನ ದೇವತೆಗಳ ಹೆಸರಿನ ಸುಲಿಗೆಯನ್ನು ತಿಳಿಸುವ ಈ ವಚನ ಇಂದು ಧರ್ಮ, ದೇವತೆಗಳ ಹೆಸರಿನಲ್ಲಿ ಸಮಾಜದಲ್ಲುಂಟಾಗುತ್ತಿರುವ ಪರಿಣಾಮವನ್ನು ತಿಳಿಸುತ್ತದೆ. ಇಂದಿನ ಸಮಾಜದಲ್ಲೂ ಪಕ್ಷದ ಹೆಸರಿನಲ್ಲಿ, ದೇವತೆಗಳ ಹೆಸರಿನಲ್ಲಿ ಅನ್ಯಾಯ ಮಾಡುತ್ತಿರುವವರನ್ನು ಕಳ್ಳರು ಎನ್ನುವ ವಚನಕಾರರು, ಅವರನ್ನು ಮೆರೆಸುವವರನ್ನು ಮಹಾಕಳ್ಳರೆಂದು ತಿಳಿಸುತ್ತ, ಸಾತ್ವಿಕತೆಯ ಹಿಂದಡಗಿದ ತಾಮಸಗಳಿವು ಎಂದಿರುವುದು ಇಂದಿನ ಸಮಾಜೋ-ಧಾರ್ಮಿಕ ಸ್ಥಿತಿಯನ್ನು ಕಣ್ಣಮುಂದೆ ನಿಲ್ಲಿಸುತ್ತದೆ. ಧರ್ಮದ ಹೆಸರಿನಲ್ಲಿ ಲಾಂಛನ ಧರಿಸಿರುವ ಇಂದಿನ ಸಮಾಜದಲ್ಲಿಯ ಮುಖವಾಡಗಳನ್ನು ಬಯಲಿಗೆಳೆಯುವ ರೀತಿ ಹೀಗಿದೆ. 'ಲಿಂಗ ಕಟ್ಟಿದವರೆಲ್ಲ ಲಿಂಗಾಯತರಲ್ಲ, ಜನಿವಾರ ಹಾಕಿದವರೆಲ್ಲ ಬ್ರಾಹ್ಮಣರಲ್ಲ, ಶಿಲುಬೆ ಕಟ್ಟಿದವರೆಲ್ಲ ಕ್ರೈಸ್ತರಲ್ಲ, ಸುನ್ನತಿ ಮಾಡಿಕೊಂಡವರೆಲ್ಲ ಮುಸ್ಲೀಂರಲ್ಲ, ತಲೆ ಬೋಳಿಸಿಕೊಂಡವರೆಲ್ಲ ಬೌದ್ಧರಲ್ಲ, ಬಾಯಿ ಮೂಗಿಗೆ ಬಟ್ಟೆ ಕಟ್ಟಿದವರೆಲ್ಲ ಜೈನರಲ್ಲ, ತತ್ವಾಚರಣೆಯಿಲ್ಲದೆ ಲಾಂಛನ ಧರಿಸಿ ಹೊಟ್ಟೆ ಹೊರೆಯುವ ಡಾಂಭಿಕರಿಗೆ ಯಾರೂ ಮೆಚ್ಚರು ನೋಡಾ'[೧೬೫] ಎನ್ನುವ ಸೂಗಯ್ಯ ಹಿರೇಮಠ ವಚನ ಈ ನೆಲೆಯಲ್ಲಿ ಗಮನಾರ್ಹವಾಗುತ್ತದೆ.

ಇಂದಿನ ಸಾಮಾಜಿಕದ ಎಲ್ಲ ರಂಗಗಳಲ್ಲಿ ಏನಾದರೂ ಸಾಧಿತವಾದರೆ ಅದನ್ನು ದೇವ ಮಹಿಮೆ ಎನ್ನುವ ವಿಚಾರ, ಸಮಾಜದಲ್ಲಿ ಉಳಿದು ಬಂದಿರುವುದನ್ನು ವಚನಕಾರರು ಕಡೆಗಣಿಸಿಲ್ಲ ಅದನ್ನು ಕುರಿತು ಹೇಳುವ ವಚನವನ್ನೂ ಗಮನಿಸಬಹುದು.

'ಗುರುವಿನ ಮಹಿಮೆ ವಿದ್ಯೆಯಲ್ಲಿ

ಧೀರನ ಮಹಿಮೆ ಯುದ್ಧದಲ್ಲಿ

ಗರತಿಯ ಮಹಿಮೆ ಶೀಲದಲ್ಲಿ

ಮಂತ್ರಿಯ ಮಹಿಮೆ ತಂತ್ರದಲ್ಲಿ
ಭಕ್ತನ ಮಹಿಮೆ ಭಕ್ತಿಯಲ್ಲಿ ಗಿರಿಸಿದ್ಧಲಿಂಗ'[೧೬೬]

ಎನ್ನುವಲ್ಲಿ 'ಮಹಿಮೆ'ಯನು ಶಕ್ತಿ ಎಂಬ ಅರ್ಥದಲ್ಲಿ ಬಳಸಿಕೊಳ್ಳಲಾಗಿದೆ. ಆದರೆ ಆ ಪ್ರತಿಯೊಂದು ಶಕ್ತಿಯ ಹಿಂದೆ ಇನ್ನೊಂದು ಕಾಣದ ಶಕ್ತಿಯಿದೆ ಎಂಬ ನಂಬಿಕೆ ಧಾರ್ಮಿಕ ಸಮಾಜದಲ್ಲಿದೆ.

'ಜಯಿಸಬೇಕು ಜಯಿಸಬೇಕು
ನಿದ್ದೆಗಣ್ಣನು ತೆರೆದು ಸದ್ದುಗದ್ದಲ ಮಾಡದೆ
ಸಿಹಿ, ಕಹಿ ಸಂಸಾರ ಸಾಗಿಸಬೇಕಯ್ಯ
ದುಃಖ ದುಮ್ಮಾನಗಳಿಗಂಜದೆ
ಭವರೋಗ ವೈದ್ಯನ ಭಜಿಸುತ್ತ
ಭವಗೆದೆಯ ಬೇಕೆಂದ ನಮ್ಮ
ಶ್ರೀ ವೀರಭದ್ರೇಶ್ವರ'[೧೬೭]

ಈ ವಚನದಲ್ಲಿ ಅಭಿವ್ಯಕ್ತಗೊಂಡಿರುವಂತೆ ಈ ಬಾಳನ್ನು ಜಯಿಸಲು ಹಿಂದಿರುವ ಶಕ್ತಿ ಭವ ರೋಗ ದೂರ ಮಾಡುವ ವೈದ್ಯನೆಂಬುದು. ಸುಖ ದುಃಖಗಳ ಮಿಶ್ರಣವಾಗಿರುವ ಈ ಸಂಸಾರ ಸಾಗಿಸಲು, ಬಾಳನ್ನು ಜಯಿಸಲು, ನಿದ್ದೆಗಣ್ಣನ್ನು ತೆರೆಯಲು ಆ ದೇವನನ್ನು ಭಜಿಸಬೇಕು. ಆತನ ಒಲುಮೆಯಿಂದ ಭವಗೆದೆಯಬಹುದೆಂಬ ಅನಿಸಿಕೆಗಳೂ ಇಲ್ಲಿ ಒಡಮೂಡಿವೆ.

ಇಲ್ಲಿ ಆಧುನಿಕ ವಚನಕಾರರ ಧಾರ್ಮಿಕ ನೆಲೆಯ ವಚನಗಳು ಸಾಮಾಜಿಕ ಪ್ರಜ್ಞೆಯುಳ್ಳವುಗಳಾಗಿದ್ದು ಅವು ಪ್ರಧಾನವಾಗಿ 'ಜನರನ್ನು ಒಳಗೊಳ್ಳುವ ಸಂಗತಿಗಳೇ ಆಗಿವೆ. ಅವು ಹೆಚ್ಚಾಗಿ ಈ ಜಗತ್ತಿನ ಬಗ್ಗೆ, ಜನರ ಧಾರ್ಮಿಕ ನಂಬಿಕೆಗಳ ಬಗ್ಗೆ, ಸಂಸಾರದಲ್ಲಿರುವ ದಂದುಗಳ ಬಗ್ಗೆ, ದೇಹ, ಭಕ್ತಿ, ಜ್ಞಾನ-ಕ್ರಿಯೆಗಳ ಬಗ್ಗೆ, ಜನಸಮುದಾಯದ ಪ್ರೀತಿ-ಪ್ರೇಮಗಳ ಬಗ್ಗೆ ಮಾತನಾಡುತ್ತವೆ.

೧) "ತತ್ವಗಳು ಎಲ್ಲರ ಬಾಯಲ್ಲಿ ಸಿಡಿಯುತ್ತವೆ
ಆದರೆ, ವಿಚಿತ್ರವೆಂದರೆ
ಅವೇ ವಿಷಯಗಳಾಗಿ ನಮ್ಮ ಸುತ್ತಿಕೊಂಡಿವೆ...'[೧೬೮]

೨) "ಮಂತ್ರ ಹೇಳುತ್ತ ತಂತ್ರ ಮಾಡುವ
ಕುತಂತ್ರಗಳನ್ನೇಕೆ ಇಟ್ಟೆಯಯ್ಯಾ
ಧರ್ಮದ ಹೆಸರಲ್ಲಿ ಸುಲಿದು ತಿನ್ನುವ
ಸುಲಿಗೆ ಗಳ್ಳರ ಬಳಿ ಎನ್ನನ್ನೇಕೆ ಬಿಟ್ಟು ಹೋದೆಯಯ್ಯಾ"[೧೬೯]

೩) "ಮಂದಿರ-ಮಸೀದಿಯ ಬದಲು ಶಾಲೆ-ಗ್ರಂಥಾಲಯ ಕಟ್ಟಿಸು
ಚರ್ಚು ಗುರುದ್ವಾರ ಬದಲು - ದವಾಖಾನೆ ವಿಜಾನ ಮಂದಿರ ಕಟ್ಟಿಸು
ಬಸವತೀರ್ಥ, ಕ್ಷೇತ್ರದ ಬದಲು ಪ್ರವಾಸಿ ಮಂದಿರ ಕಟ್ಟಿಸು"[೧೭೦]

ಇಂಥ ಮೊದಲಾದ ವಚನಗಳಲ್ಲಿ ಧಾರ್ಮಿಕ ಭಾವದ ಹಿನ್ನೆಲೆಯಲ್ಲಿರುವ ಸಮಾಜದ ಇರುಹಿಕೆಯನ್ನು ಕಾಣಬಹುದು. ಜೀವನದಲ್ಲಿ ಕಾಡುತ್ತಿರುವ ಧರ್ಮದ ಹೆಸರಿನ ಹಲವು ಆಚಾರ ವಿಚಾರಗಳನ್ನು ವ್ಯಂಗ್ಯವಾಗಿ ತಿಳಿಸುವ ಇಲ್ಲಿನ ವಚನಗಳು, ಸರಳವಾದ ಬದಕನ್ನು ಆ ನೆಲೆಯಲ್ಲಿಯ ಜೀವನ ಪದ್ಧತಿಯನ್ನು ರೂಪಿಸಿಕೊಳ್ಳಲು ತಿಳಿಸುತ್ತವೆ.

ತಮ್ಮದೇ ಆದ ವಿಶಿಷ್ಟ ಆಚಾರ-ವಿಚಾರಗಳನ್ನು ರೂಢಿಸಿಕೊಂಡು ಯಾರ ಹಂಗಿಲ್ಲದ ವೈಚಾರಿಕವಾದ ಸಾಮಾಜಿಕ ಬದುಕನ್ನು ರೂಢಿಸಿಕೊಳ್ಳಲು ತಿಳಿ ಹೇಳುತ್ತವೆ. ಧಾರ್ಮಿಕ ನೆಲೆಯ ಸಾಮರಸ್ಯದಲ್ಲಿ ವೈಚಾರಿಕ ಜೀವನಕ್ಕೆ, ಅದರ ಆಚರಣೆಗೆ ಪ್ರಧಾನ್ಯತೆ-ನೀಡಿರುವ ಇಲ್ಲಿಯ ವಚನಗಳು ಮೌಢ್ಯತೆಯನ್ನು, ಅಜ್ಞಾನದ ಆಚರಣೆಗಳನ್ನು ಖಂಡಿಸುತ್ತವೆ.

೧೨ನೇಯ ಶತಮಾನದ ಶರಣರ ಪ್ರೇರಣೆಯಲ್ಲಿ ರಚಿತಗೊಂಡಿರುವ ಅನೇಕ ವಚನಗಳು 'ಲಿಂಗ' ಲಿಂಗದ ಮಹತ್ವ, ಇಷ್ಟಲಿಂಗ ಪೂಜೆಯ ವೈಚಾರಿಕತೆಯನ್ನೂ ತಿಳಿಸುತ್ತವೆ. ಅದಕ್ಕನುಗುಣವಾದ ಭಕ್ತಿ, ಇಷ್ಟಲಿಂಗದ ಪ್ರಯೋಜನಗಳು, ಗುರುಲಿಂಗ ಜಂಗಮ, ಪಂಚಾಚಾರ, ಅಷ್ಟಾವರಣ, ಷಟಸ್ಥಲಗಳ ನಿರೂಪಣೆಯನ್ನೂ ಮಾಡುತ್ತವೆ. 'ಗುರುತತ್ವ; ವಿವರಿಸುವ ಹಲವು ವಚನಗಳೂ ಇಲ್ಲಿ ಕಾಣಸಿಗುತ್ತವೆ.

೧) "ಗುರು ಕರುಣೆಯಿಂದ ಅಜ್ಞಾನ ಅಳಿವುದು
ಗುರು ಮಾರ್ಗ ಹಿಡಿಯಲು ಸರ್ವಜ್ಞ ಪದವು
ಗುರುವಿಗಿಂತ ಬೇರೆ ದೈವವಿಲ್ಲ"[೧೭೧]

೨) "ಗುರುಚನ್ನಬಸವ ಭವಬಂಧನದಿಂದಳಿಸಿ ಮಾಡಿಹರು ಮುಕ್ತಿ"[೧೭೨]

ಲಿಂಗದ ಬಗ್ಗೆ

೧) "ಬ್ರಹ್ಮ, ವಿಷ್ಣು, ಮಹೇಶ್ವರರು
ಎನ್ನ ಕರಸ್ಥಲದ ಲಿಂಗದಲ್ಲಿ...."

(ವಿ.ಪ. ವಚನಧಾರೆ - ಪು.೪)

೨) "ದಿನಕ್ಕೊಂದು ದೇವಾಲಯ ಸುತ್ತುವವರಿಗೆ
ಇಷ್ಟಲಿಂಗ ವೇತಕ್ಕಯ್ಯ?

(ಶೋ.ಔ. ಶರಣ ಸಿರಿ - ಪು. ೩೩)

೩) "ಶರಣರ ಸಂಗವನರಿಯದವ ಸನ್ಮಾರ್ಗವೆಂತರಿವನು?
ಸನ್ಮಾರ್ಗಿಯಲ್ಲದವ ಭಕ್ತಿ ಪಥವನೆಂತರಿವನು"

(ಮ.ಹೇಡೆ ಭಾವಬಯಲಾದಾಗ - ಪು.೮೧)

೪) "ಆರು ಸ್ಥಳಂಗಳು, ಆರು ಅಂಗವಾಗಿ
ಆ ಲಿಂಗ ಸ್ಥಳಂಗಳಲ್ಲಿ ನಿಧಾನವಾಗಿ
ನೋಡುತ್ತ ಹಾಡುತ್ತ ಸಾಗು ಮನವೇ"

(ಜ.ದು. ವಚನ ಸುಗಂಧ - ಪು.೨೬)

ಧಾರ್ಮಿಕ ವಿಚಾರದಲ್ಲಿ ಲಿಂಗಾಯತ ಧರ್ಮ, ಅದರ ಆಚಾರ-ವಿಚಾರಗಳು, ಗುರು-ಲಿಂಗಾದಿ ತತ್ವಗಳು, ನೈತಿಕ ಪ್ರಜ್ಞೆಯ ಮಹತ್ವ, ಧಾರ್ಮಿಕ ಸ್ವಾತಂತ್ರ್ಯ ಇಂದಿನ ದಿನ ಮಾನಗಳಲ್ಲಿ ಅದರ ಅಧೋಗತಿಯನ್ನು

ಕುರಿತ ಹಲವು ಚಿಂತನೆಯ ನೆಲೆಗಳು ಇಲ್ಲಿ ಎದ್ದು ಕಾಣುತ್ತವೆ. ವೈಚಾರಿಕತೆಗೆ ತುಂಬಾ ಮಹತ್ವ ಕೊಟ್ಟಿದ ಈ ಧರ್ಮದಲ್ಲಿ ಇಂದು ಮೂಢನಂಬಿಕೆಗಳು, ಅಜ್ಞಾನದ ಆಚರಣೆಗಳು ಸೇರಿಕೊಂಡಿರುವುದನ್ನು ಇಲ್ಲಿಯ ವಚನಕಾರರು ಚಿಂತಿಸುವುದರೊಂದಿಗೆ ಎಚ್ಚರಿಕೆ ನೀಡಿದ್ದನ್ನು ಅರಿಯಬಹುದಾಗಿದೆ.

**೫-೪ ರಾಜಕೀಯ ನೆಲೆ**

ಸಾಹಿತ್ಯ ಮತ್ತು ರಾಜಕೀಯಗಳೆರಡೂ ಮಾನವನ ಬದುಕಿನ ನೆಲೆಯಿಂದ ಮೂಡಿಬರುತ್ತವೆ. ಹಾಗಾಗಿ ಅವೆರಡು ಪರಸ್ಪರ ಮಹತ್ವದ ಸಂಬಂಧಗಳನ್ನು ಹೊಂದಿರುತ್ತವೆ. ಆ ಸಂಬಂಧಗಳ ಆಯಾಮಗಳು ಹಲವಾರು. ರಾಜಕೀಯ ವ್ಯವಸ್ಥೆ ಸಾಹಿತಿಯ ದೃಷ್ಟಿಕೋನಗಳಲ್ಲಿ ಒಂದಾಗಿದ್ದು, ಅದು ಸಾಹಿತ್ಯದ ರಚನಾ ವಿಧಾನವನ್ನು ತನ್ನ ಪ್ರಭಾವಲಯದಲ್ಲಿ ಎಳೆದುಕೊಳ್ಳುತ್ತದೆ. ಇದೇ ರೀತಿಯಲ್ಲಿ ಸಾಹಿತ್ಯ ರಾಜಕೀಯ ವ್ಯವಸ್ಥೆಯನ್ನೇ ಬದಲಿಸುವ ಕಾರಣಗಳಲ್ಲೊಂದಾಗುತ್ತದೆ. 'ಅದು ರಾಜಕೀಯ ಕ್ರಾಂತಿಗಳನ್ನು ಪ್ರಚೋದಿಸಿದ್ದುಂಟು. ಫ್ರೆಂಚ ಮಹಾಕ್ರಾಂತಿಗೆ ವಾಲ್ಟೇರನ ಸಾಹಿತ್ಯವು ಒಂದು ಪ್ರಮುಖ ಕಾರಣ ಎನ್ನುವುದೂ ಹಾಗೂ ಎರಡನೆಯ ಮಹಾಯುದ್ಧದಿಂದ ಯುರೋಪಿನಲ್ಲಾದ ವಿನಾಶದ ಸಂದರ್ಭದಲ್ಲಿಯೇ ಅಲ್ಲಿ ಸಾರ್ತ್ರ, ಕಾಮೂ, ಕಾಫ್ಕಾ ಹುಟ್ಟಿದರು ಎನ್ನುವುದು ಈ ಸಮೀಕರಣದ ಸ್ಥೂಲ ಉದಾಹರಣೆಯೇ. ಆದರೆ ಸಾಹಿತ್ಯ ಹಾಗೂ ರಾಜಕೀಯ ಸಂಬಂಧಗಳಿಗೆ ಸೂಕ್ಷ್ಮ ಆಯಾಮಗಳೂ ಉಂಟು'[೧೭೩] ಎನ್ನುವುದು ಲಕ್ಷಿಸಬೇಕಾದ ಸಂಗತಿ.

ಸಾಹಿತಿಯಾದವನು ಸಮಕಾಲೀನ ಬದುಕನ್ನು ಚಿತ್ರಿಸುವುದರ ಜೊತೆಗೆ ಹೊಸ ಬದುಕಿನ ಕನಸನ್ನೂ ಕಾಣುತ್ತಾನೆ. ಕವಿಯ ಬದುಕಿನ ಚಿತ್ರಣದಂತೆಯೇ ಸಮಕಾಲೀನ ಬದುಕನ್ನೇ ಬದಲಿಸುವ ಶಕ್ತಿಯನ್ನು ಅದು ಪಡೆದಿರುತ್ತದೆ. ಈ ಹಿನ್ನೆಲೆಯಲ್ಲಿ ಕವಿಯ ಬದುಕಿನ ಸಮಾಜದ ರಾಜಕೀಯ ವ್ಯವಸ್ಥೆಯೂ ಒಂದು ಮುಖ್ಯ ಅಂಗವಾಗುತ್ತದೆ. ಆದುದರಿಂದ ಕವಿ ಹಾಗೂ ವಚನಕಾರರು ಚಿತ್ರಿಸುವ ಬದುಕಿನ ಚಿತ್ರಣದಲ್ಲಿ ರಾಜಕೀಯ ವ್ಯವಸ್ಥೆಯೂ ಸ್ಥಾನ ಪಡೆಯುತ್ತದೆ. ಆದರ್ಶ ಬದುಕಿನ ಹಂಬಲವುಳ್ಳ ಆಧುನಿಕ ವಚನಕಾರರು ತಮ್ಮ ಸಮಕಾಲೀನ ಬದುಕಿನ ಹಲವು ರೂಪ-ಕುರೂಪದ ಮುಖಗಳನ್ನು ರಾಜಕೀಯ ವ್ಯವಸ್ಥೆಯಲ್ಲಿ ಕಂಡಿದ್ದಾರೆ. ರಾಜಕೀಯ ಪ್ರಭಾವದ ಆಳ-ಅಗಲಗಳ ಅರಿವು ಈ ವಚನಕಾರರಿಗೆ ಆಗಿದ್ದನ್ನು ಅಲ್ಲಗಳೆಯುವಂತಿಲ್ಲ. ರಾಜಕೀಯ ನಾಯಕರ ಸ್ವಾರ್ಥ, ಹುಚ್ಚಾಟ, ವೋಟ್‌ಬ್ಯಾಂಕ್ ರಾಜಕಾರಣ, ಒಡೆದು ಆಳುವ ನೀತಿ, ಜನಪ್ರಿಯ ಭಾಗ್ಯೋಜನನೆಗಳು, ಜಾತಿ ರಾಜಕಾರಣಗಳು, ವಚನಕಾರರಿಗೆ ಬೇಸರ ತಂದ ಸಂಗತಿಗಳಾಗಿವೆ. ಅವುಗಳ ಚಿತ್ರಣಗಳನ್ನು ಆಧುನಿಕ ವಚನಗಳಲ್ಲಿ ನಾನಾ ರೀತಿಯಲ್ಲಿ ವಿವರಿಸಲಾಗಿದೆ. ಇಂದು ಪ್ರಜಾಪ್ರಭುತ್ವವೆಂಬುದು ವ್ಯಂಗ್ಯಾರ್ಥಕ್ಕೊಳಗಾಗಿರುವುದನ್ನು ಆಧುನಿಕ ವಚನದ ನೆಲೆಯಲ್ಲಿ ಕಾಣಬಹುದು.

'ರಾಜಕಾರಣಿಗಳಿಂದ, ಅಧಿಕಾರಿಗಳಿಂದ
ಪೋಲೀಸರಿಂದ, ಗೂಂಡಾಗಳಿಂದ
ತಮ್ಮನ್ನು ತಾವು ರಕ್ಷಿಸಿಕೊಳ್ಳುವುದೆ
ಪ್ರಜಾಪ್ರಭುತ್ವ ನೋಡಾ ಪ್ರಭು'[೧೭೪]

ಎನ್ನುವಲ್ಲಿ ಇಂದಿನ ರಾಜಕೀಯ ಸ್ಥಿತಿಗತಿಯಲ್ಲಿ ಯಾರ ರಕ್ಷಣೆಯೂ ಸುರಕ್ಷಿತವಾಗಿಲ್ಲ. ಅದರಲ್ಲೂ ಮೊದಲು ತಮ್ಮನ್ನು ತಾವು ರಕ್ಷಿಸಿಕೊಳ್ಳಬೇಕಾಗಿರುವುದು ಮುಖ್ಯವಾಗಿ ರಾಜಕಾರಣಿಗಳಿಂದ, ಅಧಿಕಾರಿಗಳಿಂದ, ಪೋಲೀಸರಿಂದ ಹಾಗೂ ಗುಂಡಾಗಳಿಂದ ಎಂಬುದನ್ನು ಈ ವಚನ ಹೇಳುವುದರೊಂದಿಗೆ ಇವರ ಕಾಟದಿಂದ,

ಅನ್ಯಾಯಗಳಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಬೇಕಾದದ್ದೇ ಪ್ರಜಾಪ್ರಭುತ್ವವಾಗಿದೆ ಎಂದು ತುಂಬಾ ವ್ಯಂಗ್ಯವಾಗಿ ಹಾಗೂ ಅಷ್ಟೇ ನಿಷ್ಠುರವಾಗಿ ಹೇಳಲಾಗಿದೆ ಇಂದಿನ ರಾಜಕೀಯ ವ್ಯವಸ್ಥೆಯಲ್ಲಿಯ ಪ್ರಜಾಪ್ರಭುತ್ವದ ನೈಜತೆಯನ್ನು ಇಲ್ಲಿ ಬಯಲಿಗಿರಿಸಲಾಗಿದೆ. ಇಂಥ ಪ್ರಜಾಪ್ರಭುತ್ವದ ಸ್ಥಿತಿ ನೋಡಿ ನಗುಬರುವುದಯ್ಯಾ ಎನ್ನುತ್ತಾರೆ ಸೂಗಯ್ಯ ಹಿರೇಮಠ.

'ಸಂಪ್ರದಾಯಕ್ಕೆ ಶರಣಾದ ದೇಶದಲ್ಲಿ
ಪ್ರಜಾಪ್ರಭುತ್ವ ಯಶಸ್ವಿಯಾಗುವುದೇನಯ್ಯಾ
ಜಾತಿ ವ್ಯವಸ್ಥೆ ಪಾಲಿಸುವ ಜನರಲ್ಲಿ
ಸಾಮಾಜಿಕ ಪರಿವರ್ತನೆ ಸಾಧ್ಯವೇನಯ್ಯಾ
ರಾಜನ ಮಗ ರಾಜನಾಗುವ ಪರಿಯಂತೆ
ಶಾಸಕನ ಮಗ ಶಾಸಕನಾಗುವನಯ್ಯಾ
ಪ್ರಜಾಪ್ರಭುತ್ವದ ವೇಷ ಧರಿಸಿದ
ಇಂದಿನ ರಾಜಪ್ರಭುತ್ವ ನೋಡಿ
ನಗು ಬರುವುದಯ್ಯಾ
ಸುವರ್ಣ ಮಹೋತ್ಸವದ ಸೂಗೂರೇಶ್ವರ'[೧೭೫]

ಇಂದಿನ ಪ್ರಜಾಪ್ರಭುತ್ವದಲ್ಲಿ ನೈಜತೆ ಉಳಿದಿಲ್ಲ, ಪ್ರಜಾಪ್ರಭುತ್ವ ಕೇವಲ ಹೆಸರಿನಲ್ಲಿ, ಬಾಯಿ ಮಾಥಿನಲ್ಲಿದೆ. ಇಂದು ಪ್ರಜಾಪ್ರಭುತ್ವದ ವೇಷಧರಿಸಿದ 'ರಾಜಪ್ರಭುತ್ವ' ಈ ದೇಶದಲ್ಲಿ ನೆಲೆನಿಂತಿದೆ ಎಂದು ವಚನಕಾರರು ತಿಳಿಸುತ್ತಾರೆ. ಸತ್ಯವೆಂದು ತಲೆದೂಗಲೇಬೇಕಾಗಿರುವ ಈ ಮಾತಿಗೆ ಅವರು ನೀಡುವ ಕಾರಣಗಳನ್ನಿಲ್ಲಿ ಗಮನಿಸಬೇಕು. ಒಂದು ಈ ದೇಶದ ಜನರಲ್ಲಿ ವೈಚಾರಿಕತೆ ಕುಗ್ಗಿದ್ದು, ಸಂಪ್ರದಾಯಕ್ಕೆ ಇದು ಶರಣಾಗಿರುವುದು. ಎರಡನೆಯದು ಜಾತಿ ವ್ಯವಸ್ಥೆಯನ್ನೇ ಇಲ್ಲಿ ಎಲ್ಲರೂ ಪಾಲಿಸುತ್ತಾರೆ. ಅದರಲ್ಲೂ ರಾಜಕಾರಣದಲ್ಲಿ ಜಾತಿಯೇ ಇಂದು ಪ್ರಧಾನವಾಗಿರುವುದನ್ನು ಅಲ್ಲಗಳೆಯಲು ಸಾಧ್ಯವೇ ಇಲ್ಲ. ಮೂರನೆಯ ಕಾರಣವೆಂದರೆ ರಾಜನ ಮಗನೇ ಹಿಂದೆ ರಾಜನಾಗುತ್ತಿದ್ದಂತೆ ಇಂದು ಶಾಸಕನ ಮಕ್ಕಳೇ ಶಾಸಕರಾಗುತ್ತಿದ್ದಾರೆ. ಹೀಗಾಗಿ ಇಲ್ಲಿ ಸಾಮಾಜಿಕ ಪರಿವರ್ತನೆಯಾಗಲಿ, ಪ್ರಜಾಪ್ರಭುತ್ವ ಯಶಸ್ವೀಯಾಗುವುದಾಗಲಿ ಅಸಾಧ್ಯವಾದುದು. ಭಾರತದಲ್ಲಿಂದು 'ರಾಜಪ್ರಭುತ್ವ' ಪ್ರಜಾಪ್ರಭುತ್ವದ ವೇಷ ಧರಿಸಿಕೊಂಡು ನಿಂತಿದೆ ಎಂಬ ಸತ್ಯವನ್ನು ಇಲ್ಲಿ ಸಾರುತ್ತಿರುವುದು ಗಮನಾರ್ಹ ಸಂಗತಿ ಎನ್ನಬಹುದು.

ಸಮಕಾಲೀನ ರಾಜಕೀಯ ವ್ಯವಸ್ಥೆಯಲ್ಲಿನ ಅಸ್ತವ್ಯಸ್ತಗಳು ವಚನಕಾರನ ಮನಸ್ಸನ್ನು ಕಲಕಿವೆ. 'ಸ್ವಾರ್ಥ ಸಾಧನೆಯಲ್ಲಿ ತೊಡಗಿರುವ ರಾಜಕಾರಣಿಗಳು, ರಾಜಕೀಯ ಮಾಡುವುದರಲ್ಲಿ ಪಳಗಿದ್ದು ಸಮಾಜದಲ್ಲಿ ಜಾತೀಯತೆಯನ್ನು ತೀವ್ರವಾಗಿ ಬೆಳೆಸಿದ್ದಾರೆನ್ನುವ ವಚನಕಾರರು ಇಂಥವರಿಂದ ಸಾಮಾಜಿಕ ಪರಿವರ್ತನೆ ಸಾಧ್ಯವಿಲ್ಲವೆಂದು ನಿರ್ಭಿಡೆಯಿಂದ ಹೇಳುತ್ತಾರೆ.

ಸಮಕಾಲೀನ ಜೀವನದಲ್ಲಿಯ ನೈಜ ರಾಜಕಾರಣವನ್ನು, ಅದರಿಂದುಂಟಾಗಿರುವ ಜಾತಿ ಭೇದ, ಅಂತಃಕಲಹಗಳನ್ನು, ಭಾರತದ ಸ್ವಾತಂತ್ರೋತ್ಸವದ ಸಂದರ್ಭದಲ್ಲಿನ ಲೋಕತಂತ್ರ, ಆಗುಹೋಗುಗಳು, ಮಂತ್ರಿ–ಶಾಸಕರ ಅವಗುಣಗಳು, ರೀತಿ–ನೀತಿಗಳನ್ನು ಗಮನಿಸಿದ್ದಾರೆ. ಅವರಿಂದ ಸಮಾಜ ಏನನ್ನು ಅನುಭವಿಸಿದೆ

ಎಂಬುದನ್ನೂ ಅರಿತುಕೊಂಡು ಆ ರಾಜಕೀಯ ನೆಲೆಗಳನ್ನು ಸಾಂದರ್ಭಿಕವಾಗಿ ತಮ್ಮ ವಚನಗಳಲ್ಲಿ ಹಿಡಿದಿಟ್ಟಿದ್ದಾರೆ.

'ದೇಶವನೆ ಮರೆತು ನಿಜವೇಷ ಬದಲಿಸುತಿಹರು
ಆಸೆ ಸ್ವಾರ್ಥದಲಿ ರಾಜಕಾರಣಿ ಬದಕು
ದೋಷಿತವು ನೋಡು ಸತ್ಯಜ್ಞ
ಖೂನಿ ಕೊಲೆ ಮಾಡಿದವ। ತಾನಾಗ್ವ ಗೃಹಮಂತ್ರಿ
ಏನೇನೋ ಕಾಪಿ ಮಾಡಿದವ, ಶಿಕ್ಷಣದ
ಉನ್ನತ ಮಂತ್ರಿ ಸತ್ಯಜ್ಞ
ಕಂತ್ರಾಟುದಾರ ಆ ಮಂತ್ರಿಗಳ ಕಿರಿಕಿರಿಗೆ
ತಂತ್ರ ಕುತಂತ್ರ ಮಾಡಿ ಇಂಜನಿಯರ
ಸಂತ್ರಸ್ತನಾದ ಸತ್ಯಜ್ಞ'[೧೭೬]

ಇಂದು ದೇಶ ಮರೆತು ತಾವೇ ಎಲ್ಲ ಎನ್ನುತ್ತಿರುವ ರಾಜಕೀಯ ವೇಷಧರಿಸಿರುವ ಭ್ರಷ್ಟ, ಲಂಚಕೋರ, ಅರ್ಹತೆಯಿಲ್ಲದ ರಾಜಕೀಯ ನೇತಾರರು ಹಾಗೂ ಸಚಿವರನ್ನು ಇಂದು ಕಾಣುತ್ತೇವೆ. ತಮ್ಮ ಅತಿ ಆಸೆ, ಸ್ವಾರ್ಥ ರಾಜಕಾರಣದಿಂದಾಗಿ ಏನೆಲ್ಲ ಆಗುವ, ಏನೆಲ್ಲ ಹೊಲಸು ಮಾಡಿ ಇನ್ನೊಬ್ಬರೆಡೆಗೆ ಬಟ್ಟು ತೋರಿಸುವವರಿಂದ ದೇಶವಿಂದು ದೂಷಿತವಾಗಿದೆ. ಪ್ರಾಮಾಣಿಕ ಅಧಿಕಾರಿಗಳು ಅಂಥ ರಾಜಕಾರಣಿಗಳಿಂದ ಸಂತ್ರಸ್ತರಾಗುವ ವಿಷವನ್ನು ಇಂಜನಿಯರ್ ಆಗಿರುವ ಸಿದ್ಧರಾಮ ಪೋಲೀಸ ಪಾಟೀಲರು ಅನುಭವದಿಂದ ಈ ಮಾತು ಹೇಳಿದ್ದಾರೆ ಎನಿಸುತ್ತಿದೆ.

ಈ ಜನನಾಯಕರು ಇಂದು ಜನಪಾಲಿಗೆ ದೂರ ಹೋಗುವುದು ಹೋಗಲಿ ಅವರೇ ಯಮನಾಗಿ ನಿಲ್ಲುವುದನ್ನು ಇಲ್ಲಿ ಉಲ್ಲೇಖಿಸಲಾಗಿದೆ.

'ಜನನಾಯಕನೆಂದು ಜನರ ಪಾಲಿಗೆ ಯಮನಾದನು
ಜನಸೇವಕನೆಂದು ಜನರನ್ನು ಸುಲಿಯುತ್ತಿದ್ದನು
ಕೊನೆಗೆ ಜನರ ಧರ್ಮದೇಟಿಗೆ ಬಲಿಯಾಗಿ
ದಾರಿ ಕಾಣದೆ ಕಾಲಿಗೆ ಬುದ್ಧಿ ಹೇಳಿದನು
ನೋಡೆಂದಳು ಶಾಸನೇಶ್ವರಿ'[೧೭೭]

ಸಮಾಜವನ್ನು ಒಡೆಯುವ ಸ್ವಾರ್ಥತನದಲ್ಲಿ ಕೆಲವು ಜನನಾಯಕರು ಮುಂದಾಗಿದ್ದರೆ, ಹಲವು ಸಣ್ಣಪುಟ್ಟ ಜನನಾಯಕರೆನಿಸಿಕೊಂಡವರು ಊರಲ್ಲಿ ತಿರುಗುತ್ತ ಜನರಿಗೆ ವಂಚನೆ ಮಾಡಿ, ಅವರನ್ನು ಸುಲಿಯುತ್ತಿರುವುದೂ ಇಂದು ಸಾಮಾನ್ಯವಾಗಿದೆ. ಅಂಥವರೆಷ್ಟೋ ಜನನಾಯಕರು ಜನರ ಪಾಲಿಗೆ ಯಮನಾಗಿರುವ ದೃಶ್ಯಗಳು ಅನೇಕ ಕಡೆ ಕಾಣಸಿಗುತ್ತವೆ. ಅಂಥ ಸಂದರ್ಭವೊಂದನ್ನು ಉಲ್ಲೇಖಿಸುವ ಈ ವಚನ ಅಂಥವರಿಗೆ ಜನರೇ ಶಿಕ್ಷೆ ನೀಡಿದರೆ, ಅವರ ಉಪಟಳದಿಂದ ಮುಕ್ತಿ ಪಡೆಯಬಹುದೆಂಬ ಸೂಚನೆಯನ್ನು ಇಲ್ಲಿ ನೀಡಿದ್ದಾರೆ.

ಇಂದಿನ ಹೊಲಸು ರಾಜಕಾರಣಿಗಳು ಜಾತಿಭೇದದ ನೀತಿ ತಂದು, ಅದನ್ನು ದೊಡ್ಡದಾಗಿ ಬೆಳೆಸುತ್ತಿದ್ದುದರಿಂದ ಹಳ್ಳಿಗಳಲ್ಲಿ ಇಂದು ಮೊದಲಿನ ಒಕ್ಕಟ್ಟು ಉಳಿದಿಲ್ಲ. ಕೂಡಿ ಬದುಕುತ್ತಿದ್ದ ಸಂಸಾರಗಳು ಇಂದು ಚಲ್ಲಾಪಿಲ್ಲೆಯಾಗಿವೆ. ಜಾತಿ ಜಗಳಗಳು ಆರಂಭವಾಗಿವೆ. ತಮ್ಮ ಅಧಿಕಾರದ ಬಲದಿಂದ, ಅಧಿಕಾರದ ದಾಹಕ್ಕಾಗಿ ಮನುಷ್ಯ–ಮನುಷ್ಯರಲ್ಲಿ ಜಾತಿಯ ಅಡ್ಡಗೋಡೆ ನಿರ್ಮಿಸಿ, ದೇಶದಲ್ಲಿ ಒಳಜಗಳ ಹಚ್ಚಿದ್ದನ್ನು ವಚನಕಾರರು ಖಂಡಿಸುತ್ತಾರೆ.

'ಕಾಡು ನಾಡಾಗುತ್ತಿದೆ
ನಾಡು ಮಸಣವಾದೀತು ನೋಡು
ಜಗವೆಲ್ಲ ಸಂತೆಯಾಗುತ್ತಿದೆ
ದೇಶ ನಾಶವಾದೀತು ನೋಡು
ಜಾತಿಗಳು ಹೆಮ್ಮರವಾಗುತ್ತಿವೆ
ಜನಾಂಗ ನಾಶವಾದೀತು ನೋಡಯ್ಯಾ
ಗುರುನಂಜೇಶ್ವರ'[೧೭೮]

ದೂರದೃಷ್ಟಿಯ ನೆಲೆಯಲ್ಲಿ ರಚಿತವಾಗಿರುವ ಈ ವಚನ, ರಾಜಕೀಯ ಆಡಳಿತಗಾರರಿಗೆ ಎಚ್ಚರಿಕೆ ನೀಡುತ್ತದೆ. ಇಂದಿನ ವ್ಯವಸ್ಥೆಯಲ್ಲಿರುವ ದೋಷಗಳನ್ನು ಎತ್ತಿ ತೋರಿಸುತ್ತದೆ. ಇಂದು ನಗರಗಳನ್ನು ವಿಶಾಲವಾಗಿ ಬೆಳೆಸಲಿಚ್ಛಿಸುವ ರಾಜಕಾರಣವು ಕಾಡನ್ನು ನಾಡಾಗಿ ಪರಿವರ್ತಿಸುತ್ತಿದೆ. ಜನ ವಸತಿ, ಕೈಗಾರೀಕರಣದ ಹೆಸರಲ್ಲಿ ಪರಿಸರ ನಾಶಗೊಳ್ಳುತ್ತಿದೆ. ನಗರಗಳು ಹೆಚ್ಚಾದಂತೆ, ಗ್ರಾಮಗಳು, ನಾಡುಗಳು ಇಂದು ಮಸಣದ ತೆರನಾಗುತ್ತವೆ. ಅಲ್ಲಿಯ ಜನವಸತಿ ವಲಸೆ ಹೋಗುತ್ತಿದೆ. ಹಾಗೆಯೇ ಇಂದು ಜಾಗತೀಕರಣದ ಹೆಸರಲ್ಲಿ ಜಗತ್ತೆಲ್ಲ ಮಾರುಕಟ್ಟೆಯಾಗುತ್ತಿದೆ. ಇದರಿಂದ ಭಾರತದ ಗುಡಿ ಕೈಗಾರಿಕೆಗಳು ನಾಶವಾಗುತ್ತಿದೆ. ಲಕ್ಷ ಲಕ್ಷ ಜನರ ಉದ್ಯೋಗ ಕಣ್ಮರೆಯಾಗುತ್ತಿದೆ. ದೇಶದಲ್ಲಿ ನಿರುದ್ಯೋಗ ತಾಂಡವವಾಡುತ್ತಲಿದೆ. ಹಾಗೆಯೇ ಜಾತಿಗಳೇ ಇಂದು ಧರ್ಮಕ್ಕಿಂತ ಪ್ರಧಾನ ಸ್ಥಾನದಲ್ಲಿವೆ. ಜಾತಿಗಳ ಹೆಮ್ಮರಗಳಾದರೆ, ನಾ ಹೆಚ್ಚು, ನೀ ಹೆಚ್ಚು ಎಂಬ ಭಾವನೆ ಬಲಿತು ಒಳಜಗಳ ಹೋರಾಟಗಳು, ಮತಾಂಧತೆ ಹೆಚ್ಚಾಗಿ ಜನಾಂಗ ನಾಶವಾದೀತು ಎಂಬ ಅಭಿಪ್ರಾಯಕ್ಕೆ ಕವಿ ಬಂದಿರುವುದರಲ್ಲಿ ಅಡಗಿದ ಮುಂದಾಲೋಚನೆ ಹಾಗೂ ಸತ್ಯದ ಬೆಳಕನ್ನು ಅರಿಯಬಹುದು. ಸ್ವಾರ್ಥಕ್ಕಾಗಿ ಮಾಡಿಕೊಂಡ ಹಲವು ಜಾಗತಿಕ ಒಪ್ಪಂದಗಳಿಂದ ಇಂದು ನಮ್ಮ ದೇಶ ಹಾಗೂ ಜನಾಂಗ ಎದುರಿಸುತ್ತಿರುವ ಸವಾಲುಗಳನ್ನು ಈ ವಚನ ಅರುಹುತ್ತದೆ.

ಇಂದಿನ ರಾಜಕಾರಣಿಗಳಿಂದ, ಇಂದಿನ ವ್ಯವಸ್ಥೆಯಿಂದ, ಬಡವರು ಬಡವರಾಗಿಯೇ ಉಳಿದಿದ್ದಾರೆ ಎನ್ನುವ ಚಿತ್ರವನ್ನು ಡಾ. ಬಸವರಾಜ ಸಬರದ ಅವರ ವಚನ ಈ ನೆಲೆಯಲ್ಲಿ ಅಭಿವ್ಯಕ್ತವಾಗಿದೆ.

'ರಾಜರು ಹೋದರಯ್ಯಾ
ರಾಜಕಾರಣಿಗಳು ಬಂದರಯ್ಯಾ
ಧರ್ಮಗಳು ಹೋದವಯ್ಯಾ
ಜಾತಿಗಳು ಬೆಳೆದವಯ್ಯಾ
ಗುರುಕುಲಗಳು ಹೋದವಯ್ಯಾ

ಕಾಲೇಜುಗಳು ಬಂದವಯ್ಯಾ
ಏನೇ ಹೋಗಿ ಏನೇ ಬಂದರೂ
ಬಡವರ ತುತ್ತಿನ ಚೀಲ ಮಾತ್ರ
ತುಂಬಲಿಲ್ಲವಯ್ಯಾ ಸಬರದ ಬಸವ'[೧೭೯]

ರಾಜಧರ್ಮ, ಧರ್ಮ, ಗುರುಕುಲಗಳು ಇಂದು ಹೋಗಿರುವುದನ್ನು ತಿಳಿಸುವ ಈ ವಚನ ಅದರೊಂದಿಗೆ ರಾಜರು ಹೋದಮೇಲೆ ಅವರ ಸ್ಥಾನದಲ್ಲಿ ಕುಳಿತಿರುವ ರಾಜಕಾರಣಿಗಳಿಂದ ಜಾತಿ ಪದ್ಧತಿ, ಕಾಲೇಜು ಶಿಕ್ಷಣ ಪದ್ಧತಿ ಜಾರಿಯಲ್ಲಿ ಬಂದದ್ದನ್ನು ತಿಳಿಸುತ್ತದೆ. ಧರ್ಮದ ಬದಲಾಗಿ ಜಾತಿ ಪದ್ಧತಿಯನ್ನು ಈ ರಾಜಕಾರಣ ವಿಶಿಷ್ಟವಾಗಿ

ಬೆಳೆಸಿದೆ. ದಲಿತರನ್ನು, ಅಲ್ಪಸಂಖ್ಯಾತರನ್ನು, ಹಿಂದುಳಿದ ವರ್ಗದವರನ್ನು ಕೇವಲ ತಮ್ಮ ಓಟಬ್ಯಾಂಕ ಮಾಡಿಕೊಂಡಿರುವ ರಾಜಕಾರಣಿಗಳಿಂದ ಇಂದು ಕಾಲೇಜು ಶಿಕ್ಷಣ ಬೆಳೆದಿದ್ದರೂ, ಬಡವರ ಬಡತನ ದೂರಾಗಿಲ್ಲ. ಅವರ ಹೊಟ್ಟೆ ತುಂಬಲಿಲ್ಲವಯ್ಯಾ ಎಂಬ ಕಳಕಳಿಯನ್ನು ಇಲ್ಲಿ ಮನಗಾಣಬಹುದು. ಆದರೂ ಈ ಕವಿಗೊಂದು ಆಸೆಯಿದೆ ಅದೇನಂದರೆ, ರಾಜ ಮಹಾರಾಜರ ವೈಭವ ಕೊನೇತನಕ ಉಳಿಯಲಿಲ್ಲ ಮಂತ್ರಿ ಮಾನ್ಯರ ದಬ್ಬಾಳಿಕೆಯೂ ಬಹಳ ದಿವಸ ನಡೆಯುವುದಿಲ್ಲ. ನಾನು-ನೀನೆಂದು ಬೀಗಿದವರು ಇಂದು ವಿಳಾಸವಿಲ್ಲದೆ ಹೋದರು. ನಾನೆಂಬುದು ಮರೆಸಿ ನಾವೆಂಬುದನ್ನು ಕಲಿಸಬೇಕೆಂದು ಇನ್ನೊಂದು ವಚನದಲ್ಲಿ ತಿಳಿಸಿದ್ದಾರೆ. (ವ.೯ – ಪು.೮೧)

ಈ ಜಗತ್ತಿನಲ್ಲಿ ಯಾವುದೂ ಶಾಶ್ವತವಲ್ಲ. ಎಲ್ಲವೂ ಅಳಿದು ಹೋಗುತ್ತವೆ ಎಂಬ ಪ್ರಜ್ಞೆ ಇವರಿಗಿಲ್ಲ ಎನ್ನುವ ನೆಲೆಯ ವಚನವೊಂದಿದೆ.

'ಅಳಿದು ಹೋದರು ರಾಜಮಹಾರಾಜರು
ಅಳಿದು ಹೋದವು ಕೋಟೆ ಕೊತ್ತಲುಗಳು
ಅಳಿದು ಹೋದವು ಗುಡಿ ಗುಂಡಾರಗಳು
ಇಹದಲ್ಲಿ ಯಾವೂದು ಸ್ಥಿರವಲ್ಲವಯ್ಯಾ'[೧೮೦]

ಎನ್ನುವಲ್ಲಿ ಈ ಅಂಶವನ್ನು ಅರಿಯಬಹುದು. ಇರುವವರೆಗೆ ಜನರಿಗಾಗಿ, ದೇಶಕ್ಕಾಗಿ, ಸಮಾಜಕ್ಕಾಗಿ ಒಳ್ಳೆಯದನ್ನೇ ಮಾಡಬೇಕೆಂದು ಸೂಚಿಸುವಂತಿದೆ. ಆದರೆ ಪಕ್ಷಾಂತರ ರಾಜಕಾರಣವೇ ಇಂದು ಮನೆಮಾತಾಗಿರುವುದನ್ನೂ ಆಧುನಿಕ ವಚನಕಾರರು ಗುರುತಿಸಿದ್ದಾರೆ.

'ಆ ಪಕ್ಷ ಈ ಪಕ್ಷವೆಂದು
ಪಕ್ಷಗಳ ಕಟ್ಟುವ ನಾಯಕರು
ಪಕ್ಷದಿಂದ ಪಕ್ಷಕ್ಕೆ ಜಾರುವ ರಾಜಕಾರಣಿಗಳು
ಹಸಿರು ಕಂಡ ಪಶುವಿನಂತೆ
ದೆಸೆ ದೆಸೆಗೆ ಹೋಗುವರಲ್ಲದೆ
ದೇಶದ ಉದ್ಧಾರ ಹೇಗೆ ಮಾಡುವರಯ್ಯಾ?
ಆಚಾರ ಪ್ರಿಯ ಬಸವಲಿಂಗ'[೧೮೧]

ಇಂದಿನ ರಾಜಕಾರಣಿಗಳನ್ನು ಕೇಳಿದರೆ ಬಹು ಸರಳವಾಗಿ ಹೇಳುವ ಮಾತೆಂದರೆ, ರಾಜಕಾರಣದಲ್ಲಿ ಯಾರೂ ವೈರಿಗಳಲ್ಲ; ಯಾರೂ ಮಿತ್ರರಲ್ಲ. ಯಾರು ಯಾವಾಗ ಬೇಕಾದರೂ ಯಾವುದೇ ಪಕ್ಷವನ್ನು ಸೇರಬಹುದು. ಯಾವುದೇ ಪಕ್ಷವನ್ನು ತ್ಯಜಿಸಬಹುದು. ಅಧಿಕಾರ, ಹಣ, ಖುರ್ಚಿಯ ಆಸೆಗಾಗಿ ಇಂಥ ಪಕ್ಷಾಂತರ ಮಾಡುವವರನ್ನು ಕವಿ ಇಲ್ಲಿ ಹಸಿರು ಕಂಡೆಡೆ ಹರಿಯುವ ಪಶುವಿನಂತೆ ಎಂದಿರುವುದನ್ನು ಗಮನಿಸಬಹುದು. ಅವರಿಗೆ ಸ್ವಾರ್ಥದ ಬಯಕೆ ಮುಖ್ಯವೇ ಹೊರತು ದೇಶದ ಉದ್ಧಾರವಾಗಲಿ, ಸಮಾಜದ ಅಭಿವೃದ್ಧಿಯಾಗಲಿ ಮುಖ್ಯವಲ್ಲ. ಅವು ಕೇವಲ ಹೇಳುವ ಮಾತುಗಳಷ್ಟೇ ಅಗಿವೆ ಎನ್ನುವುದು ಈ ವಚನದಲ್ಲಿ ಅಭಿವ್ಯಕ್ತಗೊಂಡಿದೆ.

ಭ್ರಷ್ಟಾಚಾರಕ್ಕೆ ಮೂಲ ಕಾರಣ ರಾಜಕಾರಣ, ದುಷ್ಟಾಚಾರಕ್ಕೆ ಕಾರಣ ದುರ್ಗುಣ, ಶಿಷ್ಟಾಚಾರಕ್ಕೆ ದಾರಿ ಸಾಹಿತ್ಯಿಕ ಗುಣ ಎನ್ನುವ ವಚನಕಾರರು, ಇಂದಿನ ರಾಜಕಾರಣದಿಂದಲ್ಲದೆ ಮುಖ್ಯವಾಗಿ ಸೊರಗಿ ಸಾಯುತ್ತಿರುವವರು

ರೈತರು. ಪ್ರಾಮಾಣಿಕ ಜೀವಿಯಾಗಿರುವ ರೈತರು, ಬಡವರು, ಬದುಕುವುದೇ ದುಸ್ತರವಾಗಿದೆ. ಇವರನ್ನು ಮೂಲೆಗುಂಪು ಮಾಡಿರುವ ರಾಜಕಾರಣಿಗಳು ಹೇಗಿದ್ದಾರೆಂದರೆ ಸಗಣಿಗೆ ಹತ್ತಿರುವ ಸಾವಿರ ಹುಳು ಇದ್ದ ಹಾಗೆ ಎನ್ನುತ್ತದೆ ಈ ವಚನ.

'ಅನ್ನ ಕೊಡುವ ರೈತನ ಕೊಲ್ಲುವವ
ಕನ್ನ ಹಾಕುವ ಕಳ್ಳನ ರಕ್ಷಿಸುವವ
ಕನ್ಯೆಯರ ಗೌರವ ಕಾಪಾಡದವ
ತನ್ನ ತಾನ ಹೊಗಳುತ್ತ ತಿರುಗುವವ
ಸಗಣಿಗೆ ಹತ್ತಿದ ಸಾವಿರ ಹುಳುನೋಡಾ
ಸೋಮಲೋಚನಪ್ರಿಯ ಬಸವಣ್ಣ'[೧೮೨]

ಇಂದಿನ ರಾಜಕಾರಣಿಗಳ ಎಲ್ಲ ಭ್ರಷ್ಟತೆಯನ್ನು ಬಯಲಿಗೆಳೆದಿರುವ ವಚನವಿದು. ರಾಜಕಾರಣದ ನೆಲೆಯ ಹಲವು ಮಗ್ಗಲುಗಳನ್ನು ಇದು ಪರಿಚಯಿಸುತ್ತದೆ. ಅನ್ನಕೊಡುವ ರೈತನಿಗೆ ಸಾಲ ನೀಡದೆ, ಸಾಲ ನೀಡಿದ್ದರೂ ಅದನ್ನು ಮನ್ನಾ ಮಾಡಲು ಗಣನೆಗೆ ತಗೆದುಕೊಳ್ಳದೆ, ಸರಿಯಾದ ಬೀಜ, ಗೊಬ್ಬರ ನೀಡದೆ ಆತನನ್ನು ಕೊಲ್ಲುವವರು ರಾಜಕಾರಣಿಗಳಲ್ಲವೇ? ಹಾಗೆಯೇ ಇಂದಿನ ಸಮಾಜದ ಸರಕಾರದ ಆಡಳಿತ ವ್ಯವಸ್ಥೆ, ರಕ್ಷಣಾ ವ್ಯವಸ್ಥೆ ಹೇಗಿದೆ? ಕಳ್ಳತನ ಮಾಡುವವರನ್ನು, ಭೂ ಹಗರಣ, ಗಣಿ ಹಗರಣ, ಮೇವು ಹಗರಣ, ಭೋಪೋರ್ಸ ಹಗರಣ, ಮನೆ, ಮಠಗಳು, ನೂರೆಂಟು ಭವನಗಳಿಗೆ ಇರುವ ಹಣವನ್ನೇ ನುಂಗಿ ನೀರು ಕುಡಿದವರ ರಕ್ಷಕರಾರು? ದೇಶದಲ್ಲಿ ಹೆಣ್ಣು ಮಕ್ಕಳ ಮೇಲೆ, ಸಣ್ಣ ಮಕ್ಕಳ ಮೇಲೆ ನಡೆಯುತ್ತಿರುವ ದೌರ್ಜನ್ಯಗಾರರನ್ನು ಸದೆಬಡೆಯದವರು ಇವರು. ತಾವೇ ಶ್ರೇಷ್ಠ ನಾನು ಕೊಟ್ಟ ಮಾತಿನಂತೆ ನಡೆದಿದ್ದೇನೆಂದು ತಮ್ಮನ್ನು ತಾವೇ ಹೊಗಳಿಕೊಳ್ಳುತ್ತ ತಿರುಗುವ ಇವರನ್ನು ಸೊಗಸಾದ ಹೋಲಿಕೆ ಮಾಡಿ, ಧ್ವನಿಪೂರ್ಣವಾಗಿ ರಾಜಕಾರಣಿಗಳ ರಾಜಕಾರಣವನ್ನು ಬಯಲಿಗೆಳೆಯಲಾಗಿದೆ.

ರಾಜಕೀಯದಲ್ಲಿ ಮನುಷ್ಯ ಮಾನವತೆ ಮೀರಬಾರದು. ಪ್ರಜಾತಂತ್ರದಲ್ಲಿ ರಾಜಕಾರಣಿಗಳ ವೈಯಕ್ತಿಕ ತಂತ್ರವೇ ಮೆರೆಯಬಾರದು. ಪ್ರಜಾಪ್ರಭುತ್ವ ಬೇರೆ, ರಾಜಕಾರಣಿಗಳು ಉಪಯೋಗಿಸುವ ತಂತ್ರ ಬೇರೆಯಾದರೆ,

ಇಲ್ಲಿಯ ಲೋಕತಂತ್ರಕ್ಕೆ ಸುಖ ದೊರಕಲು ಹೇಗೆ ಸಾಧ್ಯ? ರಾಜಕಾರಣದಲ್ಲಿವೈಯಕ್ತಿಕ ಕಾರಣಗಳೇ ಇಂದು ಹೆಚ್ಚಾಗಿ ನಿಂತು ಅದರಲ್ಲಿ ಹೊಸಲು ತುಂಬಿಕೊಂಡಿದೆ.

'ಸಣ್ಣಪುಟ್ಟ ಕಾರಣಗಳಿಗೆ ಮುಷ್ಕರ ಹೂಡುವರು
ಶಾಲಾ ಕಾಲೇಜು, ಅಂಗಡಿ ಬಂದ ಮಾಡುವರು
..........................................................
..........................................................
ಅಪ್ಪ ಚನ್ನಬಸವೇಶ ದೇಶದ ಹಾನಿ, ನಮಗಾಗೋ
ಹಾನಿಯಲ್ಲವೇ?'[೧೮೩] (ಬಿ.ಎಸ್.ಖೂಬಾ-ಶತಕಾಂತ್ಯದ ವಚನ ಶತಕ ಪು.೭೦)

ದೇಶದ ಹಾನಿ. ಪ್ರಜೆಗಳ ಹಾನಿಯನ್ನು ಉಲ್ಲೇಖಿಸುತ್ತ, ಪ್ರಜಾಪ್ರಭುತ್ವದ ಬಗ್ಗೆ ಕಾಳಜಿ ವ್ಯಕ್ತಪಡಿಸುವ ಈ ವಚನ, ಇಂದಿನ ರಾಜಕೀಯದ ಹೊಲಸುತನವನ್ನು ಬಯಲಿಗೆಳೆಯುತ್ತದೆ. ಒಂದೊಂದು ಪಕ್ಷದವರಿಂದ ಒಂದೊಂದು ರೀತಿಯ ಪ್ರತಿಭಟನೆಗಳು, ಮುಷ್ಕರಗಳು ಜರುಗುತ್ತದೆ. ಅದರಲ್ಲೂ ಚುನಾವಣೆಯಲ್ಲಿ ಸೋತಿರುವ ರಾಜಕಾರಣಿಗಳು ಜನರ ಗಮನ ಸೆಳೆಯುವ ಸಲುವಾಗಿ ಸಣ್ಣ ಪುಟ್ಟ ಕಾರಣಗಳಿಗೂ ಪ್ರತಿಭಟನೆ ಮಾಡುವುದನ್ನು ದಿನ ನಿತ್ಯ ಕಾಣುತ್ತೇವೆ. ಇದರಿಂದ ಎಷ್ಟೊಂದು ತೊಂದರೆಗಳು, ಜನರಿಗೆ, ಸಮಾಜಕ್ಕೆ, ರಾಜ್ಯಾಡಳಿತಕ್ಕೆ, ರಾಜ್ಯ, ದೇಶದ ಬೊಕ್ಕಸಕ್ಕೆ ಹಾನಿಯಾಗುತ್ತದೆಂಬ ಅರಿವಿಲ್ಲವೇ? ಇದ್ದರೂ ತಮ್ಮ ಸ್ವಾರ್ಥಚಿಂತನೆಗಾಗಿ ಇಂಥ ಹೇಯ ಕೃತ್ಯ ಮಾಡುವುದನ್ನು ಇಲ್ಲಿ ಕಾಣುತ್ತೇವೆ. ಇಂದಿನ ವಾಸ್ತವಿಕ ರಾಜಕಾರಣದ ಮುಷ್ಕರದ ನೆಲೆಯನ್ನು ಈ ವಚನ ತೋರಿಸುತ್ತದೆ.

ಹದಗಿಟ್ಟ ರಾಜಕೀಯದಿಂದ ಧನಲೋಭದ ಅತಿಯಾಸೆಯಿಂದ 'ದೇಶಪ್ರೇಮ ಇಂದು ಮಾಯವಾಗುತ್ತಿದೆ. ದೇಶವನ್ನು ಹಿಂದೆನೂಕಿ ತಾನು ಶ್ರೀಮಂತರಾಗಬೇಕೆಂಬ ಧನ ಪಿಶಾಚಿ' ಇಂದು ರಾಜಕಾರಣಿಗಳಿಗೆ ಹಿಡಿದಿದೆ. ಯಾರಿಂದ ದೇಶದ ರಕ್ಷಣೆಯಾಗಬೇಕೋ? ಯಾರಿಂದ ಪ್ರಜೆಗಳ ಸೇವೆಯಾಗಬೇಕೋ? ಅವರಿಂದಲೇ ಇಂದು ಭ್ರಷ್ಟತೆ ಬೆಳೆಯುತ್ತಿರುವಾಗ ದೇಶಕ್ಕೆ ಉಳಿಗಾಲವೆಲ್ಲಿದೆ? ಎಂಬುದು ವಚನಕಾರರನ್ನು ಕಾಡುವ ಪ್ರಶ್ನೆಯಾಗಿದೆ. ಇಂದಿನ ಎಲ್ಲ ಕ್ಷೇತ್ರಗಳಲ್ಲಿ ಭ್ರಷ್ಟತೆ ತಲೆಹಾಕಿರುವ ಸೂಕ್ಷ್ಮತೆಯನ್ನು ಕವಿಯಾದ ವಚನಕಾರ ಇಲ್ಲಿ ಹೊರಹಾಕಿದ್ದಾನೆ.

'ಮಂತ್ರಿಗಳು ಕಂತ್ರಿಗಳು
ಆಗಿಬಿಟ್ಟಿರುವಾಗ
........................
.....................
ಮಾನವನು ದಾನವನ
ರೂಪ ಧಿಸಿರುವಾಗ
ಹೇಗೆ ಜೀವಿಸಬೇಕು? ಹುಲಿಸಸಿದ್ಧೇಶ್ವರಾ'[೧೮೪]

ರಾಜಕಾರಣದ ಘನ ಪ್ರಭಾವದಿಂದ ದೇಶದ ಸರ್ವಕ್ಷೇತ್ರಗಳೂ ಇಂದು ಮಲಿನಗೊಂಡಿರುವುದನ್ನು ಈ ವಚನ ವಿವರವಾಗಿ ತಿಳಿಸುತ್ತದೆ. ರಾಜಕಾರಣದಿಂದ ರಾಜಕೀಯ ಕ್ಷೇತ್ರವಷ್ಟೇ ಅಲ್ಲ; ಸಾಹಿತ್ಯ ತ್ಯಾಗಭಾವ, ಭಕ್ತಿಯ

ವಾತಾವರಣ, ಸರಳ ಜೀವನದ ಎಲ್ಲ ಕ್ಷೇತ್ರಗಳು ಇಂದು ಭ್ರಷ್ಟವಾಗಿವೆ. ಮಾನವನೇ ಇಂದು ದಾನವರೂಪದ ಭ್ರಷ್ಟನಾಗಿರುವಾಗ ಸರಳಬದುಕಿಗೆ ಉಳಿಗಾಲವೆಲ್ಲಿದೆ? ಎಂದು ವಚನಕಾರಸಹಜವಾಗಿ ಕೇಳುವಲ್ಲಿ ರಾಜಕಾರಣದ ಹೊಲಸಿನ ವಿಷ ಇಂದು ಸಾಮಾಜಿಕ ರಂಗದ ಎಲ್ಲ ಕ್ಷೇತ್ರಗಳಿಗೆ ಪಸರಿಸಿ ಬೆಳೆಯುತ್ತಿರುವ ಭೀಕರ ಚಿತ್ರ ಇಲ್ಲಿ ಕಾಣುತ್ತಿದೆ.

'ವಾಸ್ತವವಾಗಿ ಸಾಹಿತ್ಯ ಮತ್ತು ಸಮಾಜವಾದ ಸಂಬಂಧವನ್ನು ಕುರಿತು ಮಾತನಾಡುವುದು ಅಂದರೆ ಕಾವ್ಯದಿಂದ ರಾಜಕೀಯ ನೆಲೆಗಳನ್ನು ಹುಡುಕಿ ತೆಗೆಯುವುದು ಎಂದರ್ಥವಲ್ಲ, ಅಥವಾ ಯಾವುದೋ ರಾಜಕೀಯ ಸಿದ್ಧಾಂತವೊಂದರಿಂದ ಕೃತಿಯ ಸ್ವರೂಪವನ್ನು ಅಥವಾ ರಾಜಕೀಯ ಅಭಿವ್ಯಕ್ತಿಯ ಸಾಧನವನ್ನಾಗಿ ನೋಡುವ ಪ್ರವೃತ್ತಿಯು ಪ್ರಾರಂಭವಾಗುತ್ತದೆ.'[೧೮೫] ಹೀಗಾಗಿ ಯಾವುದು ಮರೆಯಲ್ಲಿ ಪಾತ್ರವಹಿಸಬೇಕಿತ್ತೋ, ಅದೇ ಪ್ರಧಾನ ನೆಲೆಗೆ ಬಂದು ನಿಂತ ವ್ಯಂಗ್ಯವು ಇಲ್ಲಿ ರೂಪಗೊಳ್ಳುತ್ತದೆ. ಕಾರಣ ಈ ವಚನಕಾರರೆಲ್ಲರಲ್ಲಿ 'ರಾಜಕೀಯ' ವಾತಾವರಣವು ಸಾಂದರ್ಭಿಕವಾಗಿ ಮತ್ತು ಅಷ್ಟೇ ವಾಸ್ತವಿಕ ನೆಲೆಯಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಗಮನಿಸಬಹುದು.

**೫-೪-೧ ದೇಶಪ್ರೇಮದ ಚಿಂತನೆ**

ಇಂದಿನ ದೇಶದ ದುಸ್ಥಿತಿಗೆ ನಮ್ಮ ದೇಶದ ಬಹುತೇಕ ರಾಜಕಾರಣವೇ ಕಾರಣವೆಂಬುದು ಹಲವು ನೆಲೆಗಳಲ್ಲಿ ಕಾಣುತ್ತದೆ. ಮಂತ್ರಿಗಳಲ್ಲಿ ಶಾಸಕರಲ್ಲಿ, ಸಂಸದರಲ್ಲಿ ಕಂತ್ರಿಗುಣ ಬೆಳೆದು ನಿಂತಿರುವುದರ ಪರಿಣಾಮದಿಂದ ದೇಶದ ಶಾಂತಿಗೆ ಭಂಗವಾಗಿದೆ, ಅಷ್ಟೇ ಅಲ್ಲ ದೇಶಪ್ರೇಮ ನಶಿಸುತ್ತಿದೆ ಎಂಬುದು ವ್ಯಕ್ತವಾಗಿದೆ. ಪಾರತಂತ್ರದಲ್ಲಿ ಹೋರಾಡಿದವರು ಸ್ವಾತಂತ್ರ್ಯದಲ್ಲಿ ಪಾತಕಿಯಾದರು, ದುಷ್ಟ-ಭ್ರಷ್ಟ ಲೂಟಿಗರಾದರು, ಪ್ರಜಾಪ್ರಭುಗಳು ಕಂಗಾಲಾದರು, ಗಣತಂತ್ರವು ಹೆಣವಾಯಿತು ಸೇರದವರ ಮುಂದೆ ಸೀರೆ ಕಳೆದು ಕುಣಿದಂತಾಯಿತೆನ್ನುವ ದೇಶಾಂಶ ಹುಡಗಿಯವರು  ಮುಂದುವರೆದು ಈ ದೇಶದ ರಾಜಕೀಯ ವ್ಯಕ್ತಿಗಳನ್ನು ಹೀಗೆ ಖಂಡಿಸುತ್ತಾರೆ.

'ಕುಡುಕ ಮಂತ್ರಿಯಾದರೆ ಸಾರಾಯಿಯದೇ ಸಂತೆ
ಗಂಟೋಜಿ ಮಂತ್ರಿಯಾದರೆ ಗಾಂಜಾದೇ ಕ್ಷೇತ್ರೋತ್ಸವ
ಲೂಟಿಗಾರ ಮಂತ್ರಿಯಾದರೆ ಹಗರಣಗಳ ಸರಮಾಲೆ
ಯಥಾರಾಜ ತಥಾ ಪ್ರಜಾ ಅಗಿನ ಮಾತು
ಯಥಾ ಪ್ರಜಾ ತಥಾ ಮಂತ್ರಿ ಈಗಿನ ಮಾತು
ಜನಮನ ಕಳ್ಳವಾದರೆ ಯಾರೇನು ಮಾಡುವರೆಂದು.....'[೧೮೬]

ರಾಜಕಾರಣಿಗಳು ಹೇಳಿದಂತೆ ಜನಕುಣಿಯುವುದು. ಜನರು ಹೇಳಿದಂತೆ ರಾಜಕಾರಣಿಗಳು ಕುಣಿಯುವುದು ಇಂದಿನ ವಾಸ್ತವ. ಯಾರಿಗೂ ದೇಶದ ಚಿಂತೆಯಿಲ್ಲ ಎಂಬ ನೆಲೆಯಲ್ಲಿ ಈ ವಚನದ ಅಭಿವ್ಯಕ್ತಿಯಿದೆ. 'ರಾಷ್ಟ್ರ ನುಂಗುವ ರಾಜಕಾರಣಿಗಳೇ ನೀವು ಮಾನವರಾಗುವುದು ಯಾವಾಗ' ಎಂದೂ ಅವರು ಇನ್ನೊಂದೆಡೆಯಲ್ಲಿ ಇಲ್ಲಿ ಪ್ರಶ್ನಿಸುತ್ತಿರುವುದನ್ನು ಕಾಣುತ್ತೇವೆ.

೧) 'ದೇಶವನೆ ಮರೆತು ನಿಜ। ವೇಷ ಬದಲಿಸುತಿಹರು
ಆಸೆ, ಸ್ವಾರ್ಥದಲ್ಲಿ ರಾಜಕಾರಣಿ ಬದುಕು

ದೋಷಿತವು ನೋಡು. ಸತ್ಯಜ್ಞ'

೨) 'ಸ್ವಾರ್ಥದಾಸಗೆ ಬಿದ್ದು। ಆರ್ಥಿಕತೆ ಕೆಡಿಸಿ ನಿಃ
ಸ್ವಾರ್ಥ ಪ್ರಜೆಗಳನು ಕಷ್ಟದಲಿ ಸಿಲುಕಿಸಿದ
ಕರ್ತೃ ಯಾರೆಂದ। ಸತ್ಯಜ್ಞ'

೩) 'ಮಂತ್ರಿಗಳಾದವರು ಕಂತ್ರಿಗುಣಗಳ ಬಿಟ್ಟು
ಚಿಂತಿಸಬೇಕು ದೇಶದೇಳಿಗೆಯ....'[೧೮೭]

ಎಂಬಂತಹ ವಚನಗಳ ಚಿಂತನೆಯಲ್ಲಿ ರಾಜಕಾರಣದ ಕುತಂತ್ರ, ವೇಷಬದಲಿಸುವಿಕೆ, ಸ್ವಾರ್ಥಭಾವ, ಕಂತ್ರೀಗುಣದಿಂದ ಅವರು ವರ್ತಿಸುತ್ತಿರುವುದರಿಂದ ದೇಶದ ಆರ್ಥಿಕ ಸ್ಥಿತಿ ಹದಗೆಟ್ಟಿದೆ. ಇವರು ದೇಶವನ್ನೇ ಮರೆತು ವ್ಯವಹರಿಸುತ್ತಿರುವ ಸಂಗತಿ ಇಲ್ಲಿ ವ್ಯಕ್ತವಾಗಿದೆ.

'ಸಮಾಜವನ್ನರಿಯದ ರಾಜಕಾರಣಿ
ರಾಜಕಾರಣಿಯನ್ನರಿಯದ ಪ್ರಜೆಗಳು
ಪ್ರಜೆಗಳನ್ನರಿಯದ ಸರಕಾರ
ಸರ್ಕಾರವನ್ನರಿಯದ ಅಧಿಕಾರಿಗಳು
ದೇಶವನ್ನೆತ್ತ ಒಯ್ಯುವರಯ್ಯಾ
ವೀಪ್ರಬಾಧ ಪ್ರಿಯ ವರಗುರುಬಸವೇಶ'[೧೮೮]

ಒಬ್ಬರನ್ನೊಬ್ಬರು ಅರಿಯದ ಸ್ಥಿತಿ ಇಲ್ಲಿ ನಿರ್ಮಾಣವಾಗಿರುವುದನ್ನಿಲ್ಲಿ ಅರಿಯಬಹುದು. ರಾಜಕಾರಣ ಇಂದಿನ ಸಮಾಜವನ್ನರಿತಿಲ್ಲ. ಪ್ರಜೆಗಳು ರಾಜಕಾರಣಿಯನ್ನರಿತಿಲ್ಲ, ಸರಕಾರ ಪ್ರಜೆಗಳನ್ನರಿತಿಲ್ಲ, ಅಧಿಕಾರಿಗಳು ಸರಕಾರವನ್ನರಿತಿಲ್ಲ. ಇಂಥವರಿಂದ ದೇಶ ಎತ್ತ ಸಾಗಬಹುದೆಂಬ ನೆಲೆಯನ್ನು ಈ ವಚನ ಪ್ರಸ್ತುತ ಪಡಿಸುತ್ತದೆ. ಬಹುಪಾಲು ವಿದ್ಯಾರ್ಥಿಗಳು, ಶಿಕ್ಷಕರು, ಯುವಕರು, ಹೆಂಗಸರು, ತಮ್ಮ ತಮ್ಮ ಕರ್ತವ್ಯವನ್ನರಿತಿಲ್ಲ. ರಾಜಕಾರಣಿಗಳು ಪ್ರಜಾಸೇವೆಗೈಯ್ಯದೆ ಪ್ರಜೆಗಳಿಂದಲೆ ಸೇವೆ ಮಾಡಿಸಿಕೊಳ್ಳುತ್ತ ಕುರ್ಚಿಗಿಟ್ಟಿಸಿಕೊಂಬ ಮಹದಾಶೆಯಲ್ಲಿ ಇರುವರು. ಇಂತು ಅತಿಯಾಸೆಯಾದರೆ ದೇಶದ ಗತಿ ಏನು? ಎಂಬ ಚಿಂತೆ ವಚನಕಾರರನ್ನು ಕಾಡುತ್ತಿದೆ ಇಲ್ಲಿ.

ಇಂದಿನ ರಾಜಕಾರಣಿಗಳು ಧರ್ಮದ ಹೆಸರಿನಲ್ಲಿ ಅನೇಕ ಅವಾಂತರಗಳನ್ನು ತಂದೊಡ್ಡುತ್ತಿದ್ದಾರೆ. ಅಖಂಡವಾದ ಭಾರತದಲ್ಲಿ ಎಲ್ಲ ಧರ್ಮದವರು, ಎಲ್ಲ ಜಾತಿಯರು ಒಂದಾಗಿ ಬಾಳುತ್ತಿದ್ದಾರೆ. ಆದರೆ ಇವರು ತಮ್ಮ ರಾಜಕಾರಣಕ್ಕಾಗಿ ಒಗ್ಗಟ್ಟನ್ನು ಒಡೆಯುತ್ತಿರುವುದು ಪ್ರಜ್ಞಾವಂತರನ್ನು ಬಹುವಾಗಿ ಕಾಡಿದೆ.

'ಮಂದಿರ ಉರುಳಿಸಿ ಮಸೀದಿ ಕಟ್ಟುವುದು
ಮಸೀದಿ ಉರುಳಿಸಿ ಮಂದಿರ ಕಟ್ಟುವುದು
ಮಸೀದಿ ಮಂದಿರ ಒಡೆದುದು ಕಟ್ಟಬಹುದು
ಒಡೆದ ಹೃದಯಗಳನೆಂತು ಒಂದು ಗೂಡಿಸಬಹುದು....'[೧೮೯]

ಎಂದು ಕೇಳುವಲ್ಲಿ ಭಾರತದಲ್ಲಿ ಧರ್ಮದ ಹೆಸರಿನಲ್ಲಿ ಭಾರತೀಯತೆ ಹೋಗುತ್ತದೆ. ಜನಾಂಗ ಜನಾಂಗದಲ್ಲಿ ರೋಷ, ದ್ವೇಷ ಹೆಚ್ಚಾಗಿ ಹೃದಯಗಳು ಒಡೆದು ಹೋಗುತ್ತವೆ ಎಂಬ ಎಚ್ಚರಿಕೆಯನ್ನು ನೀಡುತ್ತಾರೆ.

ಅಯೋಧ್ಯಾ ಘಟನೆಯನ್ನು ನೆನಪಿಸುವ ಈ ವಚನ ರಾಜಕಾರಣದಿಂದಾಗಿ ಭಾರತದ ಧರ್ಮಗಳಲ್ಲಿ ದ್ವೇಷಾಸೂಯೆ ಮೂಡಿದ್ದನ್ನು ಉಲ್ಲೇಖಿಸುತ್ತದೆ.

**೫-೪-೨ ಚುನಾವಣೆಗಳ ಉಲ್ಲೇಖ**

ಚುನಾವಣೆ ಬಂದೊಡನೆ ಹಣಿಕಿ ಹಾಕುವ ದೇಶ ಭಕ್ತರು ಕಣದಲ್ಲಿ ಗೆದ್ದು ಗದ್ದುಗೆಯ ಹಿಡಿದೊಡನೆ ಹೇಣಬಿದ್ದರೂ ಇತ್ತ ಕಾಲಿಡುವುದಿಲ್ಲ. ಚುನಾವಣೆಯ ಸಂದರ್ಭಗಳನ್ನು ತುಂಬಾ ಹತ್ತಿರದಿಂದ ಕಂಡಿರುವ ಕೆಲವು ವಚನಕಾರರು ಆ ಸನ್ನಿವೇಶದ ನೆಲೆಯನ್ನು ಅರ್ಥವಾಗಿ ಅಭಿವ್ಯಕ್ತಗೊಳಿಸಿರುವುದು ಕಂಡುಬರುತ್ತದೆ.

‘ಎಲೆಕ್ಷನ್ ಬಂತು
ಹುತ್ತು ಬಿಟ್ಟು ಕರಿನಾಗರಗಳು ಹೊರಗೆ
ನಾಗೀನ ನರ್ತನ ಮಾಡುವವು, ಹುಷಾರ್।
ನೋಟು ಪಡೆದು ಓಟು ಹಾಕಿದರೆ
ಜಾತಿ ನೋಡಿ ಮತ ನೀಡಿದರೆ
ನಿಮ್ಮ ಬಟ್ಟೆ ನಿಮ್ಮ ಕಣ್ಣೊಳಗೆ
ಪ್ರಭು; ಬೆಳೆಸಲು ಬಂದುವುಗಳೇ?
ಇವು ಗಳಿಸಲು ಬಂದವುಗಳು’[೧೯೦]

ಧ್ವನಿಪೂರ್ಣವಾದ ಈ ವಚನ ಭಾರತದ ಎಲೆಕ್ಷನ್ ಬಂದಿರುವ ಸನ್ನಿವೇಶವನ್ನು ಯಥಾವತ್ತಾಗಿ ಹಿಡಿದಿಡಲು ಪ್ರಯತ್ನಿಸಿದೆ. ಚುನಾವಣೆ ಬಂದ ತಕ್ಷಣ ಅಲ್ಲಿಯವರೆಗೆ ಹುತ್ತ ಸೇರಿದ್ದ ಕರಿನಾಗರ ಹಾವುಗಳೆಲ್ಲ ಹೊರಗೆ ಬರುವವು ಎಂದು, ವಿಷ ತುಂಬಿಕೊಂಡ ಸ್ವಾರ್ಥ, ರಾಜಕಾರಣಿಗಳು ಈ ಸಂದರ್ಭದಲ್ಲಿ ಕ್ರಿಯಾಶೀಲರಾಗುವುದನ್ನು ಸೂಚಿಸುತ್ತದೆ. ‘ನಾಗೀನ ನರ್ತನ’ ಮಾಡುವವು ಎಂಬ ಪದ ನೂರೆಂಟು ತರದಲ್ಲಿ ಆಕರ್ಷಣೆ ಮಾಡುವುದನ್ನು ಹೇಳುತ್ತದೆ. ಹಾಗೆಯೇ ನೋಟು ನೀಡುವುದು ಜಾತಿ ಹೆಸರು ಹೇಳಿ ಜನರನ್ನು ವಂಚಿಸಿಓಟು ಪಡೆಯುವ ಹುನ್ನಾರ ನಡೆಸುವುದನ್ನು, ನೋಟಿಗಾಗಿ ಓಟು ಹಾಕಿದರೆ, ಜಾತಿ ನೋಡಿ ಮತ ನೀಡಿದರೆ ಮುಂದಾಗುವ ಕೆಟ್ಟ ಪರಿಣಾಮವನ್ನು ತಿಳಿಸುತ್ತ, ಈ ರಾಜಕಾರಣಿಗಳು ಸಮಾಜ, ರಾಜ್ಯ, ದೇಶ ಬೆಳೆಸಲು ಬಂದವರಲ್ಲ, ತಮ್ಮ ಗಳಿಕೆಗಾಗಿ ಬಂದವರಿದ್ದಾರೆ ಎಂದು ಚುನಾವಣೆಯ ಹೀನತೆಯನ್ನು ಬಯಲುಗೊಳಿಸುತ್ತದೆ.

ಚುನಾವಣೆಯ ಸಂದರ್ಭ ಬಂದ ತಕ್ಷಣ ನೂರೆಂಟು ಜನಪ್ರಿಯ ಯೋಜನೆಗಳನ್ನು ತಾತ್ಪೂರ್ತಿಕವಾಗಿ ‘ಭಾಗ್ಯ’ದ ಹೆಸರಿನಲ್ಲಿ ತಂದು ವಂಚಿಸುವ ಪ್ರಕ್ರಿಯೆಯನ್ನು ಈ ವಚನ ಹೇಗೆ ಅನಾವರಣಗೊಳಿಸುತ್ತಿದೆ ಎಂಬುದನ್ನು ಗಮನಿಸಬಹುದು.

‘ಎತ್ತೆತ್ತ ನೋಡಿದತ್ತ ಬರೀ ರಾಜಕಾರಣ
ಸುತ್ತಲೂ ತುಂಬಿದೆ ಅದೇ ಜನ
ಅನ್ನಭಾಗ್ಯ, ಆಶ್ರಯಭಾಗ್ಯ, ಶಾದಿ-ಸವತಿ, ಕ್ಷಿರಭಾಗ್ಯ
ಹಮ್ಮು ಬಿಮ್ಮಿನ ಈ ಹೆಮ್ಮೆಯ ಭಾಗ್ಯಕ್ಕೆ ಸಿಕ್ಕು
ತಮ್ಮತನ ಕಳಕೊಂಡಿದೆ ಸಾಮಾನ್ಯ ಜನ

ಸೋಮಲೋಚನ ಪ್ರಿಯ ಬಸವಣ್ಣ

ರೈತನ ಆತ್ಮಾಹುತಿ ಭಾಗ್ಯಕ್ಕೂ ಇದೇ ಕಾರಣ ನೋಡಾ'[೧೯೧]

ಚುನಾವಣೆಯಲ್ಲಿ ಇದ್ದ ಸರಕಾರವೇ ಪುನಃ ಗೆದೆಯಬೇಕೆಂಬ ಪಕ್ಷಗಳು ಜನರ ಕಣ್ಣಿಗೆ ಮಣ್ಣೆರಚುವ ಪ್ರಕ್ರಿಯೆಯಲ್ಲಿ ತೊಡಗಿಕೊಂಡು ಇಂಥ 'ಭಾಗ್ಯ' ಯೋಜನೆಗಳನ್ನು ಜಾರಿಗೊಳಿಸಿ, ಜನರನ್ನು ಬಡವರನ್ನು, ಮಕ್ಕಳನ್ನು ಆ ಕಡೆಗೆ ನೋಡುವಂತೆ ಮಾಡಿ, ಕೆಲವೇ ದಿನಗಳಲ್ಲಿ ಬಂದ ಮಾಡಿ ಜನರಲ್ಲಿ ಹಾಹಾಕಾರ ಸೃಷ್ಟಿಸುತ್ತಾರೆ. ಇಂದು ರೈತನನ್ನು ನಿಕೃಷ್ಟವಾಗಿ ಕಾಣುವ ಸರಕಾರ ಹಾಗೂ ರಾಜಕಾರಣಿಗಳು ಆತನ ಆತ್ಮ ಹತ್ಯೆಗೂ ಇವರೇ ಕಾರಣವೆಂದು ಈ ವಚನ ಆಪಾದಿಸುತ್ತದೆ. ಚುನಾವಣೆಯ ಸಂದರ್ಭವನ್ನು ಇನ್ನಷ್ಟು ಅಣಕದಿಂದ ಕಾಣುವ ನೆಲೆಯೂ ವಚನಗಳಲ್ಲಿ ಅಭಿವ್ಯಕ್ತವಾಗಿದೆ.

'ಕಾಗೆ, ಕೋಳಿಗಳು ಊರು ಕಟ್ಟಿದವು

ನಾಯಿ, ನರಿಗಳು ಯಜಮಾನರಾದವು

ಕತ್ತೆ, ಕುದುರೆಗಳು ಪುಸ್ತಕವ ಓದಿದವು

ಮೀನು, ಮೊಸಳೆಗಳು ನೆಲದಲ್ಲಿ ಓಡಾಡುತ್ತಿಹವು

ಕೋಣ, ಹಂದಿಗಳು ಗಂಧ ಹಂಚುತ್ತಿಹವು

ಆದರೆ ಮನುಜ ಮಾತ್ರ ಕಾಡು ಹೊಕ್ಕಿಹನು

ಶ್ರೀ ಗುರು ಸಿದ್ಧ'[೧೯೨]

ಚುನಾವಣೆಯಲ್ಲಿ ನಡೆಯುವ ಅವಾಂತರಗಳನ್ನು ಎಳೆಎಳೆಯಾಗಿ ಬಿಚ್ಚಿಡುವ ಈ ವಚನ ಪ್ರಾಣಿ ಪ್ರತಿಮೆಯಿಂದ ಗಮನಸೆಳೆಯುತ್ತದೆ. ಆಯಾ ಪ್ರಾಣಿ, ಪಕ್ಷಿಗಳನ್ನು ಬಳಸಿಕೊಂಡು ಆ ಸಂದರ್ಭದಲ್ಲಿ ಎಲ್ಲರೂ ನಾವು ಒಂದೇ ಎಂದು ತೋರಿಸುತ್ತ, ವರ್ತಿಸುವುದು, ಏನೇನೋ ಕಥೆ ಹೇಳಿ, ಇಲ್ಲದ್ದನ್ನು ಅವರ ಮುಂದೆ ಓದುವುದು, ಎಲ್ಲೆಲ್ಲೋ ಇರಬೇಕಾದವರೆಲ್ಲ ಆಗ ನೆಲದ ಮೇಲೆ ಓಡಾಡುವುದು, ಆಸೆ ಆಮಿಷ ಒಡ್ಡಿ ಅವರಿಗೆ ಹಣ–ಹೆಂಡ–ಬಟ್ಟೆ ಮೊದಲಾದವುಗಳನ್ನು ಹಂಚುವುದು ಈ ಎಲ್ಲ ಕ್ರಿಯೆಗಳು ಜರುಗುತ್ತವೆ. ಆಗ 'ಮಾನವತೆ' ಮಾತ್ರ ಊರಲ್ಲಿರುವುದಿಲ್ಲ. ಆಯಾ ಕಾರ್ಯ ಮಾಡುವವರು ಎಂಥ ಸ್ವಭಾವದವರೆಂಬುದನ್ನು ತುಂಬಾ ಸೂಚ್ಯವಾಗಿ ತೋರಿಸುವ ಈ ವಚನ 'ಚುನಾವಣೆಯ' ಸಂದರ್ಭದ ನೆಲೆಯನ್ನು ಅರ್ಥಪೂರ್ಣವಾಗಿ ಅಭಿವ್ಯಕ್ತಿಸಿದೆ ಎನ್ನಬಹುದು.

ಇಂಥ ಸಂದರ್ಭದಲ್ಲಿ 'ಮತದಾನ'ದ ಜವಾಬ್ದಾರಿ ತುಂಬಾ ಮಹತ್ವದಾಗಿರುವುದನ್ನು ಹೇಳುವ ವಚನಗಳು, ಪ್ರಜಾಪ್ರಭುತ್ವದ ನೆಲೆಯನ್ನು ತಿಳಿಸಲು ಪ್ರಯತ್ನಿಸುತ್ತವೆ.

'ಚುನಾವಣೆ ಪ್ರಜಾ ಪ್ರಭುತ್ವದ ಮೂಲವಯ್ಯ

ಪ್ರಜೆಗೆ ಮತದಾನದ ಹಕ್ಕು ಮುಖ್ಯವಯ್ಯಾ

ಹುರಿಯಾಳಿನ ವ್ಯಕ್ತಿತ್ವ ಅರಿಯದೇ

ಮತ ಹಾಕಬಾರದಯ್ಯಾ

ಮತದ ಮಹತ್ವವರಿತು ಒಳ್ಳೆಯ

ವ್ಯಕ್ತಿಗೆ ಮತ ನೀಡಿದರೆ

ಪ್ರಜಾಪ್ರಭುತ್ವ ಯಶಸ್ವಿಯಾಗುದಯ್ಯಾ....'೧೯೩

ಎನ್ನುವ ಸೂಗೂರೇಶ್ವರ ವಚನ 'ಮತದಾನ'ದ ನೆಲೆ-ಬೆಲೆಯನ್ನು ತಿಳಿಸುತ್ತದೆ. ಆದರೆ ಇಂದಿನ ರಾಜಕಾರಣದಲ್ಲಿ 'ಮತದಾನ' ಮಾಡುವವರಲ್ಲಿ ಅಶಿಕ್ಷಿತರೇ ಹೆಚ್ಚಿರುವುದರಿಂದ ಭಾರತದಲ್ಲಿ ಯೋಗ್ಯರಾದವರು ಗೆದ್ದು ಹೋಗುವುದು ಕಷ್ಟವಾಗಿದೆ. ಹುರಿಯಾಳಿನ ವ್ಯಕ್ತಿತ್ವ ಅರಿತು ಮತ ಹಾಕುವವರ ಸಂಖ್ಯೆ ತುಂಬಾ ಕಡಿಮೆಯಾಗಿದೆ. ಒಳ್ಳೆಯ ವ್ಯಕ್ತಿಗಳು ಆರಿಸಿ ಬರುವುದು ಕಷ್ಟ. ಬಂದರೂ ಅವರು ರಾಜಕಾರಣದಲ್ಲಿ ಮುಂದೆ ಒಳ್ಳೆಯವರಾಗಿ ಉಳಿಯುತ್ತಾರೆಂದು ಹೇಳಲು ಸಾಧ್ಯವಿಲ್ಲದ ಸ್ಥಿತಿ ಇಂದಿದೆ. ಭಾರತದಲ್ಲಿ ಹೆಸರಿಗೆ ಪ್ರಜಾಪ್ರಭುತ್ವವಿದೆ. ಇಲ್ಲಿರುವುದೆಲ್ಲ 'ರಾಜಪ್ರಭುತ್ವ' ಎಂಬುದನ್ನು ಒಟ್ಟಾರೆಯಾಗಿ ಈ ಎಲ್ಲ ನೆಲೆಗಳಲ್ಲಿ ಅರಿಯಬಹುದಾದ ಚಿಂತನೆ ಎನ್ನಬಹುದು.

ಈ ಎರಡೂ ಜಿಲ್ಲೆಗಳ ಆಧುನಿಕ ವಚನಕಾರರಲ್ಲಿ ಕಾಣಸಿಗುವ ರಾಜಕೀಯ ವಿಚಾರಗಳು ವಾಸ್ತವಿಕ ಸಂಗತಿಗಳಾಗಿದ್ದು, ಇಂದಿನ ನಮ್ಮ ರಾಜಕೀಯ ಸ್ಥಿತಿ-ಗತಿಗಳನ್ನು ದಿಗ್ದರ್ಶಿಸುತ್ತವೆ. ದೇಶದ ಸ್ವಾತಂತ್ರ್ಯ ಪೂರ್ವದಲ್ಲಿದ್ದ ಹಾಗೆ ಎಲ್ಲಾ ದುರಂತಗಳಿಗೆ ಪಾಶ್ಚಾತ್ಯರ ಕಡೆಗೆ ಬೊಟ್ಟು ತೋರಿಸಿ, ತಮ್ಮ ವೈಯಕ್ತಿಕ ಹೊಣೆಗಾರಿಕೆಯಿಂದ ಮುಕ್ತರಾಗುತ್ತಿದ್ದ ಕಾಲ ಈಗಿಲ್ಲ. ಈಗ ನಾವಿರುವುದು ಸ್ವತಂತ್ರಭಾರತದಲ್ಲಿ ಆದರ್ಶಗಳು ಬೇಕಾಗಿರುವುದು ರಾಜಕಾರಣದಲ್ಲಿ. ಈ ಕ್ಷೇತ್ರದಲ್ಲಿ ತುಂಬಿ ನಿಂತಿರುವ ಸ್ವಾರ್ಥತನ, ಅಧಿಕಾರ ದಾಹ, ಅಸಮಾನತೆ, ಗುಂಡಾಗಿರಿ, ಅನ್ಯಾಯ, ಅತ್ಯಾಚಾರ ಹೋಗಬೇಕು. ಇದಕ್ಕೆ ಜನಸಾಮಾನ್ಯರ ಭಾರತೀಯ ಪ್ರಜೆಗಳ ಸಹಕಾರವೂ ಅತ್ಯಂತ ಅವಶ್ಯವೆಂಬ ನೆಲೆಯಲ್ಲಿ ಚಿಂತನೆಗಳು ಮೂಡಿ ಬಂದಿರುವುದನ್ನು ಮನಗಾಣಬಹುದಾಗಿದೆ.

**೫-೫ ಸಾಂಸ್ಕೃತಿಕ ನೆಲೆ**

'ಸಂಸ್ಕೃತಿ' ಎಂಬುದು ಇಂಗ್ಲೀಷಿನ Culture ಎಂಬ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಬಳಸಲಾಗುತ್ತದೆ. ಆದರೆ ಈ ಮಾತು ನಮಗೆ ಹೊಸದೆನಿಸಿದರೂ ಅದರ ಹಿಂದಿರುವ ಅರ್ಥ ಹಳೆಯದಾಗಿರುವಂತಹದ್ದು Culture ಎಂಬುದರ ಮೂಲಪದ 'Cult' ಅಥವಾ 'Cu|t' ಎಂಬುದಾಗಿದೆ. 'Cult' ಎಂದರೆ ಗೌರವಿಸು, ಆರಾಧಿಸು, ಸೇವೆ ಮಾಡು ಮೊದಲಾದ ಅರ್ಥಗಳನ್ನು ಒಂದು ಕಡೆ ಹೊಂದಿದ್ದರೆ, ಇನ್ನೊಂದು ಕಡೆಯಲ್ಲಿ 'ಭೂದೇವಿಯ ಆರಾಧನೆ' ಎಂದರೆ 'ಕೃಷಿ' ಎಂಬ ಅರ್ಥವನ್ನು ಪಡೆಯಿತು. ಈ ಎರಡನೆಯ ಅರ್ಥದಿಂದಲೇ 'Agriculture' ಎಂಬ ಶಬ್ದ ಬಂದಿದೆ. ೧೯೪ ಹೀಗಾಗಿ Culture ಎಂಬುದು ಒಂದು ಬಗೆಯ ವ್ಯವಸಾಯವೇ ಆಗಿದೆ. ಭೂಮಿಯನ್ನು ಉತ್ತಿ ಬಿತ್ತಿ, ಗೊಬ್ಬರ ಹಾಕಿ ಹಸನು ಮಾಡುವಂತೆ, ಮನುಷ್ಯನ ಅಂತರಂಗ ಬಹಿರಂಗಗಳಲ್ಲೂ ಈ ಪ್ರಕ್ರಿಯೆ ನಡೆಯಬೇಕಾಗಿದೆ. ಹೀಗಾಗಿ ಇಂಥ ಪ್ರಕ್ರಿಯೆಯಿಂದ ಮನುಷ್ಯನಲ್ಲಿರುವ ವಿಶೇಷವಾದ ಶಕ್ತಿಗಳು ಅಥವಾ ಕಲೆಗಳು ಮೊಳಕೆಯೊಡೆದು ಬೆಳೆಯಬೇಕಾಗಿರುವ ಅಂತರಂಗದ ವ್ಯವಸ್ಥೆ **'ಸಂಸ್ಕೃತಿ'** ಎನಿಸುತ್ತದೆ.

'ಸಂಸ್ಕೃತಿ' ನಮ್ಮ ಜೀವನದ ಪದ್ಧತಿಗಳಾದ ಆಚಾರ-ವಿಚಾರ, ಸಾಹಿತ್ಯ, ಕಲೆ, ಭಾವ-ಭಾಷೆ, ರೀತಿ-ನೀತಿ, ಆಚರಣೆ-ಸಂಪ್ರದಾಯ, ನಂಬಿಕೆಗಳು, ಉಡಿಗೆ-ತೊಡುಗೆ, ಧರ್ಮ ಶಿಕ್ಷಣ, ಸಂಗೀತ ಇವೇ ಮೊದಲಾದ ಅನೇಕ ಸಂಗತಿಗಳಿಂದ ಕೂಡಿರುವ ಒಂದು ಮೂರ್ತಸ್ವರೂಪವನ್ನು ಸಂಸ್ಕೃತಿ ಎಂದು ಹೇಳುತ್ತೇವೆ. ಮನುಷ್ಯನೇ ಸಂಸ್ಕೃತಿಯ ಮೂಲವಾಗಿರುವುದರಿಂದ 'ಮನುಷ್ಯನ ಶ್ರಮ ಎಷ್ಟೆಷ್ಟು ಬಳಕೆಯಾಗುತ್ತದೆಯೋ ಅಷ್ಟಷ್ಟು ಸಂಸ್ಕೃತಿಯ ವಿಕಾಸವಾಗುತ್ತದೆ. ಆದರೆ ಮನುಷ್ಯನ ದೈಹಿಕ ಹಾಗೂ ಬೌದ್ಧಿಕ ಶ್ರಮ ಬಳಕೆಯಾದಂತೆಲ್ಲ ಬದಲಾವಣೆಗಳು

ಆಗುತ್ತವೆ. ಹೊಸ ಹೊಸ ವಿನ್ಯಾಸಗಳು ರೂಪಗೊಳ್ಳುತ್ತವೆ. ಬೆಳವಣಿಗೆಯನ್ನು ಅನುಸರಿಸಿ, ಸಂಸ್ಕೃತಿಯ ವಿಕಾಸವಾಗುತ್ತದೆ. ಈ ಚಲನ ಸ್ಥಿತಿಯ ಮೂಲ, ಕವಿಗಳ ಹಾಗೂ ಲೇಖಕರ ಶ್ರಮವಾಗಿದೆ ಎನ್ನಬಹುದು. ಈ ಶ್ರಮ ಸಂಸ್ಕೃತಿಯಲ್ಲಿ ಲೋಕದ ಹಿತಕ್ಕಾಗಿ ಕವಿಯು ಹಲವು ಚಿಂತನಗಳನ್ನು ಹರಿಬಿಡುವುದರಿಂದ ಭೂಲೋಕದ ಆರ್ಥಿಕ ವ್ಯವಹಾರಗಳನ್ನು ಮೀರಿ ನೈತಿಕತೆಯನ್ನು ಪ್ರಚುರ ಪಡಿಸುತ್ತ ಜನರೊಳಗೆ ಒಂದು ಸಾಮರಸ್ಯ ಮೂಡಿಸುತ್ತ ಬದುಕನ್ನು ಹಸನು ಮಾಡುವ ಕಡೆಗೆ ಕಾವ್ಯತತ್ವದ ಗಮನವಿದೆ'[೧೯೫] ಎಂಬುದು ಕಾವ್ಯದಲ್ಲಿ ಹುದುಗಿರುವ ಸಾಂಸ್ಕೃತಿಕ ಆಯಾಮವನ್ನು ತಿಳಿಸುವ ನೆಲೆಯೆನ್ನಬಹುದು.

ಸಾಂಸ್ಕೃತಿಕ ಜೀವಿಯಾದ ಮಾನವನ ಉತ್ತಮ ಬದುಕನ್ನು ರೂಪಿಸುವಲ್ಲಿ ಆತನ ಪರಿಸರವು ಬಹುಮುಖ್ಯವಾಗುತ್ತದೆ. ಪರಿಸರವು ಸಾಂಸ್ಕೃತಿಕ ಜೀವನವನ್ನು ಕಟ್ಟಿಕೊಡುತ್ತದೆ. ಅಂಥ ಪರಿಸರದ ಚಿತ್ರಣವನ್ನು ಇಲ್ಲಿಯ ಆಧುನಿಕ ವಚನದಲ್ಲಿ ಕಾಣಬಹುದು.

'ಮುಳ್ಳು ಗಿಡಗಳಡಿಯ ಗುಲಾಬಿ
ಮೂಡಿ ಅರಳಿ ನಗುವುದಿಲ್ಲವೇ
ಕೆಸರಿನಲಿ ಕಮಲ
ಹುಟ್ಟಿ, ಬೆಳೆದು ಸೊಬಗ ತೋರುವುದಿಲ್ಲವೇ?
ಬಳ್ಳಿಯ ಮೇಲೆ ಮಲ್ಲಿಗೆ
ಹೊಂದಿಕೊಂಡು ಕಂಪು ಬೀರುವುದಿಲ್ಲವೇ?
ಇದು ಕಾರಣ
ಪ್ರಕೃತಿಯೊಂದಿಗೆ ಪ್ರಕೃತಿ ಕೂಡಿಕೊಂಡ
ತೆರದಲಿ ಮನುಜ ಬಾಳ್ವಂತೆ ಮಾಡು
ಶ್ರೀ ಗುರುಸಿದ್ಧ'[೧೯೬]

ಪ್ರಕೃತಿಯು ಪರಿಸರದೊಂದಿಗೆ ಹೊಂದಿಕೊಂಡು ನಡೆದಿರುವ ಸುಂದರ ಚಿತ್ರ ಈ ವಚನದಲ್ಲಿದೆ.

ಮುಳ್ಳಿನೊಂದಿಗೆ ಅರಳಿ ನಗುವ ಗುಲಾಬಿ ಹೂವು, ಕೆಸರಿನಲ್ಲಿ ಹುಟ್ಟಿ ಬೆಳೆವ ಕಮಲ ಬಳ್ಳಿಯ ಮೇಲೆ ಹೊಂದಿಕೊಂಡು ಕಂಪ ಬೀರುವ ಮಲ್ಲಿಗೆ, ಇವೆಲ್ಲವೂ ಸಮರಸ ಹಾಗೂ ಸಾಂಸ್ಕೃತಿಕ ಬದುಕಿನ ಮಾರ್ಗದರ್ಶಕಗಳು ಅದೇ ತೆರನಾಗಿ ಅದನ್ನು ಕಂಡು ಅನುಭವಿಸುವ ಮನುಜರು ಹೊಂದಿಕೊಂಡು ಬಾಳಬೇಕೆಂಬ ಆಶಯ ಈ ವಚನದ್ದು, ಏನಾದರಾಗಲಿ ಆದರೆ ತಾನು ಇದ್ದದ್ದರಲ್ಲಿಯೇ ಶ್ರೇಷ್ಠತೆ ಪಡೆಯಬೇಕು, ಸಂಸ್ಕೃತಿ ಹೊಂದಬೇಕು ಎಂಬ ನೆಲೆಯಲ್ಲಿಯ ವಚನವೊಂದು ಹೀಗಿದೆ.

'ತುರುಗಾಹಿಯಾದೊಡೆ ರಾಮಣ್ಣನಂತಾಗಬೇಕು

ಕುರಿಗಾಹಿಯಾದೊಡೆ ಗೊಲ್ಲಾಳನಂತಾಗಬೇಕು

ಶುಚಿತಾಯಿಯಾದಡೆ ಸತ್ಯಕ್ಕನಂತಾಗಬೇಕು

ಬಹುರೂಪಿಯಾದಡೆ ಚೌಡಯ್ಯನಂತಾಗಬೇಕು

ಯೋಗಿಯಾದಡೆ ಗಿರಿಸಿದ್ಧಲಿಂಗನಂತಾಗಬೇಕು'[೧೯೭]

೧೨ನೇಯ ಶತಮಾನದ ಶರಣರನ್ನು ಸ್ಮರಿಸಿಕೊಂಡು ಅವರ ವೃತ್ತಿ ಹಾಗೂ ಸಾಂಸ್ಕೃತಿಕತೆಯನ್ನು ತಿಳಿಯಪಡಿಸುತ್ತ ಸಾಗಿರುವ ಈ ವಚನ, ದನಕಾಯುವವರಾಗಿರಲಿ, ಕುರಿಗಾಹಿಗಳಾಗಿರಲಿ, ಶುಚಿಗೊಳಿಸುವವರಾಗಿರಲಿ, ಬಹುರೂಪಿಗಳಾಗಿರಲಿ, ಯೋಗಿಯಾಗಿರಲಿ, ವೃತ್ತಿ ಯಾವುದೇ ಆಗಿರಲಿ ಅವರ ಬದುಕು ಮಾತ್ರ ಸುಸಂಸ್ಕೃತವಾಗಿರಬೇಕು ಎನ್ನುತ್ತದೆ. ಈ ವಚನ ಅವರ ವೃತ್ತಿ, ಪ್ರವೃತ್ತಿ ಹಗೂ ಪ್ರಾಕೃತಿಕ

ಪರಿಸರವು ಸಾಂಸ್ಕೃತಿಕ ಜೀವನವನ್ನು ಕಟ್ಟಿಕೊಡುತ್ತದೆ. ಅಂಥ ಸಾಂಸ್ಕೃತಿಕ ಬದುಕನ್ನು ದಾಖಲಿಸುವ ಪರಿಸರದಲ್ಲಿ ಸಾಹಿತ್ಯವೂ ಒಂದೆನ್ನಬಹುದು.

'ಅಯ್ಯಾ ನೀನು ಸೃಷ್ಟಿಸಿದ ಜಗತ್ತಿನಲ್ಲಿ
ಎಲ್ಲಾ ನಾನು ನನ್ನದು ಎನ್ನುವರಯ್ಯ
ಬಸವಲಿಂಗ ನಿನ್ನನ್ನು ನನ್ನವನೆಂದು
ತಮ್ಮನ್ನು ನಿನ್ನವರೆಂದು ಭಾವಿಸರಯ್ಯ
ನಾನು ನನ್ನದೆಂಬ ಭಾವ ಕಳೆದು
ನೀನು ನಿನ್ನದೆಂಬ ಭಾವ ಬೆಳೆಯಲಯ್ಯ'[೧೯೮]

ಬಸವಣ್ಣನವರ 'ಇವನಾರವ, ಇವನಾರವ' ಎಂಬ ವಚನದ ರೀತಿಯಲ್ಲಿರುವ ಈ ಆಧುನಿಕ ವಚನ 'ಸಾಂಸ್ಕೃತಿಕ' ಸಂಸ್ಕಾರವಿಲ್ಲದ 'ನಾನು' ಎಂಬುದಕ್ಕೆ ನೆಲೆಯನ್ನು ತೋರಿಸುತ್ತದೆ. ಇಡೀ ಜಗತ್ತು ದೇವನ ಸೃಷ್ಟಿ. ಇಲ್ಲಿ ಎಲ್ಲವೂ ದೇವನದೇ ಆದರೂ, ಎಲ್ಲಾ ನಾನು ನನ್ನದು ಎನ್ನುವವರೇ ಇಂದು ಹೆಚ್ಚಾಗಿದ್ದಾರೆ. ಅವರೆಂದೂ ಇತರರನ್ನು ತಮ್ಮವರೆಂದು ಭಾವಿಸುವುದಿಲ್ಲ, ತನ್ನನ್ನು ನಿಮ್ಮವರೆನ್ನುವ ಇವರಲ್ಲಿಯ ಆ ಭೇದಭಾವ ತೊಗಲಬೇಕು 'ನೀನು' ಎಂಬುದು ಅವರಲ್ಲಿ ಬೆಳೆಯಬೇಕು ಎನ್ನುತ್ತದೆ ಈ ವಚನ.

ಮನುಷ್ಯನ ನಡೆ-ನುಡಿ, ಸುಖ-ದುಃಖ, ಆಚಾರ-ವಿಚಾರ, ಬೇಕು ಬೇಡಗಳಿಂದ ಆರಂಭಗೊಳ್ಳುವ ಈ ಬದುಕು, ಕುಟುಂಬ, ಸಮಾಜ, ರಾಜ್ಯ ರಾಷ್ಟ್ರ ಮುಂತಾಗಿ ವಿಶಾಲ ವಿಶ್ವದ ನೆಲೆಯಲ್ಲಿ ವಿಕಸನಗೊಳ್ಳಬೇಕು. ಧರ್ಮ, ಕಲೆ, ಸಾಹಿತ್ಯ ಮುಂತಾದವುಗಳು ಇದರಲ್ಲಿ ಸಮ್ಮಿಲನಗೊಂಡು ಇವು ಮನುಷ್ಯನ ಸಾಂಸ್ಕೃತಿಕ ಜೀವನಕ್ಕೆ ಸೃಜನಾತ್ಮಕ ಸೃಷ್ಟಿಗಳಾಗುತ್ತವೆ. ಇದನ್ನೇ ವಿದ್ವಾಂಸರು. 'ಮಾನವ ಜೀವನದ ಅಂತರಂಗ-ಬಹಿರಂಗಗಳನ್ನು ವ್ಯಾಪಿಸಿಕೊಂಡಿರುವ, ವ್ಯಕ್ತಿ-ಸಮಷ್ಟಿಗಳನ್ನು ಸರ್ವಸಾಧಾರವಾದ ಮಾನವೀಯ ಮೌಲ್ಯಗಳನ್ನು ಒಳಗೊಂಡಿರುವ ಸತ್ಯ, ಸೌಂದರ್ಯ, ಶಿವತತ್ವಗಳನ್ನು ಅವಿಷ್ಕಾರಗೊಳಿಸುವಂತಹ ಬದುಕೇ ಸಾಂಸ್ಕೃತಿಕ ಜೀವನ ಇದು ಖಂಡವಾದುದಲ್ಲ, ಅಖಂಡವಾದದ್ದು' ಎಂದು ಹೇಳುತ್ತಾರೆ.[೧೯೯]

ಮಾನವ ಜೀವನದ ಶ್ರೇಷ್ಠತೆ ಅಡಗಿರುವುದು ಪರರಿಗೆ ಸಹಾಯ ಮಾಡುವುದರಲ್ಲಿ ಅಶಕ್ತರಗೆ, ಅಬಲರಿಗೆ ಸಹಕಾರ ನೀಡುವಲ್ಲಿ, ಅದು ಸಿರಿವಂತಿಕೆಯಿಂದಾಗಿ, ಅಧಿಕಾರದ ಅಹಂಕಾರದಿಂನಾಗಲಿ ತಪ್ಪಬಾರದು ಎಂಬ ನಿಲುವಿನ ವಚನಗಳನ್ನಿಲ್ಲಿ ಗಮನಿಸಬಹುದು.

'ಕಾರು ಬಂಗ್ಲೆಯ ಮಾಡಿ । ಯಾರಿಗಿಟ್ಹೋಗುವೆಯೊ?
ಬೇರೆಯವರ ಕಷ್ಟದಲಿ ಸಹಾಯವ ಮಾಡು
ತೋರು ಮನುಷ್ಯತ್ವ । ಸತ್ಯಜ್ಞ ।' (ಸ.ವ. ಭಾಗ ೪-ವ. ೫-ಪು. ೧೫೬)
'ಅವರವರ ಧರ್ಮವದು । ಅವರವರಿಗೆ ಶ್ರೇಷ್ಠ
ಹಿಯ್ಯಾಳಿಸದೆ ಯಾವ ಧರ್ಮ, ನೀನಿರು
ಸಾವಧಾನದಿಂ (ಸತ್ಯಜ್ಞ)'[೨೦೦] – ಎನ್ನುವಲ್ಲಿ

ಆಧುನಿಕತೆಯ ಭರಾಟೆಯಲ್ಲಿ ನೀತಿ, ಧರ್ಮ, ಮಾನವೀಯತೆಯನ್ನು ಮರೆತು, ಗೊಂದಲದಲ್ಲಿ, ಸಿರಿತನದ

ಅಹಂಮಿಕೆಯಲ್ಲಿ, ಸ್ವಧರ್ಮದ ಅಂಧಾಭಿಮಾನದಲ್ಲಿ ಇರುವವರನ್ನು ಕುರಿತು ಎಚ್ಚರಿಸುವ ವಚನಕಾರರು, ಮನುಷ್ಯತ್ವವನ್ನು ತೋರಬೇಕೆಂದು ಸಲಹೆ ನೀಡುತ್ತಾರೆ. ಅವರವರ ಧರ್ಮ ಅವರವರಿಗೆ ಇಷ್ಟವಾದುದು, ಶ್ರೇಷ್ಠವಾದುದು, ಅದನ್ನಾರೂ ಹಿಯಾಳಿಸಬಾರದು, ಅದೇ 'ಸಂಸ್ಕೃತಿ' ಎಂಬುದನ್ನು ಇಲ್ಲಿಯ ವಚನಗಳು ಸಾರಿ ಹೇಳುತ್ತವೆ.

'ಕಷ್ಟಕ್ಕೆ ಕಲ್ಲಾಗು, ಇಷ್ಟಕ್ಕೆ ಮಲ್ಲಿಗೆ ನೀನಾಗು
ಅಹಿಂಸೆಗೆ ಗಾಂಧೀ ನೀನಾಗು, ತ್ಯಾಗಕ್ಕೆ ಬುದ್ಧನಾಗು
ಹೋರಾಟಕ್ಕೆ ಅಂಬೇಡ್ಕರ್ ನೀನಾಗು;
ಸಮಾಜವನ್ನು ತಿದ್ದಲು ಬಸವಣ್ಣ ನೀನಾಗು
ಭೋಗಕ್ಕೆ ಕೈವಲ್ಯ ನೀನಾಗು, ಮಾನವ ನೀನಾಗು ಅಲ್ಲೇ
ಶ್ರೀ ಗವಿಸಿದ್ಧೇಶ್ವರ ನಿರವು'[೨೧೧]

ಎನ್ನುವ ಈ ವಚನವು ಮಾನವ ಸಂಸ್ಕೃತಿಯ ನೈಜತೆಯನ್ನು ಇಲ್ಲಿ ಪಟ್ಟಿಮಾಡಿ ಹೇಳುತ್ತದೆ. ಕಷ್ಟಬಂದರೆ ಕಲ್ಲಿನಂತಿರಬೇಕು ಆದರೆ ಬೇರೆಯವರ ಇಷ್ಟಾರ್ಥಗಳಿಗೆ ಮಲ್ಲಿಗೆಯ ವಾಸನೆಯಂತಾಗಿರಬೇಕು. ಅಹಿಂಸೆ, ತ್ಯಾಗ, ಹೋರಾಟ, ಸಾಮಾಜಿಕತೆಗಾಗಿ, ಗಾಂಧಿ, ಬುದ್ಧ, ಅಂಬೇಡ್ಕರ ಹಾಗೂ ಬಸವಣ್ಣನಂತಾಗಬೇಕೆನ್ನುತ್ತ ಮಾನವತೆ ಬೆಳೆಸಿಕೊಳ್ಳಬೇಕೆಂಬ ಸಂದೇಶ ನೀಡುತ್ತದೆ. ಜಗತ್ತಿನಲ್ಲಿ ಭಾರತದ ಸಂಸ್ಕೃತಿಗೆ ವಿಶಿಷ್ಟ ನೆಲೆಯಿರುವುದು ಈ ಎಲ್ಲ ಗುಣಗಳಿಂದಲೇ ಎಂಬುದನ್ನು ನಾವಿಂದು ಗಮನಿಸಬೇಕಾಗಿದೆ. ಇಂದು ಉತ್ತಮ ಸಂಸ್ಕೃತಿ ಮಕ್ಕಳಲ್ಲಿ ಒಡಮೂಡಲು ತಂದೆ ತಾಯಿ, ಗುರು, ಬಂಧು-ಬಳಗದವರೆಲ್ಲರ ಜವಾಬ್ದಾರಿ ತುಂಬಾ ಇರುವ ಸಂಗತಿಯನ್ನು ಈ ವಚನದಲ್ಲಿ ಮನಗಾಣಬಹುದು.

'ನೀತಿ ಕಲಿಸದ ತಂದೆ, ಪ್ರೀತಿ ಮಮತೆಯಿಲ್ಲದ ತಾಯಿ
ವಿದ್ಯೆ ಕಲಿಸದ ಗುರು, ಉದ್ಯೋಗವಿಲ್ಲದ ಯುವಕ
ಹೆಂಡತಿಯನ್ನು ಸಾಕರಾದ ಗಂಡ
ಜವಾಬ್ದಾರಿಯಿಲ್ಲದೆ ತಿಂದುಂಡು ತಿರುಗುವ ಮಗ
ಅತ್ತೆ-ಮಾವಂದಿರನ್ನು ಗೌರವದಿಂದ ಕಾಣದ ಸೊಸೆ
ನಾಗರಿಕತ್ವವಿಲ್ಲದ ಮನುಜ ಬೆಳೆಯಿಲ್ಲದ ಬರಡು ಹೊಲ
ಭಕ್ತಿಯಿಲ್ಲದ ದೇವರ ಧ್ಯಾನ, ಮನ ಶುದ್ಧವಿಲ್ಲದ ಪೂಜೆ
ಇಂತಿಪ್ಪವುಗಳನ್ನೆಲ್ಲ ಒಪ್ಪಿಕೊಂಡು
ಈ ದೇಶದೊಳ್ ಇದ್ದು ಇಲ್ಲದಂತಿದ್ದರೇನು ಫಲವಯ್ಯ....'[೨೧೨]

ಭಾರತದ ಸಾಂಸ್ಕೃತಿಕ ಲೋಕವನ್ನು ಎದೆ ತೆರೆದು ತೋರಿಸುವ ಈ ವಚನದಲ್ಲಿ ಸಾಂಸ್ಕೃತಿಕ ವಿಚಾರಗಳ ಸಂಗಮವಿದೆ. ನೀತಿ, ಪ್ರೀತಿ, ವಿದ್ಯೆ, ಉದ್ಯೋಗ, ಹೆಂಡತಿ, ಗಂಡನ ಜವಾಬ್ದಾರಿ, ಗೌರವ ಭಾವ, ಮನುಜನಲ್ಲಿರಬೇಕಾದ ನಾಗರಿಕತೆಯನ್ನೆಲ್ಲ ಇಲ್ಲಿ ಹೇಳಲಾಗಿದೆ. ಈ ಗುಣಗಳಿಲ್ಲದ ಆಯಾ ವ್ಯಕ್ತಿಗಳು ಬೆಳೆಯಿಲ್ಲದ ಬರಡು ಹೊಲದಂತೆ, ಭಕ್ತಿಯಿಲ್ಲದ ದೇವರ ಧ್ಯಾನದಂತೆ ಕಾಣಿಸುತ್ತಾರೆಂಬ ನವೀನ ವಿಚಾರವಿದೆ. ಇಂಥವರು

ಸಾಂಸ್ಕೃತಿಕ ದೇಶವಾದ ಭಾಋತದಲ್ಲಿದ್ದು, ಇಲ್ಲದಂತಿದ್ದರೇನು ಫಲವಿಲ್ಲ ಅವರು ಸಾಂಸ್ಕೃತಿಕ ಜೀವನವನ್ನು ಸಾಗಿಸಬೇಕಾದ ಅವಶ್ಯಕತೆಯನ್ನು ತಿಳಿಸುತ್ತದೆ.

**೫-೫-೧ ಸಂಸ್ಕೃತಿ ಸ್ಥಿತ್ಯಂತರ**

ಇಂದಿನ ನಮ್ಮ ಸಾಂಸ್ಕೃತಿಕ ಬದಲಾವಣೆಗೆ ಅನೇಕ ಕಾರಣಗಳಿವೆ. ಆಂಗ್ಲರ ಆಳ್ವಿಕೆ, ಅನ್ಯಭಾಷೆಯ ಪ್ರಭಾವ, ಬೇರೆ ಸಂಸ್ಕೃತಿಗಳ ದಾಳಿ, ದೂರದರ್ಶನ, ಜಾಹಿರಾತುಗಳು, ನಮ್ಮವರ ಮನಪರಿವರ್ತನೆ, ಶಿಕ್ಷಣ ಪದ್ಧತಿ, ಆರ್ಥಿಕ ಸ್ಥಿತಿಗತಿ, ಧಾರ್ಮಿಕ ಪ್ರಭಾವ ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು. ಅವುಗಳ ವಿವರಗಳು ಆಧುನಿಕ ವಚನಗಳಲ್ಲಿ ಬಹಳಷ್ಟು ಕಾಣ ಸಿಗುತ್ತವೆ.

'ಕಾಟೋ ಪೀಟೋ ಲುಟೋ ಬಾಟೋ
ಇದು ನಿಜಾಮ ರಜಾಕಾರ ಸಂಸ್ಕೃತಿ
ಹುಂಡಾ, ಹೊಂಡಾ ಗುಂಡಾ ಭಂಡಾ
ಇದು ಸುಸಂಸ್ಕೃತರ ವರದಕ್ಷಿಣೆ ಸಂಸ್ಕೃತಿ
ಹಡಗಾ ಹೊಡೆದು ಸ್ವಿಟ್ಜರ್ಲ್ಯಾಂಡ ಸೇರೋದು
ಇದು ಕಂತ್ರಿ ಮಂತ್ರಿ ಸಂಸ್ಕೃತಿ ।
ರಾಮ ಬಾಬರಿ ಬೆಂಕಿಗೆ ತುಪ್ಪಾ ಹಾಕುವುದು
ಇದು ಹಿಂದೂ ಮುಸ್ಲಿಮ ಸಂಸ್ಕೃತಿ
ಇದೇ ಹೆಮ್ಮೆಯ ಭಾರತೀಯ ಸಂಸ್ಕೃತಿಯೆಂದ
ದಿಗಂಬರ ಕರಿಬಸವೇಶ್ವರ'[೨೦೩]

ಎನ್ನುವ ಮಾತು ಹೈದ್ರಾಬಾದ ಕರ್ನಾಟಕದ ನಿಜಾಮರ ಆಳ್ವಿಕೆಯಲ್ಲಿ ನಡೆದ ರಜಾಕರ ಹಾವಳಿಯ ಚಿತ್ರವನ್ನು ಮೊದಲೆರಡು ಸಾಲಿನಲ್ಲಿ ನೀಡುತ್ತದೆ. ರಜಾಕಾರರ ಹಾವಳಿಯಿಂದ ಬೇಸತ್ತ ಜನರು ಈ ಪ್ರದೇಶ ಬಿಟ್ಟು ಬೇರೆ ಪ್ರಾಂತಗಳಿಗೆ ಹೋಗಿದ್ದ ಚಿತ್ರದ ಇತಿಹಾಸ ಇಲ್ಲಿದೆ ಮುಸ್ಲಿಂಏತರರನ್ನು ಕಡಿಯೋದು, ಬಡಿಯೋದು, ಅವರ ಸಂಪತ್ತನ್ನು ಲೂಟಿ ಮಾಡುವುದು ಹಂಚಿಕೊಂಡು ಅವರು ಅದನ್ನು ಆನಂದಿಸುತ್ತ ಮಜ ಮಾಡುತ್ತಿದ್ದ ಅವರ ಸಂಸ್ಕೃತಿಯನ್ನು ಅದು ೧೯೪೮ರ ಸಪ್ಟೆಂಬರ ೧೭ರ ಪೂರ್ವದಲ್ಲಿದ್ದದ್ದನ್ನು ಇಲ್ಲಿ ಗಮನಿಸಬಹುದು. ಹಾಗೆಯೇ ಸುಸಂಸ್ಕೃತರೆನಿಸಿಕೊಂಡವರು ಹೊಂಡಾ ಗಾಡಿ, ಹುಂಡಾ (ವರದಕ್ಷಿಣೆ ಹಣ)ಕ್ಕಾಗಿ ಗುಂಡಾಗಿರಿ, ಭಂಡತನ ಮಾಡುವುದನ್ನು ತಿಳಿಸಿದರೆ, ಮಂತ್ರಿಗಳಾದವರ ಕಂತ್ರಿ ಸಂಸ್ಕೃತಿಯನ್ನು, ರಾಮಮಂದಿರ-ಬಾಬರಿ ಮಸಿದಿಯ ಹೆಸರಲ್ಲಿ ಜನಾಂಗಗಳಲ್ಲಿ ಬೆಂಕಿ ಹಚ್ಚಿರುವ ಕೆಲವು ಹಿಂದೂ, ಕೆಲವು ಮುಸ್ಲೀಂ ಜನಾಂಗದವರ ಜಗಳದ ಸಂಸ್ಕೃತಿಯನ್ನು ಗಮನಿಸಿರುವ ವಚನಕಾರರು ಈ ಅಸಾಂಸ್ಕೃತಿಕ ಸಂದರ್ಭಗಳನ್ನು ಭಾರತೀಯ ಹೆಮ್ಮೆಯ ಸಂಸ್ಕೃತಿ ಇದೆ ಎಂದು ವ್ಯಂಗ್ಯವಾಗಿ ಅದನ್ನು ಖಂಡಿಸುತ್ತ ಆ ಬದಲಾಗಿರುವ ಭಾರತದ ಸಾಂಸ್ಕೃತಿಕ ವಾತಾವರಣವ್ವನಿಲ್ಲಿ ದಾಖಲಿಸಿದ್ದಾರೆ.

ಹಿಂದಿನ ಕಾಲದ ಅನೇಕ ಸಾಂಸ್ಕೃತಿಕ ಮೌಲ್ಯಗಳಿಂದು ಬದಲಾಗಿರುವ ಚಿತ್ರವನ್ನು ವಿಶಾಲಾಕ್ಷಿ ಹಿರೇಮಠರ ವಚನವೊಂದು ಈ ರೀತಿಯಲ್ಲಿ ಹೇಳುತ್ತದೆ.

'ಅಂದು ಆಚಾರವೇ ಸ್ವರ್ಗ, ಅನಾಚಾರವೇ ನರಕ
ಎಂದನಯ್ಯಾ ಬಸವಣ್ಣ
ಆದರಿಂದು ಆರೋಗ್ಯವೇ ಸ್ವರ್ಗ, ಅನಾರೋಗ್ಯವೇ ನರಕ
ಆಗಿದೆ ನೋಡಯ್ಯಾ
ಆಗ 'ಕಾಯಕವೇ ಕೈಲಾಸ' ಎಂದನಯ್ಯಾ ಬಸವಣ್ಣ
ಆದರೀಗ 'ಕಾಸಿದ್ದರೇ ಕೈಲಾಸ' ಬಿಡಿಗಾಸಿಲ್ಲದಿದ್ದರೆ
ಮರಣವೇ ಲೇಸೆನಿಸುವುದು ನೋಡಯ್ಯಾ
ಆವತ್ತು ಬೇಕೆಂಬುದು ಕಾಯಗುಣ, ಬೇಡವೆಂಬುದು
ವೈರಾಗ್ಯ ಗುಣ ಎಂದನಯ್ಯಾ ಅಣ್ಣ ಬಸವಣ್ಣ
ಆದರಿವತ್ತು ಬೇಕೆಂಬುದೇ ಮನುಷ್ಯನ ಮೋಹಗುಣವಾಗಿ
ಬೇಡೆಂಬುವುದೇ ಮಾಯಗುಣವಾಗಿ ಮಾಯವಾಗಿ ಹೋಗಿದೆ
ನೋಡಯ್ಯ....'[೨೦೪]

ಎನ್ನುವ ಮಾತು ಇಂದಿನ ವಾಸ್ತವ ಸಂಸ್ಕೃತಿಗೆ ಕನ್ನಡಿ ಹಿಡಿಯುತ್ತದೆ. ವಚನಕಾರರು ಇಲ್ಲಿ ನಮ್ಮ ಸಾಂಸ್ಕೃತಿಕ ಪರಂಪರೆಯ ಆಚಾರ-ವಿಚಾರಗಳು, ಜೀವನಾದರ್ಶಗಳು, ಬೇಕು-ಬೇಡಗಳು, ಬದಲಾವಣೆಯಾಗಿ ನಿಂತಿರುವುದನ್ನಿಲ್ಲಿ ಪ್ರತಿಪಾದಿಸಿದ್ದಾರೆ. ಮಾನವನ ಬದುಕಿನರ್ಥ ಕಾಲಕ್ಕೆ ತಕ್ಕಂತೆ ಬದಲಾಗುತ್ತಿರುವುದರ ಚಿತ್ರ ಇಲ್ಲಿ ಮೂಡಿನಿಂತಿದೆ. ಆಧುನಿಕತೆಯು ಬಂದ ನಂತರ ಬದುಕಿನಲ್ಲಿ ವಿಚಿತ್ರ ಸಾಂಸ್ಕೃತಿಕ ಪರಿಸರ ನಿರ್ಮಾಣವಾಗಿರುವುದನ್ನು ಅಲ್ಲಗಳೆಯಲಾಗದು.

'ಪ್ರಯತ್ನಿಸುವವರು ಒಬ್ಬರು
ಪ್ರಯೋಜನಪಡೆಯುವವರು ಇನ್ನೊಬ್ಬರಯ್ಯಾ
ಕಷ್ಟ ಪಡುವವರು ಒಬ್ಬರು
ಸುಖ ಅನುಭವಿಸುವವರು ಇನ್ನೊಬ್ಬರಯ್ಯಾ
ದುಡಿಯುವವರು ಒಬ್ಬರು
ದಣಿಯದೆ ಭೋಗಿಸುವವರು ಇನ್ನೊಬ್ಬರಯ್ಯಾ
ದನ ಕಾಯುವವರು ಒಬ್ಬರು
ಹಾಲು-ಬೆಣ್ಣೆ ತಿನ್ನುವವರು ಇನ್ನೊಬ್ಬರಯ್ಯಾ
ವಿ.ಪ್ರಬಾಧ ಪ್ರಿಯ ವರಗುರು ಬಸವೇಶ
ಎಂತಹ ವಿಚಿತ್ರ ಪರಿಸರ ನಿರ್ಮಾಣವಾಗಿದೆಯ್ಯ'[೨೦೫]

ಇಂದು ಸಾಂಸ್ಕೃತಿಕ ಪರಿಸರ ಹಿಂದಿಗಿಂತ ಬದಲಾಗಿ ನಿಂತು ವಿಚಿತ್ರವಾಗಿ ಕಾಣುವುದನ್ನು ಇಲ್ಲಿ ಹೇಳಲಾಗಿದೆ. ಇಂದಿನ ಬದುಕಿನಲ್ಲಿ ಎಲ್ಲವೂ ತಿರುವು-ಮುರುವು ಆಗಿದೆ. ಪ್ರಯತ್ನಿಸುವವರು ಯಾರೋ, ಆದರೆ ಪ್ರಯೋಜನ ಪಡೆದವರೇ ಬೇರೆ ಎನ್ನುವ ವಾತಾವರಣ ಇಲ್ಲಿ ನಿರ್ಮಾಣವಾಗಿರುವುದನ್ನು ವಚನಕಾರರು ಹಲವು ದೃಷ್ಟಾಂತಗಳ ಮೂಲಕ ಅದನ್ನು ಸ್ಪಷ್ಟಗೊಳಿಸಲು ಪ್ರಯತ್ನಿಸಿದ್ದನ್ನು ಗಮನಿಸಬಹುದು. ಆಧುನಿಕ

ವಾತಾವರಣವಲ್ಲಿ ಯಾವುದೋ ಒಂದನ್ನು ಹಿಡಿದುಕೊಂಡು ಕೆಲವರು ಮೇಲೇರಿ ನಿಂತಿರುವುದನ್ನು ನೋಡುತ್ತೇವೆ.

'ಜಾತಿಯಿಂದ ಮೇಲೆ ಬಂದವರುಂಟು
ಧರ್ಮದಿಂದ ಮೇಲೆ ಬಂದವರುಂಟು
ಹಣದಿಂದ ಮೇಲೆ ಬಂದವರುಂಟು
ಪ್ರದೇಶ ಪ್ರಭಾವಗಳಿಂದ ಮೇಲೆ ಬಂದವರುಂಟು
ನೀತಿ, ನ್ಯಾಯ, ಗುಣ ಸಾಮರ್ಥ್ಯಗಳು
ಕಾಲಕಸವಾಗಿ ಹೋಗಿವೆ
ಪ್ರಭು; ಶಕ್ತಿಯನರಿಯದವರು ಶಿವನೆತ್ತ ಬಲ್ಲರು ಹೇಳಾ'[೨೦೬]

ಎಂದು ಕೇಳುವಲ್ಲಿ 'ಸಾಂಸ್ಕೃತಿಕ' ಶಕ್ತಿಗಿಂತ ವ್ಯವಹಾರಿಕ ತತ್ವವೇ ಇಂದು ಪ್ರಧಾನವಾಗಿ ನಿಂತಿರುವುದನ್ನು ಇಲ್ಲಿ ಹೇಳಲಾಗಿದೆ. ಜಾತಿ, ಧರ್ಮ, ಹಣ, ಪ್ರದೇಶಗಳ ಪ್ರಭಾವವೇ ಮುಖ್ಯವಾಗಿ ನಿಂತು ಮೇಲೆ ಬಂದವರಿದ್ದಾರೆ. ಅವರಲ್ಲಿ ಸಾಂಸ್ಕೃತಿಕ ಬದುಕಿನ ಮೌಲ್ಯಗಳಾಗಿರುವ ನೀತಿ ನ್ಯಾಯ, ಗುಣ, ಸ್ವಸಾಮರ್ಥ್ಯಗಳು ಕಾಲಕಸವಾಗಿ ನಿಂತಿವೆ. ಇಂಥವರು ಆದರ್ಶತನವನ್ನು ಅರಿಯಲು ಹೇಗೆ ಸಾಧ್ಯ? ಎಂದು ತಿಳಿಸುವುದರೊಂದಿಗೆ ವಾಸ್ತವಿಕ ನೆಲೆಯನ್ನು ಬಿಚ್ಚಿಟ್ಟಿದ್ದಾರೆ.

ನಾವು ಭಾರತೀಯರು ನಮ್ಮದು ಉಚ್ಚ ಸಂಸ್ಕೃತಿ. ಆ ಸಂಸ್ಕೃತಿಯ ಮೌಲ್ಯಗಳಾಗಿರುವ ಶಾಂತಿ ತ್ಯಾಗವನ್ನು ಎಂದೂ ಮರಿಬಾರದೆಂಬ ನಿಲುವು ಆಧುನಿಕ ವಚನಗಳಲ್ಲಿದೆ.

'ನಾವು ಭಾರತೀಯರು, ಉಚ್ಚ ಸಂಸ್ಕೃತಿ ಉಳ್ಳವರು
ಶಾಂತಿ, ತ್ಯಾಗಕ್ಕಾಗಿ ಹೆಸರಾದವರು
ದೇಶಕ್ಕಾಗಿ ಪ್ರಾಣ ತೆತ್ತವರ ನೆನೆಯಲೆ?
ಇಂದಿನಾ ಸ್ಥಿತಿಗಾಗಿ ಕಣ್ಣೀರ ಹರಿಸಲೆ
ಸೋದರರೊಳೇ ವೈಷಮ್ಯಭಾವ
ಅಪ್ಪ ಚೆನ್ನ ಬಸವೇಶ ಪ್ರೀತಿ, ದಯೆ
ಉಕ್ಕಿ ಬರಲಿ ಸೋದರರಲಿ'[೨೦೭]

ಎನ್ನುವ ನುಡಿಯಲ್ಲಿಯ ದೇಶದ ಕಳಕಳಿ, ಭಾತೃತ್ವದ ಭಾವ ಅಳಿಯದಿರಲಿ ಎಂಬ ಸಂದೇಶದ ನೆಲೆ ಇರುವುದನ್ನು ಅರಿಯಬಹುದು. ತ್ಯಾಗ, ಶಾಂತಿಗಾಗಿ ಹೆಸರಾದ ಭಾರತೀಯರದು ಜಗತ್ತಿನಲ್ಲಿಯೇ ಉಚ್ಚ ಸಂಸ್ಕೃತಿ. ದೇಶಪ್ರೇಮ, ಸಹೋದರ ಪ್ರೇಮ, ಸಮಾಜ ಪ್ರೇಮಕ್ಕಾಗಿ, ಭಾರತೀಯರು ಹೆಸರುವಾಸಿಯಾಗಿದ್ದಾರೆ. ಆದರೆ ಇಂದು ಆ ಸ್ಥಿತಿ ಏಕೆ ಉಳಿದಿಲ್ಲ? ಎಂಬ ಚಿಂತೆ ವಚನಕಾರರನ್ನಿಲ್ಲಿ ಕಾಡುತ್ತಿದೆ. ರಕ್ತದಾಹಿಗಳಾಗಿರುವ ಭಾರತೀಯರಲ್ಲಿ ಪ್ರೀತಿ, ದಯೆಯು ಕೊರತೆಯಾಗಬಾರದು. ಅದು ಉಕ್ಕಿ ಬರಬೇಕೆಂಬ ಆಶಯದ ಜೊತೆಗೆ ಹಿಂದಿನ ಸಹೋದರತ್ವ ಸದಾ ಉಳಿಯಲಿ ಎಂಬ ಹೆಬ್ಬಯೆಕೆಯೂ ಇಲ್ಲಿದೆ. ಆದರೆ ಇಂದು ಹಣ, ಪದವಿ, ಅಧಿಕಾರ, ಸಮೃದ್ಧಿ ಸ್ವಾತಂತ್ರ್ಯ, ಯಾಂತ್ರಿಕತೆ, ಬಂದು ನಮ್ಮ ಸಂಸ್ಕೃತಿ ನಾಶವಾಗಿ ಹೋಗಿರುವ ಸಂಗತಿಯನ್ನು ಇನ್ನೊಂದು ವಚನ ವಿವರಿಸುತ್ತದೆ.

'ಹಣ ಬಂತು ಮಾನ ಹೋಯ್ತು
ಪದವಿ ಬಂತು ವಿದ್ಯೆ ಹೋಯ್ತು
ಅಧಿಕಾರ ಬಂತು ಆದರ್ಶ ಹೋಯ್ತು
ಸಮೃದ್ಧಿ ಬಂತು ಸಂಸ್ಕೃತಿ ಹೋಯ್ತು
ಸ್ವಾತಂತ್ರ್ಯ ಬಂತು ಸಮಾನತೆ ಹೋಯ್ತು
ಯಾಂತ್ರಿಕತೆ ಬಂತು ಸರಳತೆ ಹೋಯ್ತು
ವಿದೇಶಿ ಬಂತು ಸ್ವದೇಶಿ ಹೋಯ್ತು ನೋಡಾ'[೨೦೮]

ಎಂಬಂತಹ ವಚನಗಳು, ಇಂದಿನ ವಾಸ್ತವಿಕ ಬದುಕಿನ ಚಿತ್ರವನ್ನು ಕಣ್ಮುಂದೆ ಇಡುತ್ತವೆ. ಸಂಸ್ಕೃತಿಗೆ ಒದಗಿರುವ ವಿನಾಶದ ಸ್ಥಿತಿಯನ್ನು ಹಾಗೂ ಅದಕ್ಕೆ ಕಾರಣವಾಗಿರುವ ಇಂದಿನ ಸಂದರ್ಭಗಳನ್ನು ಈ ವಚನ ಬಿಟ್ಟಿ ಹೇಳುತ್ತದೆ. ಹಣಬಂದಿದೆ, ಆದರೆ ಮಾನ ಮರ್ಯಾದೆ ಮೂಲೆ ಸೇರಿದೆ, ಪದವಿ ಬಂತು, ನೈಜ್ಯ ವಿದ್ಯೆ ಮರೆಯಾಗಿದೆ. ಅಧಿಕಾರದ ದಾಹದಲ್ಲಿ ಆದರ್ಶ ಮರೆಯಾಗಿ ನಿಂತಿದೆ. ಸ್ವಾತಂತ್ರ್ಯದಲ್ಲಿ ಸಮಾನತೆ ಕಳೆದುಹೋದರೆ ಯಾಂತ್ರಿಕತೆಯಲ್ಲಿ ಸರಳತೆ ಸಿಗದಾಗಿದೆ. ವಿದೇಶದ ಪ್ರಭಾವ ಹೆಚ್ಚಾಗಿದ್ದು, ಸ್ವದೇಶ ಸಂಸ್ಕೃತಿ ಮಾಯವಾಗುತ್ತಿರುವುದನ್ನು ಇಲ್ಲಿ ದಾಖಲಿಸಲಾಗಿದೆ. ಎಲ್ಲ ವಲಯಗಳಲ್ಲಿ ಸಮೃದ್ಧಿ ಕಾಣುತ್ತಿದೆ, ಆದರೆ ಸಂಸ್ಕೃತಿಯೇ ಒಟ್ಟಾರೆ ಮರೆಯಾಗಿರುವುದನ್ನು ಇಲ್ಲಿ ಅಭಿವ್ಯಕ್ತಿಸಲಾಗಿದೆ. ಬಾಹ್ಯ ಬದುಕಿಗೆ ಬೆಲೆ ನೀಡುತ್ತಿರುವ ಇಂದಿನ ದಿನಮಾನದಲ್ಲಿ ಆಂತರಿಕ ಆದರ್ಶಗಳು ಲೆಕ್ಕಕ್ಕೆ ಬರದೇ ಇರುವ ಸ್ಥಿತಿ ನಿರ್ಮಾಣವಾಗಿರುವುದನ್ನು ಈ ಬದಲಾವಣೆಯಲ್ಲಿ ಅರಿಯಬಹುದಾಗಿದೆ.

'ಸಂಸ್ಕೃತಿ' ಎಂಬುದು ಕಣ್ಣಿಗೆ ಕಾಣದ ಕೇವಲ ಆಚರಣೆಗಳಲ್ಲಿ ಮಾತ್ರ ಗೋಚರಿಸುವ, ಕವಿಗಳಿಗೆ ಸೂಕ್ಷ್ಮವಾಗಿ ಅರಿವಾಗುವ ಸಂಗತಿಗಳಾಗಿವೆ. ಈ ಹಿನ್ನೆಲೆಯಲ್ಲಿ ಆಧುನಿಕ ವಚನ ಸಾಹಿತ್ಯದ ಸಾಂಸ್ಕೃತಿಕ ನೆಲೆಯನ್ನು ಕುರಿತು ಅಧ್ಯಯನ ಮಾಡುವುದೆಂದರೆ ಒಂದು ಕಾಲದ, ಒಂದು ಪ್ರದೇಶದ, ಒಂದು ಸಮುದಾಯದ, ಒಂದು ಪರಿಸರದ ಅಧ್ಯಯನವಾಗುತ್ತದೆ. ಹೀಗಾಗಿ ಆ ವಚನಕಾರರು ವಾಸಿಸುವ ಗ್ರಾಮ, ಆಚರಿಸುವ ಧರ್ಮ, ಸುತ್ತಮುತ್ತಲ ಸಾಮಾಜಿಕ ವಾತಾವರಣ, ಜೀವನದರ್ಶನ, ಸಹಬಾಳ್ವೆ ಇತ್ಯಾದಿ ಅಂಶಗಳನ್ನು ಅವರ ವಚನಗಳಲ್ಲಿ ಅಭಿವ್ಯಕ್ತಗೊಂಡ ರೀತಿ-ನೀತಿಗಳ ಹಿನ್ನೆಲೆಯಲ್ಲಿ ಅರಿಯಬಹುದಾಗಿದೆ. ಇಂದಿಗೂ ಹಳ್ಳಿಗಳಲ್ಲಿ, ಧರ್ಮದ ಆಚರಣೆಗಳಲ್ಲಿ ಉಳಿದು ನಿಂತಿರುವ ಮೂಢನಂಬಿಕೆಯ ಸಂಸ್ಕೃತಿಯನ್ನು ಇಲ್ಲಿ ಉಲ್ಲೇಖಿಸಲಾಗಿದೆ.

'ವೇದ ಶಾಸ್ತ್ರ ಆಗಮ-ಪುರಾಣಗಳನ್ನು
ತಿರಸ್ಕರಿಸಿದರಯ್ಯಾ ನಮ್ಮ ಶರಣರು
ಗುಡಿ-ಗುಂಡಾರ ಗೊರಚೆ-ಗುಳ್ಳವರನ್ನು
ಕಿತ್ತೊಗೆದರಯ್ಯಾ ನಮ್ಮ ಶರಣರು
ನ್ಯಾಯ ನೀತಿಯ ಕಲಿಸಿ, ಪ್ರೀತಿ ಸಮತೆಯ ಬೆಳಸಿ
ಬಯಲಲ್ಲಿ ಬಯಲಾದರಯ್ಯ ನಮ್ಮ ಶರಣರು
ಶರಣರನು ಗುಡಿಯಲ್ಲಿ ಬಂಧಿಸಿ
ಅವರ ಹೆಸರಲ್ಲಿ ಜಾತ್ರೆ ನಡೆಸುವ

ಜಂಬಗೇಡಿಗಳನೆನಗೆ ತೋರದಿರಾ ಸಬರದ ಬಸವ'[೨೦೯]

'ಸಂಸ್ಕೃತಿ'ಯ ಹೆಸರಿನಲ್ಲಿ ವಿಜೃಂಭಿಸುತ್ತಿರುವ ಇಂದಿನ ಜಾತ್ರೆಗಳಲ್ಲಿ ಒಂದಾಗಿರುವ ಶರಣರ ಹೆಸರಿನ ಜಾತ್ರೆಗಳನ್ನು ಇಲ್ಲಿ ಖಂಡಿಸಲಾಗಿದೆ. ಯಾವ ಶರಣರು ಸಮಾಜದಲ್ಲಿ ವೈಚಾರಿಕತೆಯನ್ನು ತರಲು ಹೋರಾಟ ಮಾಡಿದರೋ, ಯಾವ ಯಾವುದನ್ನು ತಿರುಳಿಲ್ಲದ್ದು, ಸಾಮಾಜಿಕ ಸಮಾನತೆಗೆ ಅಡ್ಡಗಾಲಾಗುವುದೆಂದು ತಿರಸ್ಕರಿಸದರೋ, ಯಾರು ಸಮಾಜದಲ್ಲಿ ನ್ಯಾಯ, ನೀತಿ, ಪ್ರೀತಿ, ಸಮತೆಯನ್ನು ಬೆಳೆಸಿ, ಬಯಲಿನಲ್ಲಿ ಬಯಲಾದರೋ, ಅಂಥ ಶರಣರನ್ನು ಗುಡಿಕಟ್ಟಿಸಿ, ಅದರಲ್ಲಿ ಬಂಧಿಸಿಟ್ಟು ಅವರ ಹೆಸರಲ್ಲಿ ಜಾತ್ರೆ ನಡೆಸುತ್ತಿರುವ ವೈರುಧ್ಯವನ್ನು ಇಲ್ಲಿ ತೀಕ್ಷಣವಾಗಿ ಖಂಡಿಸಲಾಗಿದೆ. ಸಾಂಸ್ಕೃತಿಕತೆಯ ಹೆಸರಲ್ಲಿ ನಡೆಯುತ್ತಿರುವ ಇಂದಿನ ವಾಸ್ತವತೆಗಳನ್ನು ಇಂಥ ವಚನಗಳು ಬಯಲಿಗೆಳೆಯುತ್ತವೆ. ಕಲ್ಲು ಪೂಜಿಸಿ ಕಟುಕರಾಗುತ್ತಿರುವ, ಮೂರ್ತಿ ಪೂಜಿಸಿ ಕೀರ್ತಿ ಹೇಳುತ್ತಿರುವ, ಮರವ ಪೂಜಿಸಿ ಕುರಿಯಂತೆ ಬಾಳುತ್ತಿರುವ, ವಾತಾವರಣವನ್ನು ತಿಳಿಸುವ ಮೂಲಕ ಸತ್ಯವ ಪೂಜಿಸಿ ಸಮತೆಯನ್ನು ಬೆಳೆಸಲು, ಆಧುನಿಕ ವಚನಕಾರರು ತಮ್ಮ ಅಭಿವ್ಯಕ್ತಿಯ ಮೂಲಕ ಪ್ರಯತ್ನಿಸಿರುವುದು ಮನವರಿಕೆಯಾಗುತ್ತದೆ.

'ಸಾಂಸ್ಕೃತಿಕ' ಬದುಕಿನಲ್ಲಿ ವ್ಯಕ್ತಿ ಪ್ರಾಧಾನ್ಯತೆಗಿಂತ ಸಮಷ್ಠಿ ಪ್ರಧಾನ್ಯತೆ, ಕುಟುಂಬ ಪ್ರಾಧಾನ್ಯತೆ ಮುಖ್ಯವಾಗಿರುವುದನ್ನು ಆಧುನಿಕ ವಚನಕಾರರು ತೋರಿಸಿದ್ದಾರೆ.

'ಖಾದಿ ಬಿಳಿಯದಾದರೇನು?
ಧರಿಸುವವ ಶುಭ್ರವಾಗಿರಬೇಕು
ಕಾವಿ ಕೆಂಪಗಿದ್ದರೇನು?
ತೊಡುವವ ತ್ಯಾಗಿಯಾಗಿರಬೇಕು
ಖಾಕಿ ಬೂದು ಹಸಿರಾದರೇನು?
ಧರಿಸುವವ ಶಿಸ್ತಿನ ಸಿಪಾಯಿಯಾಗಿರಬೇಕು
ಬಣ್ಣ ಯಾವುದಾದರೇನು?
ಅನ್ಯರ ನೋಯಿಸಬಾರದು ನೋಡಾ'[೨೧೦]

ಎಂಬುದು ನಿಜವಾದ ಸಂಸ್ಕೃತಿ. ಇಲ್ಲಿ ವ್ಯಕ್ತಿಗಿಂತ ವ್ಯಕ್ತಿತ್ವ ಮುಖ್ಯ. ಆ ವ್ಯಕ್ತಿತ್ವವುಳ್ಳವರು ಅಂಥಹ ವೇಷಧರಿಸಲು ಅರ್ಹರು. ಆದರೆ ಯಾವುದೇ ಬಣ್ಣದ ವೇಷವಿರಲಿ, ಯಾರೇ ಏನೇ ತೊಡಲಿ ಸಮಾಜದಲ್ಲಿಯ ಅನ್ಯರನ್ನು ನೋಯಿಸದಂತಿರುವುದೇ ಮುಖ್ಯ ಎಂಬ ನೀತಿ ಈ ವಚನದಲ್ಲಿದೆ ಇಂದಿನ ಸಮಾಜದಲ್ಲಿಯ ನೋವು, ಹಿಂಸೆ, ಅನ್ಯಾಯ, ಅತ್ಯಾಚಾರಗಳಿಗೆ ಈ ಮೂರು ವರ್ಗದ ವ್ಯಕ್ತಿಗಳೇ ಮುಖ್ಯ ನೆಲೆ ಎಂಬ ವಿಚಾರ ಇಲ್ಲಿದೆ.

**೫-೫-೨ ಜೀವನ ದರ್ಶನ**

ಜೀವನ ಎನ್ನುವುದು ಹುಟ್ಟು ಸಾವು ಇವೆರಡರ ಮಧ್ಯೆ ಇರುವ ಸ್ಥಿತಿ. ಜೀವನಕ್ಕೆ ಯಾವುದೂ ನಿರ್ದಿಷ್ಟ ಚೌಕಟ್ಟಿಲ್ಲ. ಅವರವರ ಭಾವ, ಭಕುತಿಗೆ ನಿಲುಕಿದಂತೆ ಬದುಕನ್ನು ಸ್ವೀಕರಿಸಬೇಕಾಗುತ್ತದೆ. ಜೀವನದ ಪ್ರತಿಬಿಂಬವಾಗಿ ಬರುವ ಸಾಹಿತ್ಯ ಎನ್ನುವುದು, ಮನುಷ್ಯನ ಅನುಭವಗಳು ಭಾಷೆಯಲ್ಲಿ ಆಕಾರ ಪಡೆಯುವ ಒಂದು ಕ್ರಮವಾಗಿದೆ. ಪ್ರತಿಯೊಬ್ಬ ಲೇಖಕನು ತನ್ನ ಅನುಭವಕ್ಕೆ ಕಾಣಿಕೆಗೆ ಬದ್ದನಾಗಿರುತ್ತಾನೆ. ಅವನು

ಸಮುದಾಯದ ದನಿಗೆ ಬಾಯಾಗಿರುವಂತೆ ತನ್ನ ವ್ಯಕ್ತಿ ವಿಶಿಷ್ಟತೆಯಿಂದ ಭಿನ್ನವೂ ಆಗಿರುತ್ತಾನೆ.[೨೧೧] ಇದಕ್ಕೆ ಆಧುನಿಕ ವಚನಕಾರರೂ ಹೊರತಾಗಿಲ್ಲ ಎನ್ನಬಹುದು.

ಪ್ರತಿಯೊಂದು ಸಾಹಿತ್ಯ ಕೃತಿಯೂ ಒಂದು ಜೀವನ ದೃಷ್ಟಿಗೆ, ಕೆಲವು ಮೌಲ್ಯಗಳಿಗೆ ಬದ್ಧವಾಗಿರುವಂತೆ, ಕೆಲವೂ ವಚನಗಳೂ ಬದ್ಧವಾಗಿವೆ. ಯಾವ ರೀತಿಯ ಜೀವನ ಉತ್ತಮವಾದದ್ದೆಂಬ ಸೂಚನೆಯನ್ನು ಎಲ್ಲ ಮುಖ್ಯ ವಚನಗಳು ನೀಡುತ್ತವೆ. 'ಸಾಹಿತ್ಯ ಕೃತಿಯು ಮೂಲಭೂತವಾಗಿ ಜೀವ ಪರವಾಗಿರಬೇಕೆಂಬುದು ಸಾಮಾನ್ಯ ನಿರೀಕ್ಷೆಯಾಗಿರುತ್ತದೆ. ಏಕೆಂದರೆ ಸಾಹಿತಿಯಾದವನು ವಾತಾವರಣವನ್ನು ಬದಲಾಯಿಸುತ್ತಿರುತ್ತಾನೆ ಮತ್ತು ವಾತಾವರಣದಿಂದ ಬದಲಾಗುತ್ತಿರುತ್ತಾನೆ.[೨೧೨] ಅಂತೆಯೇ ಸಾಹಿತ್ಯವನ್ನು ಜೀವನದ ಅಭಿವ್ಯಕ್ತಿ ಎನ್ನುತ್ತಾರೆ. ಅಂತೆಯೇ ಆಧುನಿಕ ವಚನಕಾರರು ಉತ್ತಮ ಬದುಕನ್ನು ಕಟ್ಟಿಕೊಳ್ಳುವ ಪ್ರಯತ್ನಗಳಲ್ಲಿ ಅಭಿವ್ಯಕ್ತಿಯನ್ನು ಮಾಧ್ಯಮದ ನೆಲೆಯಾಗಿ ಬಳಸಿಕೊಂಡಿದ್ದು ಕಂಡುಬರುತ್ತದೆ. ಜೀವನ ಎಂದರೇನು? ಅದು ಹೇಗಿರಬೇಕು? ಉತ್ತಮ ಜೀವನದ ಲಕ್ಷಣಗಳೇನು? ಈ ಮೊದಲಾದ ಅಂಶಗಳತ್ತ ಆಧುನಿಕ ವಚನಗಳು ನಮ್ಮ ಗಮನವನ್ನು ಸೆಳೆಯುತ್ತವೆ.

'ಜೀವನವೊಂದು ನಾಟಕ
ಗಂಡ-ಹೆಂಡತಿ, ತಂದೆ-ತಾಯಿ
ಬಂಧು-ಬಳಗ,
ಅನಂತ-ಪಾತ್ರಗಳು
ನೋಡಿ ಆನಂದಿಸುವವನೆ
ಪರಮ ಸುಖಿ
ಪ್ರಭು; ನಾಟಕದ ಕೋಪ ತಾಪಗಳ ಕಂಡುಂಡು
ದುಃಖಿಸಿದವರುಂಟೆ?
ಲೋಕದಲಿ'[೨೧೩]

'ಜೀವನ'ವನ್ನು ಒಂದು ನಾಟಕಕ್ಕೆ ಹೋಲಿಸಿರುವ ಈ ವಚನ ಜೀವನದಲ್ಲಿ ಬರುವ ಗಂಡ-ಹೆಂಡತಿ, ತಂದೆ-ತಾಯಿ, ಬಂಧು-ಬಳಗದವರನ್ನು ಅನಂತ ಪಾತ್ರಗಳೆಂದು ಹೇಳುತ್ತದೆ. ಆಧ್ಯಾತ್ಮದ ಪರಿಚ್ಛಾಯೆಯ ಪ್ರಭಾವದಲ್ಲಿ ಒಡಮೂಡಿರುವ ಇದು, ಈ 'ಜೀವನ' ಬೇಗನೆ ಮುಗಿದುಹೋಗುವಂಥದ್ದು, ಇಲ್ಲಿ ಯಾರೂ ಶಾಶ್ವತ ಅಲ್ಲ; ಯಾರೂ ಇದನ್ನು ನೋಡಿ ಆನಂದಿಸುವರೋ ಅವರೇ ಪರಮ ಸುಖಿಗಳೆಂದು ಹೇಳಿರುವಲ್ಲಿ ಜೀವನದ ಏನೇ ಬಂದರೂ ಅದನ್ನು ಈ ಆನಂದದ ಹಿನ್ನೆಲೆಯಲ್ಲಿ ಪರಿಗಣಿಸಬೇಕೆಂದು ಸೂಚಿಸುತ್ತದೆ. ಹೇಗೆ ನಾವು ನಾಟಕದ ಕೋಪ, ತಾಪಗಳನ್ನು ಕಂಡುಂಡು ದುಃಖಿಸುವುದಿಲ್ಲವೋ, ಹಾಗೆಯೇ ಲೋಕದಲ್ಲಿದ್ದು ಹೋಗಬೇಕೆಂಬ ನಿಲುವನ್ನು ಇದು ಸೂಚಿಸುತ್ತದೆ. ಅಂದರೆ 'ಸಾಮಾನ್ಯರು ಜೀವನವನ್ನು ನೋಡುವ ದೃಷ್ಟಿಗೂ, ಕವಿಯಾದವನು ಜೀವನವನ್ನು ನೋಡುವ ದೃಷ್ಟಿಗೂ ವ್ಯತ್ಯಾಸವಿದೆ. ಸಾಮಾನ್ಯರಲ್ಲಿ ವ್ಯಥೆ, ವ್ಯಥೆಯಾಗಿ, ಪಾಡು-ಪಾಡಾಗಿ ಉಳಿದರೆ, ಕವಿಯಲ್ಲಿ ವ್ಯಥೆ ಕಥೆಯಾಗಿ, ಪಾಡು-ಹಾಡಾಗಿ ಪರಿವರ್ತನೆಗೊಂಡು ಆನಂದದಾಯಕವಾಗುತ್ತದೆ ಎಂದಿದ್ದಾರೆ.[೨೧೪] ಈ ನಿಟ್ಟಿನಲ್ಲಿ ಆಧುನಿಕ ವಚನಕಾರರ ತುಂಬು ಜೀವನದ ಪರಿಕಲ್ಪನೆಯನ್ನು ಕಾಣುತ್ತಾರೆ. ವ್ಯಕ್ತಿ ವ್ಯಕ್ತಿಗಳ ಹೊರಗಿನ ಜೀವನದಲ್ಲಿ ವ್ಯತ್ಯಾಸವಿರಬಹುದು ಆ ವ್ಯತ್ಯಾಸದ ಹಿಂದಿರುವ ಏಕತೆಯ ಸ್ವರೂಪವನ್ನು ಇಲ್ಲಿ

ತೋರಿಸಿ ಅಭಿವ್ಯಕ್ತಿಸಲಾಗಿದೆ. ಈ ವಿವಿಧತೆಯೇ ಜೀವನದ ರಹಸ್ಯವೆನ್ನಬಹುದು. ಶ್ರೀ ಜಿ.ಎಸ್. ಖೂಬಾ ಅವರೂ ಸಹ ಜೀವನವನ್ನು ನಾಟಕ ಎನ್ನುತ್ತಾರೆ.

'ಜೀವನದ ನಾಟಕದಿ
ಕೋಟಿಗಟ್ಟಲೆ ನಟರು
ಒಬ್ಬೊಬ್ಬರೊಂದೊಂದು
ವೇಷ ಧರಿಸಿಹರು
ಒಬ್ಬರಂತಿನೊಬ್ಬ
ರಿಲ್ಲ ಈ ನಾಟಕದಿ
ಬರುವವರು ಬರುತಿಹರು
ಹೋಗುತಿಹರು ಕೆಲರು
ಬಲು ವಿಚಿತ್ರ ನಾಟಕವು....'[೨೧೫]

ಇಡೀ ಜಗತ್ತನ್ನೇ ಗಮನದಲ್ಲಿರಿಸಿಕೊಂಡು ಹೇಳಿರುವ ಈ ವಚನ, ಜಗತ್ತಿನ ಜೀವನವನ್ನೇ ಒಂದು ರಂಗಭೂಮಿಯಾಗಿ ಪರಿಗಣಿಸಿದೆ. ಈ ಜೀವನದಲ್ಲಿಯ ಜನರೆಲ್ಲ ಒಂದೊಂದು ತರದ ಪಾತ್ರದಾರಿಗಳೆನ್ನುವ ಕವಿ, ಕೆಲವರು ಈ ಜೀವನದಿಂದ ಹೋಗುವುದು, ಕೆಲವರು ಬರುವುದನ್ನು ತಿಳಿಸುತ್ತ, ಜೀವನದಲ್ಲಿ ನಡೆದಿರುವ ಹುಟ್ಟು-ಸಾವುಗಳನ್ನು ಹೇಳುತ್ತಾರೆ. ಇದು ಬಲು ವಿಚಿತ್ರ ನಾಟಕವೆನ್ನುವ ವಚನಕಾರರು, ಈ ಜೀವನಕ್ಕೆ ಆದಿಯನು ಕಂಡಿಲ್ಲ, ಅಂತ್ಯ ಗೊತ್ತಾಗಿಲ್ಲ. ಸತತವಾಗಿ ಇದು ನಡೆಯುವಂಥಹದು ಎನ್ನುತ್ತಾರೆ. ಇಲ್ಲಿ ಬಂದಿರುವ ಎಲ್ಲರೂ ನಟನೆ ಮಾಡುವಂತಹ ನಟರು ಎಂಬುದನ್ನು ಈ ವಚನ ಅರುಹುತ್ತದೆ.

'ಈ ಲೋಕವೊಂದು
ಕರುಣಾ ಭೂಮಿ; ನೀನು
ಏನನ್ನು ಬಿತ್ತುವಿಯೋ
ಅದರ ನೂರು ಪಟ್ಟು ಅದು
ನಿನಗೆ ದಯಪಾಲಿಸುವುದು
ಹೊಗಳು, ತೆಗಳು, ಪಾಪ,
ಪುಣ್ಯ, ಕೆಡುಕು, ಒಳಿತುಗಳ
ಬೀಜ ಬಿತ್ತುವ ಕಾಲ ಬಂದಿದೆ ಯೋಚಿಸು
ಈಗ ನಿನ್ನ ಸರದಿ.....'[೨೧೬]

ಎನ್ನುವ ವಚನ 'ಜೀವನ'ವನ್ನು ಒಂದು ಕರುಣಾಭೂಮಿ ಎನ್ನುತ್ತದೆ. ಇದು ಹದಗೊಂಡಿರುವ ಭೂಮಿ ಇಲ್ಲಿ ನೀನು ಒಳ್ಳೆಯದನ್ನೇ ಬಿತ್ತಿ ಬೆಳೆಯಬೇಕೆಂಬ ಸದಾಶಯವನ್ನು ಈ ವಚನ ವ್ಯಕ್ತಪಡಿಸುತ್ತದೆ. ಜೀವನದಲ್ಲಿ 'ತಾಳುವಿಕೆ'ಯೇ ಬಹುಮುಖ್ಯವಾದುದು. ಅದು ಸದಾ ಮನದಲ್ಲಿ ತುಂಬಿಕೊಂಡಿರಬೇಕೆಂಬ ನೆಲೆಯನ್ನು ಇನ್ನೊಂದು ವಚನ ಅಭಿವ್ಯಕ್ತಿಸುತ್ತದೆ.

'ಕಾಯಬೇಕು ನಾವು
ಕಾಯಿ ಹಣ್ಣಾಗುವವರೆಗೂ
ತಾಳಬೇಕು ನಾವು
ಬಳ್ಳಿಯಿಂದ ಮೊಗ್ಗರಳಿ ಉರುರುವತನಕ
ಸಮಾಧಾನಿಯಾಗಿರಬೇಕು ನಾವು
ಅಟ್ಟ ಅಡುಗೆ ತಣ್ಣಗಾಗುವತನಕ
ತಡೆದುಕೊಳ್ಳಬೇಕು ನಾವು
ಶ್ರೀ ಗುರುಸಿದ್ಧನ ಕರುಣೆಯಾಗುವತನಕ'[೨೧೭]

ಜೀವನದಲ್ಲಿ ಸದಾ ಸಮಾಧಾನದಿಂದಿರುವುದು, ತಾಳಿಕೊಳ್ಳುವ ಗುಣವಿರುವುದು ಅವಶ್ಯವೆಂಬುದನ್ನು ಈ ವಚನ ಅನುಭದ ನೆಲೆಯಲ್ಲಿ ತಿಳಿಸುತ್ತದೆ. ಮಾಡಿದ ಅಡುಗೆ ಆರುವತನ ತಡೆದುಕೊಳ್ಳಬೇಕೆಂಬ ಮಾತು ಮಹತ್ವದ್ದೆನಿಸುತ್ತದೆ. ಶರಣರಂತೆ ಆಧುನಿಕ ವಚನಕಾರರು ಸಹ ಪೂರ್ಣ ಜೀವನದ ಭವ್ಯ ಭವಿಷ್ಯದ ಕಡೆಗೆ ಜನತೆಯ ಆಸೆ-ಆಕಾಂಕ್ಷೆಗಳನ್ನು ತಿರುಗಿಸುತ್ತಿರುವುದು ಕಂಡುಬರುತ್ತದೆ. ಜೀವನವನ್ನು ಆದರ್ಶವಾಗಿರಿಸಿಕೊಳ್ಳುವ ರೀತಿಯಲ್ಲಿ ಅದು ಸಾರ್ವಕಾಲಿಕವಾಗಿರಬೇಕೆಂಬುದನ್ನು ತಿಳಿಸುತ್ತಾರೆ.

'ಅರ್ಥ ಮಾಡಿಕೊಳ್ಳದಿದ್ದರೂ ಚಿಂತೆಯಿಲ್ಲ
ಅಪಾರ್ಥ ಮಾಡಿಕೊಳ್ಳಬೇಡ
ಪ್ರೀತಿಸದಿದ್ದರೂ ಚಿಂತೆಯಿಲ್ಲ
...........................................
...........................................
ಶರಣನಾಗದಿದ್ದರೂ ಚಿಂತೆಯಿಲ್ಲ
ಬಸವಲಿಂಗನಲ್ಲಿ ಮಾನವನಾಗದೆ ಇರಬೇಡ'[೨೧೮]

ಎನ್ನುವ ವಚನದಲ್ಲಿಯ 'ಜೀವನ ದರ್ಶನ' ಕಣ್ಮುಂದೆ ನಿಲ್ಲುತ್ತದೆ. ಇಲ್ಲಿಯ ಒಂದೊಂದು ಮಾತುಗಳು ಮಾನವ ಜೀವನ 'ಸಂಸ್ಕೃತಿ'ಗೆ ಮಾರ್ಗಸೂಚಿಯಾಗುತ್ತವೆ. ನೀನು ಹೀಗೆ ಮಾಡದಿದ್ದರೂ ಚಿಂತೆಯಿಲ್ಲ, ಹಾಗೆ ಮಾಡಬೇಡ ಎಂಬಂತಹ ಮಾತುಗಳನ್ನು ತಿಳಿಸುತ್ತ, ಕೊನೆಗೆ ಜೀವನದಲ್ಲಿ 'ಶರಣನಾಗದಿದ್ದರೂ ಚಿಂತೆಯಿಲ್ಲ, ಸಮಾಜದಲ್ಲಿ ಮಾನವನಾಗದೇ ಇರಬೇಡ' ಎಂಬುದು ಧ್ವನಿಪೂರ್ಣ ಮಾತಾಗಿನಿಂತು ಬದುಕಿನ ದಿವ್ಯಪಥವನ್ನು ತೋರಿಸುತ್ತದೆ ಸರ್ವಮಾನವ ಜನಾಂಗಕ್ಕೆ ಒಪ್ಪಿತವಾಗುವ ರೀತಿಯಲ್ಲಿರುವ ಇಂಥ ವಚನಗಳು ಜೀವನ ತತ್ವವಿವೇಚನೆಯಲ್ಲಿರುವ ಸಾಂಸ್ಕೃತಿಕ ನೆಲೆಗಳನ್ನು ತೋರುತ್ತವೆ.

ಜೀವನ ಪದ್ಧತಿಯೇ ಬದಲಾಗಿರುವ ಇಂದಿನ ಆಧುನಿಕ ಬದುಕಿನಲ್ಲಿ ಏನೆಲ್ಲ ಬದಲಾವಣೆಗಳಾಗಿವೆ. ಅದರ ಪರಿಣಾಮವಿಂದು ಏನಾಗಿದೆ ಎಂಬುದನ್ನೂ ಇಲ್ಲಿ ಗಮನಿಸಬಹುದು.

'ವಾಹನ ಬಂತು ನಡೆಯುವುದು ಹೋಯ್ತು
ಗಿರಣಿ ಬಂತಿ ಬೀಸುವುದು ಹೋಯ್ತು
ಕುಕ್ಕರ ಬಂತು ಗಡಿಗಿ ಹೋಯ್ತು

ಗ್ಯಾಸ್ ಸಿಲಿಂಡರ್ ಬಂತು ಒಲೆ ಊದುವುದು ಹೋಯ್ತು
ಯಂತ್ರ ಬಂತು ಕಾಯ ಕಷ್ಟ ಹೋಯ್ತು
ವಿಶ್ರಾಂತಿ ಬಂತು ಆರೋಗ್ಯ ಹೋಯ್ತು ನೋಡಾ....'[೨೧೯]

ಅನಾರೋಗ್ಯವೇ ಇಂದು ಹೆಚ್ಚಾಗಿ ಕಾಣುವ ಜೀವನ ಪದ್ಧತಿಯನ್ನು ಇಲ್ಲಿ ಹೇಳಲಾಗಿದೆ. ಮಾನವ ಜೀವನ ಆಧುನಿಕ ಪದ್ಧತಿಯಿಂದ ಬದಲಾಗಿರುವದರೊಂದಿಗೆ ಸಾಂಸ್ಕೃತಿಕ ಜೀವನವೂ ಪಲ್ಲಟಗೊಂಡಿರುವುದನ್ನಿಲ್ಲಿ ಗಮನಿಸಬಹುದು.

**೫–೫–೩ ಶೈಕ್ಷಣಿಕ ರಂಗದ ಚಿಂತನೆ**

ಈ ಜಿಲ್ಲೆಗಳ ಆಧುನಿಕ ವಚನಕಾರರಲ್ಲಿ ಹೆಚ್ಚಿನವರು ಶಿಕ್ಷಕ ವೃತ್ತಿ ಬಾಂಧವರಾಗಿದ್ದಾರೆ. ಅವರಲ್ಲಿ ಪ್ರಾಥಮಿಕ, ಪ್ರೌಢ, ಉನ್ನತ ಶಿಕ್ಷಣ ರಂಗದಲ್ಲಿ ಶಿಕ್ಷಕರಾದವರಿದ್ದಾರೆ. ಆಯಾ ರಂಗದಲ್ಲಿ ಅನೇಕ ರೀತಿಯ ಸಾಧನೆ ಮಾಡಿ ಪ್ರಶಸ್ತಿಗೂ ಬಾಜನರಾಗಿದ್ದಾರೆ. ಹೀಗಾಗಿ ಇವರು ಶಿಕ್ಷಣ ಕ್ಷೇತ್ರವನ್ನು 'ಸಾಂಸ್ಕೃತಿಕ' ಜೀವನದ ಹಿನ್ನೆಲೆಯಲ್ಲಿ ಗುರುತಿಸಿರುವುದು ಕಂಡುಬರುತ್ತದೆ. ಹೀಗಾಗಿ ಇವರ ವಚನಗಳಲ್ಲಿ ಶಿಕ್ಷಕ, ಶಿಕ್ಷಣ, ಶೈಕ್ಷಣಿಕ ವಾತಾವರಣಗಳನ್ನು ಕುರಿತ ಹಲವು ಚಿಂತನೆಯ ನೆಲೆಗಳು ಕಂಡುಬರುತ್ತವೆ. ಮಾನವ ಬದುಕಿನ 'ಸುಸಂಸ್ಕೃತ' ವಾತಾವರಣ ನಿರ್ಮಾಣದಲ್ಲಿ 'ಶಿಕ್ಷಣ'ದ ಪಾತ್ರ ಬಹುಮುಖ್ಯವಾಗಿರುವುದನ್ನು

'ಜೀವನವೆಂಬ ಪರೀಕ್ಷೆಯಲ್ಲಿ
ಧೈರ್ಯವೆಂಬ ಪೆನ್ನು ಹಿಡಿದು
ಆತ್ಮವಿಶ್ವಾಸವೆಂಬ ಶಾಯಿಯಿಂದ
ಉತ್ತರ ಬರೆದು ಜಯಿಸಬೇಕೆಂದ
ಆಚಾರ ಪ್ರಿಯಬಸವಲಿಂಗ'[೨೨೦]

ಬದುಕಿನಲ್ಲಿ ಪರೀಕ್ಷೆಯಲ್ಲಿ ಜಯಿಸಲು 'ಶಿಕ್ಷಣ'ಬೇಕು ಎಂಬುದನ್ನು ಈ ವಚನ ಪರೋಕ್ಷವಾಗಿ ತಿಳಿಸುವುದನ್ನು ಗಮನಿಸಬಹುದು. ಶಿಕ್ಷಣದೊಂದಿಗೆ ಧೈರ್ಯ, ಆತ್ಮವಿಶ್ವಾಸಗಳು ಅತಿ ಅವಶ್ಯ ಎನ್ನುವುದನ್ನು ಇಲ್ಲಿ ಕಾಣುತ್ತೇವೆ. ಜೀವನದ ಸಂದರ್ಭಗಳಲ್ಲಿ ಅನ್ನ ಹಳಸಬಹುದು, ಉಟ್ಟ ಬಟ್ಟೆ ಹರಿಯಬಹುದು, ಕೊಟ್ಟ ವಸ್ತು ಕಳೆಯಬಹುದು ಆದರೆ ಪಡೆದ ಜ್ಞಾನ (ಶಿಕ್ಷಣ)ವನ್ನು ಯಾರಿಂದಲೂ ಕಸಿದುಕೊಳ್ಳಲಾಗದು ಎಂಬುದನ್ನಿಲ್ಲಿ ನೆನಪಿಡಬೇಕು. ಅಂತೆಯೇ ಇಂದಿನ ಬದುಕಿಗೆ ಶಿಕ್ಷಣ ಬೇಕೇ ಬೇಕು. ಯಾಕಂದರೆ 'ಶಿಕ್ಷಣದಿಂದಲೇ ಶಕ್ತಿ, ಶಿಕ್ಷಣದಿಂದಲೇ ಯುಕ್ತಿ, ಶಿಕ್ಷಣದಿಂದಲೇ ಪ್ರಗತಿ, ಶೀಕ್ಷಣದಿಂದಲೇ ಕೀರ್ತಿ, ಮುಕ್ತಿಯೆಂದು ಹೇಳುವರಲ್ಲದೆ'[೨೨೧] ಶಿಕ್ಷಣವಿಲ್ಲದವರನ್ನು ಕುಕ್ಕಿ ತಿನ್ನುತ್ತಾರೆ. ಶಿಕ್ಷಣದಿಂದಲೇ ಸ್ವತಂತ್ರ್ಯದ ಸಿದ್ಧಿ ಇದೆ ಎಂದು ಹೇಳಿದ್ದಾರೆ. ಅಕ್ಷರ ಜ್ಞಾನವಿಲ್ಲದ್ದರೆ ಬಾಳು ಮೂಡನಂಬಿಕೆಗಳ ಗೂಢಾಗುತ್ತದೆ. ಅಂತೆಯೇ ಶಿಕ್ಷಣ ಬೇಕು ಅದಕ್ಕಾಗಿ 'ಶಿಕ್ಷಕ' ಎಂಥವನಿರಬೇಕೆಂಬ ಚಿಂತನೆಗಳು ಇಲ್ಲಿ ಕಾಣಸಿಗುತ್ತವೆ.

**ಶಿಕ್ಷಕ**

'ಶಿಕ್ಷಕ ಸದ್ಭಾವನೆಯ ಸಂಕೇಯ
ಸಾತ್ವಿಕ ಗುಣಗಳ ನಿರ್ಮಾಪಕ
ಚಲನಶೀಲ ಶಕ್ತಿಯ ಪ್ರತೀಕ

ಸಂಸ್ಕೃತಿಯ ಸೃಷ್ಟಿಕರ್ತ
ಶರಣರ ಸಂತರ ಸಾಕ್ಷಾತ್ಕಾರ
ಸುಂದರ ಶಿಲ್ಪಿಯ ಹರಿಕಾರ
ಮೌಲಿಕ ತತ್ವಗಳ ಪ್ರತಿಪಾದಕ
ಶಿಸ್ತಿನ ಶಿಪಾಯಿ, ಕರುಣಾಮಯಿ
ಕ್ಷಮಾಗುಣ ಸಾಗರ,
ಶತಕೋಟಿ ದೇವತೆಗಳ
ಪ್ರತಿರೂಪವೆಂದಳು ಶಾಸನೇಶ್ವರಿ'[೨೨೨]

'ಸಂಸ್ಕೃತಿ' ವಾಹಕನಾಗಿರುವ ಶಿಕ್ಷಕನನ್ನು ಇಂದು ಸಮಾಜ ಯಾವ ರೂಪದಲ್ಲಿ ಗಮನಿಸುತ್ತಿದೆ ಎಂಬುದನ್ನಿಲ್ಲಿ ಕಾಣುತ್ತೇವೆ. ಶಕ್ತಿಯ ಪ್ರತೀಕನಾಗಿರುವ ಶಿಕ್ಷಕ ಏನೆಲ್ಲ ಹೌದು ಎಂಬುದನ್ನು ಇಲ್ಲಿ ಹೇಳಲಾಗಿದೆ. 'ಶಿಕ್ಷಕ'ನಾದವನ ಜವಾಬ್ದಾರಿ ಎಂತಹದ್ದು ಎಂಬುದನ್ನು ಈ ಎಲ್ಲ ಪದ ಪುಂಜಗಳ ಹಿನ್ನೆಲೆಯಲ್ಲಿ ಅರಿಯಬಹುದು. ಆದರೆ 'ಶಿಕ್ಷಕ'ನಾದವನು ತನ್ನ ವಿದ್ಯೆಯನ್ನು ಮಕ್ಕಳಿಗೆ ಮುಟ್ಟಿಸದಿದ್ದರೆ ಏನೂ ಪ್ರಯೋಜನವಿಲ್ಲ ಎಂಬುದನ್ನೂ ಇಲ್ಲಿ ವಿವರಿಸಲಾಗಿದೆ.

'ಜನವಸತಿಗೊಂದು ಶಾಲೆ ತೆರೆದು ಫಲವೇನು?
ಶಿಕ್ಷಕರು ತರಬೇತಿ ಪಡೆದು ಫಲವೇನು?
ತರಗತಿಗೆ ಮುಟ್ಟಿಸದಿದ್ದರೆ ಕಲಿಕೆ ಗುಣಾತ್ಮಕವಾಗದು
ಶಿಕ್ಷಕ ಪಡೆದಿದ್ದಡೇನು? ಜೀವನಕ್ಕೆ ಉಪಯೋಗವಾಗದಿದ್ದರೆ
ಪರಿಣಾಮ ಫಲಿಸದು ನೋಡಾ...'[೨೨೩]

ಎನ್ನುವ ವೀರಶೆಟ್ಟಿ ಬಾವುಗೆ ಅವರು ಶಿಕ್ಷಕರಾದವರು ತಮ್ಮ ಜ್ಞಾನವನ್ನು ತರಗತಿಯಲ್ಲಿರುವ ಮಕ್ಕಳಿಗೆ ಮುಟ್ಟಿಸಬೇಕು. ಇಲ್ಲವಾದರೆ ಗುಣಾತ್ಮಕ ಶಿಕ್ಷಣ ದೊರೆಯಲಾರದೆನ್ನುವ ಅವರು ಜೀವನಕ್ಕೆ ಉಪಯೋಗವಾಗದಿದ್ದ ಶಿಕ್ಷಣ ಪಡೆಯುವುದರಿಂದ ಪರಿಣಾಮ ಏನೂ ಫಲಿಸದು ಎಂದು ಹೇಳಿರುವಲ್ಲಿ ಶಿಕ್ಷಕನ ಪಾತ್ರ, ಶಿಕ್ಷಣದ ಮಹತ್ವ ಅರಿಯುವುದರೊಂದಿಗೆ 'ಶಿಕ್ಷಕ'ನ ಬೋಧನೆ ಬಹುಮುಖ್ಯವಾದುದೆಂದು ಹೇಳುವುದನ್ನಿಲ್ಲಿ ನೋಡಬಹುದು.

'ಹಿಂದೆ ಇದ್ದವು ಗುರುಕುಲಗಳು
ಶಿಷ್ಯರ ಏಳ್ಗೆ ಕಂಡು ಸಂತೋಷ ಪಡುವ ಗುರುಗಳು
ಇಂದಾಗಿವೆ, ಅವೇ ಜ್ಞಾನಮಂದಿರಗಳು
ಆದರೆ
ಇಂದಿನ ಗುರುಗಳು ಆಗಿರುವರು
ಗುರು ದ್ರೋಣಾಚಾರ್ಯರು....'[೨೨೪]

ಎಂದು ಹೇಳುವಲ್ಲಿ, ಶಿಕ್ಷಣರಂಗವಿದು ವ್ಯಾಪಾರ ಕೇಂದ್ರವಾಗಿ ಶಿಕ್ಷಕರು ಗುರುದಕ್ಷಿಣೆ ಪಡೆವ ಆಚಾರ್ಯರಾಗಿರುವುದನ್ನು ನಿರ್ಭಿಡೆಯಿಂದ ತಿಳಿಸಲಾಗಿದೆ. ಇದನ್ನೇ ಸಬರದ ಅವರು 'ಶಿಕ್ಷಣವಿದ್ದರೇನಯ್ಯ ಸಂಸ್ಕೃತಿ ಇಲ್ಲದಿದ್ದರೆ' ಎಂದು

ಹೇಳುತ್ತ 'ಏನು ಓದಿ ಏನು ಫಲವಯ್ಯಾ ನುಡಿದಂತೆ ನಡೆಯದಿದ್ದರೆ ಕಡೆಗಾಗುವವನು ನೋಡಾ ನಮ್ಮ ಸಬರದ ಬಸವ' ಎನ್ನುತ್ತಾರೆ.[೨೧೩] ಒಟ್ಟಿನಲ್ಲಿ 'ಶಿಕ್ಷಣ'ವೆಂಬುದು ಸಂಪತ್ತು, ಕೀರ್ತಿ, ಇಂದ್ರಿಯಾದಿಗಳನ್ನು ತೃಪ್ತಿಗೊಳಿಸುವುದಷ್ಟೇ ಅಲ್ಲ. 'ಜೀವನದರ್ಥವನ್ನು ಕಾಣುವುದು ಹಾಗೂ ಕಾಣಿಸುವುದು' ಎಂಬುದನ್ನು ಇಲ್ಲಿ ಅರಿಯಬಹುದಾಗಿದೆ. ಕವಿಯೊಬ್ಬ ಹೇಳಿರುವಂತೆ 'ಹೊಲಸು ನೆಲೆದಾಳದಲ್ಲಿಳಿಸು, ಸೊಗಸು ಸ್ವಭಾವದಲ್ಲಿರಿಸು, ಮುಖದಲ್ಲಿರಲಿ ಯಾವಾಗಲೂ ಹರುಷ, ಎಲ್ಲರಲ್ಲಿ ಪ್ರೀತಿಯ ಹೊಳೆ ಹರಿಸು, ಹಿರಿಯರಿಗೆ ಗೌರವಿಸು[೨೧೪] ಎಂಬಂತಹ ಸಂಸ್ಕೃತಿ ಬಿತ್ತುವ ಶಿಕ್ಷಣ ಇರಲಿ, ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

'ಸಾಂಸ್ಕೃತಿಕ' ಎಂಬುದು ಒಂದು ನಿರ್ದಿಷ್ಟ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಂತಹ ಒಂದು ರಾಜಕೀಯ ಸಿದ್ಧಾಂತವಲ್ಲ. ಅದನ್ನು ಯಾವುದೋ ಒಂದು ತಾತ್ವಿಕ ದರ್ಶನವೆನ್ನಲೂ ಸಾಧ್ಯವಿಲ್ಲ. ಅದು, ಮಾನವನ ಬದುಕನ್ನು ನೋಡುವ ಒಂದು ದೃಷ್ಟಿಕೋನ ಎನ್ನಬಹುದು.[೨೧೫] ಪ್ರತಿಯೊಂದು ಸಂಸ್ಕೃತಿಯು ಒಳ್ಳೆಯ ಬದುಕನ್ನು ತನ್ನದೇ ಆದ ರೀತಿಯಲ್ಲಿ ಗ್ರಹಿಸಿಕೊಳ್ಳುತ್ತೆ. ಸಾಂಸ್ಕೃತಿಕ ವಾತಾವರಣದ ನಿರ್ಮಾಣದಲ್ಲಿ ಧರ್ಮ, ಸಮಾಜ, ಸಾಹಿತ್ಯ, ಕಲೆಗಳು ಮುಖ್ಯವೆಂಬ ವಿಚಾರ ಇಲ್ಲಿಯ ಆಧುನಿಕ ವಚನಕಾರರಲ್ಲೂ ಇದೆ. ಧರ್ಮ ಹಾಗೂ ಆಧ್ಯಾತ್ಮದಲ್ಲಿ 'ಗುರು ಪ್ರೇರಣೆ' ಮುಖ್ಯವೆಂಬುದನ್ನು ಇಲ್ಲಿ ಗಮನಿಸಬಹುದು. ಆದರೆ 'ಗುರು'ವೆಂಬುದು ವ್ಯಕ್ತಿಯಲ್ಲ; ಅದೊಂದು ತತ್ವ, ಅದರ ಪ್ರೇರಣೆಯ ಹಿನ್ನೆಲೆಯಲ್ಲಿ 'ಸಂಸ್ಕೃತಿ'ಯನ್ನು ನಿರ್ಮಿಸಿಕೊಳ್ಳಬಹುದೆನ್ನುವ ವಚನ ಹೀಗಿದೆ.

'ಗುರುವೆಂಬುದು ತತ್ವ
ತತ್ವ ತಿಳಿಸುವುದೆಲ್ಲ ಗುರುನೋಡಾ
ಗಂಧ, ಗಾಳಿ, ಬೆಂಕಿ, ಬೆಳಕು,
ಮಾತು, ಮೌನ, ಜ್ಯೋತಿ, ಶ್ರೀಗಂಧ
ಪ್ರೀತಿ, ಪಣತಿ, ಪರಹಿತ ಆನಂದ
ಬಾಳ ಪಯಣದಿ ಸಿಗುವ ಗುರುತತ್ವ ತಾಣಗಳು ನೋಡಾ'[೨೧೬]

ಎನ್ನುವ ವಚನ 'ಸಾಂಸ್ಕೃತಿಕ' ನೆಲೆಯಲ್ಲಿ ಬಹುಮುಖ್ಯವಾಗುತ್ತದೆ. ನಮ್ಮ ಬದುಕಿನ ದಾರಿಯಲ್ಲಿ ಮನುಷ್ಯ ತಾವಾಗಿ ಕಂಡುಕೊಳುವ 'ಗುರುತ್ವ'ವೆಂದರೆ ದಾರಿದೀಪಗಳು ಗಾಳಿ, ಬೆಳಕು, ಬೆಂಕಿ, ಪ್ರೀತಿ, ಜ್ಯೋತಿ ಇತ್ಯಾದಿಯನ್ನು ಹೇಳಿರುವುದು ಗಮನಾರ್ಹವಾಗುತ್ತದೆ.

ಸಮಾಜದಲ್ಲಿಂದು 'ನಿಶೆ' ಏರಿದ್ದು ಎಲ್ಲೆಲ್ಲೂ ಕಂಡುಬರುತ್ತದೆ. ಅಂಥ ವಾತಾವರಣವೊಂದನ್ನು ತಿಳಿಸುತ್ತ 'ಸಾಂಸ್ಕೃತಿಕ' ಬದುಕನ್ನು ಉಳಿಸಿಕೊಳ್ಳುವತ್ತ ಮುಖಮಾಡುತ್ತದೆ ಈ ವಚನ.

'ಸೆರೆಯ ನಿಶೆ ಏರಿ ಕೆಟ್ಟರು, ಕೆಡಿಸಿದರು
ಸಂಪತ್ತಿನ ಅಮಲೇರಿ ಕೆಟ್ಟರು, ಕೆಡಿಸಿದರು
ಕೀರ್ತಿ, ಅಧಿಕಾರದ ನಿಶೆ ಏರಿ ಕೆಟ್ಟರು, ಕೆಡಿಸಿದರು
ಸಾಕಿದ ಗಿಳಿಯೇ ಸಂಸಾರವನುಂಗಿ
ಲೋಕಕ್ಕೆ ಕಳ್ಳೆ-ಮಿಳ್ಳೆಯಾಡಿಸಿತು
ಪ್ರಭು; ನಿನ್ನ ನಿಶೆ ಏರಿ ಕೆಡಲಿಲ್ಲ; ಕೆಡಿಸಲಿಲ್ಲ

ಅಳಿಯಲಿಲ್ಲ; ಉಳಿಯಲಿಲ್ಲ'[೨೨೮]

ಸಾಮಾಜಿಕ ಬದುಕಿನ ಹಲವು ಸಂದರ್ಭವನ್ನು ಹೇಳುತ್ತ, ಅದರಿಂದ ಕೆಟ್ಟು, ಕೆಡಿಸಿದ ರೀತಿಯನ್ನಿಲ್ಲಿ ಅರುಹಲಾಗಿದೆ. ಸೆರೆ, ಸಂಪತ್ತು, ಕೀರ್ತಿ, ಅಧಿಕಾರದ ಅಮಲೇರಿದವರೇ ಈ ಸಮಾಜದಲ್ಲಿ ಅಗಣಿತರಾಗಿದ್ದಾರೆ. ತಾನು ಸಾಕಿದ ಉದ್ಯೋಗವೂ ತನ್ನ ಕೆಡಿಸಿದ್ದನ್ನು ಹೇಳುವ ಪರಿ ಇಲ್ಲಿ ಅನನ್ಯವಾಗಿದೆ. ಈ ಲೋಕವನ್ನೇ ಈ ನಿಶೆಯಲ್ಲಿ ತಿರುಗಿಸುವ ರೀತಿ, ಬದಲಾಗುತ್ತಿಲ್ಲ, ಸಮಾಜ, ದೇಶ, ವಿಶ್ವದ ಪ್ರೀತಿಯ 'ಸಾಂಸ್ಕೃತಿಕ' ನಿಶೆ ಪರೀ ಇಲ್ಲ ಎಂಬ ವಿಷಾಧ ಇಲ್ಲಿದೆ.

ಅರಿತೆವು, ತಿಳಿದಿದ್ದೇವೆ ಎಂಬಂತಹ ಜನರು ಸಮಾಜದಲ್ಲಿ ಸಾಕಷ್ಟಿದ್ದಾರೆ. ಅವರು ಅರಿತದ್ದೇನು? ತಿಳಿದದ್ದೇನು? ಪ್ರಶ್ನಿಸುತ್ತಾರೆ ವಚನಕಾರರು.

'ಅರಿತೆವೆಂಬರು ಬೆರೆತೆವೆಂಬರು
ಮರೆತು ಎಲ್ಲಿಗೆ ಹೋದರಯ್ಯಾ?
...............................................
...............................................
ತಿರಿದುಂಬ ಲಾಭವಾಗಬಾರದಯ್ಯಾ....'[೨೨೯]

ಅರಿವು ತಿಳಿವು ಅಂತರಂಗದ ಅಂತಃಕರಣವಾದರೆ ಅದು ನೈಜ ಸಂಸ್ಕೃತಿಯ ಬುನಾದಿಯಾಗುತ್ತದೆ ಎಂಬ ಮಹತ್ವದ ಅಂಶವಿಲ್ಲಿ ಅಭಿವ್ಯಕ್ತಗೊಂಡಿದೆ. ನೀತಿ, ಧರ್ಮ, ಮಾನವೀಯತೆಯನ್ನು ಮರೆತು ಗೊಂದಲದಲ್ಲಿರುವ ಭಾರತವು ಜಗತ್ತಿಗೆ ತನ್ನ ಸಂಸ್ಕೃತಿಯನ್ನು ಮತ್ತೊಮ್ಮೆ ತೋರಬೇಕಾಗಿದೆ. ಇಂದಿನ ಬದುಕು ಅತಿ ಆಶೆಯನ್ನುಳ್ಳದ್ದು, ಅತೀ ವೈಭವದಲ್ಲಿ ಸಿಲುಕಿದೆ. ಅನೀತಿಯ ಮಾರ್ಗದಿಂದ ಹಣ ಸಂಪಾದನೆಯೊಂದನ್ನೇ ಹೆಚ್ಚು ಗುರಿಯಾಗಿಸಿಕೊಂಡಿದೆ. ಇಂತಹ ಕಪಟತನ ಸ್ವಾರ್ಥಿಗಳಿಗೆ ಹಣವೇ ಮುಖ್ಯವಾಗಿರುವುದನ್ನು ಆಧುನಿಕ ವಚನಗಳು ಉಲ್ಲೇಖಿಸುತ್ತವೆ.

**ಆರ್ಥಿಕ ವಿಚಾರ**

ಇಂದು ದೇಶದಲ್ಲಿ ಹಣದುಬ್ಬರದ ಬಿರುಗಾಳಿ ಬೀಸುತ್ತಿದೆ ಎನ್ನುವುದನ್ನು ತಿಳಿಸುವ ರೀತಿ ಆಧುನಿಕ ಯುಗದ ವಿಪರ್ಯಾಸವನ್ನು ಮನದಟ್ಟು ಮಾಡುತ್ತದೆ.

'ಹಣದುಬ್ಬರದ ಬಿರುಗಾಳಿ ಬೀಸಿ
ಆಹಾರ ಧ್ಯಾನದ ಬೆಲೆ ಗಗನಕ್ಕೇರಿ
ಜನಸಾಮಾನ್ಯರು ತಲ್ಲಣಗೊಂಡರೆ
...............................................
...............................................
ಸಾಮಾನ್ಯರ ಜೀವನಕ್ಕೆ ಬೆಲೆಯಿಲ್ಲದಿರುವುದು
ಆಧುನಿಕ ಯುಗದ ವಿಪರ್ಯಾಸವಯ್ಯಾ'[೨೩೦]

ಹಣಕಾಸಿನ ಸ್ಥಿತ್ಯಂತರದಿಂದ ಆಗುವ ಪರಿಣಾಮಗಳನ್ನು ತಿಳಿಸುವ ಈ ವಚನ, ಈ ಜಾಗತೀಕರಣದ ಪ್ರಭಾವದಿಂದ ಇನ್ನಷ್ಟು ಜಟಲಗೊಂಡಿರುವುದನ್ನು ತಿಳಿಸುತ್ತದೆ. ಕೇವಲ ಬಂಡವಾಳ ಶಾಹಿಗಳಿಗೆ ಮಾತ್ರ

ಅನುಕೂಲವಾಗುವ ರೀತಿಯಲ್ಲಿರುವ ಭಾರತದ ಆರ್ಥಿಕ ಪರಿಸ್ಥಿತಿಯಿಂದ ರೈತರ ಹಾಗೂ ಸಾಮಾನ್ಯ ಜನರ ಜೀವನದಲ್ಲಿ ಅದು ಬಿರುಗಾಳಿ ಎಬ್ಬಿಸಿದೆ ಎನ್ನುತ್ತಾರೆ ಕವಿ. ಇದರಿಂದ ಆಹಾರ ಧಾನ್ಯಗಳ ಬೆಲೆ ಗಗನಕ್ಕೇರಿವೆ. ಆದರೆ ಅದನ್ನು ಬೆಳೆದ ರೈತರಿಗೆ ಯೋಗ್ಯ ಬೆಲೆ ಸಿಗದೆ, ಅದು ದಲ್ಲಾಳಿಗಳ ಪಾಲಾಗುತ್ತಿರುವುದನ್ನು ವಚನಕಾರರು ಹೇಳುತ್ತಾರೆ. ಇದರಿಂದಲೇ ರೈತರು ಆತ್ಮಹತ್ಯೆಗೆ ಇಳಿಯುತ್ತಿದ್ದಾರೆಂಬ ಸತ್ಯವನ್ನಿಲ್ಲಿ ಅರುಹಿದ್ದಾರೆ. ರೈತರ ಸಾವಿಗೆ ಅವರು ಮಾಡುವ ಸಾಲದ ಹೊರೆಯೇ ಕಾರಣವಾಗಿರುವುದನ್ನು ಇನ್ನೊಂದು ವಚನದಲ್ಲಿ ಗಮನಿಸಬಹುದು.

'ಸಾಲದ ಹೊರೆಗಂಜಿ ಸಾಯುವ ರೈತಣ್ಣಗಳಿರಾ
ಸಾಲ ಮಾಡುವುದೇಕೆ? ಸಾಯುವುದೇಕೆ?
ಸಾಯುವುದರಿಂದ ಸಾಲ ಮುಕ್ತರಾಗಬಹುದೇನಯ್ಯಾ
ಇತಿಮಿತಿಯಲ್ಲಿ ಧೈರ್ಯದಿಂದ ಬದುಕಿ ಬಾಳಬೇಕಣ್ಣ'[೨೩೧]

ಎಂಬಂತಹ ಚಿಂತನೆಗಳು ಇಲ್ಲಿವೆ. ಆದರೆ ಸಾಲ ಮಾಡದೇ ಇಂದಿನ ಸ್ಥಿತಿಯಲ್ಲಿ ರೈತನ ಹೊಲಗಳಿಗೆ ಗೊಬ್ಬರ, ಬೀಜ ಪೂರೈಸುವುದು ತುಂಬಾ ಕಷ್ಟ. ಆತನ ಆರ್ಥಿಕ ಪರಿಸ್ಥಿತಿ ಹದಗೆಡುತ್ತ ಸಾಗಿರುವ ನೂರಾರು ಚಿತ್ರಗಳು ಇಲ್ಲಿ ಕಾಣಸಿಗುತ್ತವೆ. ಇದರಿಂದ ರೈತರ, ಸಾಮಾನ್ಯರ ಸಾಂಸ್ಕೃತಿಕ ಬದುಕಿನಲ್ಲಿ ತಲ್ಲಣಗಳು ಮೂಡಿನಿಂತಿವೆ ಎಂಬುದನ್ನು ಇಲ್ಲಿ ಗಮನಿಸಿದ ವಚನಕಾರರು ಅವರಿಗೆ ಇತಿಮಿತಿಯಲ್ಲಿ ಧೈರ್ಯದಿಂದ ಬಾಳುವ ಸೂಚನೆಯನ್ನು ನೀಡುತ್ತಾನೆ. ಆದರೆ 'ಸಾಲ'ವಿಂದು ಅನಿವಾರ್ಯವಾಗಿದೆ.

'ಬೆಲ್ಲದಾಸೆಗೆ ನೊಣ ಮುತ್ತಿ
ಹಾರಲಾಗದೆ ವಿಲಿವಿಲಿ ಒದ್ದಾಡುವಂತೆ
ಸಾಲ ಮಾಡಿ ಶೂಲನೇರುವರು
ಬಡ್ಡಿ ಚಕ್ರಬಡ್ಡಿಯೊಳು ಸಿಲುಕಿ
ಮಕ್ಕಳು ಮರಿಮಕ್ಕಳು ಜೀತದಾಳಾಗುವರು..'[೨೩೨]

ಇಂದು ಸಾಲಕ್ಕಾಗಿ ಮುಗುಬೀಳುವವರೇ ಹೆಚ್ಚಾಗಿದ್ದಾರೆ. ಸಾಲ ತಮ್ಮನ್ನು ಶೂಲಕ್ಕೇರಿಸುತ್ತದೆ ಎಂಬ ಪರಿಜ್ಞಾನವಿಲ್ಲದೆ ಸಾಲ ಮಾಡಿ, ಮುಂದಿನ ಪೀಳಿಗೆಯ ಮೇಲೂ ಆ ಋಣಭಾರ ಹೇರುವುದನ್ನು ವಚನಕಾರರು ಇಲ್ಲಿ ಉಲ್ಲೇಖಿಸುತ್ತ, ಸಾಲದಿಂದ ದೂರವಿರಲು ಹೇಳುತ್ತಾರೆ. ಬಡತನದಲ್ಲಿ ಬಳಲುತ್ತಿರುವ ರೈತ ಬಾಂಧವರನ್ನು ನೋಡಿ ಮರುಗದ ಜನರು ಹಣದಾಹಿಗಳಾಗಿರುವುದನ್ನು ಮರೆಯಲಾಗದು. ಅಂತೆಯೇ 'ಅನ್ನ ಕೊಡುವ ರೈತನ ಕೊಲ್ಲುವವ, ಕನ್ನ ಹಾಕುವ ಕಳ್ಳನ ರಕ್ಷಿಸುವವ, ಕನ್ಯೆಯರ ಗೌರವ ಕಾಪಾಡದವ, ತನ್ನ ತಾ ಹೊಗಳುತ್ತ ತಿರುಗುವವ ಸಗಣಿಗೆ ಹತ್ತಿರುವ ಸಾವಿರ ಹುಳನೋಡಾ' ಎನ್ನುತ್ತಾರೆ. ಡಾ. ಸೋಮನಾಥ ಯಾಳವಾರ ಅವರು.[೨೩೩] ಯಾವ ಕಡೆಗೆ ನೋಡಿದರೂ ಬರೀ ರಾಜಕಾರಣ ಸುತ್ತಲೂ ಅದೇ ಜನ ತುಂಬಿಕೊಂಡಿದ್ದು, ಸರಕಾರದ ನೂರೆಂಟು ಭಾಗ್ಯ ಯೋಜನಗಳಿಂದ ಬಡವರಿಗೆ ರೈತರಿಗೆ ಲಾಭವಿಲ್ಲ, ಇಂದು ರೈತರ ಆತ್ಮ ಹತ್ಯೆಗೂ ಈ ಭಾಗ್ಯಗಳೇ ಕಾರಣವೆಂದು ಹೇಳುತ್ತಾರೆ. ಇಂದು ಗುಣಕ್ಕಿಂತ ಜಗತ್ತಿನಲ್ಲಿ ಹಣವೇ ಪ್ರಧಾನವಾಗಿದೆ. ಅದರ ಕಾಲಡಿಯಲ್ಲಿ ಜನರ ಬದುಕಿದೆ ಎಂಬ ಚಿಂತನೆಗಳಿವೆ.

'ಹಣ ಇದ್ದಾಗ ಬಂಧು ಬಳಗವೆಲ್ಲಾ
ಬಳಿ ಬಂದು ವಿಚಾರಿಸುವರಯ್ಯಾ

..........................................................

..........................................................

ದೂರ ಸರಿವರಯ್ಯಾ

ಈಶ್ವರಿ ಪ್ರಿಯ ಶಿವಲಿಂಗ ನಿನ್ನ ಹೊರತು

ಇಂಥವರಿಗೆ ಮತ್ತ್ಯಾರು ಇಲ್ಲವಯ್ಯಾ'[೨೩೪]

ಹಣವಿದ್ದಾಗಲೇ ಬಂಧು ಬಳಗವೆಲ್ಲಾ ಇರುವುದು. ಹಣ, ಅಧಿಕಾರ ಕಳೆದುಕೊಂಡರೆ ಸಂಬಂಧಿಕರಾದವರೂ ಇವರು ನಮ್ಮವರಲ್ಲವೆಂದು ದೂರ ಸರಿವರು ಎಂದು ಈ ವಚನ ಹೇಳುವಲ್ಲಿಯ ವಾಸ್ತವತೆಯನ್ನು ಅರಿಯಬಹುದು. ಹಣ ಕೊಟ್ಟು ಅಧಿಕಾರಿಗಳಾದವರು ಹಣಗಳಿಸುವ ವ್ಯವಹಾರಸ್ಥರಾಗುತ್ತಾರೆಯೇ ಹೊರತು ಅವರು ಸಮಾಜಸೇವಕರಾಗುವುದಿಲ್ಲ ಅದನ್ನೇ –

'ಹಣಕೊಟ್ಟು ನೌಕರಿ ಪಡೆದವನು

ಹಣ ಗಳಿಸದಿರುವನೇನಯ್ಯಾ

..............................................

ಹೆಣಕ್ಕೂ ಬಿಡುವನೇನಯ್ಯಾ

ಜೀವವಿಲ್ಲದ ಹಣ ಜೀವಿಗಳ

ಕುಣಿಸುವುದು ಕಂಡು ಬೆರಗಾದೆನಯ್ಯಾ'[೨೩೫]

ಎನ್ನುತ್ತಾರೆ ಸೂಗಯ್ಯನವರು. ಹಣಕೊಟ್ಟು ನೌಕರಿ ಹಾಗೂ ಮತ ಪಡೆದವರು ಹಣಕ್ಕಾಗಿಯೇ ಒದ್ದಾಡುತ್ತಾರೆ. ಜೀವವಿಲ್ಲದ ಹಣ ಜೀವಿಗಳನ್ನು ಹೇಗೆ ಕುಣಿಸುತ್ತದೆ ಎಂಬುದರ ಚಿತ್ರ ಕೊಡುತ್ತಾರೆ. ಹಣಗಳಿಸುವುದೊಂದು ವ್ಯವಹಾರವಾಗಿರುವುದನ್ನು ಇಲ್ಲಿ ಅರಿಯಬಹುದು. 'ಅನ್ಯರ ಹಣದಲ್ಲಿ ಖಾಂಡು ಮಾಡಿ ಹೆಸರು ಗಳಿಸುವವರೇ ಇಂದು ಹೆಚ್ಚಾಗಿದ್ದಾರೆ. 'ಲಾಭದ ಆಸೆಗೆ ಸಿದ್ಧಾಂತ ಮರೆತವರು, ಲೋಭದ ಆಸೆಗೆ ಕಾಷಾಂಬರ ಉಟ್ಟವರು, ಪ್ರೀತಿ–ನೀತಿಗೆ ಸೇತುವೆ ಆಗದವರು, ಮಾತು–ಮಾತಲ್ಲಿ ಅಡ್ಡಗೋಡೆ ಕಟ್ಟಿದವರು – ಕೇವಲ ಲಾಭಕೋರರು' ಎನ್ನುತ್ತಾ, 'ಬದುಕೆಂದರೆ ಕೇವಲ ದುಡ್ಡಲ್ಲ, ಬದುಕೆಂದರೆ ಕಾರು ಬಂಗಲೆಯಲ್ಲ, ಬದುಕೆಂಬುದು ಕ್ರೆಡಿಟ್ ಕಾರ್ಡ ವ್ಯವಹಾರವಲ್ಲ, ಬದುಕೆಂದರೆ ಕೇವಲ ಆರಂಕಿ ಸಂಬಳದ ಜೀವನವಲ್ಲ; ಬದುಕೆಂದರೆ ಪ್ರೀತಿ–ಪ್ರೇಮದ ಪ್ರಪಂಚವೆಂಬ ಮಾತು[೨೩೬] ಇಲ್ಲಿ ಮನನೀಯವಾಗಿದೆ. ಇಂದಿನ ಆರ್ಥಿಕ ಜೀವನದೊಂದಿಗೆ ಸಾಂಸ್ಕೃತಿಕ ಬದುಕು ಬೆರೆತಿದೆ ಎಂಬುದನ್ನು ಇಲ್ಲಿ ಅರಿಯಬಹುದಾಗಿದೆ.

ಕ್ರೋಬರ್ ಪ್ರಕಾರ 'ಸಂಸ್ಕೃತಿ' ಎನ್ನುವುದು ನಾವು ಕಲಿತ ಹಾಗೂ ಪ್ರಸಾರ ಮಾಡುವ ಸ್ವಭಾವ, ತಂತ್ರ ವಿಧಾನ, ಚಿಂತನೆ ಮತ್ತು ಮೌಲ್ಯಗಳ ಮೊತ್ತವಾಗಿದೆ. (Anthropology by Kroeber) ಈತನು ಹೇಳುವಂತೆ ಸಂಸ್ಕೃತಿಯು ವಂಶಪಾರಂಪರ್ಯದಿಂದ ಬರುವುದಿಲ್ಲ. ಅದು ಮನುಷ್ಯನ ಕಲಿಕೆಯಿಂದ ರೂಪಗೊಳ್ಳುತ್ತದೆ. ಮನುಷ್ಯನು ತನ್ನ ಸ್ವಭಾವ ಮತ್ತು ನಡುವಳಿಕೆಗಳನ್ನು ಚಿಂತನೆ ಮತ್ತು ತಂತ್ರಜ್ಞಾನ ವಿಧಾನಗಳನ್ನು ಪ್ರಜ್ಞಾಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ ತನ್ನ ಪರಿಸರದಿಂದ ಕಲಿಯುತ್ತಾನೆ ಹಾಗೂ ಪ್ರಸಾರ ಮಾಡುತ್ತಾನೆ.[೨೩೭] ಈ ದೃಷ್ಟಿಯಿಂದಲೂ ಇಲ್ಲಿಯ ಆಧುನಿಕ ವಚನಕಾರರ ವಚನಗಳಲ್ಲಿ ಸಾಂಸ್ಕೃತಿಕ ಚಿಂತನೆ ಇರುವುದನ್ನು ಗಮನಿಸಬಹುದು.

'ಒಂದು ಕಡೆ ಲಂಚ
ಇನ್ನೊಂದು ಕಡೆ ಮಂಚ
ಮತ್ತೊಂದು ಕಡೆ ಖುರ್ಚಿ, ಕೀರ್ತಿ
ಲಂಚ ಮಂಚ ಸೋಲಿಸಿತೆನ್ನ
ಖುರ್ಚಿ ಕೀರ್ತಿ ಸೋಲಿಸಿ ತನ್ನ
ತಿಳಿದೂ ತಿಳಿದೂ ಬಳಲುತ್ತದ್ಯೆಧರೆ
ನಂಬಿ ಕೆಟ್ಟರು; ನಂಬದೆ ಕೆಟ್ಟರು
ಪ್ರಭು; ತನ್ನಲ್ಲಿ ತನಗೇ ಭರವಸೆ ಇಲ್ಲದನ್ನಕ್ಕ'[೨೩೮]

ಎನ್ನುವಲ್ಲಿ ಇಂದಿನ ಆಧುನಿಕ ಜೀವನದ ಹಿನ್ನೆಲೆಯಲ್ಲಿಯ ಜೀವನದ ಆಶೆಬುರುಕುತನವನ್ನು ಅರಿಯಬಹುದು. ಜನ ತಿಳಿದೂ ಬಳಲುವುದನ್ನು, ನಂಬಿಯೂ, ನಂಬದೆಯೂ ಕೆಟ್ಟು ಹೋದ ಪ್ರಸಂಗವನ್ನು ಇಲ್ಲಿ ಹೇಳಲಾಗಿದೆ ವಚನಕಾರ ತಮ್ಮ ಅಭಿವ್ಯಕ್ತಿಯ ಮೂಲಕ ತಮ್ಮನ್ನೇ ವಿಶ್ಲೇಷಿಸಿಕೊಂಡು ನೋಡಿರುವುದು, ಅಂತರಂಗದ ಪರಿವೀಕ್ಷಣೆ ಮಾಡಿಕೊಂಡಿರುವುದು ಸಮಾಜದಲ್ಲಿರುವ ಅಸಾಂಸ್ಕೃತಿಕ ಸಂದರ್ಭಗಳನ್ನು ಎತ್ತಿ ತೋರಿಸುವ ವಿಶಿಷ್ಟ ಕ್ರಿಯೆಯಾಗಿದೆ ಹಾಗೆಯೇ ಇಂದಿನ ಸಾಹಿತ್ಯರಂಗದಲ್ಲೂ ಬದಲಾವಣೆಯ ಗಾಳಿ ಬೀಸಿರುವ ಚಿತ್ರವಿದೆ.

'ಸಾಹಿತ್ಯದಲ್ಲೀಗ ಸಾತ್ವಿಕತೆ ಉಳಿದಿಲ್ಲ
ರಾಜಕಾರಣದಿಂದ ಸಾಹಿತ್ಯ ಹೊಲಸಾಗಿ
ಪಾವಿತ್ಯ ಕಳೆದಂತೆ
ಭೇದ ಭಾವದ ಛೇದ
ದೊಡ್ಡದಾಗುತ್ತಲಿಹುದು
ನಿಜವಾದ ಸಾಹಿತ್ಯ ಬೆಳಕು ಕಾಣದ ಹಾಗೆ
ಕತ್ತಲೆಯ ಕೋಣೆಯಲ್ಲಿ ಅಡಗಿ
ಕುಳಿತತಂತಿಹುದು....'[೨೩೯]

ಎಂದು ಇಂದಿನ ಸಾಹಿತ್ಯವಲಯದಲ್ಲಿರುವ ಹೊಲಸು ರಾಜಕಾರಣವನ್ನು ವಿವರವಾಗಿ ಇಲ್ಲಿ ಬಿಚ್ಚಿಡಲಾಗಿದೆ. ಭೇದ-ಭಾವದ ವಲಯವೇ ಇಲ್ಲಿ ದೊಡ್ಡದಾಗುತ್ತಿರುವುದು ನಿಜವಾದ ಸಾಹಿತ್ಯ ಮರೆಯಾಗಿರುವುದನ್ನು ಇಲ್ಲಿ ಹೇಳಲಾಗಿದೆ.

ಈ ಎಲ್ಲ ಹಿನ್ನೆಲೆಗಳಲ್ಲಿ ಗಮನಿಸಿದಾಗ ಆಧುನಿಕ ವಚನಕಾರರ ವಚನಗಳಲ್ಲಿ 'ಸಾಂಸ್ಕೃತಿಕ' ಪದವನ್ನು ಇಲ್ಲಿ ಬದುಕಿನ ವಾತಾವರಣ, ಒಂದು ಪ್ರಾದೇಶಿಕ ಜೀವನ ಪದ್ಧತಿ, ಸಗುಣಗಳ ಸಾಮರಸ್ಯ, ಅರ್ಥವುಳ್ಳ ನಂಬಿಕೆ, ಕಲಿಕೆ, ಕಲಾ ಸೃಷ್ಟಿ ಎಂಬಿತ್ಯಾದಿ ಅರ್ಥಗಳಲ್ಲಿ ಕಂಡುಕೊಳ್ಳಲಾಗಿದೆ. ಬದುಕಿನ ಎಲ್ಲ ರಂಗಗಳಲ್ಲಿ ಸಮರಸತೆಯ ಸಂಪೂರ್ಣತೆಯನ್ನು ಗಳಿಸಿಕೊಳ್ಳುವ ಜೀವನ ಪದ್ಧತಿಯಾಗಿದೆ. ಇದೊಂದು ಬಗೆಯ ಆತ್ಮ ಶಿಕ್ಷಣ ಅಂತರಂಗದ ಅನುಸಂಧಾನವೆಂದು ಕೆಲವೊಮ್ಮೆ ಪ್ರತ್ಯಕ್ಷವಾಗಿ, ಹಲವೊಮ್ಮೆ ಪರೋಕ್ಷವಾಗಿ ಹೇಳಿರುವುದನ್ನಿಲ್ಲಿ ಮನಗಾಣಬಹುದು.

## ೫-೬ ವೈಚಾರಿಕ ಮತ್ತು ವೈಜ್ಞಾನಿಕ ನೆಲೆ

ಬದಲಾವಣೆಯು ಪ್ರಕೃತಿಯ ನಿಯಮ. ವಾಸ್ತವಿಕತೆಯ ನಿಯಮಗಳಲ್ಲಿ ಬದಲಾವಣೆಯೂ ಒಂದು. ಪ್ರಕೃತಿಯ ಪ್ರತಿಯೊಂದು ಅಂಶವೂ ಪರಿಸರದ ಹಿನ್ನೆಲೆಯಲ್ಲಿ ಬದಲಾವಣೆಗೆ ಒಳಪಡುತ್ತದೆ. ಹಾಗೆಯೇ ಮಾನವ ಸಮಾಜವು ಕೂಡ ಈ ನಿಯಮಕ್ಕೆ ಬದ್ಧವಾಗಿರುತ್ತದೆ. ಕಾಲಕ್ಕನುಗುಣವಾಗಿ ಸಾಮಾಜಿಕ ವ್ಯವಸ್ಥೆಗಳು ನಿರಂತರವಾಗಿ ಬದಲಾಗುತ್ತಿರುತ್ತವೆ. ಇದನ್ನು ಪ್ರಕೃತಿ ವಿಜ್ಞಾನ ಎನ್ನಬಹುದು. ನಮ್ಮ ಸುತ್ತಲ ಪ್ರಪಂಚವನ್ನು ಕುರಿತು ವಿಶ್ವಾಸಾರ್ಹವಾದ ತಿಳುವಳಿಕೆಯನ್ನು ಪಡೆಯುವುದು ವಿಜ್ಞಾನದ ಉದ್ದೇಶ.

'ವಿಜ್ಞಾನವು ಮೂಲತಃ ಮೂರು ವಾಖ್ಯಗಳನ್ನು ಅಂಗೀಕರಿಸುತ್ತದೆ. ೧) ಪ್ರಕೃತಿಯ ಗತಿಯಲ್ಲಿ ನಿರ್ದಿಷ್ಟವಾದ ನಿಯಮವೊಂದಿದೆ ೨) ಆ ನಿಯಮವನ್ನು ತಿಳಿಸಿಕೊಳ್ಳಲು ಶಕ್ಯವಿದೆ ೩) ಆ ತಿಳುವಳಿಕೆಯನ್ನಾಧರಿಸಿ ಪರಿಣಾಮಕಾರಿ ಮಧ್ಯಪ್ರದವೇಶ ಮಾಡಬಹುದು ಹಾಗೂ ಅದರಿಂದ ಪ್ರಕೃತಿಯನ್ನು ಅನುಕೂಲಕರವಾಗಿ ಪರಿವರ್ತಿಸಬಹುದು.'[೨೪೦] ಇಂದಿನ ಆಧುನಿಕತೆಯ ವಿಧಾನದಲ್ಲಿ ಸಾಮಾಜಿಕ ವ್ಯವಸ್ಥೆಗಳಿಂದ ಬದಲಾಗುತ್ತಿರುವ ಸಮಾಜವನ್ನು ಕುರಿತ ಚಿಂತನೆಗಳು, ಪರಿಸರದ ಬಗೆಗಿನ ಅಭಿಪ್ರಾಯಗಳು, ಪ್ರಾಕೃತಿಕ ಅಂಶಗಳು, ಸಮೂಹ ಮಾಧ್ಯಮದ ಪರಿಣಾಮಗಳು, ಸಾಂಸ್ಕೃತಿಕ ಬದುಕಿನಲ್ಲಿಯ ನವೀನತೆಗಳು ಇತ್ಯಾದಿಗಳನ್ನು ಗುರುತಿಸುವ ಆಧುನಿಕ ವಚನಕಾರರು ಅವುಗಳೊಂದಿಗೆ ತಮ್ಮ ವೈಜ್ಞಾನಿಕ ಮನೋಧರ್ಮದ ಚಿಂತನೆಗಳನ್ನು ಸಮೀಕರಿಸಿ ಅಭಿವ್ಯಕ್ತಿಸುತ್ತಾರೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಇಂದು ಸಹಜವಾಗಿ, ಸರಳವಾಗಿ ಕಾಣಿಸುವ ರಾಜಕೀಯ ಸ್ಥಿತಂತರಗಳು, ಸಾಂಸ್ಕೃತಿಕ ಪಲ್ಲಟ, ಸಾಮಾಜಿಕ ವ್ಯವಸ್ಥೆಯ ರೀತಿ ನೀತಿ, ವಾಸ್ತವ ಬದುಕಿನಲ್ಲಿಯ ಧಾರ್ಮಿಕತೆಯ ರೂಪ,

ಕುರೂಪಗಳನ್ನು ಕಂಡುಂಡಿರುವ ವಚನಕಾರರು ಇಂದಿನ ಆಧುನಿಕತೆಯ ಬದುಕಿನಲ್ಲಿ ಪ್ರವೇಶಿಸಿರುವ ವೈಜ್ಞಾನಿಕ ಅಂಶಗಳ ಬಳಕೆಯಿಂದ ಬದುಕು ಸ್ಥಿತ್ಯಂತರಗೊಂಡಿರುವುದನ್ನು ಅಭಿವ್ಯಕ್ತಿಸುತ್ತಾರೆ.

'ಹಿಂದಿನದು ಇಂದಿಲ್ಲ, ಇಂದಿನದು ಮುಂದಿಲ್ಲ
ಮಾನವನ ಇತಿಹಾಸ ಪರಿವರ್ತನೆಯ ವೇಶ
ಶತಕ ಇಪ್ಪತ್ತರ ಈ ಕೊನೆಯ ದಶಕದ ನೋಟ
ವಿಜ್ಞಾನ ಬೆಳೆದಷ್ಟು, ಸುಜ್ಞಾನ ಕುಂದಿಹುದು
ಆಕಾಶದೆತ್ತರಕ್ಕೆ ವಿಜ್ಞಾನ ಹಾರಿದರೆ
ಪಾತಾಳದಲ್ಲಿ ಮಾನವತೆ ಮುಳುಗಿಹುದು
ಬರುವ ದಿನಗಳ ಬದುಕು ಬದುಕದಂತಾಗಿಹುದು.....'[೨೪೧]

ಎಂದು ಹೇಳುವಲ್ಲಿ 'ವೈಜ್ಞಾನಿಕತೆ ಎಷ್ಟೇ ಬೆಳೆದರೂ' ಮಾನವತೆ ಕುಗ್ಗಿ ಹೋಗಿದೆ ಎಂದು ತಿಳಿಸಲಾಗಿದೆ. ಇಂದಿನ ಜಗತ್ತಿನಲ್ಲಿಯ ಭಯೋತ್ಪಾದನೆ, ಮತಾಂಧತೆ, ಜಾತಿ ಭೇದ, ಭ್ರಷ್ಟರಾಜಕಾರಣ ಹೀನ ಸಾಮಾಜಿಕ ವ್ಯವಸ್ಥೆಗಳನ್ನು ಕಣ್ಮುಂದೆ ತರುವ ಈ ವಚನ, ಬೇರೆ ಬೇರೆ ಗ್ರಹಗಳಿಗೆ ಹೋದರೇನಾಯಿತು. ಭೂಮಿಯಲ್ಲಿ ಹೊಂದಿಕೊಂಡು ಬಾಳುವುದು ಕಲಿತಿಲ್ಲವೆಂಬ ಚಿಂತನೆ ಮಾಡುತ್ತದೆ. ಹಾಗೆಯೇ ಇಂದು ತಯಾರಿಸಿದ ಅಣುಬಾಂಬುಗಳ ಸ್ವರೂಪವನ್ನು ಗಮನಿಸಿದರೆ ಬರುವ ದಿನಗಳಲ್ಲಿ ಬದುಕೇ ಬಯಲಾಗುವ ಸೂಚನೆ ಕಾಣುತ್ತದೆ ಎಂಬ ಎಚ್ಚರಿಕೆ ಇಲ್ಲಿದೆ.

ಇಂದು ಯಂತ್ರಯುಗದ ತಂತ್ರಜ್ಞಾನ ಹೆಚುತ್ತಿರುವ ಕಾಲಮಾನ ನಮ್ಮ ಹಳೆಯ ದೈವೀಜ್ಞಾನವಿಂದು ಮರೆತೆ ಹೋಗುತ್ತಿದೆ. ವಿಜ್ಞಾನದ ಪ್ರಗತಿಯಲ್ಲಿ ಕಂಡಿರುವ ಅಂಶಗಳಿಂದ ಬಾಳಿನಲ್ಲಿ ಅಭಿವೃದ್ಧಿಯನ್ನು ಕಂಡುಕೊಳ್ಳಬಹುದು. ಆದರೆ ಯಂತ್ರ ತಂತ್ರಜ್ಞಾನದ ಪರಿಣಾಮದಿಂದ ಮಾನವನ ಬದುಕಿನ 'ಶ್ರಮನಿಷ್ಠೆ' ಮೂಲೆಗುಂಪಾಗುತ್ತಿದೆ. ಆರೋಗ್ಯಕ್ಕೆ ಹಾನಿಯಾಗುವ ಕಾಲ ಸಿದ್ಧಗೊಂಡಂತಿದೆ ಎಂಬುದೂ ಇಲ್ಲಿ ಮುಖ್ಯವಾಗುತ್ತದೆ.

'ಯಂತ್ರ ತಂತ್ರದಿಂದ ಏಕಾಂತ
ಕಳೆದು ಹೋಗುತ್ತಿಹುದು
ಯಂತ್ರ ತಂತ್ರದಿಂದ ಸಂಬಂಧ
ಕರಗಿ ಕಲ್ಮಶವಾಗಿ ಹೋಗುತ್ತಿಹುದು
ಯಂತ್ರ-ತಂತ್ರದಿಂದ ಎಲ್ಲ ಬಲ್ಲಿದೆನೆಂಬ
ಅಹಂನಲ್ಲಿ ಇಂದು ಎಲ್ಲರೂ ಬದುಕುತ್ತಿಹರು
ಆದಿ ತಿಳಿಯಿತು ಅಂತ್ಯ ತಿಳಿಯದು
ನಿರ್ಲಿಪ್ತನಾಗಿ ನಿಜಶರಣನಾಗಿರುವವನೇ ಬಲ್ಲ'[೨೪೨]

ಯಂತ್ರ-ತಂತ್ರಜ್ಞಾನದಿಂದಾಗುವ ದುಃಸ್ಪರಿಣಾಮಗಳನ್ನು ಈ ವಚನ ತಿಳಿಸುತ್ತದೆ. ಯಂತ್ರಗಳಿಂದ ಸಾಂಸ್ಕೃತಿಕ ಬದುಕಿನಲ್ಲಿ ಎಲ್ಲವೂ ಕಳೆದು ಹೋಗಿರುವ ಸಂಗತಿಯ ನೆಲೆಗಳನ್ನು ಇಲ್ಲಿ ಹೇಳಲಾಗಿದೆ. ಯಂತ್ರ-ತಂತ್ರಜ್ಞಾನದ ಬಳಕೆಯಿಂದ ಅವುಗಳ ಶಬ್ದ ಮಾಲಿನ್ಯದಿಂದ ಏಕಾಂತ ಕಳೆದು ಹೋದರೆ, ರೈತರ ಬದುಕಿನಲ್ಲಿಯ ವೃತ್ತಿ ಸಂಬಂಧಗಳು ಕರಗಿ ಹೋಗಿರುವುದನ್ನು ಅರಿಯಬಹುದು. ಯಂತ್ರಗಳ ಅಹಂಮಿಕೆಯಿಂದ ಬದುಕೇ ಬದಲಾಗಿದೆ ಎಂಬ ಕಟುಸತ್ಯಗಳನ್ನು ಇಲ್ಲಿ ನೀಡಲಾಗಿದೆ.

'ವಿಜ್ಞಾನ ವಿಧಾನದಲ್ಲಿ ಅನುಸರಿಸುವ ಒಂದು ಮುಖ್ಯ ಕ್ರಮ ಎಂದರೆ, ನಮ್ಮ ಸುತ್ತ ಮುತ್ತ ನಡೆಯುವ ವಿದ್ಯಮಾನಗಳ ಕೂಲಂಕುಷವಾದ ಜಾಗರೂಕ ವೀಕ್ಷಣೆ. ಅಂಥ ವೀಕ್ಷಣೆಯಿಂದ ದೊರೆತ ಮಾಹಿತಿಯನ್ನು ವಿಶ್ಲೇಷಿಸಿ ವರ್ಗೀಕರಿಸುವುದು ಮುಂದಿನ ಹಂತ ಅದರ ಫಲವಾಗಿ ಅನೇಕ ವೇಳೆ ಕೆಲವು ನಿಸರ್ಗ ನಿಯಮಗಳು ಬೆಳಕಿಗೆ ಬರುತ್ತವೆ. ನಿರ್ದಿಷ್ಟ ಪರಿಸ್ಥಿತಿಗಳ ಪರಿಣಾಮವಾಗಿ ನಿರ್ದಿಷ್ಟ ಘಟನೆಗಳು ತಪ್ಪದೆ ನಡೆಯುವ ನಿದರ್ಶನಗಳನ್ನೇ ನಿಯಮಗಳೆಂದು ಕರೆವುದು.[೨೪೩] ಈ ಹಿನ್ನೆಲೆಯಲ್ಲಿ ಮೇಲಿನ ವಚನದಲ್ಲಿ ಅಭಿವ್ಯಕ್ತಗೊಂಡಿರುವ ವಿಜ್ಞಾನದ ಪರಿಣಾಮದ ಹಿನ್ನೆಲೆಯಲ್ಲಿ ಜನತೆಯ ಮನದಲ್ಲಿ ಮೂಡಿನಿಂತಿರುವ ಅಸಾಂಸ್ಕೃತಿಕ ನೆಲೆಗಳನ್ನು ಮನಗಾಣಬಹುದು.

ಯಂತ್ರ-ತಂತ್ರಜ್ಞಾನದ ಬಳಕೆಯಿಂದ ಅನೇಕ ಜ್ಞಾನ ಶಾಖೆಗಳು ನವೀನವಾಗಿ ದೊರೆತರೂ. ಭಾರತೀಯ ನಂಬಿಕೆಯ ದೈವೀಜ್ಞಾನ ಈ ಹೊಸ ತಂತ್ರಜ್ಞಾನದಲ್ಲಿ ಮರೆತು ಹೋಗಿರುವ ವಿಚಾರಗಳು ವ್ಯಕ್ತವಾಗಿವೆ. ವಿಜ್ಞಾನದ ಅವಿಷ್ಕಾರದಿಂದ ಹೊಸ ಹೊಸದನ್ನು ಕಾಣಬಹುದು ಆದರೆ ಮಾನವನ ವಿಕಾಸಕ್ಕೆ ಆತ್ಮಜ್ಞಾನ ಮುಖ್ಯವೆಂಬ ಮಾತುಗಳೂ ಇಲ್ಲಿ ಒಡಮೂಡಿವೆ.

'ನೆಲವ ಶೋಧಿಸಿ ಚಿನ್ನವ ಕಂಡುದುಂಟು
ಜಲವ ಶೋಧಿಸಿ ಮುತ್ತುರತ್ನಂಗಳ ಕಂಡುದುಂಟು

ಆಕಾಶವ ಶೋಧಿಸಿ ಗ್ರಹಗಳ ಕಂಡದ್ದುಂಟು

ಮನವ ಶೋಧಿಸಿ ದೋಷವ ಕಂಡವರು ವಿರಳ

ಆತ್ಮವ ಶೋಧಿಸಿ ಬಸವಲಿಂಗನ ಕಂಡವರು ಅತಿವಿರಳ'[೨೪೪]

ವಿಜ್ಞಾನದಿಂದ ನೆಲ, ಜಲ, ಆಕಾಶಗಳೆಲ್ಲ ಇಂದು ಶೋಧಗೊಂಡಿವೆ. ಅವುಗಳಿಂದ ಚಿನ್ನ, ಮುತ್ತು, ರತ್ನ, ಗ್ರಹಗಳನ್ನು ಕಂಡುಕೊಳ್ಳಲಾಗಿದೆ. ಆದರೆ ಮನುಷ್ಯ ತನ್ನಲ್ಲಿರುವ ದೋಷಗಳನ್ನು ಕಾಣಲು ವಿಜ್ಞಾನಕ್ಕಿಂತ ಆತ್ಮಜ್ಞಾನ ಮುಖ್ಯವೆಂಬುದನ್ನು ಇಲ್ಲಿ ಹೇಳಿರುವುದನ್ನು ಭಾರತೀಯ ತತ್ವಜ್ಞಾನದ ಹಿನ್ನೆಲೆಯಲ್ಲಿ ಅವಲೋಕಿಸಬಹುದಾಗಿದೆ. ಇಂದಿನ ವೈಜ್ಞಾನಿಕ ಯುಗದಲ್ಲಿ ಮನುಷ್ಯ ವಿಜ್ಞಾನದ ಬಲದಿಂದ ಪಾತಾಳಗರಡಿಗೆ ಇಳಿದಿದ್ದಾನೆ. ಸಾಗರದ ತಳವನ್ನೂ ಸ್ಪರ್ಶಿಸಿದ್ದಾನೆ. ತನ್ನ ಬುದ್ಧಿಯ ಬಲದಿಂದ ಗಗನದೆತ್ತರಕ್ಕೂ ಏರಿ ಹೋಗಿದ್ದಾನೆ. ಆತ ಈ ಹಿನ್ನೆಲೆಯಲ್ಲಿ ಸಾಗಿ ಹೋಗಿರುವ ಆಳ-ಅಗಲಗಳು ಅಗಣಿತವಾಗಿವೆ. ಆದರೆ ಹೊರಗೆ ಆತ ಬೆಳೆದು ನಿಂತಷ್ಟು ಮನುಷ್ಯ ತನ್ನೊಳಗೆ ಇಳಿದಿಲ್ಲ. ಅಂತರಂಗದ ವೀಕ್ಷಣೆಗೈಯುತ್ತಿಲ್ಲವೆಂಬ ಚಿಂತನೆ ವೈಜ್ಞಾನಿಕ ಹಿನ್ನೆಲೆಯಲ್ಲಿ ಮೂಡಿ ನಿಂತಿರುವುದನ್ನು ಗಮನಿಸಬಹುದು.

ವಿಜ್ಞಾನ ಬೆಳೆದಂತೆ ಜನರಲ್ಲಿ ಸುಜ್ಞಾನದ ಭಾವವೂ ಬೆಳೆಯಬೇಕೆಂಬಾಸೆ ಇಲ್ಲಿದ್ದು, ವಿಜ್ಞಾನ ಮತ್ತು ತತ್ವಜ್ಞಾನ ಆಧುನಿಕ ಸಮಾಜದ ಎರಡು ಮುಖ್ಯ ಲಕ್ಷಣಗಳಾಗಬೇಕು. ಪ್ರಚಲಿತ ಕಾಲವನ್ನು ವೈಜ್ಞಾನಿಕ ಯುಗವೆಂದು ಕರೆಯಲಾಗುತ್ತದೆ. ಈ ಯುಗವು ನಾಗರಿಕತೆಯ ಬೆಳವಣಿಗೆಯಲ್ಲಿ ಮುಖ್ಯ ಪಾತ್ರವಹಿಸುತ್ತಿದೆ. ಅದರೆಂತೆ ಇಲ್ಲಿ 'ಸಂಸ್ಕೃತಿ'ಯೂ ಉಳಿದು ಬೆಳೆಯಬೇಕೆಂಬಾಸೆ ವಚನಕಾರರಲ್ಲಿದೆ.

'ವಿಜ್ಞಾನ ಭೌತಿಕ ಪ್ರಗತಿ ಸಾಧಿಸುವುದು

ತತ್ವಜ್ಞಾನ ಆಂತರಿಕ ಪ್ರಗತಿ ಸಾಧಿಸುವುದು

ಜ್ಞಾನ ಬಹಿರಂಗ ಶುದ್ಧ ಮಾಡಿದರೆ

ಧ್ಯಾನ ಅಂತರಂಗ ಶುದ್ಧ ಮಾಡಿದರೆ

ದಾನ ಮನಸ್ಸಿಗೆ ತೃಪ್ತಿ ಕೊಟ್ಟರೆ

ದಾಸೋಹ ಆತ್ಮಕ್ಕೆ ಶಾಂತಿ ಕೊಡುವುದಯ್ಯಾ

ಗುರುನಂಜೇಶ್ವರ'[೨೪೫]

ವಿಜ್ಞಾನ ತತ್ವಜ್ಞಾನವೆರಡೂ ಮನುಷ್ಯನ ಬೆಳವಣಿಗೆಗೆ ಬಹುಮುಖ್ಯವೆಂಬುದನ್ನು ಈ ವಚನ ಹೇಳುತ್ತದೆ. ವಿಜ್ಞಾನದಿಂದಾಗುವ ಪ್ರಗತಿ ಹಾಗೂ ತತ್ವಜ್ಞಾನದಿಂದಾಗುವ ಪ್ರಗತಿಯನ್ನು ಇಲ್ಲಿ ತಿಳಿಸಲಾಗಿದೆ. ಈ ವಿಜ್ಞಾನದಿಂದ ಮಾನವನ ಮೂಢನಂಬಿಕೆಗಳು ನಾಶವಾಗುತ್ತವೆ. ಮೂಢನಂಬಿಕೆಗಳು ಮಾನವನ ಮನದಲ್ಲಿ ಅಂಧವಿಶ್ವಾಸವನ್ನು ಬಿತ್ತುತ್ತವೆ. ಅದಕ್ಕಾಗಿ 'ವಿಜ್ಞಾನವನ್ನು ನಂಬಿ ಜ್ಯೋತಿಷ್ಯವನ್ನು ನಂಬಬೇಡ'ವೆಂದೂ ಇವರು ಹೇಳುತ್ತಾರೆ. ಇಂದಿನ ವೈಜ್ಞಾನಿಕ ತಿಳುವಳಿಕೆಯಲ್ಲೂ –

'ಪ್ರಜ್ಞಾವಂತ ಜನರು ಜ್ಯೋತಿಷ್ಯದ ಬೆನ್ನು

ಹತ್ತಿರುವುದು ವಿಪರ್ಯಾಸವಯ್ಯಾ

ಮಠಾಧೀಶರೆನಿಸಿಕೊಂಡವರೂ ಕೂಡ ಪಂಚಾಂಗದ ಬೆನ್ನು

ಹತ್ತಿರುವುದು ದೊಡ್ಡ ದುರಂತವಯ್ಯಾ

ಪ್ರಜ್ಞೆಯ ದಿವಾಳಿತನದ ಸಂಕೇತ ತೋರುವುದಯ್ಯಾ....'[೨೪೬]

ಎನ್ನುವಲ್ಲಿ ವೈಚಾರಿಕತೆಯೇ ಇನ್ನೂ ಪ್ರಜ್ಞಾವಂತರಲ್ಲಿ ಮರೆಯಾಗುತ್ತಿರುವುದನ್ನು ಸೂಚಿಸಲಾಗಿದೆ. ಇದಕ್ಕೆಲ್ಲ ವೈಚಾರಿಕತೆಯ ಕೊರತೆಯಷ್ಟೇ ಅಲ್ಲ; ಜೋತಿಷಿಗಳು ಜನರಲ್ಲಿ ಬಿತ್ತಿರುವ ಮೂಢನಂಬಿಕೆಯ ಭಯವೆನ್ನಬಹುದು. ಎಲ್ಲಿಯವರೆಗೆ ಭಯ, ಮೂಢನಂಬಿಕೆಗಳು ಹೋಗುವುದಿಲ್ಲವೋ, ಅಲ್ಲಿಯವರೆಗೆ ಜೋತಿಷಿಗಳು ಸಮಾಜವನ್ನು ಆಳುತ್ತಾರೆ. ಮುಗ್ಧ ಜನರನ್ನು ವಂಚಿಸುತ್ತಾರೆ ಅಂತೆಯೇ ಜನರಲ್ಲಿ ಜಾಗೃತಿಯಾಗಬೇಕೆಂಬ ಸಲಹೆಗಳು ಇಲ್ಲಿ ಒಡಮೂಡಿವೆ.

'ಅವರಿವರೆಂದಾರೆಂದು, ಒಂದೊಂದು ಅವತಾರ ತಾಳಿದರೆ
ಹಗಲಲ್ಲಿ ಕಳೆದುಕೊಂಡು ರಾತ್ರಿಯಲ್ಲಿ ಹುಡುಕಿದಂತೆ
ನೆಟ್ಟನೆ ನಿಲ್ಲಬೇಕು ದಿಟ್ಟನಾಗಿ
ನಿನಗೆ ನೀನಲ್ಲದೆ ಅನ್ಯರಿಲ್ಲ
ಪ್ರಭು;ಮಾಯೆಯ ಮುಖಕ್ಕೆ ಮಿತಿ ಇಲ್ಲ ನೋಡಾ'[೨೪೭]

ಬೇರೆಯವರು ಹೇಳಿದನ್ನು ಕೇಳುತ್ತ ಹೋದರೆ ಅದರಿಂದ ಪ್ರಯೋಜನವಿಲ್ಲ. ಅವು ಕಟ್ಟುಕಥೆಗಳೇ ಹೊರತು ಜೀವನವಲ್ಲ. ಯಾರೂ ಯಾವ ಅವತಾರವನ್ನು ತಾಳಿಕೊಂಡು ಹುಟ್ಟುವುದಿಲ್ಲ. ಹಾಗೆಂದು ನಂಬಿದರೆ ಹಗಲಲ್ಲಿ ಕಳೆದುಕೊಂಡದ್ದನ್ನು ರಾತ್ರಿ ಹುಡುಕಿದಂತೆ ಆಗುತ್ತದೆ. ನೀನೇ ನೆಟ್ಟಗೆ ನಿಲ್ಲಬೇಕು. ದಿಟ್ಟವಾಗಿರಬೇಕು. ನಿನಗೆ ನೀನೇ ಹೊರತು ಅನ್ಯರಿಲ್ಲ ಎಂಬ ಎಚ್ಚರಿಕೆಯನ್ನು ಹಾಗೂ ವೈಚಾರಿಕ ಪ್ರಜ್ಞೆಯನ್ನು ಈ ವಚನ ಮೂಡಿಸುತ್ತದೆ. ಮಾನವನು ಮಾಯೆಯ (ಆಸೆಯ) ನೂರೆಂಟು ರೀತಿಗೆ ಬಲಿಯಾಗಿ ತನ್ನ ಜಾಗೃತ ಪ್ರಜ್ಞೆಯನ್ನು ಕಳೆದುಕೊಳ್ಳಬಾರದು. ವೈಚಾರಿಕ ಪ್ರಜ್ಞೆಯನ್ನು ಸದಾ ಜಾಗೃತವಾಗಿರಿಸಿಕೊಳ್ಳಲು ಈ ವಚನ ಸೂಚಿಸುತ್ತದೆ.

ಆಧುನಿಕ ವಚನಕಾರರ 'ವೈಚಾರಿಕತೆ'ಗೆ ಬದುಕಿನ ಹಲವು ನೆಲೆಗಳು ಲಭ್ಯವಾಗಿದ್ದು ಕಂಡುಬರುತ್ತವೆ. ಅವು ಆಯಾ ವಚನಕಾರರ ಸಾಮಾಜಿಕ ಬದುಕಿನ ಆಲೋಚನೆಗಳನ್ನು ರೂಪಿಸುವ ಮೂಲಧಾತುವಾಗಿ ಅಭಿವ್ಯಕ್ತಗೊಂಡಿವೆ. ಇಲ್ಲಿ ವ್ಯಕ್ತಗೊಂಡಿರುವ ವಿಚಾರಗಳು ಅಥವಾ ಅಭಿವ್ಯಕ್ತನಂಬಿಕೆಗಳು ಧಾರ್ಮಿಕ, ರಾಜಕೀಯ, ಸಾಮಾಜಿಕ ಆರ್ಥಿಕ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿ ಮೂಡಿಬಂದಿವೆ. ಧಾರ್ಮಿಕ ನೆಲೆಯ ವೈಚಾರಿಕತೆಯನ್ನು

'ವೈರಾಗಿಯಾದಡೆ ಅಲ್ಲಮನಂತಿರಬೇಕು
ತ್ಯಾಗಿಯಾದಡೆ ಅಕ್ಕನಂತಿರಬೇಕು
ಗುರುವಾದಡೆ, ಬಸವಣ್ಣನಂತಿರಬೇಕು
ಭಕ್ತನಾದಡೆ ಶರಣಗಣಂಗಳನ್ನರಿತ ನಾವುಗಳು ಏನಾಗದಿದ್ದರೂ
ನಿಜ ಮಾನವರಾಗಿ ನಡೆಯಬೇಕು ನೋಡಾ'[೨೪೮]

ಎನ್ನುವ ವಚನ ಅರ್ಥವತ್ತಾಗಿ ಪ್ರತಿಬಿಂಬಿಸುತ್ತದೆ ವೈರಾಗಿ, ತ್ಯಾಗಿ, ಗುರು, ಭಕ್ತರಾದವರು ಹೇಗಿರಬೇಕು. ಏನೂ ಆಗದಿದ್ದವರು ಹೇಗಿರಬೇಕೆಂಬ 'ವೈಚಾರಿಕ' ನೆಲೆಯನ್ನು ಇಂದಿನ ಈ ತತ್ವಗಳ ವೈರಧ್ಯದ ಹಿನ್ನೆಲೆಯಲ್ಲಿ ವಿವರಿಸುತ್ತದೆ. ಹಿಂದಿನ ಆದರ್ಶತೆ ಮೆರೆದ ಆಯಾ ತತ್ವಕ್ಕೆ ಹೆಸರಾಗಿರುವ ಮಹಾಪುರುಷರನ್ನು ಹೆಸರನ್ನಿರಿಸಿಕೊಂಡು ಸಮಕಾಲೀನ ಸಂಗತ ಆಲೋಚನೆಗಳನ್ನು ಮುಖಾಮುಖಿಗೊಳಿಸುವ ಈ ವಚನ, ವಚನಕಾರರ ಧಾರ್ಮಿಕದ ವೈಚಾರಿಕತೆಗೆ ಸಾಕ್ಷಿಯಾಗುತ್ತಿದೆ.

'ಜಾತ್ಯಾತೀತ ರಾಷ್ಟ್ರವೆನ್ನುವರು
ಜಾತಿ ಬಲದಿಂದಲೇ ಬದುಕುವುರಯ್ಯಾ
ಭಾವೈಕ್ಯತೆಯ ಮಾತು ಹೇಳುವವರು
ಏಕತೆಯನ್ನೇ ಕಾಣರಯ್ಯಾ
ಸಮಾನತೆಯ ಭಾಷಣ ಮಾಡುವವರು
ಸೊಕ್ಕಿನಿಂದಲೇ ಮೆರೆಯುವರಯ್ಯಾ;
ಹನಿಸುವ ಮೋಡ ಹೂ ಮುಡಿದ ಗಿಡ
ಮಾತನಾಡುವುದಿಲ್ಲ ನೋಡಾ'[೨೪೯]

ಸಾಮಾಜಿಕ ವ್ಯವಸ್ಥೆಯಲ್ಲಿರುವ ಲೋಪದೋಷಗಳನ್ನು ತೋರಿಸುತ್ತ ಜಾತಿಬಲ, ಏಕತೆಯಿಲ್ಲದ ಬದುಕು. ಅಸಮಾನತೆಯ ವ್ಯವಹಾರಗಳನ್ನು ಕಂಡಿರುವ ವಚನಕಾರರು ಅವುಗಳನ್ನು ಖಂಡಿಸುವುದರೊಂದಿಗೆ 'ಹನಿಸುವ ಮೋಡ, ಹೂ ಮುಡಿದ ಗಿಡ ಮಾತನಾಡುವುದಿಲ್ಲ ನೋಡಾ' ಎಂದು ಧ್ವನಿಪೂರ್ಣವಾಗಿ ವೈಚಾರಿಕತೆಯನ್ನಿಲ್ಲಿ ಅಭಿವ್ಯಕ್ತಿಸಿದ್ದಾರೆ. ಸಮಷ್ಟಿ ಜೀವನದ ಇಂದಿನ ವಿಧಾನಕ್ಕೆ ವಿಮುಖವಾಗಿಯೋ ಸವಾಲೊಡ್ಡಿಯೋ ಸೆಟೆದು ನಿಂತು, ಅದರ ನಿವಾರಣೆಗೆ, ಆಕ್ರೋಷಗಳ ಸೂಚನೆಗೆ ಪ್ರಯತ್ನಿಸುವುದರಲ್ಲಿಯೇ ವೈಚಾರಿಕತೆ ವ್ಯಕ್ತವಾಗುತ್ತದೆ. ಇದನ್ನು ಇಲ್ಲಿ ಅರಿಯಬಹುದು.

೧) ಸಮಾಜವನ್ನರಿಯದ ರಾಜಕಾರಣಿ
ರಾಜಕಾರಣಿಯನ್ನರಿಯದ ಪ್ರಜೆಗಳು
ಪ್ರಜೆಗಳನ್ನರಿಯದ ಸರ್ಕಾರ
ಸರಕಾರವನ್ನರಿಯದ ಅಧಿಕಾರಿಗಳು
ದೇಶವನ್ನೆತ್ತ ಒಯ್ಯುವರಯ್ಯಾ'[೨೫೦]

೨) 'ಲಕ್ಷ್ಮೀಯನ್ನು ನಂಬಿ ಕೆಟ್ಟರು
ಸರಸ್ವತಿಯನ್ನು ನಂಬಿಕೆಟ್ಟರು
ಭಾರತದಲ್ಲೀಗ ದುರ್ಗಿಯದೆ ಆಡಳಿತ
ಪ್ರಭು; ದಿಲ್ಲಿಯ ತಲೆ ಕೆಟ್ಟಿರಲು
ಹಳ್ಳಿಗಳು ಹುಚ್ಚೆದ್ದು ಕುಣಿಯುತ್ತಿವೆ ನೋಡಾ'[೨೫೧]

ಈ ವಚನಗಳಲ್ಲಿ ವ್ಯಕ್ತವಾಗಿರುವ ರಾಜಕೀಯ ಪ್ರಜ್ಞೆ ಹಾಗೂ ಅದರಿಂದುಂಟಾಗಿರುವ ಪರಿಣಾಮದ ಹಿನ್ನೆಲೆಯ ವೈಚಾರಿಕತೆಯನ್ನು ಗಮನಿಸಬಹುದು. ಮೊದಲನೇಯದರಲ್ಲಿ ಇಂದಿನ ರಾಜಕಾರಣಿಗಳು, ಪ್ರಜೆಗಳು, ಸರ್ಕಾರ, ಅಧಿಕಾರಿಗಳು ದೇಶವನ್ನೆತ್ತ ಒಯ್ಯುತ್ತಿದ್ದಾರೆಂಬ ಚಿಂತನೆಯಿದ್ದರೆ, ಎರಡನೇಯದರಲ್ಲಿ ಸ್ತ್ರೀ ದೇವತೆಗಳನ್ನು ನಂಬಿಕೆಟ್ಟವರಂತೆ, ಹಿಂದೆ ದೆಹಲಿಯಲ್ಲಿ ಆಡಳಿತ ಹಿಡಿದ ನಾಯಕಿಯೋರ್ವಳನ್ನು ದುರ್ಗಿಯೆಂದು ಕರೆದಿರುವುದು, ಅವಳ ಕಾಲದ ರಾಜಕೀಯ ಚಿತ್ರವನ್ನು ತುರ್ತುಪರಿಸ್ಥಿತಿಯ ದುರ್ಗಿಯೆಂದು ಅನಾವರಣಗೊಳಿಸುತ್ತದೆ. ಆಗ ದಿಲ್ಲಿಯ ಹುಚ್ಚು ಜನರಂತೆ, ಹಳ್ಳಿಗಳಲ್ಲೂ ಆ ನಾಯಕಿಯ ವರ್ಚಸ್ಸು

ಅತಿಯಾಗಿದ್ದನ್ನು ವೈಚಾರಿಕ ನೆಲೆಯಲ್ಲಿ ಅಭಿವ್ಯಕ್ತಿಸಿದೆ. ಅಂತೆಯೇ ಸಾಂಸ್ಕೃತಿಕ ವೈಚಾರಿಕ ನೆಲೆಯನ್ನು ಮನಗಾಣಿಸುವ ಈ ವಚನವೊಂದು ಹೀಗಿದೆ.

'ಅಪ್ರಾಮಾಣಿಕತೆ, ಡಾಂಭಿಕತೆ, ಹುಸಿ
ಪ್ರತಿಷ್ಠತೆ, ಎಲ್ಲಿದೆಯೋ ಅದು ಹೀನತೆ
ಪ್ರಾಮಾಣಿಕತೆ, ತ್ಯಾಗ, ಸಹಿಷ್ಣುತೆ, ದಯಾ
ವಿನಮ್ರತೆ, ಇವು ಇದ್ದಲ್ಲಿ ಮಾನವೀಯತೆ
ಒಪ್ಪುವುದು ದೇವರ ಘನತೆ
ತಿಳಿಯುವುದು ವಾಸ್ತವಿಕತೆ
ಇದರಲ್ಲಿಯೇ ಮಾನವನ ಘನತೆ'[೨೫೨]

ಈ ಜಗತ್ತಿನಲ್ಲಿ ಯಾವುದಕ್ಕೆ ಏನು ಬೆಲೆ, ಒಬ್ಬ ಸುಸಂಸ್ಕೃತ ವ್ಯಕ್ತಿಯಲ್ಲಿರಬೇಕಾದ ಗುಣಗಳು ಏನಿರಬೇಕು, ಏನಿರಬಾರದು ಎಂಬುದನ್ನು ತಿಳಿಸುವ ಚೆನ್ನಪ್ಪ ಮೋರ್ಗಿಯವರು, ತಮ್ಮ ಇನ್ನೊಂದು ವಚನದಲ್ಲಿ 'ಪ್ರೀತಿಯಿಂದ ತುಂಬಿರಬೇಕು ಹೃದಯ, ಮನದಲ್ಲಿ ತುಂಬಿರಬೇಕು ದಯ, ಮಾತಿನಲ್ಲಿರಬೇಕು ವಿನಯ, ದುರ್ಗುಣಗಳಿಗಾಗಿ ಇರಬೇಕು ಭಯ, ಗುರು ಚನ್ನಬಸವಾ ಇವು ಇದ್ದರೆ ಬೆನ್ನು ಹತ್ತಿ ಬರುವುದು ಜಯ'[೨೫೩] ಎಂದು 'ಸದಾಚಾರ'ನಡೆಯ, ಸಪ್ತ ಸೂತ್ರಗಳನ್ನು ಪರಿಣಾಮಕಾರಿಯಾಗಿ ಹೇಳಿದ್ದಾರೆ.

ಒಟ್ಟಿನಲ್ಲಿ ಈ ಎರಡೂ ಜಿಲ್ಲೆಯ ಆಧುನಿಕ ವಚನ ಸಾಹಿತ್ಯದಲ್ಲಿ 'ವೈಚಾರಿಕ ನೆಲೆ' ರೂಪ ತಾಳಿರುವುದು ಆಯಾ ವಚನಕಾರರ ಅನುಭವದ ನೆಲೆಯ ಮೂಲಕ ಎನ್ನಬಹುದು. ಇಲ್ಲಿಯ ಬದುಕಿನ ಬದಲಾವಣೆಗೆ, ಹಲವು ಆತಂಕಗಳಿಗೆ, ಅಶಾಂತಿಯ ವಾತಾವರಣ ನಿರ್ಮಾಣಕ್ಕೆ, ಮಾನವನ ಅತಿಯಾಸೆ, ಹಾಗೂ ವೈಜ್ಞಾನಿಕ ದುರುಪಯೋಗ, ಜನರ ಮನದಲ್ಲಿನ್ನೂ ತುಂಬಿರುವ ಮೂಢನಂಬಿಕೆ, ಅಂಧವಿಶ್ವಾಸಗಳು ಕಾರಣವೆಂದು ಹೇಳಿರುವುದನ್ನಿಲ್ಲಿ ಅವರ ಕೆಲವು ವಚನಗಳ ಆಧಾರಗಳ ಹಿನ್ನೆಲೆಯಲ್ಲಿ ಅರಿಯಬಹುದು.

## ಟಿಪ್ಪಣಿಗಳು

೧) 'ನಿರುಪಾಧಿ' (ಸಂ) – ಡಾ. ಬಿ.ಕೆ. ಹಿರೇಮಠ – ಪು. ೧೪೩–೪೪

೨) ನಿರಂಜನ (ನಿರುಪಾದೀಶರ ಗೌರವಾಭಿನಂದನ ಸಂಪುಟ) – ಪ್ರ.ಸಂ. ವಿಜಯಕುಮಾರ ಕಟಗಿಹಳ್ಳಿಮಠ – ಪು. ೨೬೩

೩) ಡಾ. ಎಂ. ಚಿದಾನಂದ ಮೂರ್ತಿ – ಸಂಶೋಧನ ತರಂಗ – ಪು. ೧೯೦

೪) ಡಾ. ನಾಗೇಂದ್ರ ಮಸೂತಿ – 'ಬೂದಿ ಗರ್ಭದ ಕೆಂಡ' – ವ.ಸಂ. ೧೫ – ಪು. ೬

೫) ಬಸವರಾಜ ಸಬರದ – ಸಬರದ ಬಸವನ ವಚನಗಳು – ವಚನ ೫೬ – ಪು. ೨೫

೬) ಡಾ. ಸೋಮನಾಥ ಯಾಳವಾರ – 'ಆನು ಒಲಿದಂತೆ ಹಾಡುವ' – ವ.೨೭ – ಪು. ೩೫

೭) ಪ್ರೊ. ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೨೧೫ – ಪು. ೯೧

೮) ಡಾ. ಸೋಮನಾಥ ಯಾಳವಾರ – ವಚನ ಸಾಹಿತ್ಯ; ಸಾಮರಸ್ಯದ ನೆಲೆಗಳು – ಪು. ೧೪

೯) ಗಿರಿಜಾ ಧರ್ಮರೆಡ್ಡಿ – ನಾನೊಂದು ಹುಲ್ಲುಕಡ್ಡಿಯೆಂದು ಉದಾಸೀನವೇಕೆ? – ವ. ೨೩೧ – ಪು. ೭೭

೧೦) ಜಗದೇವಿ ದುಬಲಗುಂಡೆ, ವಚನ ಸುಗಂಧ – ವ.೧೮ – ಪು. ೫

೧೧) ಕರುಣಾ ಸಲಗರ – ಭಾವಧಾರೆ – ವಚನ ೧೪ – ಪು. ೪

೧೨) ನಾಗೇಂದ್ರ ಮಸೂತಿ – ಕೆಂಡಮಲ್ಲಿಗೆ – ವ.೦೬ – ಪು. ೩

೧೩) ವೀರಶೆಟ್ಟಿ ಭಾವುಗೆ – 'ಬೆಳಗಿನೊಳಗಣ ಬೆಳಕು' – ವಚ. ೧೦೮ – ಪು. ೫೪

೧೪) ಮಹೇಶ್ವರಿ ಎಸ್. ಹೇಡೆ – ಭಾವಬಯಲಾದಾಗ – ವ. ೪೫ – ಪು. ೬೫

೧೫) ಡಾ. ಮಹಾದೇವ ಬಡಿಗೇರ – 'ಬದುಕಿನ ವಚನಗಳು' – ವ.೧೨ – ಪು.೪

೧೬) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ.ಸಂ. ೪೩ – ಪು. ೧೯

೧೭) ಬಸವಣ್ಣನವರ ವಚನಗಳು – ವ.ಸಂ. – ಪು.

೧೮) ಜೀವನ ದರ್ಶನ (ಸಂ) ರಮೇಶ ಸ್ವಾಮಿ ಕನಕಟ್ಟಾ – ಪು. ೧೫–೧೬

೧೯) ಗಿರಿಜಾ ಧರ್ಮರಡ್ಡಿ – ವಚನ ಪುಷ್ಪಾಂಜಲಿ – ವ.೧೦೭ – ಪು. ೫೯

೨೦) ಡಾ. ವ್ಹಿ.ಜಿ, ಪೂಜಾರ – ವಚನ ಸಾಹಿತ್ಯ ಸಮೀಕ್ಷೆ – ಪು. ೧೮೮

೨೧) ಎಂ.ಜಿ. ಗಂಗನಪಳ್ಳಿ – ವಚನ ಮಂದಾರ – ವ. ೬೮ – ಪು. ೧೮

೨೨) ವಿರೇಶ ಹಿರೇಮಠ ಹಳ್ಳೂರ – ವಿರೇಶನ ವಚನಗಳು – ವ. ೭ – ಪು. ೪

೨೩) ಡಾ. ಸೋಮನಾಥ ಆಳವಾರ – 'ಅನು ಒಲಿದಂತೆ ಹಾಡುವೆ' – ವ.೫೯ – ಪು. ೫೧

೨೪) ಶಿವಾನಂದ ಮಹಾಸ್ವಾಮಿಗಳು – ವಚನಶಿವ – ವ. ೪೪ – ಪು. ೫೬

೨೫) ವಿಜಯಕುಮಾರ ಜಿ. ಪರುತೆ – ವಚನ ಧಾರೆ – ವ. ೩ – ಪು. ೧

೨೬) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೯ – ಪು. ೧೨

೨೭) ಡಾ. ಜಯಶ್ರೀ ದಂಡೆ – ಸ್ವಭಾವದ ವಚನಗಳು – ವ. ೧೭ – ಪು. ೯೭–೯೮

೨೮) ಗಿರಿಜಾ ಧರ್ಮರಡ್ಡಿ – 'ನಾನೊಂದು ಹುಲುಕಡ್ಡಿಯೊಂದು ಉದಾಸೀನವೇಕೆ?' – ವ.೨೪ – ಪು. ೯

೨೯) ಸಿದ್ಧರಾಮ ಪೋಲೀಸ ಪಾಟೀಲ – 'ಸತ್ಯಜ್ಞನ ವಚನಗಳು' – ವ.೧೭೩ – ಪು. ೯೨

೩೦) ಡಾ॥ ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ.ಸಂ. ೬೫ – ಪು. ೫೪

೩೧) ರಂಜಾನ ದರ್ಗಾ – ಆನು ಒಲಿದಂತೆ ಹಾಡುವೆ – ಸಮಾಲೋಚನೆಯಲ್ಲಿ – ಉ. ೧೫

೩೨) ಡಾ. ಜಯಶ್ರೀ ದಂಡೆ – ಸ್ವಭಾವದ ವಚನಗಳು – ವ.ಸ. ೫೩ – ಪು. ೬೩

೩೩) ಡಾ. ಶೈಲಜಾ ಉಡಚಣ – ಗಿರಿಸುತೆಯ ವಚನಗಳು – ವ.೧ – ಪು. ೧

೩೪) ಡಬ್ಲೂ. ಎಚ್. ಹಡ್ಸನ್ – ಸಾಹಿತ್ಯ ಪ್ರವೇಶ (ಅನುವಾದ ಸಿ.ಪಿ.ಕೆ.) ಪು. ೫೦

೩೫) ಮಹೇಶ್ವರಿ ಹೇಡೆ – ಭವ ಬಯಲಾದಾಗ – ವ.ಸಂ. ೧೭ – ಪು. ೩೭

೩೬) ಡಾ. ವಜ್ರಾ ಪಾಟೀಲ – ವಜ್ರೇಶ್ವರಿಯ ವಚನಗಳು – ವ.ಸಂ.೯ – ಪು. ೩

೩೭) ಶೊಭಾ ಔರಾದೆ – ವಚನಸಿರಿ – ವ.೭ – ಪು. ೩

೩೮) ಎಂ.ಜಿ. ದೇಶಪಾಂಡೆ – ವಚನ ಚಂದ್ರಿಕೆ – ವ.೪೦ – ಪು. ೧೫

೩೯) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೪೩ – ಪು. ೫೬

೪೦) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೧೧೭ – ಪು. ೩೪

೪೧) ಡಾ. ಸೋಮನಾಥ ಯಾಳವಾರ – ವಚನ ಸಾಹಿತ್ಯ; ಸಾಮರಸ್ಯದ ನೆಲೆಗಳು – ಪು. ೨೫

೪೨) ಸೂಗಯ್ಯ ಹಿರೇಮಠ – ಸುಗೊರೇಶ್ವರ ವಚನಗಳು – ವ. ೨೨೫ – ಪು. ೯೫

೪೩) ವೀರಶೆಟ್ಟಿ ಬಾವುಗೆ – ಪ್ರಾತಿನಿಧಿಕ ವಚನಗಳು (ಸಂ) ಶಿವರಾಜ ಪಾಟೀಲ

೪೪) ಡಾ. ಸರಸ್ವತಿ ಚಿಮ್ಮಲಗಿ – ಆಧುನಿಕ ವಚನಗಳು (ಸಂ) ಹಂಶಕವಿ – ಪು.೨೪

೪೫) ಬಿ.ಎಸ್. ಕೂಬಾ – ಶತಕಾಂತ್ಯದ ವಚನ ಶತಕ – ವ. ೧೮ – ಪು. ೧೮

೪೬) ವಿಜಯಕುಮಾರ ಪರುತೆ – ವಚನಧಾರೆ – ವ.ಸಂ. ೩೪ – ಪು. ೧೧

೪೭) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೬ – ಪು. ೩೭

೪೮) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೧೦೨ – ಪು. ೩೦

೪೯) ಶೊಭಾ ಔರಾದೆ – ವಚನ ಸಿರಿ – ವ. ೫೧ – ಪು. ೧೪

೫೦) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೬೨ – ಪು. ೬೧

೫೧) ಡಾ. ಜಯಶ್ರೀ ದಂಡೆ – ಸ್ವಭಾವದ ವಚನಗಳು – ವ. ೪೬ – ಪು. ೬೦

೫೨) ಡಾ. ನಾಗೇಂದ್ರ ಮಸೂತಿ – ಉರಿವ ಕೆಂಡವ ಹೊತ್ತು ವ. ೮೭ – ಪು. ೩೯

೫೩) ಎಂ.ಜಿ. ಗಂಗನಪಳ್ಳಿ – 'ವಚನ ಕಿರಣ' ವ. ೩೪ – ಪು. ೧೨

೫೪) ಮಹೇಶ್ವರಿ ಹೇಡೆ – ಭಾವ ಬಯಲಾದಾಗ – ವ. ೧೮ – ಪು. ೩೮

೫೫) ಶಾಂತಮ್ಮ ಬಲ್ಲೂರ 'ಶಾಸನೇಶ್ವರಿಯ ವಚನಗಳು – ವ. ೩ – ಪು. ೦೧

೫೬) ಜಗದೇವಿ ದುಬಲಗುಂಡೆ – 'ವಚನ ಸುಗಂಧ' – ವ. ೨೮ – ಪು. ೭

೫೭) ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ. ೪, ೯೧ ರಲ್ಲಿ

೫೮) ವಿಜಯಕುಮಾರ ಪುರಂತೆ – ವಚನಧಾರೆ – ವ. ೭ – ಪು. ೨

೫೯) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೪೮ – ಪು. ೧೫

೬೦) ಗಿರಿಜಾ ಧರ್ಮರಡ್ಡಿ – ನಾನೊಂದು ಹುಲುಕಡ್ಡಿಯೆಂದು ಉದಾಸೀನವೇಕೆ? – ವ. ೬೫ – ಪು. ೨೨

೬೧) ವಿಜಯಕುಮಾರ ಪರುತೆ – ವಚನಧಾರೆ – ವ. ೧೮೬ – ಪು. ೫೯

೬೨) ಕಲಾವತಿ ಎಸ್. ಬಿರಾದಾರ – ನುಡಿ ಬೆಳಕು – ವ. ೧೧೩ – ಪು. ೩೮

೬೩) ಸುಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೧೭೬ – ಪು. ೭೬

೬೪) ವಿಶಾಲಾಕ್ಷಿ ಹಿರೇಮಠ – ವಚನಕೇತನ – ವ. ೬೦ – ಪು. ೩೦

೬೫) ಡಾ. ಜಯಶ್ರೀ ದಂಡೆ – ಸ್ವಭಾವದ ವಚನಗಳು – ವ. ೧೧ – ಪು. ೪೪

೬೬) ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ. ೩೧ – ಪು. ೩೨

೬೭) ಬಿ.ಎಸ್. ಖೂಬಾ – ಶತಕಾಂತ್ಯದ ವಚನ ಶತಕ – ವ. ೯೯ – ಪು. ೬೯

೬೮) ವಿ.ಎಂ. ಬಡಿಗೇರ – ಶ್ರೀ ಗವಿಸಿದ್ಧೇಶ್ವರ ವಚನನಗಳು – ವ. ೧೫ – ಪು. ೫

೬೯) ಡಾ. ನಾಗೇಂದ್ರ ಮಸೂತಿ – (ಕೆಂಡ ಮಲ್ಲಿಗೆ) ಪು. ೧೨೨ – ಪು. ೫೭

೭೦) ಡಾ. ಸೋಮನಾಥ ಯಾಳವಾರ – ವಚನ ಸಾಹಿತ್ಯ; ಸಾಮರಸ್ಯದ ನೆಲೆಗಳು – ಪು. ೮೨

೭೧) ಪುಷ್ಪಾ ಜಿ ಕನಕ – ವಚನ ಸುಮ – ವ. ೧೮೪ – ಪು. ೬೨

೭೨) ಬಿ.ಎಸ್. ಖೂಬಾ – ಶತಕಾಂತ್ಯದ ವಚನ ಶತಕ – ವ. ೧ – ಪು. ೧

೭೩) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೯೮ – ಪು. ೮೧

೭೪) ಮಹೇಶ್ವರಿ ಹೇಡೆ – ಭಾವ ಬಯಲಾದಾಗ – ವ. ೧೩ – ಪು. ೩೩

೭೫) ಎಂ.ಜಿ. ಗಂಗನಪಳ್ಳಿ – ವಚನಕಿರಣ – ವ. ೪೫ – ಪು. ೨೫

೭೬) ಡಾ. ಜಯಶ್ರೀ ದಂಡೆ – ಸ್ವಭಾವದ ವಚನಗಳು – ವ. ೬೫ – ಪು. ೬೮

೭೭) ಪ್ರೊ. ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೫೯ – ಪು. ೩೧

೭೮) ಆರ್.ಡಿ.ಜಿ. – ಆಧುನಿಕ ವಚನಕಾರರು – ಪು. ೧೧೦

೭೯) ಡಾ. ಸೋಮನಾಥ ಯಾಳವಾರ – 'ಆನು ಒಲಿದಂತೆ ಹಾಡುವೆ' – ವ. ೨೨ – ಪು. ೩೨

೮೦) ರಘುನಾಥ ಹಡಪದ – ಆಧುನಿಕ ವಚನ ಮಂಜರಿ – (ಸಂ) ಹಂಶಕವಿ – ಪು. ೫೨

೮೧) ಬಿ.ಎಸ್. ಖೂಬಾ – 'ಶತಕಾಂತ್ಯ ವಚನ ಶತಕ' – ವ. ೩೯ – ಪು. ೩೯

೮೨) ಡಾ. ಸರಸ್ವತಿ ಚಿಮ್ಮಲಗಿ – ಎಡಬಿಡಂಗೀದೇವನ ವಚನಗಳು – ವ. ೧೦ – ಪು. ೧೦

೮೩) ದೇಶಾಂಶ ಹುಡಗಿ – ಪ್ರಾತಿನಿಧಿಕ ಆಧುನಿಕ ವಚನಗಳು (ಸಂ) ಶಿವರಾಜ ಪಾಟೀಲ – ಪು. ೧೧೮

೮೪) ಹಂಶಕವಿ – ದತ್ತ ದಿಗಂಬರ ವಚನಗಳು – ವ. ೬೫ – ಪು. ೧೭

೮೫) ವಿಜಯಕುಮಾರ ಪುರಂತೆ – ವಚನ ಧಾರೆ – ವ. ೧೧೧ – ಪು. ೩೫

೮೬) ಕರುಣಾ ಸಲಗಾರ – ಭಾವಧಾರೆ – ವ. ೩೫ – ಪು. ೧೧

೮೭) ರಂಜಾನ ದರ್ಗಾ – ಶರಣರ ಸಮಗ್ರ ಕ್ರಾಂತಿ – ಪು. ೨೪

೮೮) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೧೦೮ – ಪು. ೭೯

೮೯) ಗಿರಿಜಾ ಧರ್ಮರೆಡ್ಡಿ – ನಾನೊಂದು ಹುಲುಕಡ್ಡಿಯೆಂದು ಉದಾಸೀನವೇಕೆ? – ವ. ೨೧೬ – ಪು. ೭೩

೯೦) ಡಾ. ಅಶೋಖ ನರೋಡೆ – ಆಧುನಿಕ ವಚನಕಾರರು – ಪು. ೧೭೫
೯೧) ಎಂ.ಜಿ. ದೇಶಪಾಂಡೆ – ವಚನ ಚದ್ರಿಕೆ – ವ. ೧೯ – ಪು. ೭
೯೨) ವಿ.ಜಿ. ಪೂಜಾರ – ವಚನಸಾಹಿತ್ಯ ಸಮೀಕ್ಷೆ – ಪು. ೧೦೬
೯೩) ಡಾ. ಸೋಮನಾಥ ಯಾಳವಾರ – ಆನು ವಲಿದಂತೆ ಹಾಡುವೆ –ವ. ೪೦ – ಪು. ೪೧
೯೪) ಪ್ರೊ. ಎಸ್.ವ್ಹಿ. ರಂಗಣ್ಣ – ವಿಡಂಬನೆ – ಪು. ೧
೯೫) ಕರುಣಾ ಸಲಗರ – ಭಾವಧಾರೆ – ವ. ೯೩ – ಪು. ೨೭
೯೬) ಡಾ. ಜಯಶ್ರೀ ದಂಡೆ – ಸ್ವಭಾವದ ವಚನಗಳು – ವ. ೧೬ – ಪು. ೭೮
೯೭) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೮೧ – ಪು. ೩೯
೯೮) ಸಿದ್ಧರಾಮ ಪೋಲೀಸ ಪಾಟೀಲ – ಸತ್ಯಜ್ಞನ ವಚನಗಳು – ಭಾಗ ೪ – ಪು. ೭೭
೯೯) ವಿ.ಎಂ. ಬಡಿಗೇರ – ಶ್ರೀ ಗವಿಸಿದ್ಧೇಶ್ವರ ವಚನಗಳು – ವ. ೨೯ – ಪು. ೧೦
೧೦೦) ವಿಜಯಕುಮಾರ ಪರುತೆ – ವಚನಧಾರೆ – ವ. ೯೪ ಹಾಗೂ ೯೭ – ಪು. ೩೦–೩೧
೧೦೧) ಡಾ. ನಾಗೇಂದ್ರ ಮಸೂತಿ – ಬೂದಿ ಗರ್ಭದ ಕೆಂಡ – ವ. ೮೮ – ಪು. ೩೧–೩೨
೧೦೨) ಡಾ. ಶೈಲಜಾ ಉಡಚಣ – ಕೇಳುಮಗಾ – ವ. ೯
೧೦೩) ಮಹೇಶ್ವರಿ ಹೇಡೆ – ಭಾವ ಬುಲಾದಾಗ – ವ. ೨೯ – ಪು. ೪೯
೧೦೪) ವಿಶಾಲಾಕ್ಷಿ ಹಿರೇಮಠ – ವಚನ ಕೇತನ – ವ. ೨೪ – ಪು. ೧೨
೧೦೫) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೩೨ – ಪು. ೧೧
೧೦೬) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೫೪ – ಪು. ೫೩
೧೦೭) ಡಾ. ನಾಗೇಂದ್ರ ಮಸೂತಿ – ಕೆಂಡಮಲ್ಲಿಗೆ – ವ. ೧೦೮ – ಪು. ೫೧
೧೦೮) ದೇಶಾಂಶ ಹುಡಗಿ – ಆಧೂನಿಕ ವಚನ ಮಂಜರಿ – ಪು. ೨೪
೧೦೯) ಜಗದೇವಿ ದುಬಲಗುಂಡಿ – 'ವಚನ ಸುಗಂದ' – ವ. ೨೮ – ಪು. ೭
೧೧೦) ಶೋಭಾ ಅವರಾದೆ – ವಚನಸಿರಿ – ವ. ೮೫ – ಪು.೨೩
೧೧೧) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೭೩ – ಪು. ೨೧
೧೧೨) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೨೧೭ – ಪು. ೯೨
೧೧೩) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೨೦೭ – ಪು. ೬೨
೧೧೪) ವಿಠ್ಠಲರಾವ ಯೋಗಿ – ವಚನಾಮೃತ – ವ. ೧೨೭ – ಪು. ೨೯
೧೧೫) ಡಾ. ಜಯಶ್ರೀ ದಂಡೆ – ಸ್ವಭಾವದ ವಚನಗಳು – ವ. ೪೫ – ಪು. ೫೯ – ೬೦
೧೧೬) ಡಾ. ವಜ್ರಾ ಪಾಟೀಲ – ವಜ್ರೇಶ್ವರಿಯ ವಚನಗಳು – ವ. ೭೭ – ಪು. ೨೦
೧೧೭) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೮೨ – ಪು. ೭೩
೧೧೮) ಸಿದ್ದರಾಮ ಪೋಲಿಸ ಪಾಟೀಲ – ಸತ್ಯಜ್ಞನ ವಚನಗಳು – ವ. ೯೧ – ಪು. ೧೩೯
೧೧೯) ಮಹಾದೇವ ಬಡಿಗೇರ – ಬದುಕಿನ ವಚನಗಳು – ಪು. ೬೮
೧೨೦) ವಿಶಾಲಾಕ್ಷಿ ಹಿರೇಮಠ – ವಚನಕೇತನ – ವ. ೭೦ – ಪು. ೩೫

೧೨೧) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೧೦೭ – ಪು. ೩೧

೧೨೨) ) ಎಂ.ಜಿ. ದೇಶಪಾಂಡೆ – ವಚನಚಂದ್ರಿಕೆ – ವ. ೮೧ – ಪು. ೩೦

೧೨೩) ಎಂ.ಜಿ. ಗಂಗನಪಳ್ಳಿ – ವಚನ ಮಂದಾರ – ವ. ೧೦೭ – ಪು. ೨೮

೧೨೪) ಉರಿವ ಕೆಂಡವ ಹೊತ್ತು – ವ. ೬೭ – ಪು. ೩೦

೧೨೫) ಡಾ. ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ. ೮೩ – ಪು. ೬೩

೧೨೬) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೧೭೯ – ಪು. ೭೭

೧೨೭) ವಿಶ್ವನಾಥ ಬಿರಾದಾಡ – ಆದಿಗುರುನಾಥ ಗಾನಲಹರಿ – ವ. ೩ – ಪು. ೧

೧೨೮) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೬೮ – ಪು. ೬೭

೧೨೯) ವಿಜುಕುಮಾರ ಪರುಂತೆ – 'ವಚನ ಧಾರೆ' – ವ. ೫೪ – ಪು. ೧೮

೧೩೦) ಶೋಭಾ ಔರಾದೆ – ವಚನಸಿರಿ – ವ. ೧೨೭ – ಪು. ೩೪

೧೩೧) ದೇಶಾಂಶ ಹುಡಗಿ – ದಿಗಂಬರ ವಚನಗಳು – ವ. ೨೪೭ – ಪು. ೫೫–೫೬

೧೩೨) ಶಿವಾನಂದ ಮಹಾಸ್ವಾಮಿಗಳು – 'ವಚನ ಶಿವ' – ವ. ೪೦ – ಪು. ೫೨

೧೩೩) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೯ – ಪು. ೩೯

೧೩೪) ಡಾ. ಸೋಮನಾಥ ಯಾಳವಾರ – 'ಆನು ಒಲಿದಂತೆ ಹಾಡುವೆ' – ವ. ೧೦೬ – ಪು. ೭೪

೧೩೫) ಸೂಗಯ್ಯ ಹಿರೇಮಠ ಸೂಗೂರೇಶ್ವರ ವಚನಗಳು – ಪು. ೨೩

೧೩೬) ದೇಶಾಂಶ ಹುಡಗಿ – ದಿಗಂಬರ ವಚನಗಳು – ವ. ೨೪೫ – ಪು. ೫೫

೧೩೭) ಡಾ. ಜಯಶ್ರೀ ದಂಡೆ – ಸ್ವಭಾವದ ವಚನಗಳು – ವ. ೧೧ – ಪು. ೯೫

೧೩೮) ಜಯಶ್ರೀ ದಂಡೆ – ವಿಜಯಕುಮಾರ ಪರುತೆ – ವಚನಧಾರೆ – ವ. ೧೩೩ – ಪು. ೪೨

೧೩೯) ಸ್ವಭಾವದ ವಚನಗಳು – ಪು. ೯೧

೧೪೦) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೬೬ – ಪು. ೬೫

೧೪೧) ಗಿರಿಜ ಧರ್ಮರಡ್ಡಿ – 'ನಾನೊಂದು ಹುಲುಕಡ್ಡಿಯೆಂದು ಉದಾಸೀನವೇಕೆ?' – ವ. ೫೭ – ಪು. ೨೦

೧೪೨) ವಿಶಾಲಾಕ್ಷ ಹಿರೇಮಠ – ವಚನ ಕೇತನ – ವ. ೪೨ – ಪು. ೨೧

೧೪೩) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೨೨೪ – ಪು. ೭೪

೧೪೪) ಡಾ. ಸೋಮನಾಥ ಯಾಳವಾರ – 'ಆನು ಒಲಿದಂತೆ ಹಾಡುವೆ' – ವ. ೦೭ – ಪು. ೨೫

೧೪೫) ಶೋಭಾ ಔರಾದೆ – ಶರಣಸಿರಿ – ವ. ೧೮೦ – ಪು. ೪೯

೧೪೬) ಚನ್ನಪ್ಪ ಮೋರ್ಗೆ – ಗುರುಪ್ರಸಾದ – ವ. ೦೭ – ಪು. ೦೨

೧೪೭) ಜಗದೇವಿ ದುಬಲಗುಂಡೆ – ವಚನ ಸುಗಂಧ – ವ. ೧೦೨ – ಪು. ೨೭

೧೪೮) ಶ್ರೀ ಬಸವಲಿಂಗ ಪಟ್ಟದ್ದೇವರು ಷಟಸ್ಥಲ – ಬಸವಬಳ್ಳಿ (ಸಂ)ಸೋಮನಾಥ ಯಾಳವಾರ – ಪು. ೨೮೫

೧೪೯) ಮಹೇಶ್ವರಿ ಹೇಡೆ – ಭಾವಬಯಲಾದಾಗ – ವ. ೦೫ – ಪು. ೨೫

೧೫೦) ಕರುಣಾ ಸಲಗರ – ಭಾವಧಾರೆ – ವ. ೯೭ – ಪು. ೨೮

೧೫೧) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೬೫ – ಪು. ೬೫

೧೫೨) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೮೯ – ಪು. ೪೨

೧೫೩) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೯೩ – ಪು. ೪೩–೪೪

೧೫೪) ಡಾ. ಸೋಮನಾಥ ಯಾಳವಾರ – 'ಆನು ಒಲಿದಂತೆ ಹಾಡುವೆ' – ವ. ೬೦ – ಪು. ೫೧

೧೫೫) ಎಂ.ಜಿ. ಗಂಗನಪಳ್ಳಿ – ವಚನ ಕಿರಣ – ವ. ೩೪ – ಪು. ೨೦

೧೫೬) ಶಾಂತಮ್ಮ ಬಲ್ಲೂರ – ಶಾಸನೇಶ್ವರಿಯ ವಚನಗಳು – ವ. ೩ – ಪು. ೧

೧೫೭) ವಿಜಯಕುಮಾರ ಪರುತೆ – ವಚನಧಾರೆ – ವ. ೧೪ – ಪು.೫

೧೫೮) ಎಂ.ಜಿ. ಗಂಗನಪಳ್ಳಿ – ವಚನ ಮಂದಾರ – ವ. ೯೩ – ಪು. ೨೪

೧೫೯) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೭ – ಪು. ೬೮

೧೬೦) ಡಾ. ನಾಗೇಂದ್ರ ಮಸೂತಿ – ಬೂದಿ ಗರ್ಭದ ಕೆಂಡ – ವ. ೧೦೦ – ಪು. ೩೫–೩೬

೧೬೧) ದೇಶಾಂಶ ಹುಡಗಿ – ದಿಗಂಬರ ವಚನಗಳು – ವ. ೪೭೫ – ಪು. ೧೦೪

೧೬೨) ದೇಶಾಂಶ ಹುಡಗಿ – ದಿಗಂಬರ ವಚನಗಳು – ವ. ೪೭೬ ೦ ಪು. ೧೦೪–೧೦೫

೧೬೩) ಸೂಗಯ್ಯ ಹಿರೇಮಠ – ಸೂಗೇಶ್ವರ ವಚನಗಳು – ವ. ೬೮ – ಪು. ೩೪

೧೬೪) ಬಸವರಾಜ ಹದನೂರ – ಗಿರಿಸಿದ್ಧಲಿಂಗನ ಪರಮಾನಂದದ ಪಂಚಪದಿಗಳು – ವ. ೩ – ಪು. ೧

೧೬೫) ವಿರೇಶ ಹಿರೇಮಠ – 'ವಿರೇಶನ ವಚನಗಳು – ವ. ೧೦೭ – ಪು. ೫೯

೧೬೬) ಡಾ. ನಾಗೇಂದ್ರ ಮಸೂತಿ – 'ಕೆಂಡಮಲ್ಲಿಗೆ' – ವ. ೯೪ – ಪು. ೪೫

೧೬೭) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೬೭ – ಪು. ೬೬

೧೬೮) ದೇಶಾಂಶ ಹುಡಗಿ – ದಿಗಂಬರ ವಚನಗಳು – ವ. ೧೭೧ – ಪು. ೩೯

೧೬೯) ವಿಜಯಕುಮಾರ ಪರುತೆ – ವಚನಧಾರೆ – ವ. ೧೦ – ಪು. ೩

೧೭೦) ಗಿರಿಜಾ ಧರ್ಮರಡ್ಡಿ – ವಚನ ಪುಷ್ಪಾಂಜಲಿ – ಪು. ೧೦–೧೧

೧೭೧) ವಿವಿಧ (ಸಂ.) ಜಿ.ಎಸ್. ಶಿವರುದ್ರಪ್ಪ – ಬೆಂ.ವಿ.ವಿ. – ಪು. ೨೦

೧೭೨) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೬೭ – ಪು. ೨೦

೧೭೩) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೨೨೨ – ಪು. ೯೪

೧೭೪) ಸಿದ್ಧರಾಮ ಪೋಲೀಸ ಪಾಟೀಲ – ಸತ್ಯಜ್ಞನ ವಚನಗಳು – ಭಾಗ ೪ – ವ. ೧೭,೨೨,೮ – ಪು. ೧೭೯ – ೧೭೮

೧೭೫) ಶಾಂತಮ್ಮ ಬಲ್ಲೂರ – ಶಾಸನೇಶ್ವರಿಯ ವಚನಗಳು – ವ. ೩೪ – ಪು. ೧೦

೧೭೬) ವಿಜಯಕುಮಾರ ಪರುತೆ – ವಚನ ಧಾರೆ – ವ. ೨೪೪ – ಪು. ೭೮

೧೭೭) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೮೪ – ಪು. ೭೪

೧೭೮) ವಿರೇಶ ಹಿರೇಮಠ – ವಿರೇಶನ ವಚನಗಳು – ವ. ೧೦೮ – ಪು. ೫೯

೧೭೯) ಶೋಭಾ ಔರಾದೆ – ವಚನಸಿರಿ – ವ. ೫೯ – ಪು. ೧೬

೧೮೦) ಡಾ. ಸೋಮನಾಥ ಯಾಳವಾರ – ಆನುಒಲಿದಂತೆ ಹಾಡುವೆ – ವ. ೭೨ – ಪು. ೫೭

೧೮೧) ಕಲಾವತಿ ಎಸ್. ಬಿರಾದಾರ – ನುಡಿಬೆಳಗು – ವ. ೧೮ – ಪು. ೧೬

೧೮೨) ಜಿ.ಎಸ್. ಖೋಜಾ – ಶತಕಾಂತ್ಯದ ವಚನ ಶತಕ – ವ. ೭೮ – ಪು. ೭೮

೧೮೩) ಡಾ. ಬಸವರಾಜ ಕಲ್ಗುಡಿ – ವಿವಿಧ (ಸಂ) ಜಿ.ಎಸ್.ಎಸ್. – ಪು. ೭೩

೧೮೪) ದೇಶಾಂಶ ಹುಡಗಿ – ದಿಗಂಬರ ವಚನಗಳು – ವ. ೪೬೩ – ಪು. ೧೦೧

೧೮೫) ಸಿದ್ಧರಾಮ ಪೋಲೀಸ ಪಾಟೀಲ – ಸತ್ಯಜ್ಞನ ವಚನಗಳು – ಭಾಗ –೪– ವ. ೧೭,೩೨,೨೭ – ಪು. ೧೮೨

೧೮೬) ವೀರಶೆಟ್ಟಿ ಬಾವುಗೆ – ಬೆಳಗಿನೊಳಗಣ ಬೆಳಕು – ವ. ೩೭ – ಪು. ೧೯

೧೮೭) ವಜ್ರಾ ಪಾಟೀಲ ವಜ್ರೇಶ್ವರಿ ವಚನಗಳು – ವ. ೧೦೭ – ಪು. ೨೮

೧೮೮) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೨೩೧ – ಪು. ೬೯

೧೮೯) ಡಾ. ಸೋಮನಾಥ ಯಾಳವಾರ – 'ಆನು ಒಲಿದಂತೆ ಹಾಡುವೆ' – ವ. ೮೫ – ಪು. ೯೪

೧೯೦) ಡಾ. ನಾಗೇಂದ್ರ ಮಸೂತಿ – ಬೂದಿ ಗರ್ಭದ ಕೆಂಡ – ವ. ೬೯ – ಪು. ೨೫

೧೯೧) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೨೦೦ – ಪು. ೮೬

೧೯೨) ಡಿ.ವ್ಹಿ.ಜಿ. ಸಂಸ್ಕೃತಿ – ಪು. ೨೦–೨೧ ಕಾವ್ಯಾಲಯ ಪ್ರಕಾಶನ ಮೈಸೂರು

೧೯೩) ಡಾ. ರಂಗಾರೆಡ್ಡಿ ಕೋಡಿರಾಂಪುರೆ –ಟಿಕನ್ನಡ ಜನಪದ ಮತ್ತು ಯಕ್ಷಗಾನ ಸಾಹಿತ್ಯಸಂಪುಟ–ಪ್ರಸ್ತಾವನೆ – ಪು.೩೦

೧೯೪) ಡಾ. ನಾಗೇಂದ್ರ ಮಸೂತಿ – ಉರಿವ ಕೆಂಡವ ಹೊತ್ತು – ವ. ೭೭ – ಪು. ೩೪

೧೯೫) ಬಸವರಾಜ ಹದನೂರೆ – ಗಿರಿಸಿದ್ಧಲಿಂಗನ ಪಂಚಪದಿಗಳು – ವ. ೧೨೦ – ಪು. ೨೨

೧೯೬) ಗಿರಿಜಾ ಧರ್ಮರಡ್ಡಿ – ನಾನೊಂದು ಹುಲುಕಡ್ಡಿಯೆಂದು ಉದಾಸೀನವೇಕೆ? ೨೧೦ – ಪು. ೩೬

೧೯೭) ಕಾಫಸೆ ಜಿ.ಎಸ್. 'ಮಧುರ ಚೆನ್ನ' – ಪು. ೧೫೩

೧೯೮) ಸಿದ್ಧರಾಮ ಪೋಲೀಸ ಪಾಟೀಲ – ಸತ್ಯಜ್ಞನ ವಚನಗಳು – ಭಾಗ ೪ – ವ. ೬೨ – ಪಯು. ೧೬೩

೧೯೯) ವಿ.ಎಂ. ಬಡಿಗೇರ – ಶ್ರೀ ಗವಿಸಿದ್ಧೇಶ್ವರ ವಚನಗಳು – ವ. ೧೭ – ಪು. ೬

೨೦೦) ವಿಶಾಲಾಕ್ಷಿ ಹಿರೇಮಠ – 'ವಚನ ಕೇತನ' - ವ. ೬೧ – ಪು. ೩೧

೨೦೧) ಕಲಾವತಿ ಶಾ. ಬಿರಾದಾರ – ನುಡಿಬೆಳಕು – ವ. ೦೧ – ಪು. ೦೧

೨೦೨) ವಿಶಾಲಾಕ್ಷಿ ಹಿರೇಮಠ – ವಚನ ಕೇತನ – ವ. ೫೧ – ಪು. ೨೬

೨೦೩) ವೀರಶೆಟ್ಟಿ ಬಾವುಗೆ – ಬೆಳಗಿನೊಳಗಣ ಬೆಳಗು – ವ. ೯೧ – ಪು. ೪೬

೨೦೪) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ.೧೫೩ – ಪು. ೪೫

೨೦೫) ಕಲಾವತಿ ಶಾ. ಬಿರಾದಾರ – ನುಡಿಬೆಳಗು – ವ. ೭೬ – ಪು. ೨೫

೨೦೬) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೬೧ – ಪು. ೩೧–೩೨

೨೦೭) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೭೬ – ಪು. ೭೦

೨೦೮) ಡಾ. ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ. ೧೨೬ – ಪು. ೮೪

೨೦೯) ಡಾ. ಚಿತ್ಕಳಾ ಜೆ. ಮಠಪತಿ – ಡಾ. ಶೈಲಜಾ ಉಡಚಣ ಅವರ ಸಮಗ್ರ ಸಾಹಿತ್ಯ – ಪು.೧೧೬

೨೧೦) ಟಿ.ಪಿ. ಅಶೋಕ – ಸಾಹಿತ್ಯ ಸಂದರ್ಭ – ಪು. ೧೦

೨೧೧) ಡಾ. ಮಹದೇವ ಬಡಿಗೇರ – ಬದುಕಿನ ವಚನಗಳು – ವ. ೦೯ – ಪು. ೩
೨೧೨) ಜಿ.ಎಸ್. ಶಿವರುದ್ರಪ್ಪ – ಪ್ರಭುದ್ಧ ಕರ್ನಾಟಕ – ಪು. ೩೮
೨೧೩) ಬಿ.ಎಸ್. ಖೂಬಾ – ಶತಕಾಂತ್ಯದ ವಚನ ಶತಕ – ವ.೬೭ – ಪು. ೬೭
೨೧೪) ಎಂ. ಜಿ. ದೇಶಪಾಂಡೆ – ವಚನ ಚಂದ್ರಿಕೆ – ವ. ೧೪೩ – ಪು. ೫೫
೨೧೫) ಡಾ. ನಾಗೇಂದ್ರ ಮಸೂತಿ – ಬೂದಿಗರ್ಭದ ಕೆಂಡ – ವ. ೨೩ – ಪು. ೦೯
೨೧೬) ಗಿರಿಜಾ ಧರ್ಮರಡ್ಡಿ – ನಾನೊಂದು ಹುಲ್ಲುಕಡ್ಡಿಯೆಂದು ಉದಾಸೀನವೇಕೆ? – ವ. ೯೧ – ಪು. ೩೧
೨೧೭) ವೀರಶೆಟ್ಟಿ ಬಾವುಗೆ – ಬೆಳಗಿನೊಳಗಣ ಬೆಳಗು – ವ. ೩೬ – ಪು. ೧೮
೨೧೮) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೪೮ – ಪು. ೪೭
೨೧೯) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೧೧೧ – ಪು. ೫೦
೨೨೦) ಶಾಂತಮ್ಮ ಬಲ್ಲೂರ – ವಚನಗೊಂಚಲು – ವ. ೧೯೯ – ಪು. ೫೫
೨೨೧) ವೀರಶೆಟ್ಟಿ ಬಾವುಗೆ – ಬೆಳಗಿನೊಳಗಣಬೆಳಗು – ವ. ೧೧೧ – ಪು. ೫೬
೨೨೨) ವಿ.ಎಂ. ಬಡಿಗೇರ – ಶ್ರೀ ಗವಿಸಿದ್ಧೇಶ್ವರ ವಚನಗಳು – ವ. ೯೫ – ಪು. ೩೩
೨೨೩) ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೬೨ – ಪು. ೫೩
೨೨೪) ಚೆನ್ನಪ್ಪ ಮೋರ್ಗೆ – ಗುರುಪ್ರಸಾದ – ವ. ೯೯ – ಪು. ೨೪
೨೨೫) (ಸಂ) ಬಿ.ವ್ಹಿ. ವೀರಭದ್ರಪ್ಪ – ಶಿಕ್ಷಣ ಮತ್ತು ಸಂಸ್ಕೃತಿ – ಪು. ೮೫
೨೨೬) ಡಾ. ಸೋಮನಾಥ ಯಾಳವಾರ – 'ಆನು ಒಲಿದಂತೆ ಹಾಡುವೆ' – ವ. ೬೭ – ಪು. ೫೫
೨೨೭) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೧೩೬ – ಪು. ೩೯
೨೨೮) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೫೦ – ಪು. ೪೮
೨೨೯) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೨೩೦ – ಪು. ೯೭
೨೩೦) ವೀರಶೆಟ್ಟಿ ಬಾವುಗೆ – ಬೆಳಗಿನೊಳಗಣ ಬೆಳಕು – ವ. ೧೦೯ – ಪು. ೫೫
೨೩೧) ಕಲಾವತಿ ಶಾ. ಬಿರಾದಾರ – ನುಡಿಬೆಳಗು – ವ. ೧೫ – ಪು. ೦೬
೨೩೨) ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ. ೭೨ – ಪು. ೫೭
೨೩೩) ಮಹೇಶ್ವರಿ ಹೇಡೆ – ಭಾವ ಬಯಲಾದಾಗ – ವ. ೭೮ – ಪು. ೯೮
೨೩೪) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ.೫೦ – ಪು. ೨೭
೨೩೫) ಡಾ. ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ. ೧೨೪ – ಪು. ೮೩
೨೩೬) ಪ್ರಭಾವತಿ ಚಿಕೋಟೆ – ಶ್ರೀ ಬಂಡೆಪ್ಪ ಖೂಬಾರ ಸಮಗ್ರ ಸಾಹಿತ್ಯ – ಅಪ್ರಕಟಿತ ಕೃತಿ – ಪು. ೧೫೮–೫೯
೨೩೭) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೧೬೨ – ಪು. ೪೭
೨೩೮) ಬಿ.ಎಸ್. ಖೂಬಾ – ಶತಕಾಂತ್ಯದ ವಚನ ಶತಕ – ವ. ೭ – ಪು. ೭
೨೩೯) ಡಾ. ಜಿ. ರಾಮಕೃಷ್ಣ – ವೈಜ್ಞಾನಿಕ ಮನೋಧರ್ಮ – ಪು. ೧ ಕ.ವಿ. ಹಂಪಿ
೨೪೦) ಬಿ.ಎಸ್. ಖೂಬಾ – ಶತಕಾಂತ್ಯದ ವಚನ ಶತಕ – ವ. ೩೩ – ಪು. ೩೩
೨೪೧) ಮಹೇಶ್ವರಿ ಹೇಡೆ – ಭಾವ ಬಯಲಾದಾಗ – ವ. ೭೩ – ಪು. ೯೩

೨೪೨) ಜಿ.ಆರ್. ಲಕ್ಷ್ಮಣರವ –ವೈಜ್ಞಾನಿಕ ಮನೋಧರ್ಮ – (ಸಂ) ಡಾ. ಜಿ. ರಾಮಕೃಷ್ಣ – ಪು. ೩೫

೨೪೩) ಗಿರಿಜಾ ಧರ್ಮರಡ್ಡಿ – 'ನಾನೊಂದು ಹುಲುಕಡ್ಡಿಯೆಂದು ಉದಾಸೀನವೇಕೆ? – ವ. ೧೦೯ – ಪು. ೩೭

೨೪೪) ವಿಜಯಕುಮಾರ ಪರುತೆ – ವಚನ ಧಾರೆ – ವ. ೨೨೬ – ಪು. ೭೨

೨೪೫) ವೀರಶೆಟ್ಟಿ ಬಾವುಗೆ – ಬೆಳಗಿನೊಳಗಣ ಬೆಳಗು – ವ. ೯೩ – ಪು. ೪೭

೨೪೬) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೧೨೭ – ಪು. ೩೭

೨೪೭) ವಿಶಾಲಾಕ್ಷಿ ಹಿರೇಮಠ – ವಚನ ಕೇತನ – ವ. ೯ – ಪು. ೦೫

೨೪೮) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೭೦ – ಪು. ೬೯

೨೪೯) ಡಾ. ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ. ೩೨ – ಪು. ೩೭

೨೫೦) ವೀರಶೆಟ್ಟಿ ಬಾವುಗೆ – ಬೆಳಗಿನೊಳಗಣ ಬೆಳಗು – ವ. ೩೭ – ಪು. ೧೯

೨೫೧) ಡಾ. ಮಹಾದೇವ ಬಡಗೇರ – ಬದುಕಿನ ವಚನಗಳು – ವ ೧೨೬ – ಪು. ೩೭

೨೫೨) ಚೆನ್ನಪ್ಪ ಮೋರ್ಗೆ – ಗುರುಪ್ರಸಾದ – ವ. ೪೩ – ಪು. ೧೧

೨೫೩) ಚೆನ್ನಪ್ಪ ಮೋರ್ಗೆ – ಗುರುಪ್ರಸಾದ – ವ. ೬೩ – ಪು. ೫೫

## ಅಧ್ಯಾಯ – ೬

### ಆಧುನಿಕ ವಚನಗಳ ವಸ್ತು, ಭಾಷೆ ಮತ್ತು ಶೈಲಿ

ಶರಣರ ವಚನಗಳ ಹಿಂದಿನ ಅನುಭವದ ತೀವ್ರತೆಯಾಗಲಿ, ವಚನ ಸೃಷ್ಟಿಯ ಅನಿವಾರ್ಯತೆಯಾಗಲಿ ಇಂದಿನ ಆಧುನಿಕ ವಚನಕಾರರಿಗಿಲ್ಲ. ಆದರೂ ಇವರು ಶರಣರ ವಚನಗಳ ಎತ್ತರ ಬಿತ್ತರಗಳಿಗೆ ಮಾರು ಹೋಗಿ ವಚನ ಪ್ರಕಾರದ ಅಭಿವ್ಯಕ್ತಿ ಸೌಲಭ್ಯ ಸಾಧ್ಯತೆಗಳನ್ನು ತಮ್ಮ ಪ್ರಯೋಗಗಳಿಗೆ ನೆಲೆಯಾಗಿಸುವ ಪ್ರಯತ್ನವನ್ನು ಮಾಡಿದರು. ಹೀಗೆ ತಮ್ಮ ಹಿಂದಿನ ಪ್ರಕಾರದ ಅಭಿವ್ಯಕ್ತಿ ಸಾಧ್ಯತೆಗಳನ್ನು ಮನಗಂಡು, ಸಮಕಾಲೀನ ಆಶೋತ್ತರಗಳ ವೇದಿಕೆಯಲ್ಲಿ ಪ್ರಯೋಗಶೀಲತೆಯನ್ನು ವ್ಯಕ್ತಪಡಿಸಿರುವ ಆಧುನಿಕ ವಚನಕಾರರಿಗೆ ಶರಣ ವಚನಗಳ ಪ್ರೇರಣೆ ಇದೆ.[೧] ಆದರೂ ತಮ್ಮದೇ ಆದ ವಚನ ರಚನಾ ವಿನ್ಯಾಸವನ್ನು ರೂಪಿಸಿರುವ ಆಧುನಿಕರ ಪ್ರಯತ್ನದಲ್ಲಿ ಇತಿ–ಮಿತಿಗಳಿರುವುದನ್ನು ಅಲ್ಲಗಳೆಯಲಾಗುವುದಿಲ್ಲ.

ಆದರೂ 'ಆಧುನಿಕ ಕಾಲದ ವಚನ ಸಾಹಿತ್ಯದ ಅವಶ್ಯಕತೆಯನ್ನು ಆ ಕಾಲವೇ ನಿಂತು ಬರೆಯಿಸಿಕೊಂಡಿತು. ಅದು ಪ್ರಗತಿಪರ ಚಿಂತನೆಯ ಅಭಿವ್ಯಕ್ತಿಯೆಂದು, ಸಾಮಾಜಿಕ ಹೋರಾಟವೊಂದರ ಉತ್ಪಾದನೆಯೆಂದು, ತುಂಬು ಮನಸ್ಸಿನ ಮಾತುಗಳೆಂದೂ, ಸಮಗ್ರ ಕ್ರಾಂತಿಯ ಉಪನಿಷತ್ತಿಯೆಂತಲೂ ಇವುಗಳನ್ನು ಪರಿಭಾವಿಸಲಾಗಿದೆ.[೨] ಈ ಸಾಹಿತ್ಯ ಹುಟ್ಟಿ ಬೆಳೆಯಲು ವಿಚಾರವಂತರ ಕಾಳಜಿಯೇ ಪ್ರಮುಖ ಕಾರಣವೆನ್ನಬಹುದು. ಇದು ಕಾಲಕ್ಕೆ ತಕ್ಕಂತೆ, ಸನ್ನಿವೇಶಕ್ಕೆ ಅನುಗುಣವಾಗಿ ಆಧುನಿಕ ಸಾಹಿತ್ಯದ ಒಂದು ಪ್ರಕಾರವಾಗಿ ನಿರಂತರವಾಗಿ ಹರಿದು ಬರುತ್ತಿದೆ.

ಆಧುನಿಕತೆಗೆ ತಕ್ಕಂತೆ ಈ ವಚನ ಸಾಹಿತ್ಯದ ಆಂತರಿಕ ಹಾಗೂ ಬಾಹ್ಯ ಬೆಳವಣಿಗೆ ಬದಲಾವಣೆಯಾಗುತ್ತ ಸಾಗಿದೆ. ಪರಿಸರ, ಕಾಲ, ಪ್ರದೇಶಕ್ಕನುಗುಣವಾಗಿ ವಾಸ್ತವತೆಗೆ ತಕ್ಕಂತೆ, ಅದು ಬೆಳೆಯುತ್ತ ಸಾಗಿದ್ದು, ಆಧುನಿಕ ವಚನ ಸಾಹಿತ್ಯಕ್ಕೆ ಪ್ರಾದೇಶಿಕವಾದ ಅದರ ವಸ್ತು, ಭಾಷೆ, ಶೈಲಿ, ಆಶಯ ಹಾಗೂ ಅಭಿವ್ಯಕ್ತಿಯ ಮಾರ್ಗವಿರುವುದನ್ನಿಲ್ಲಿ ಗುರುತಿಸಲು ಉದ್ದೇಶಿಸಲಾಗಿದೆ. ಒಂದು ಉತ್ತಮ ಸಾಹಿತ್ಯ ಪ್ರಕಾರವು ಉಳಿದು ಬೆಳೆದು ನಿರ್ದಿಷ್ಟವಾದ ತಿರುವಿನಲ್ಲಿ ನಿಂತಾಗ, ಆ ಸಾಹಿತ್ಯದ ಮೌಲ್ಯಮಾಪನ ಮಾಡಬೇಕಾದ ಜವಾಬ್ದಾರಿ ಸಾಹಿತ್ಯ ವಿಮರ್ಶೆಗಿರುತ್ತದೆ. ಈ ಜವಾಬ್ದಾರಿ ಇಲ್ಲಿ ಅಗತ್ಯವಾಗಿದೆ.[೩] ಎಂದು ಭಾವಿಸಲಾಗಿದೆ. ಈ ಹಿನ್ನೆಲೆಯಲ್ಲಿ ಈ ಎರಡೂ ಜಿಲ್ಲೆಯ ಆಧುನಿಕ ವಚನಕಾರರ ಭಾಷಿಕ ನೆಲೆಯನ್ನು ವಸ್ತು, ಭಾಷೆ, ಶೈಲಿ ಹಾಗೂ ತಂತ್ರಜ್ಞಾನದ ಹಿನ್ನೆಲೆಯಲ್ಲಿ ಕಂಡುಕೊಳ್ಳಲು ಆಶಿಸಲಾಗಿದೆ.

**ವಸ್ತು**

ನದಿಗೆ ಹಳೆನೀರು ಹೋಗಿ ಹೊಸ ನೀರು ಬರುವಂತೆ ಅಂದಂದಿನ ಕಾಲಮಾನಕ್ಕೆ ತಕ್ಕಂತೆ ಈ ವಚನ ಸಾಹಿತ್ಯದ ಆಂತರಿಕ ಹಾಗೂ ಬಾಹ್ಯ ಬೆಳವಣಿಗೆ ಆಗುತ್ತ ಬಂದಿದೆ. ವಾಙ್ಮಯದ ಸ್ವರೂಪದಲ್ಲಿ ಅಲ್ಪ–ಸ್ವಲ್ಪ ಬೆಳವಣಿಗೆ ಕಾಣಿಸಿದರೆ, ಅದರ ವಸ್ತು, ಭಾಷೆ, ಆಶಯ ಹಾಗೂ ಶೈಲಿಯಲ್ಲಿ ಸಾಕಷ್ಟು ಬದಲಾವಣೆಗಳಾದದ್ದು ಕಂಡುಬರುತ್ತದೆ. ಮಾನವ ಜೀವನದ ಶೈಲಿಗಳು ಬದಲಾದಂತೆ, ಸಾಹಿತ್ಯದಲ್ಲಿಯೂ ಸಮಯಕ್ಕೆ ತಕ್ಕಂತೆ ವಸ್ತು–ವಿಚಾರ–ಅಭಿವ್ಯಕ್ತಿ ನೆಲೆಗಳು ಬದಲಾಗುವುದು ಸಹಜ ಹಾಗೂ ನಿತ್ಯನೂತನ ಲಕ್ಷಣವೆನ್ನಬಹುದು.

ಹನ್ನೆರಡನೆಯ ಶತಮಾನದ ವಚನಕಾರರ ಪ್ರೇರಣೆಯಿಂದ ಉದಯವಾಗಿರುವ ಆಧುನಿಕವಚನ ಸಾಹಿತ್ಯದ ವಸ್ತುವಿನ ಮೇಲೆ ಬಸವಾದಿ ಶರಣರ ಜೀವನ ಸಾಧನೆ, ಸಾಕಷ್ಟು ಪರಿಣಾಮ ಬೀರಿದ್ದು, ಮೊದಲ ಘಟ್ಟದ ಹಾಗೂ ಲಿಂಗಾಯತ ನೆಲೆಯ ಹಲವು ವಚನಗಳಲ್ಲಿ ಇದನ್ನು ಸ್ಪಷ್ಟವಾಗಿ ಗುರುತಿಸಬಹುದು.

'ಅಯ್ಯಾ ಎನಗೆ ಶರಣರ ವಚನಗಳೇ ಮಾರ್ಗದರ್ಶಿ
ಅಯ್ಯಾ ಎನಗೆ ಶರಣರ ವಚನಗಳೆ ಧೈರ್ಯ
ಅಯ್ಯಾ ಎನಗೆ ಶರಣರ ವಚನಗಳೆ ಸ್ಥೈರ್ಯ
ಅಯ್ಯಾ ಆಚಾರಪ್ರಿಯ ಬಸವಲಿಂಗಯ್ಯ ನಿಮ್ಮ
ಶರಣರ ವಚನಗಳೇ ಎನಗೆ ಸರ್ವಕಾರಣ ನೋಡಾ'[೪]

ಇಲ್ಲಿಯ ಆಧುನಿಕ ವಚನಕಾರರು ತಮ್ಮ ವಚನಗಳಿಗೆ ಮೂಲ ಸ್ಫೂರ್ತಿ, ಮಾರ್ಗದರ್ಶಿ, ಧೈರ್ಯ ಹಾಗೂ ಸ್ಥೈರ್ಯಗಳು, ೧೨ನೇಯ ಶತಮಾನದ ವಚನಗಳೆಂದು ಹೇಳಿಕೊಂಡಿರುವುದನ್ನು ಗಮನಿಸಬಹುದು. ಶರಣರ ವಚನಗಳು ಹಾಗೂ ಬಸವಾದಿ ಶರಣರನ್ನು ಕೇಂದ್ರವಾಗಿರಿಸಿಕೊಂಡ ವಚನದ ನೆಲೆಯೊಂದು ಈ ರೀತಿ ಇದೆ.

'ನಂಬಿ ಕರೆದರೆ ನೀನೆಷ್ಟು ಹತ್ತಿರ
ನಂಬದೆ ಕರೆದರೆ ನೀನೆಷ್ಟು ದೂರ
ನಂಬಿ ಕರೆದರು ಬಸವಾದಿ ಶರಣರು
ನಂಬದೆ ಬಸವಸಾಗರದಿ ಮುಳುಗಿ ಕರೆಯುತ್ತಲಿದ್ದೇನೆ
ಭವ ಸಾಗರದಿ ಮುಳುಗಿಸದೆ ಕರದಿಷ್ಟಲಿಂಗದ
ಬೆಳಗಿನೊಳು ಬೆಳಗಿಸು ಬಸವ ನಿನ್ನ ಶಿಶು
ಸಿದ್ಧರಾಮ ಪ್ರಿಯೆಳನ್ನು'[೫]

ಬಸವ, ಸಿದ್ಧರಾಮ ಶರಣರನ್ನು ಕೇಂದ್ರವಾಗಿರಿಸಿಕೊಂಡು, ನಂಬಿ, ನಂಬದೆ ಎಂಬ ಎರಡು ವೈರುದ್ಯ ಪದಗಳನ್ನಿಟ್ಟುಕೊಂಡು, ಸಂಸಾರ, ಕರದಿಷ್ಟಲಿಂಗದ ವಿಚಾರ ವಸ್ತುವನ್ನು ಆಧುನಿಕತೆಗೆ ತಕ್ಕಂತೆ ಬಳಸಿಕೊಂಡು ವಚನ ರಚಿಸಿರುವ ವಸ್ತು ವೈಶಿಷ್ಟ್ಯವನ್ನಿಲ್ಲಿ ಕಾಣಬಹುದು. ಡಾ. ಚಿದಾನಂದ ಮೂರ್ತಿಯವರು ನಮ್ಮ ಸಮಕಾಲೀನರು ಅನೇಕರು ವಚನಗಳನ್ನು ಇಲ್ಲಿವೆ. ರೂಪಾಂಶದಲ್ಲಿ ವಚನಗಳಿಗೆ ಹತ್ತಿರವಾದ ಕೃತಿಗಳನ್ನು ರಚಿಸಿದ್ದಾರೆ. ಇಂತಹ ವಚನ ಲೇಖಕರು ನನ್ನ ಗಮನಕ್ಕೆ ಬಂದಂತೆ ಹಸ್ತ ಪ್ರತಿಗಳು ಬಂದಿವೆ[೬] ಎಂದಿದ್ದಾರೆ. ಅಂತಹ ವಚನಗಳ ವಸ್ತು ಶರಣರ ವಚನಗಳೇ ಆಗಿರುವುದನ್ನು ಗಮನಿಸಬಹುದು.

'ಶರಣ ವಚನ ಧರ್ಮಿನಾನಯ್ಯಾ
ನಾನು ವಚನ ವಿಶ್ವಾಸಿಯಯ್ಯಾ
ವಚನಗಳ ಸಂಪ್ರದಾಯಸ್ಥನು ನಾನು ನೋಡಾ
ಧರ್ಮ, ವಿಶ್ವಾಸ, ಸಂಪ್ರದಾಯಗಳು
ವಚನಗಳೇ ಆದ ಕಾರಣ, ಅವು 'ವಚನ' 'ವಾಕ್ಯ'ಗಳು
ಧರ್ಮದ ವ್ಯಾಖ್ಯಾನಗಳು ನೋಡಾ'[೭]

ಎನ್ನುವಂಥಹ ಅನೇಕ ವಚನಗಳ ವಸ್ತು ವಿಷಯ, ಶರಣರು ಹಾಗೂ ಶರಣರ ವಚನಗಳೇ ಆಗಿರುವುದನ್ನು ಮನಗಾಣಬಹುದು. ಇವರ ವಚನಗಳಿಗೆ ಶರಣರ ವಚನಗಳ ರೂಪಾಂಶಗಳಿದ್ದರೂ ಇಂದಿನ ಜನಜೀವನದ ಆಗುಹೋಗುಗಳು, ನಿತ್ಯಕರ್ಮಕ್ರಿಯೆಗಳು, ವಸ್ತುವಾಗಿರುವುದರಿಂದ ಜನಸಾಮಾನ್ಯರಿಗೆ ಅರ್ಥವಾಗುವಂತಿವೆ. ಲೋಕದ ವ್ಯವಹಾರ ನೀತಿ, ಶಿಕ್ಷಣ, ಧರ್ಮ, ಸಮಾಜ, ಸಾಹಿತ್ಯ, ಸಂಸ್ಕೃತಿಯ ಚಿತ್ರಣ, ಹಣ, ವ್ಯವಹಾರ, ಲಂಚ, ಅಧಿಕಾರದ ಹಂಬಲ, ಹೆಣ್ಣುಮಕ್ಕಳ ಸ್ಥಿತಿಗತಿ, ವಿಜ್ಞಾನದ ಪ್ರಯೋಗ, ಹದಗೆಟ್ಟ ರಾಜಕಾರಣ, ಆಧುನಿಕತೆಯ ಆಡಂಬರ ಈ ಮೊದಲಾದ ಪ್ರಚಲಿತ ವಿಚಾರಗಳು ಇಲ್ಲಿ ಅಭಿವ್ಯಕ್ತವಾಗಿವೆ. 'ಮಾತಿನ ಸರಳತೆ, ಅನುಭವದ ತೀವ್ರತೆ, ಆತ್ಮ ವಿಮರ್ಶೆ, ಪ್ರಾಮಾಣಿಕತೆಗಳು ಇಲ್ಲಿ ಮುಪ್ಪುರಿಗೊಂಡು ಸಹಜವಾದ ಕಲೆಗಾರಿಕೆಯಿಂದ ಮೂಡಿ ಬಂದು ಇಂದಿನ ವಚನಗಳ ವಸ್ತುವಾಗಿವೆ. ಅವು ಸಮಕಾಲೀನ ಸಮಾಜಕ್ಕೆ ಹಿಡಿದ ಕನ್ನಡಿಯಂತಿವೆ.[೮] ೧೨ನೇಯ ಶತಮಾನದ ಶರಣರದು ಕೇವಲ 'ಲಿಂಗಾಯತ' ಧರ್ಮವಾಗಿತ್ತು, ಆದರೆ ಆಧುನಿಕ ವಚನಕಾರರು ಎಲ್ಲ ಧರ್ಮ, ಜಾತಿಗಳಿಗೆ ಸೇರಿದವರಾಗಿದ್ದು ವಿಭಿನ್ನ ಧಾರ್ಮಿಕ ನೆಲೆಯುಳ್ಳ ವಚನಗಳು ಇಲ್ಲಿ ಕಾಣಸಿಗುತ್ತವೆ.

'ನಾನೆ ಹಿಂದು
ನಾನೆ ಮುಸ್ಲಿಂ
ನಾನೆ ಕ್ರಿಶ್ಚಿಯನ
ನಾನೆ ಜೈನ, ಬೌದ್ಧ, ಪಾರ್ಸಿ
ನಾನೆ ಸಕಲ ಸೃಷ್ಟಿ, ಶೂನ್ಯ ಬಯಲು
ಪ್ರಭು; ಭಿನ್ನ ಭಾವವುಂಟೇ?'[೯]

ಸರ್ವಧರ್ಮದ ಸಾರವನ್ನು ಹಾಗೂ 'ಧಾರ್ಮಿಕ ಸಾಮರಸ್ಯ'ವನ್ನು ತಿಳಿಸುವ ವಚನವಿದು. ಇಂದಿನ ವಚನಕಾರರು 'ಸಕಲಮತ'ದ ಸಿದ್ಧಾಂತ ಪ್ರತಿಪಾದಕರು ಎಂಬ ಧೋರಣೆಯ ವಚನವಿದು. ಎಲ್ಲ ಧರ್ಮಗಳ ಅಂತಿಮ ಗುರಿ ಶೂನ್ಯ, ಬಯಲೇ ಆಗಿದೆ ಎಂಬ ವಸ್ತುವಿನ ನೆಲೆಯಲ್ಲಿದೆ. ಹಿಂದೆ ಧರ್ಮದ ತತ್ವಗಳನ್ನು ತಿಳಿಸುತ್ತ 'ಬ್ರಹ್ಮಸತ್ಯ ಜಗತ್ತು ಮಿಥ್ಯೆ' ಎಂಬ ರಾಮಾನುಜಾಚಾರ್ಯರ ಸಿದ್ಧಾಂತವನ್ನು ನಂತರದ ಹಲವು ಧರ್ಮಗಳು ಚರ್ಚಿಸಿ ಅಲ್ಲಗಳೆದವು, ಆದರೆ ಇಂದು ಅದು ಸತ್ಯವಾಗಿದೆ. ಎಲ್ಲಿ? ಎಂಬುದನ್ನು ಆಧುನಿಕ ವಚನವೊಂದರಲ್ಲಿ ಗಮನಿಸಬಹುದು.

'ಬ್ರಹ್ಮ ಸತ್ಯ ಜಗತ್ತು ಮಿಥ್ಯೆವೆಂದರು
ಭಾರತೀಯ ದಾರ್ಶನಿಕರಯ್ಯಾ
ಇಂಟರನೆಟ್‌ನ ಮಿಥ್ಯೆ ಲೋಕದಲ್ಲಿ
ಇದು ಸತ್ಯವಾಗಿದೆಯಯ್ಯಾ
ವೆಬ್‌ಸೈಟನ ಸೆಕೆಂಡ ಲೈಫ್‌ನಲ್ಲಿ
ವ್ಯವಹಾರ ಮಾಡಬಹುದಯ್ಯಾ

ಗಂಡು ಹೆಣ್ಣಾಗಿ, ಹೆಣ್ಣು ಗಂಡಾಗಿ
ಮನ ಪರಿವರ್ತನೆ ಯಾಗುವುದಯ್ಯಾ
ನಿಜ ಜೀವನದಲ್ಲಿ ಸಾಧ್ಯವಾಗದ್ದು
ಸೆಕೆಂಡ ಲೈಫ್‌ನಲ್ಲಿ ಸಾಧಿಸುವುದು
ಸೋಜಿಗ ನೋಡಾ'[೧೦]

ಎಂಬಂಥ ಆಧುನಿಕ ವಚನಗಳು ಇಂದಿನ ಬದುಕಿನ ಅನೇಕ ಸತ್ಯಾಂಶಗಳನ್ನು ಅಭಿವ್ಯಕ್ತಿಸುತ್ತ, ಆಧುನಿಕ ಜೀವನದ ವಸ್ತು ವಿಶೇಷತೆಗಳನ್ನು ವಚನಗಳಲ್ಲಿ ಬಳಸಿಕೊಂಡಿರುವುದು ಗಮನಾರ್ಹವಾಗುತ್ತವೆ. ಇಂದಿನ ಯುಗಕ್ಕೆ ತಕ್ಕಂತೆ ಸಾಮಾಜಿಕ ಸಮಸ್ಯೆಗಳೂ ಇಲ್ಲಿಯ ವಚನಗಳಲ್ಲಿ ಅನಾವರಣಗೊಂಡಿರುವುದು ಗಮನಾರ್ಹ ಅಂಶಗಳೆನ್ನಬಹುದು.

'ತುಟಿ ಪಟಪಟ ಬಡಿದು
ವಟಗುಟ್ಟುವ ಮಂತ್ರವಾದಿಗಳ ಮುಖ ನೋಡೆನಯ್ಯಾ
ತಣ್ಣೀರಲ್ಲಿ ಕಣ್ಣಮುಚ್ಚಿ
ಜಪ ಮಾಡುವವರ ಸಂಗವಿನ್ನು ಸಾಕಯ್ಯಾ
ಕ್ರಾಪೂ ಬಿಟ್ಟೂ
ಜುಟ್ಟನ್ನುಳಿಸಿಕೊಂಡಿರುವವರ ಸ್ನೇಹವೇಕಯ್ಯಾ
ಹೊಲೆ ಮಾದಿಗನೆಂದು ನನ್ನ ದೂರ ತಳ್ಳಿ
ಅಹಂಭಾವನೆಯಿಂದ ತಿರುಗುವ
ಕುನ್ನಿಗಳನೇನೆಂಬೆನಯ್ಯಾ.....'[೧೧]

ಇಂದಿನ 'ಜಾತಿವಾದ'ದ ಸಾಮಾಜಿಕ ಸಮಸ್ಯೆಯನ್ನು ಬಿಚ್ಚಿ ತೋರಿಸುವ ವೈಚಾರಿಕ ನೆಲೆಯ ವಚನವಿದು. ಏನೇನೂ ವಟಗುಡುತ್ತ ಮಂತ್ರವಾದಿಗಳೆನಿಸಿಕೊಂಡವರು, ತಣ್ಣೀರಲ್ಲಿ ಮುಳುಗಿ ಜಪಮಾಡುವುದಾಗಿ ಹೇಳುವವರು, ತಲೆಯ ಮೇಲೊಂದು ಜುಟ್ಟು ಬಿಟ್ಟುಕೊಂಡವರು, ತಾವೇ ಶ್ರೇಷ್ಠವೆಂದು ಅಹಂಭಾವದಿಂದ ಮೆರೆಯುತ್ತ, ಕೆಲವರನ್ನು ಕೀಳಾಗಿ ಕಾಣುವ ಅಸ್ಪೃಶ್ಯಭಾವ ಇನ್ನೂ ಮರೆಯಾಗಿಲ್ಲದ ಚಿಂತನೆ ಇಲ್ಲಿದೆ. ಅಂಥವರನ್ನು ದೂರವಿರಿಸಿಬೇಕೆನ್ನು ಈ ವಚನ ಅನುಭವದ ಹಿನ್ನೆಲೆಯಲ್ಲಿ ರಚನೆಯಾಗಿದೆ.

'ಕಾವ್ಯ' ಎಂಬುದು ಭಾಷೆಯ ಮೂಲಕ ನಡೆಯುವ ಒಂದು ಪ್ರಕ್ರಿಯೆ. ಭಾಷೆಯು ಮೂಲತಃ ಸಂವಹನಕ್ಕಾಗಿ ಹುಟ್ಟಿಕೊಂಡಿರುವುದಾದರೂ, ಕವಿ ಬಳಸುವ ಭಾಷೆಗೆ ತನ್ನದೇ ಆದ ಸ್ವರೂಪವಿರುತ್ತದೆ ಒಂದು ಭಾಷೆಯಲ್ಲಿನ ಪದಗಳು, ಪದಪುಂಜಗಳು ಯಾವ ಯಾವ ಅರ್ಥವಂತಿಕೆಯನ್ನು ಒಳಗೊಂಡಿರುತ್ತವೆಂಬ ಜ್ಞಾನ ಕವಿಯದಾಗಿರುತ್ತದೆ.[೧೨] ಹೀಗಾಗಿ ಭಾಷೆಯನ್ನು ವಸ್ತುವಿಗನುಗುಣವಾಗಿ ರಮಣೀಯತೆಗೊಯ್ಯಲು ಕವಿ ಏನೇನು ಮಾಡಬೇಕೆಂಬುದನ್ನು ಅರ್ಥೈಸಿಕೊಂಡಿರುತ್ತಾನೆ. ಈ ಹಿನ್ನೆಲೆಯಲ್ಲಿ ಕಲಬುರ್ಗಿ ಹಾಗೂ ಬೀದರ ಜಿಲ್ಲೆಯ ಕವಿಗಳು ತಮ್ಮ ಪರಿಸರದ ಭಾಷಾವೈಶಿಷ್ಟ್ಯಗಳಿಗೆ ಒಳಗಾಗಿರುವುದು ಅವರ ಅಭಿವ್ಯಕ್ತಿಯಲ್ಲಿ ಎದ್ದು ಕಾಣುತ್ತದೆ.

'ಹೆರವರ ತಲೆಯಲ್ಲಿ ಬದುಕುವ ಹೇನಿನಂತೆ
ಕೆಚ್ಚಲ ಬದಿಯಲ್ಲಿ ಬದುಕುವ ಉಣ್ಣೆಯಂತೆ

ಬಚ್ಚಲ ಗುಂಡಿಯಲ್ಲಿ ಬದುಕುವ ಬಾಲ ಹುಳುವಿನಂತೆ
ಪ್ರಜಾಪ್ರಭುತ್ವದಲ್ಲಿ ಕುಟಿಲರಾಜಕಾರಣಿಗಳು
ಬದುಕುತ್ತಿರುವರೆಂದ ದಿಗಂಬರ ಕರಿಬಸವೇಶ್ವರ'[೧೩]

ಬೀದರ ಭಾಷೆಯ ಗುಣಲಕ್ಷಣಗಳನ್ನು ಹೊತ್ತುಕೊಂಡು ಅಭಿವ್ಯಕ್ತಗೊಂಡಿರುವ ಇಲ್ಲಿಯ ಕನ್ನಡ ಭಾಷೆ, ವಸ್ತುವಿಗನುಗುಣವಾಗಿ ಪ್ರಾದೇಶಿಕ ಬಳಕೆಯ ಪದಗಳನ್ನು ಬಳಸಿಕೊಂಡಿದೆ. ಹೆರವರು, ಹೇನು, ಕೆಚ್ಚಲ, ಉಣ್ಣೆ, ಬಚ್ಚಲಗುಂಡಿ, ಬಾಲಹುಳ, ಕುಟಿಲ, ಕರಿಬಸವೇಶ್ವರ ಮುಂತಾದ ಪದಗಳು ಪ್ರಾದೇಶಿಕ ಅರ್ಥವಂತಿಕೆಯ ಹಿನ್ನೆಲೆಯಲ್ಲಿ, ಪ್ರಜಾಪ್ರಭುತ್ವದಲ್ಲಿ, ಕುಟಿಲ ರಾಜಕಾರಣಿಗಳ ಬದುಕನ್ನು ಬಯಲಿಗೆಳೆಯುತ್ತದೆ. ಆಡು ನುಡಿಯ ಬೀದರ ಕನ್ನಡದ ಶಬ್ದಕೋಶವನ್ನು ರಚಿಸಿರುವ ದೇಶಾಂಶ ಹುಡಗಿಯವರದು ಅಚ್ಚ ಬೀದರ ಕನ್ನಡ ನುಡಿ, ಜಾನಪದ ಶೈಲಿಯ ಇವರ ಹಾಡುಗಳು, ಬರಹಗಳು ಗಮನ ಸೆಳೆವಂತೆ ಇವರ ಆಧುನಿಕ ವಚನಗಳು ಭಾಷೆಯ ದೃಷ್ಟಿಯಿಂದ ಪ್ರಾದೇಶಿಕ ಮಹತ್ವದ್ದೆನಿಸುತ್ತವೆ.

'ಕುಡಿ ಕುಡಿದು ಮಡಿದರಯ್ಯಾ ಹಲವರು
ದುಡಿ ದುಡಿದು ಮಣ್ಣಾದರಯ್ಯಾ ಕೆಲವರು
ಹೊಡೆದಾಡಿ ಮಡಿದರಯ್ಯಾ ಅರಿಯದವರು
ತಿಂದು ತಿಂದು ತೀರಿಕೊಂಡರಯ್ಯಾ ಉಳ್ಳವರು
ನಿನ್ನ ನೆನೆದು ಲೀನವಾದರಯ್ಯಾ ಕೆಲವೇ ಕೆಲಬರು
ಗುರುನಂಜೇಶ್ವರ'[೧೪]

ಕಲಬುರ್ಗಿ ಜಿಲ್ಲೆಯ ಈ ವಚನಕಾರರು ಅಲ್ಲಿಯ ಆಡು ನುಡಿಯಲ್ಲಿರುವ ಕುಡಿದು, ಕುಡಿದು ದುಡಿದು, ದುಡಿದು ಹೊಡೆದಾಡಿ, ತಿಂದು ತಿಂದು ತೀರಿಕೊಂಡ, ಉಳ್ಳವರು, ಕೆಲಬರು ಇಂಥ ಪದಗಳನ್ನು ಉಪಯೋಗಿಸಿಕೊಂಡು ವಚನ ರಚಿಸಿರುವುದು ಕಂಡುಬರುತ್ತದೆ. ಆದರೂ ಶಿಷ್ಟ ಕನ್ನಡವನ್ನು ಉಪಯೋಗಿಸಿಕೊಂಡಿರುವುದು ಎದ್ದು ಕಾಣುತ್ತದೆ. ಇಲ್ಲಿಯ ಹೆಚ್ಚಿನ ವಚನಕಾರರು ಶಿಕ್ಷಕರು, ಅಧ್ಯಾಪಕರು, ವೈದ್ಯರು, ಸಹಾಯಕ ಹುದ್ದೆಯಲ್ಲಿರುವವರೇ ಆಗಿರುವುದರಿಂದ ಆಡುನುಡಿ ಹಾಗೂ ತಮ್ಮ ಪರಿಸರದ ಜೀವನಾನುಭದ ಭಾಷೆಗಳ ಪ್ರಭಾವವನ್ನು ದಕ್ಕಿಸಿಕೊಂಡು ಅಭಿವ್ಯಕ್ತಪಡಿಸಿರುವುದು ವಚನಗಳಲ್ಲಿ ಕಾಣುತ್ತದೆ. ಬೀದರ ಗ್ರಾಮ್ಯದ ವಚನಕಾರರ ಭಾಷೆಯಲ್ಲಿ ಜಾನಪದೀಯ ಅಂಶಗಳು ಹೆಚ್ಚಾಗಿ ಕಾಣುತ್ತವೆ. ಶಿಷ್ಟ ಕನ್ನಡ ಆಡುನುಡಿಯೊಂದಿಗೆ ಬೀದರ ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಉರ್ದು, ಹಿಂದಿ ಪದಗಳ ಸಮ್ಮಿಲನ ಕೆಲವು ವಚನಗಳಲ್ಲಿ ಕಾಣಸಿಗುತ್ತದೆ.

'ಹೇ ಪರಮಾತ್ಮ,
ನೀನೊಬ್ಬ ದಿಕ್ಕಿಲ್ಲದ ಪರದೇಶಿ
ಭಕ್ತರ ಕೈತುತ್ತು ಮೆಚ್ಚಿದ ಬಿಕನಾಶಿ
ನಿನಗೆ ಕೀರ್ತಿ ಬಂದದ್ದು ನಿನ್ನ ಭಕ್ತರಿಂದ
ನೀನು ಭಕ್ತರ ಗುಲಾಮ ನೋಡಾ
ದಿಗಂಬರ ಕರಿಬಸವೇಶ್ವರ'[೧೫]

ಈ ವಚನದಲ್ಲಿ ಬಳಕೆಯಾಗಿರುವ ಪರದೇಶಿ, ಬಿಕನಾಶಿ, ಗುಲಾಮ ಮೊದಲಾದ ಉರ್ದು ಹಾಗೂ ಹಿಂದೀ ಪದಗಳನ್ನು ಕಾಣಬಹುದು. ಇಂತಹ ಪದಗಳು ಬೀದರ ಜಿಲ್ಲೆಯ ವಚನಕಾರರಲ್ಲಿ ಸಹಜವಾಗಿ ಬಂದಿವೆ.

'ಜಗವೊಂದು ಕಿಕ್ಕಿರಿದ ಸಂತೆ
ಜೀವಿಗಳು ದೇವನ ಆಟಿಕೆಗಳು
ದೇವ ಸಂಕೇತದ ಇಂಗಿತವನರಿತು
ಬಾಳಿದಡೆ ಸಾಫಲ್ಯ, ಕಟ್ಟಿಟ್ಟ ಬುತ್ತಿಯೆಂದ
ಶರಣ ಕಿರಣ ಪ್ರಿಯ ಮಾಣಿಕನು'೧೬

ಬೀದರದಲ್ಲಿ ಇಂದಿಗೂ ಬಳಕೆಯಾಗುತ್ತಿರುವ ಮೂಲ ಕನ್ನಡ ಪದಗಳಾದ ಕಿಕ್ಕಿರಿದು, ಸಂತೆ, ಆಟಿಕೆ, ಇಂಗಿತ, ಕಟ್ಟಿಟ್ಟ ಬುತ್ತಿ' ಎಂಬಂತಹುಗಳನ್ನು ಕಾಣುತ್ತೇವೆ. 'ಬಾಳಿದಡೆ ಸಾಫಲ್ಯ' 'ಕಟ್ಟಿಟ್ಟ ಬುತ್ತಿ' ಎಂಬ ನುಡಿಕಟ್ಟು ಆಡುನುಡಿಯ ಸೊಗಸಾಗಿದೆ ಆಧುನಿಕ ವಚನಗಳಲ್ಲಿ ಬೆಡಗು ಅಥವಾ ಬೆರಗಿನ ವಚನಗಳೂ ಗಮನ ಸೆಳೆಯುತ್ತವೆ.

ಒಂದು ಗಿಡಕ್ಕೆ ಬೇರು ಒಂದು
ಟೊಂಗೆಗಳು ಹಲವು ನೋಡಾ
ಗಿಡದ ಚಲುವ ವರ್ಧಿಸುವ
ಚಿಗಿತ ತಳಲ್‌ಗೊಳ್ವ
ಎಲೆಗಳು ತುಂಬಾ ನೋಡಾ
ನಸುಗೆಂಪಿನೊಂದಿಗೆ ತಳಿತಪರ್ಣ
ಹರಿತ ವರ್ಣಕ್ಕೆ ತಿರುಗಿದುದಿದು
ಸೋಜಿಗ ಕಾಣಾ, ನಿಜಗುರು ಮಹಾಂತಲಿಂಗ'೧೭

ಒಂದು ಮನೆಯನ್ನೋ, ಒಂದು ಸಮಾಜವನ್ನೋ ಅಥವಾ ಒಂದು ದೇಶದ ಸ್ಥಿತಿಗತಿಯನ್ನು ಬೆಡಗಿನ ಮೂಲಕ ತಿಳಿಸುವ ವಚನವಿದು. ಆದರೆ ಇಲ್ಲಿ ಪ್ರಕೃತಿಯೇ ವಚನಗಳಿಗೆ ವಸ್ತುವಾಗಿದೆ ಎನಿಸಿದರೂ, ಅದರಲ್ಲಿಯ ಅಭಿವ್ಯಕ್ತಿ ತಂತ್ರ, ಪದಗಳ ಬಳಕೆಯು ಮಾನವನ ಬದುಕಿನ ವಿಸ್ತಾರವನ್ನು ಹಾಗೂ ಅದರ ಅಲ್ಪಾಯುಷ್ಯತನವನ್ನು ಸೂಚಿಸುವಂತಿದೆ. ಸಮಾಜ ಅಥವಾ ದೇಶದಲ್ಲಿಯ ಒಂದು ವ್ಯವಸ್ಥೆಗನುಗುಣವಾಗಿ ಮನುಷ್ಯ ಬದಲಾಗುತ್ತ, ಇಳಿಕೆಯ ಕಡೆಗೆ ಜಾರುವ ದೃಷ್ಟಿಕೋನ ಇಲ್ಲೆಲ್ಲ ಕಾಣಸಿಗುತ್ತದೆ.

'ಎಂಟು ಕಂಬದ ಮೇಲೆ
ಒಂಟಿ ಮನೆ ಕಾಣುತಿದೆ
ಮಿಂಚುವ ಮನೆಯ ಮೇಲೆ
ಪಂಚ ಕಳಶ ಹೊಳೆಯುತಿದೆ
ಆರು ವೈರಿಗಳು ಏರಿಬಂದಿದ್ದಾರೆ
ಏಳು ಸೈನಿಕರು ಹತರಾಗಿದ್ದಾರೆ
ಎರಡಳಿದು ಒಂದಾದ ಜೀವ

ಕೂಗಿ ಕರೆಯುತಿದೆ ನೋಡಾ ಸಬರದ ಬಸವ[೧೮]

ಎನ್ನುವಲ್ಲಿ ಆ ಬೆರಗನ್ನು ಕಾಣಬಹುದು. ಇದೊಂದು 'ಲಿಂಗಾಯತ' ಧರ್ಮ ತತ್ವಸಿದ್ಧಾಂತಗಳ ಹಿನ್ನೆಲೆಯಲ್ಲಿ ರಚನೆಗೊಂಡಿರುವ ವಚನವಾಗಿರುವಂತಿದೆ. ಅಷ್ಟಾವರಣ, ಪಂಚಾಚಾರ, ಅರಿಷಡ್‌ವರ್ಗ, ಸಪ್ತ ವ್ಯಸನಗಳನ್ನು ಉಲ್ಲೇಖಿಸುತ್ತ, ದ್ವಂದ್ವಭಾವವಳಿದ ಜೀವಿಯು ಏಕೋಭಾವ ಹೊಂದಿನಿಂತ ಸಾಧನಾ ಪಥವನ್ನು ಅರುಹಿತ್ತಿರುವುದು. ಆಧುನಿಕ ವಚನ ಸಾಹಿತ್ಯ ಜಾತಿ, ಮತ, ಪಂಥಗಳೆಂಬ ಭೇದವಿಲ್ಲದೆ ಸರ್ವತೋಮುಖ ಬೆಳವಣಿಗೆಯನ್ನು ಸೂಚಿಸುತ್ತದೆ. ಈ ವಚನ ಸಾಹಿತ್ಯಕ್ಕೆ ವಸ್ತುವಾಗಿ ಕಾಣುವ ಪ್ರಕೃತಿ, ಆಧ್ಯಾತ್ಮ, ಸಾಮಾಜಿಕ ವ್ಯವಸ್ಥೆಗಳಲ್ಲಿ ತನ್ನವೆಂಬ ಭಾವ ಬೆಳೆಯಬೇಕೆಂಬ ಆಲೋಚನೆಗಳೂ ಇಲ್ಲಿವೆ.

ಆಧುನಿಕ ವಚನಕಾರರ ಇಲ್ಲಿಯ ವಚನಗಳಲ್ಲಿ ರಚನೆಯ ವಿನ್ಯಾಸಗಳಲ್ಲೂ ಸಾಕಷ್ಟು ಭಿನ್ನತೆಗಳಿರುವುದನ್ನು ಗಮನಿಸಬಹುದು. ಕನಿಷ್ಠ ಮೂರು ಸಾಲಿನ ವಚನಗಳಿಂದ ಹಿಡಿದು ೧೫-೧೬ ಸಾಲಿನ ವಚನಗಳ ರಚನೆಯಿದೆ. ಸರ್ವಜ್ಞನ ವಚನಗಳನ್ನು ಹೋಲುವ ಸಿದ್ಧರಾಮ ಪೋಲೀಸ ಪಾಟೀಲರ 'ಸತ್ಯಜ್ಞ'ನ ವಚನಗಳು ಮೂರು ಸಾಲಿನ ವಚನಗಳು. ಶ್ರೀಮತಿ ಪುಷ್ಪ ಕನಕಾ ಅವರವು ೪ ಸಾಲಿನ ವಚನಗಳು, ಎಂ.ಜಿ. ಗಂಗನಪಳ್ಳಿ ಹಾಗೂ ಎಂಜಿ. ದೇಶಪಾಂಡೆಯವರವು ೪-೫-೬ ಸಾಲಿನ ವಚನ ರಚನೆಗಳಿವೆ. ಬಸವರಾಜ ಹದನೂರೆಯವರವು 'ಪಂಚಪದಿಗಳು' ನಾಗೇಂದ್ರ ಮಸೂತಿ, ಬಸವರಾಜ ಸಬರದ ಅವರವು ೬ ಸಾಲಿನಿಂದ ಹಿಡಿದು ೧೬ ಸಾಲಿನ ವಚನಗಳಿವೆ.. ಸೋಮನಾಥ ಯಾಳವಾರ, ಪ್ರೊ. ಸೂಗಯ್ಯ ಹಿರೇಮಠ, ದೇಶಾಂಶ ಹುಡಗಿ, ವೀರಶೆಟ್ಟಿ ಬಾವುಗೆ ಜಯಶ್ರೀ ದಂಡೆ, ಚನ್ನಣ್ಣ ವಾಲಿಕಾರರವು ವಿಭಿನ್ನ ನೆಲೆಯಲ್ಲಿವೆ. ಅಂತೆಯೇ ಸರಸ್ವತಿ ಚಿಮ್ಮಲಗಿ, ಜಯಶ್ರೀ ದಂಡೆ, ಶೈಲಜಾ ಉಡಚಣ ಅವರವು ಗದ್ಯಶೈಲಿ ಪ್ರಧಾನ ವಚನಗಳಿರುವುದನ್ನು ಗಮನಿಸಬಹುದು.

'ಅಂಕಿತನಾಮ' ಪದ್ಧತಿಯಲ್ಲಿ ಆಧುನಿಕ ವಚನಕಾರರು ಬಸವಾದಿ ಶರಣರ ಕ್ರಮವನ್ನೇ ಅನುಸರಿಸಿರುವುದು ಕಂಡುಬರುತ್ತದೆ. ಆದರೆ ಇಲ್ಲಿ ಅವರ ಇಷ್ಟದೈವಗಳು, ಹೆಸರುಗಳು, ವಿಡಂಬನಾತ್ಮಕ ಹೆಸರುಗಳು, ವಚನಕಾರರ ದಂಪತಿಗಳ ಜೋಡಿ ಹೆಸರುಗಳು, ಅವರವೇ ಹೆಸರುಗಳಿರುವುದು ಕಂಡು ಬರುತ್ತದೆ ಕೆಲವರು ೧೨ನೇಯ ಶತಮಾನದ ಶರಣರ ಹೆಸರುಗಳನ್ನು ಕೆಲವು ತತ್ವಗಳ ಹಿನ್ನೆಲೆಯಲ್ಲೂ ಜೋಡಿಸಿಕೊಂಡಿದ್ದಾರೆ. ಉದಾಹರಣೆಗೆ 'ಆಚಾರ ಪ್ರಿಯ ಬಸವಲಿಂಗ' 'ಸೋಮಲೋಚನ ಪ್ರಿಯ ಬಸವಣ್ಣ' 'ಬಸವಲಿಂಗ' 'ಕೇಳುಮಗಾ' 'ಸೂಗೂರೇಶ್ವರಾ' 'ದಿಗಂಬರ ಕರಿಬಸವೇಶ್ವರ' 'ಮಾಣಿಕ ವಿಠ್ಠಲ' 'ಶರಣ ಕಿರಣ ಪ್ರಿಯ ಮಾಣಿಕ' 'ಗುರುಸಿದ್ಧ' 'ಗುರುನಂಜೇಶ್ವರ' 'ಪರಮಾನಂದ' 'ನನ್ನಶಿವ' 'ವೀಪ್ರಬಾದಪ್ರಿಯ ವರಗುರು ಬಸವೇಶ' 'ಗುರು ಚನ್ನಬಸವ' 'ಈಶ್ವರ ಪ್ರಿಯ ಶಿವಲಿಂಗ' 'ಗವಿಸಿದ್ಧೇಶ್ವರ' ಮೊದಲಾದವುಗಳನ್ನಿಲ್ಲಿ ಗಮನಿಸಬಹುದು.

ವಚನ ವೈಶಿಷ್ಟ. ಆಕರ್ಷಕ ಸಾಹಿತ್ಯ ಪ್ರಕಾರವೆನಿಸಿದ್ದರಿಂದ ಅದರ ಎಲ್ಲ ಲಕ್ಷಣಗಳನ್ನು ಅಳವಡಿಸಿಕೊಂಡು ಎಲ್ಲ ಧರ್ಮದವರೂ ಇಲ್ಲಿ ವಚನಗಳನ್ನು ರಚಿಸಿದ್ದಾರೆ. ಎಂ.ಜಿ. ದೇಶಪಾಂಡೆಯವರ ಈ ರಚನೆಯನ್ನು ಗಮನಿಸಬಹುದು.

'ಕುಂತಿ ಕೃಷ್ಣನಲ್ಲಿ
ವರಗಳ ಬೇಡದೆ ಕಷ್ಟ

ಬೇಡಿದಳು. ಕಾರಣವೇನೆನಲು
ದುಃಖಗಳೇ ಸದಾ ದೇವರನ್ನು
ಧ್ಯಾನಿಸುವಂತೆ ಮಾಡುತ್ತವೆ
ಎಂದಳು ಮಾಣಿಕ ವಿಠಲ'[೧೯]

ಹಾಗೆಯೇ –

ರಾಮನಿಗು ತಪ್ಪಲಿಲ್ಲ ಹನುಮನಿಗೂ ಕಾಡಿತಲ್ಲ
ವನವಾಸ ಉಪವಾಸ ಪಾಂಡವರಿಗು ಬಿಡಲಿಲ್ಲ
ದೇವಾನು ದೇವತೆಗೂ ಶನಿಕಾಟ ತಪ್ಪಲಿಲ್ಲ
ನಿನಗೂ ಅಷ್ಟೇ ಮನುಜ ಎನ್ನದತ್ತ ದಿಗಂಬರಾ'[೨೦]

ಎಲ್ಲ ಧರ್ಮ, ತತ್ವಗಳ, ಮಹಾಪುರುಷರ ಹೆಸರಿನಲ್ಲಿ ಆಧುನಿಕ ವಚನಗಳು ರಚನೆಯಾಗುತ್ತಿದ್ದು ಈ ಸಾಹಿತ್ಯ ಪ್ರಕಾರವು ತೀವ್ರತರವಾಗಿ ಬೆಳೆಯುತ್ತಿರುವುದು ಗಮನಾರ್ಹ ಅಂಶವೆನ್ನಬಹುದು. ಶರಣರ ವಚನಗಳ ಪ್ರಭಾವವನ್ನು ದಕ್ಕಿಸಿಕೊಂಡಿದ್ದರೂ ಸಹ ಇಂದಿನ ವಚನಕಾರರ ವಸ್ತು ವಿಷಯ, ಶೈಲಿ ಹಾಗೂ ತಾಂತ್ರಿಕ ನುಡಿಯಲ್ಲಿ ತಮ್ಮದೇ ಆದ ಭಿನ್ನತೆಯನ್ನು ಉಳಿಸಿಕೊಂಡು ಮುನ್ನಡೆದಿರುವುದು ಎದ್ದು ಕಾಣುತ್ತದೆ. ಇಲ್ಲಿಯ ವಚನಗಳ ವಸ್ತುವಿನಲ್ಲಿ ಪರಿಸರಕ್ಕೆ ತಕ್ಕಂತಹ ಅಸಮಾನತೆಗಳು, ಹಲವು ನೆಲೆಯಲ್ಲಿ ಅಭಿವ್ಯಕ್ತಿಗೊಂಡಿದ್ದನ್ನು ನೋಡುತ್ತೇವೆ. ಈ ಅಸಮಾನತೆ ಧರ್ಮ, ಜಾತಿ, ವರ್ಗಭೇದಗಳಲ್ಲಷ್ಟೇ ಅಲ್ಲ, ಲಿಂಗಭೇದಗಳಲ್ಲಿ ಇಂದು ಅತಿಯಾಗಿರುವುದನ್ನು ಕೆಲವು ವಚನಕಾರರು ಅಭಿವ್ಯಕ್ತಿಸುತ್ತಾರೆ.

**ಸ್ತ್ರೀವಾದಿ ಚಿಂತನೆ**

ಹೆಣ್ಣು ಮಕ್ಕಳನ್ನು ಕುರಿತಿರುವ ಅನೇಕ ವಿಷಯಗಳ ಚರ್ಚೆ ಇಲ್ಲಿ ಸಾಗಿದೆ. ಇಂದಿಗೂ ಪುರುಷ ಮತ್ತು ಮಹಿಳೆಯಲ್ಲಿ ವ್ಯತ್ಯಾಸ ಕಾಣುವುದನ್ನು ಉಲ್ಲೇಖಿಸುವ ಆಧುನಿಕ ವಚನಕಾರರು, ಇಲ್ಲಿರುವ ಲಿಂಗ ಭೇದವನ್ನು ಅನಾವರಣಗೊಳಿಸುತ್ತಾರೆ. ತಮ್ಮದೇ ಆಗಿರುವ ವಿಶಿಷ್ಟ ನೆಲೆಗಳಲ್ಲಿ ಸ್ತ್ರೀವಾದಿ ಚಿಂತನೆಯನ್ನು ಮಾಡಿದ್ದು ಕಂಡುಬರುತ್ತದೆ.

'ಸ್ತ್ರೀವಾದ ಎನ್ನುವುದು ಕೇವಲ ಸ್ತ್ರೀಪರವಾದ ಸಹಾನುಭೂತಿಯಲ್ಲ, ಅದು ಸ್ತ್ರೀ ಪುರುಷರ ನಡುವೆ ಪಿತೃ ಪ್ರಧಾನ ವ್ಯವಸ್ಥೆಯ ಫಲವಾದ ಲಿಂಗಭೇದ ನೀತಿಯನ್ನು ಪ್ರಶ್ನಿಸುತ್ತದೆ. ಇದೊಂದು ತಾತ್ವಿಕ ಚಿಂತನೆ ಎಂದು ಕರೆಯಲಾಗಿದೆ. ಕನ್ನಡದ ಸ್ತ್ರೀವಾದಿ ವಿಮರ್ಶಕರೆಂದು ಗುರುತಿಸಲಾಗುವ ಬಿ.ಎನ್. ಸುಮಿತ್ರಾಬಾಯಿಯವರು ಕನ್ನಡ ಸ್ತ್ರೀವಾದಿ ಚಿಂತನೆಯಲ್ಲಿ ಮೂರು ಮುಖ್ಯ ಹಂತಗಳನ್ನು ಗುರುತಿಸುತ್ತಾರೆ,[೨೧]

೧) ಸ್ತ್ರೀ ಪಾತ್ರಗಳನ್ನು ಸ್ತ್ರೀಯರ ಬರಹಗಳಲ್ಲಿ, ಪುರುಷರ ಬರಹಗಳಲ್ಲಿ ಪ್ರತಿಪಾದಿತವಾಗಿರುವ ಬಗೆಯನ್ನು ವಿಶ್ಲೇಷಿಸುವ ಮೂಲಕ ಪಿತೃಪ್ರಧಾನ ಸಂಬಂಧ ವ್ಯವಸ್ಥೆಯ ವಾಸ್ತವ ಸ್ವರೂಪಗಳ ವಿವಿಧ ಮಗ್ಗಲುಗಳನ್ನು ಬೆಳಕಿಗೆ ತರುವುದು.

೨) ಚರಿತ್ರೆಯಲ್ಲಿ ನಿರ್ಲಕ್ಷಕ್ಕೆ ಒಳಗಾದ, ನ್ಯಾಯಯುತ ಸ್ಥಾನ ಪಡೆಯದ, ಮರೆತುಹೋದ, ನಷ್ಟವಾದ ಲೇಖಕಿಯರ ಬರಹಗಳನ್ನು ಶೋಧಿಸಿ ಹೊರತೆಗೆದು ಅವರ ಬರಹ ಮತ್ತು ಬದುಕುಗಳಲ್ಲಿನ ಸ್ತ್ರೀಪರತೆಯ ಸ್ವರೂಪವನ್ನು ವಿಮರ್ಶಿಸುವ ಮೂಲಕ ಯೋಗ್ಯ ವಿಮರ್ಶೆಗೆ ಅವರ ಬರಹಗಳನ್ನು ಒದಗಿಸುವುದು.

೩) ಒಟ್ಟಾರೆ ಸಾಹಿತ್ಯದ ಮತ್ತು ವಿಮರ್ಶೆಯ ಮಾನದಂಡಗಳು ಸ್ತ್ರೀಯರನ್ನು ಸಮಾನ ನೆಲೆಯಲ್ಲಿ ಸ್ಥಾಪಿಸುವಂತಹ ಮೌಲ್ಯಗಳನ್ನು ಸ್ಥಾಪಿಸಲು ಒತ್ತಾಯಿಸುವುದು.

ಈ ಮೂರು ನೆಲೆಯ ಚಿಂತನೆಗಳು ಆಧುನಿಕ ವಚನದಲ್ಲಿ ಅಭಿವ್ಯಕ್ತವಾಗಿವೆ. ಪುರುಷ ವಚನಕಾರರ ಬರಹಗಳಲ್ಲಿ ಪ್ರತಿಪಾದಿತವಾಗಿರುವ ಮಹಿಳೆಯ ಚಿತ್ರಣ ಹೀಗಿದೆ.

ಪ್ರಜಾಪ್ರಭುತ್ವ ಭಾರತದಲ್ಲಿ
ಪಂಜರದ ಗಿಳಿಯಂತೆ, ಕುಣಿಸುವವನ ಕರಡಿಯಂತೆ
ಡೊಂಬನ ಕೋತಿಯಂತೆ, ಗಾಣದ ಎತ್ತಿನಂತೆ
ಹೆಣ್ಣು ಇನ್ನೂ ವ್ಯವಸ್ಥೆಯ ಗುಲಾಮಳೇ
ಗಂಡು ಇನ್ನೂ ಚಾಟಿ ಹಿಡಿದ ಯಜಮಾನನೇ
ಇದೇ ಈಗಿನ ಸ್ತ್ರೀ ಸ್ವಾತಂತ್ರ್ಯವೆಂದ
ದಿಗಂಬರ ಕರಿಬಸವೇಶ್ವರ'[೨೨]

ಇಂದಿಗೂ ಹೆಣ್ಣುಮಕ್ಕಳಿಗೆ ಸಮಾನತೆ ದೊರೆತಿಲ್ಲ. ಅವಳು ಪುರುಷನ ಗುಲಾಮಳಾಗಿಯೇ ಇರುವ ಸ್ಥಿತಿಯನ್ನು ಈ ವಚನ, ಅನೇಕ ಉಪಮೆಗಳಾದ ಪಂಜರದ ಗಿಳಿ, ಕುಣಿಸುವವನ ಕರಡಿ, ಡೊಂಬನ ಕೋತಿ, ಗಾಣದ ಎತ್ತುಗಳ ಮೂಲಕ ವಿವರಿಸುತ್ತದೆ. ಗಂಡಸ್ಸನ್ನು ಚಾಟಿ ಹಿಡಿದ ಯಜಮಾನನಿಗೆ ಹೋಲಿಸುವುದರೊಂದಿಗೆ ಪುರುಷನ ಕ್ರೂರತೆ ಹಾಗೂ ಹೆಣ್ಣಿನ ಅಸಹಾಯಕತೆಯ ಮೂಲಕ, ವ್ಯವಸ್ಥೆಯ ವಾಸ್ತವತೆಯನ್ನು ತೋರಿಸುತ್ತದೆ. ಇಂದು ಮಹಿಳೆ ಶಿಖರಾರೋಹಿಯಾಗಿರಬಹುದು. ಗಗನ ಚಾಲಕಿಯಾಗಿರಬಹುದು. ಅಂತರಿಕ್ಷಗಾಮಿಯಾಗಿರಬಹುದು. ಪ್ರಧಾನಿ, ರಾಷ್ಟ್ರಪತಿಯಾಗಿರಬಹುದು ಆದರೂ ಅವಳು ಅಬಲೆಯಾಗಿದ್ದಾಳೆಂಬುದನ್ನು ಈ ವಚನ ಪರಿಣಾಮಕಾರಿಯಾಗಿ ತಿಳಿಸುತ್ತದೆ.

ಇದನ್ನೇ ಬಸವರಾಜ ಸಬರದ ಅವರು ಇನ್ನೊಂದು ರೀತಿಯಲ್ಲಿ ಹೇಳುತ್ತಾರೆ.

'ತಂದೆಯ ವಿರುದ್ಧ ಪದ ತಾಯಿಯೆಂಬರು
ತಾಯಿ ಹೇಗೆ ವಿರುದ್ಧಳಾಗುವಳಯ್ಯಾ
ಗಂಡನ ವಿರುದ್ಧ ಪದ ಹೆಂಡತಿಯೆಂಬರು
ಹೆಂಡತಿ ಹೇಗೆ ವಿರುದ್ಧಳಾಗುವಳಯ್ಯಾ
ಗಂಡಸಿನ ವಿರುದ್ಧ ಪದ ಹೆಂಗಸು ಎನ್ನುವರು
ಹೆಂಗಸು ಹೇಗೆ ವಿರುದ್ಧಳಾಗುವಳಯ್ಯಾ?
ಒಂದಕ್ಕೊಂಡು ವಿರುದ್ಧವೆಂದು ಕಲಿಸಿ
ಒಂದರ ಮುಖ ಮತ್ತೊಂದು ನೋಡದಂತೆ ಮಾಡುವ
ಮುತ್ಥಾಳರ ಮುಖವ ತೋರದಿರಾ....'[೨೩]

ಗಂಡು-ಹೆಣ್ಣಿನಲ್ಲಿ ಭೇದವಿಲ್ಲ ಆದರೆ ಇಂದಿನ ಸಮಾಜದಲ್ಲಷ್ಟೇ ಅಲ್ಲ; ಶಿಕ್ಷಣ ಪದ್ಧತಿಯಲ್ಲೂ ಇಲ್ಲಿ ಪರಸ್ಪರರನ್ನು ವಿರುದ್ಧವಾಗಿಸಿ, ವ್ಯವಸ್ಥೆಯಲ್ಲಿ ಬದುಕಿನ ವಿರೋಧವನ್ನುಂಟುಮಾಡಿದವರ ಮುಖವನ್ನು

ನೋಡಬಾರದೆಂದು ಖಾರವಾಗಿ ಇಲ್ಲಿ ಪ್ರತಿಕ್ರಿಯಿಸಲಾಗಿದೆ. ಹೀಗಾದಾಗ ದಾಂಪತ್ಯ ಜೀವನದಲ್ಲಿ ಇದೇ ಭಾವ ಉಳಿದು ಅಸಮಾನತೆಯ ಬದುಕನ್ನು ರೂಪಿಸಗೊಳ್ಳುತ್ತಿರುವ ನೋವು ಕಪಿಗಳನ್ನಿಲ್ಲಿ ಕಾಡಿದೆ ಎನ್ನಬಹುದು.

ಸ್ತ್ರೀ ಸಾಂಸ್ಕೃತಿಕ ಕಳಕಳಿಯ ಫಲವಾಗಿ ಪುರುಷ ನಿರ್ಮಿತವಾದ ಏಕಪಕ್ಷೀಯವಾದ ಮಾನದಂಡಗಳನ್ನು ಪ್ರಶ್ನಿಸುವಲ್ಲಿ ಪುರುಷದ್ವೇಷದಿಂದ ಮುಕ್ತವಾದ ಆರೋಗ್ಯಕರ ವಿಧಾನವೊಂದು ಇಂದಿನ ಸ್ತ್ರೀವಾದಿ ಚಿಂತಕರಲ್ಲಿ ರೂಢಿಗೆ ಬರುತ್ತಿದೆ.

'ಸೀರೆ ತೊಟ್ಟ ನಾರಿ ನೂರೀ ತೊಟ್ಟರೇನು ತಪ್ಪು?
ನೂರಿ ಉಟ್ಟ ನಾರಿ ಮಿಡ್ಡಿ ತೊಟ್ಟರೇನು ತಪ್ಪು?
ಮಿಡ್ಡಿ ಉಡುವವಳು ಚಡ್ಡಿ ತೊಟ್ಟರೇನು ತಪ್ಪು?
ಬಟ್ಟೆಯಿಂದ ಭಾವನೆ ಅಳೆಯುವುದು
ಸಾಧ್ಯವಿಲ್ಲ ಎನ್ನುವುದು ಒಪ್ಪು
ಎಂದಳು ಶಾಸನೇಶ್ವರಿ'[೨೪]

ಹೆಣ್ಣು ಮಕ್ಕಳ ಉಡುಗೆ ತೊಡಿಗೆಗಳನ್ನು ಪ್ರಶ್ನಿಸುವ ಇಂದಿನ ಪುರುಷರಿಗೆ ವಚನಕಾರ್ತಿ ಈ ವಚನದಲ್ಲಿ ಅರ್ಥಪೂರ್ಣವಾದ ಉತ್ತರ ನೀಡಿರುವುದು ಗಮನಾರ್ಹ. ಆಧುನಿಕ ಯುಗದಲ್ಲಿ ಮಹಿಳೆಯ ಉಡುಗೆ-ತೊಡುಗೆಗಳು ಭಿನ್ನವಾಗಿವೆ. ಕೇವಲ ಸಾಂಪ್ರದಾಯಿಕ ಉಡುಪುಗಳಲ್ಲಿ ಇಂದು ಮಹಿಳೆ ಏಕಿರಬೇಕು? ಉಡುಪು ಬದಲಾದರೇನಾಯಿತು? ಬಟ್ಟೆಯಿಂದ ಹೆಣ್ಣಿನ ಭಾವನೆಗಳನ್ನು ಅಳೆಯಬಾರದು ಅವಳಿಗೂ ಆಧುನಿಕವಾಗಿ ಬದಲಾಗುವ ಹಕ್ಕಿದೆ ಎಂಬುದನ್ನು ಈ ವಚನ ಸ್ಪಷ್ಟಪಡಿಸುತ್ತದೆ.

ಇಲ್ಲಿ 'ಸ್ತ್ರೀವಾದ' ಎನ್ನುವುದು ಬೌದ್ಧಿಕ ಕಸರತ್ತು. ಏನೆಲ್ಲ ಸ್ವಾಭಿಮಾನಿಯಾದ ಹೆಣ್ಣೊಬ್ಬಳು ತನ್ನ ಘನತೆ, ಗೌರವದ ಬಗ್ಗೆ ಜಾಗೃತಳಾಗಿ ಅಂತಹ ಪರಿಸರವನ್ನು ನಿರ್ಮಿಸುವುದಾಗಿದೆ. ಪ್ರಜ್ಞಾವಂತ ಪುರುಷರು ಸ್ತ್ರೀಯರಿಗೆ ತಕ್ಕ ಘನತೆ, ಗೌರವ, ಸಮಾನತೆಯನ್ನು ನೀಡಬೇಕು ಎಂಬ ನಿಲುವು ಇದಾಗಿದೆ. ಅದನ್ನೇ ವಚನಕಾರ್ತಿಯೋರ್ವರು ಹೀಗೆ ಹೇಳುತ್ತಾರೆ.

ಜಗತ್ತಿನ್ನೆಲ್ಲೆಡೆ ಹೆಣ್ಣನ್ನು
ಗೌರವಿಸಬೇಕಲ್ಲದೆ
ಬೆಳಸಬೇಕಾಗಿದೆ
ಸಮಾನತೆಯನ್ನು ಕಡೆಗಣಿಸಿದರೆ
ಕಡೆಗಾಲ ಖಂಡಿತವೆಂದ
ಗುರು ಸಿದ್ಧಾರೂಢ'[೨೫]

ಎಂದು ಹೇಳುವಲ್ಲಿ, ಇಂದು ಹೆಣ್ಣು ಜೀವವನ್ನು ಉಳಿಸಿ, ಬೆಳಸಬೇಕಾದ ನೆಲೆಯನ್ನು ಕುರಿತು ಚಿಂತಿಸಿರುವುದು ಕಾಣಿಸುತ್ತದೆ. ಗಂಡಿನಷ್ಟೇ ಹೆಣ್ಣಿಗೂ ಗೌರವಬೇಕು. ಹೆಣ್ಣನ್ನು ಗಂಡಿನಂತೆ ಬೆಳಸಬೇಕು. ಗಂಡು-ಹೆಣ್ಣಿನಲ್ಲಿ ಅಸಮಾನತೆ ಮೂಡಿಸಬಾರದೆಂಬ ಎಚ್ಚರಿಕೆಯನ್ನು ನೀಡುತ್ತಾರೆ. ಇದನ್ನೇ ಡಾ. ಯಾಳವಾರರು

'ಅಜ್ಜಿಯಾಗಿ ಹಿರಿತನಕ್ಕೆ ಹೆಣ್ಣು ಬೇಕು
ತಾಯಿಯಾಗಿ ಗುರುತನಕ್ಕೆ ಹೆಣ್ಣು ಬೇಕು

ಹೆಂಡತಿಯಾಗಿ ಗಂಡಿಗೊಂದು ಹೆಣ್ಣು ಬೇಕು
ತಂಗಿಯಾಗಿ ಸೋದರತೆಗೆ ಹೆಣ್ಣು ಬೇಕು
ಸೊಸೆಯಾಗಿ ಅತ್ತೆತನಕ್ಕೂ, ಸೊಸೆತನಕ್ಕೂ ಹೆಣ್ಣು ಬೇಕು
ಮಗಳಾಗಿ ಮನೆಗೊಬ್ಬ ಹೆಣ್ಣು ಬೇಡವೆಂಬರನೊಯ್ದು
ನಮ್ಮ ಅಂಬಿಗರ ಚೌಡಯ್ಯನ ಮುಂದೆ ನಿಲ್ಲಿಸೆಂದ....'[೨೭]

ಎಂದಿರುವಲ್ಲಿ ಹೆಣ್ಣು ಬೇಡವೆಂದು ಭ್ರೂಣಹತ್ಯೆ ಮಾಡುವವರನ್ನು ಕಟುವಾಗಿ ಟೀಕಿಸುತ್ತಾರೆ. ೧೨ನೆಯ ಶತಮಾನದ ಕಡುನಿಂದಕ ವಚನಕಾರನಾದ 'ಅಂಬಿಗರ ಚೌಡಯ್ಯ'ನ ಮುಂದೆ ನಿಲ್ಲಿಸೆಂದ ಎಂದು ಧ್ವನಿಪೂರ್ಣವಾಗಿ ಹೇಳಿದ್ದನ್ನಿಲ್ಲಿ ಅರಿಯಬಹುದು. ಇಂದಿನ ಹೆಣ್ಣು ಭ್ರೂಣಹತ್ಯೆಯ ಪ್ರಕರ್ಣಗಳು ಅವ್ಯಾಹತವಾಗಿ ನಡೆಯುತ್ತಿವೆ. ಹೀಗಾದರೆ ಮುಂದೆ ಲೋಕಕ್ಕೆ ಕೊನೆಗಾಲವೇ ಗತಿ ಎಂಬ ನೆಲೆಯನ್ನಿಲ್ಲಿ ವಚನಕಾರರು ಹೇಳುತ್ತಾರೆ. ಒಂದೆಡೆ ಪುರುಷಪರವಾಗಿ ನಿಲ್ಲುವ ಸಮಾಜದಲ್ಲಿ ಹೆಣ್ಣಿಗೆ-ಹೆಣ್ಣೆ ವೈರಿಯಾಗಿ ನಿಲ್ಲುವುದನ್ನೂ ಆಧುನಿಕ ವಚನಗಳು ಉಲ್ಲೇಖಿಸುತ್ತವೆ. ಇಂದು ದುರ್ಮರಣಕ್ಕೊಳಗಾಗಲು ಕಾರಣಗಳೇನು?

'ಹೆಣ್ಣಿನ ದುರ್ಮರಣಕ್ಕೆ
ಮನೆಯ ಹಿರಿಯ ಮೊದಲ ಕಾರಣ
ಗಂಡಿನ ದುರಾಸೆ ದುರಹಂಕಾರ ಎರಡನೆಯ ಕಾರಣ
ಹೆಣ್ಣಿಗೆ ಹೆಣ್ಣೇ ವೈರಿ ಮೂರನೆಯ ಕಾರಣ
ದುಷ್ಟ ಸಾಮಾಜಿಕ ರೂಢಿ ನಾಲ್ಕನೆಯ ಕಾರಣ
ತಿದ್ಧಲಾರದ ಧರ್ಮಾಧಿಕಾರಿಗಳು ಐದನೆಯ ಕಾರಣ
ಕಪಟ ನಾಟಕ ಸೂತ್ರಧಾರಿಯಾದ ನೀನು
ಮುಖ್ಯ ಕಾರಣವೆಂದ ದಿಗಂಬರ ಕರಿಬಸವೇಶ್ವರ'[೨೮]

ಇಂದು ಹೆಣ್ಣುಮಕ್ಕಳು ದುರ್ಮರಣಕ್ಕೀಡಾಗಲು ಆರು ಮುಖ್ಯಕಾರಣಗಳಿರುವುದನ್ನು ವಚನಕಾರರು ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಮನೆಯ ಯಜಮಾನ, ಗಂಡಿನ ದುರಾಸೆ, ದುರಹಂಕಾರ, ಹೆಣ್ಣು, ಸಾಮಾಜಿ ರೂಢಿಯಾದ ವರದಕ್ಷಿಣೆ ಪಿಡುಗು ಮತ್ತು ಅತ್ತೆ-ನಾದಿನಿ, ನೆಗಣ್ಣಿತನ, ತಿದ್ದಲಾರದ ಧಾರ್ಮಿಕ ವ್ಯವಸ್ಥೆ ಹಾಗೂ ಸಮಾಜ ಮುಖ್ಯಕಾರಣವಾಗಿರುವುದನ್ನಿಲ್ಲಿ ನಿರ್ಭಿಢೆಯಿಂದ ಹೇಳಲಾಗಿದೆ. ಗದ್ಯ ಪ್ರಧಾನವಾಗಿರುವ ಈ ವಚನ ಹೇಳಬೇಕಾಗಿರುವ ವಿಷಯ ವಸ್ತುವನ್ನು ತನ್ನದೇ ಆದ ರೀತಿಯಲ್ಲಿ ಪರಿಣಾಮಕಾರಿಯಾಗಿ ಹೇಳಿರುವುದನ್ನಿಲ್ಲಿ ಗಮನಿಸಬಹುದು. ಹೀಗೆ ಸ್ತ್ರೀಚಿಂತನೆಯ ನೆಲೆಯ ವಿವಿಧ ಆಯಾಮಗಳನ್ನು ಕುರಿತ ವಚನಗಳು ಇಲ್ಲಿದ್ದು, ಸ್ತ್ರೀಪರ ಕಾಳಜಿ, ಸ್ತ್ರೀಯರ ಬಗೆಗಿನ ಗೌರವ, ದ್ವಂದ್ವ ಮುಖಗಳ ನಿರೂಪಣೆ, ಸ್ತ್ರೀಶೋಷಣೆಯ ಸ್ವರೂಪ ಇತ್ಯಾದಿಗಳನ್ನು ನೇರವಾಗಿ, ಕೆಲವೊಮ್ಮೆ ವಿಡಂಬನಾತ್ಮಕವಾಗಿ, ಕಳಕಳಿಯ ಪ್ರಜ್ಞೆಯಿಂದ ವಿವರಿಸಿದ್ದುದು ಇಲ್ಲಿ ಕಡುಬರುತ್ತದೆ.

ಹಾಗೆಯೇ ಆಧುನಿಕ ವಚನಕಾರರ ವಸ್ತುವಿಷಯದಲ್ಲಿ ಪುರಾಣ ಪ್ರಜ್ಞೆಯೂ ವ್ಯಕ್ತವಾಗಿದೆ. 'ರಾಮನಂತಹ ದೇವರಿದ್ದರೂ ಸೀತೆಗೆ ಕಾಡು ತಪ್ಪಲಿಲ್ಲ' 'ಹೆಣ್ಣಾಗಿ ಸಾವಿತ್ರಿ ದಮಯಂತಿ ನೊಂದರು' 'ನಿನ್ನ ದೇವ ಕೋಟಿಗಳಲ್ಲಿ ಸುಳ್ಳರಿದ್ದಾರೆ ಕಳ್ಳರಿದ್ದಾರೆ' ಎಂಬತಹ ಅನೇಕ ವಚನಗಳ ಸಾಲುಗಳು ಇಲ್ಲಿ ಕಾಣಸಿಗುತ್ತವೆ.

ಈ ಆಧುನಿಕ ವಚನಗಳಲ್ಲಿ ಧರ್ಮ, ಆದರ್ಶಗಳ ವಿವೇಚನೆಯ ವಸ್ತುವಿರುವಂತೆ ಹೊಸ ಜಗತ್ತಿನ ಸಂವೇದನೆ ಮಿಡಿತ–ತುಡಿತಗಳೂ ವ್ಯಕ್ತವಾಗಿವೆ. ಅವುಗಳಲ್ಲಿ ಕಂಪ್ಯೂಟರ ಮೋಬೈಲ್, ಜೈವಿಕ ತಂತ್ರಜ್ಞಾನ, ಯಂತ್ರಮಾನವ, ಡಿಸೈನರ ಬೇಬಿ, ಜೆನಿಟರ್ ತಂತ್ರಜ್ಞಾನ, ಗಾಳಿಯಿಲ್ಲದ ಚಕ್ರ, ಮ್ಯಾಜಿಕ್ ಕಾರ್, ರೋಬೋಟ್ ಮೊದಲಾದವುಗಳನ್ನು ಉಲ್ಲಖಿಸಲಾಗಿದೆ. ತಳಿತಂತ್ರಜ್ಞಾನ ಕುರಿತ ಒಂದು ವಚನವನ್ನಿಲ್ಲಿ ಗಮನಿಸಬಹುದು.

೧) 'ಕಬ್ಬಿನಲಿ ಜೋಳ, ಬೇವಿನಲಿ ಮಾವು
ತೇಗದಲಿ ಹಲಸು ಬೆಳೆಯುವ
ತಳಿ ತಂತ್ರಜ್ಞಾನವು ಬೆರಗುಗೊಳಿಸಿತು ನೋಡಾ'[೨೮]

೨) 'ಬಿಡು ನೀ ಟಿ.ವಿ. ಕಂಪ್ಯೂಟರ
ವೀಡಿಯೋ ಗೇಮ, ಲ್ಯಾಪಟಾಪಗಳಾಟ
ಆಡು ಕಲ್ಲು ಮಣ್ಣುಗಳಾಟ
ಆಡಿದರೆ ನಿನಗಿಲ್ಲ ಕಾಯಿಲೆಗಳ ಕಾಟ'[೨೯]

ಎಂಬಂತಹ ವಚನಗಳಲ್ಲಿ ಹೊಸ ಜಗತ್ತಿನ ತುಡಿತ–ಮಿಡಿತಗಳನ್ನು ಅವುಗಳ ಪರಿಣಾಮಗಳ ಅಭಿವ್ಯಕ್ತಿಯನ್ನು ಕಾಣಬಹುದು.

**ಭಾಷೆ**

ಕವಿತೆ ಅಥವಾ ವಚನವನ್ನು ಓದಿದ ತಕ್ಷಣ ಮನಮುಟ್ಟುವಂತಿರಬೇಕು ಎಂದು ಹೇಳಲಾಗುತ್ತದೆ. ಅಂದರೆ ಭಾಷಾಭಿವ್ಯಕ್ತಿಯಲ್ಲಿರುವ ಚಮಾತ್ಕರವೇ ಇಲ್ಲಿ ಮುಖ್ಯವಾಗಿರುತ್ತದೆ ಎನ್ನಬಹುದು. ಅದನ್ನೇ ಕವಿಯೊಬ್ಬರು 'ಓದಿದ ಕೂಡಲೆ ಕವಿತೆ–ಯೊಂದು ನಮ್ಮ ಮನಸ್ಸನ್ನು ಸ್ವಲ್ಪ ಹೊತ್ತಿಗಾದರೂ ಹಿಡಿದು ನಿಲ್ಲಿಸಿಕೊಳ್ಳುವಂತಿರಬೇಕು. ಹಾಗಾಗಬೇಕಾದರೆ ಕವಿತೆಯ ಅಭಿವ್ಯಕ್ತಿಯೊಳಗೆ ಲವಲವಿಕೆ ಅಥವಾ ಚಲನಶೀಲತೆಯಿರಬೇಕು. ಓದಿ ಮುಗಿಸಿದ ನಂತರ ಒಂದು ಹೊಸ ಭಾವವನ್ನೋ, ಚಿಂತನೆಯನ್ನೋ, ಅನುಭವವನ್ನೋ ಪಡೆದ ಸುಖ ಅಥವಾ ಒಂದು ಬಗೆಯ ಸಂತೋಷ ಉಂಟಾಗುವಂತಿರಬೇಕು'[೩೦] ಎಂಬ ಕವಿ ಮಾತಿನಂತೆ ಆಧುನಿಕ ವಚನಗಳ ಶೈಲಿ ಇರಬೇಕು ಎನಿಸುತ್ತದೆ. ಇಲ್ಲಿಯ ಆಧುನಿಕ ವಚನಗಳು ಈ ಭಾಷಾ ನೆಲೆಯ ಹಿನ್ನೆಲೆಯಲ್ಲಿ ಹಾಗೆಯೇ ಅಭಿವ್ಯಕ್ತಗೊಂಡಿರುವುದನ್ನಿಲ್ಲಿ ಗಮನಿಸಬಹುದು.

'ಮುಖವಾಡಿಗನ ಮುಖ ಕಾಣಿಸದು
ಮುಖವೇ ಕಾಣದಾದಾಗ ಅವನನೆಂತು ಅಳೆಯುವುದು?
ಮುಖವಾಡ ತಗೆಯಲು ಮುಖ ಕಾಣುವುದು
ಕಂಡರೇನಂತೆ ಅವನಾಳವ ಗುರುತಿಸಲಾಗದು
ಎಲ್ಲಿ ನೋಡಿದಲ್ಲಿ ಹೊರಗೊಂದು ಒಳಗೊಂದು
ಇವಕೆಲ್ಲ ಅಂತ್ಯವೆಂದು ಹೇಳಾ
ನಿಜಗುರು ಮಹಾಂತ ಲಿಂಗ'[೩೧]

ಮುಖವಾಡಿಗನ ಸ್ವಭಾವವನ್ನು ತಿಳಿಸುವ ವಚನವಿದು. ಪ್ರಶ್ನೋತ್ತರ ರೂಪದಲ್ಲಿ ರಚಿತವಾಗಿರುವ ಈ ವಚನದ ಭಾಷಾಶೈಲಿ ಶರಣರ ವಚನದ ರೀತಿ, ಸ್ವರೂಪದಲ್ಲಿಯೇ ಇದ್ದು, ಆಧುನಿಕ ವಿಚಾರವನ್ನು ತನ್ಮೂಲಕ

ತಿಳಿಸಬಯಸುತ್ತದೆ. ಸರಳವಾದ ಶಿಷ್ಟಕನ್ನಡ ಪದಪುಂಜಗಳು ಇಲ್ಲಿದ್ದು, ವಿಷಯವನ್ನು ಸ್ಪಷ್ಟಪಡಿಸುತ್ತವೆ. ಸಾಮಾಜಿಕ ಪ್ರಜ್ಞೆ, ಜನಪರ ಕಾಳಜಿ ಹಾಗೂ ವ್ಯವಸ್ಥೆಯನ್ನು ಕಂಡು ಅನುಭವಿಸಿರುವ ಆವೇಗಗಳೆಲ್ಲ ಇಲ್ಲಿಯ ಭಾಷಾ ನೆಲೆಯಲ್ಲಿ ವ್ಯಕ್ತವಾಗಿವೆ.

'ಅವರಿವರ ಹೊಗಳಿಕೆಗೆ
ಬೀಗುವುದು ಬೇಡ
ಅವರಿವರ ತೆಗಳಿಕೆಗೆ
ಅಳುಕುವುದು ಬೇಡ
ಅವರಿವರ ಸಾಮಿಪ್ಯಕ್ಕೆ
ಸಂಧಿಸುವುದು ಬೇಡ
ಅವರಿವರ ವಿಯೋಗಕ್ಕೆ
ಮರುಗುವುದು ಬೇಡ
ಬೇಡ! ಬೇಡ!
ಇವೆಲ್ಲವುಗಳ ಒಡಲಲ್ಲಿರುವುದು
ಬೇಡ ಶ್ರೀ ಗುರುಸಿದ್ಧ'[೩೨]

ಈ ವಚನದಲ್ಲಿ ಭಾಷಾಸ್ವರೂಪ ಗಮನಸೆಳೆಯುತ್ತದೆ. 'ಇವೆಲ್ಲವುಗಳ ಒಡಲಲ್ಲಿರುವುದು ಬೇಡ' ಎಂಬ ಮೂಲ ತಿರುಳಿನ ಸುತ್ತ, ಅದರರ್ಥ ವಿವರಣೆಗಾಗಿ ಬಳಸಲಾಗಿರುವ ಹಲವು ಪದಗಳು, ಪದಪುಂಜಗಳು ನಮ್ಮನ್ನು ಸೆಳೆಯುತ್ತವೆ. 'ಅವರಿವರ' ಎಂಬುದು ಪುನಾರವರ್ತಿತವಾಗಿದ್ದರೂ ಪ್ರತಿಸಾಲಿನಲ್ಲಿ ತನ್ನದೇ ಆದ ವಿಶಿಷ್ಟ ಅರ್ಥ ಹೊರಡಿಸುತ್ತ, ಗಮನಾರ್ಹವಾಗುತ್ತದೆ, 'ಬೇಡ', 'ಬೇಡ' ಎನ್ನುವುದು ಪುನಃ ಪುನಃ ಬಂದು ಓದುಗನ ಮೇಲೆ 'ಬೇಡವೇ ಬೇಡ' ಎಂದು ಒತ್ತು ಹಾಕುತ್ತದೆ. ಅದರೊಂದಿಗೆ, ಹೊಗಳಿಕೆಗೆ ಬೀಗುವುದು, ತೆಗಳಿಕೆಗೆ ಅಳುಕುವುದು, ಸಾಮಿಪ್ಯಕ್ಕೆ ಸಂಧಿಸುವುದು, ವಿಯೋಗ ಮರುಗುವುದು ಬದುಕಿನಲ್ಲಿಯ ಹಲವು ವಾಸ್ತವಾಂಶಗಳನ್ನು ಅನಾವರಣಗೊಳಿಸುವುದರೊಂದಿಗೆ ಆ ಕಾರಣಕ್ಕಾಗಿ ವಿಧವಿಧದಲ್ಲಿ ಸ್ಪಂದಿಸುವುದನ್ನು ಬೇಡವೆಂದು ಅರ್ಥಪೂರ್ಣವಾಗಿ ತಿಳಿಸುವಲ್ಲಿ ಇಲ್ಲಿಯ ಅಭಿವ್ಯಕ್ತಿ ಕ್ರಮ ಯಶಸ್ಸು ಪಡೆದಿರುವುದನ್ನು ಮನಗಾಣಬಹುದು.

ವಚನರೂಪದ ಸಂಕ್ಷಿಪ್ತತೆಯ ಒಡಲಿನಲ್ಲಿಯೇ ಅನುಭವದ ಆಕೃತಿ ನಿರ್ಮಾಣವನ್ನೋ, ವಿಚಾರವೊಂದರ ಉಪಮಾರೂಪಕಾತ್ಮಕ ಅಭಿವ್ಯಕ್ತಿಯನ್ನೋ ಸಾಧ್ಯವಾಗಿಸುವ ಕೌಶಲ್ಯವು ಆಧುನಿಕ ವಚನಕಾರರಲ್ಲಿ ಕೆಲವರಲ್ಲಿ ಕಂಡು ಬರುತ್ತದೆ.

'ಪಣತಿ
ಯಾವ ಮಣ್ಣಿನದಾದರೇನು, ಬಣ್ಣದ್ದಾದರೇನು
ಎಣ್ಣೆ
ಯಾವ ದೇಶದ್ದಾದರೇನು, ಮೂಲದ್ದಾದರೇನು
ಪ್ರಭು

ಅಂತರಂಗದ ಬೆಳಕಿಗೆ ಕಳಂಕವುಂಟೆ?'[೩೩]

ತನ್ನ ಸಂಕ್ಷಿಪ್ತರೂಪದಲ್ಲಿ ಅಂತರಂಗದ ಬೆಳಕಿನ ಆಕೃತಿಯನ್ನು ಕಟ್ಟಿಕೊಡುವ ಈ ವಚನ ಆಧುನಿಕ ವಚನಕಾರನ ಅನುಭವದ ನೆಲೆಯನ್ನು ಪರಿಣಾಮಕಾರಿಯಾಗಿ ತಿಳಿಸುತ್ತದೆ. ಪಣತಿ, ಎಣ್ಣೆ, ಪ್ರಭು ಎಂಬ ಮೂರು ಪದಗಳ ಬಳಕೆ ವಚನದ ಅರ್ಥ ವಿಸ್ತಾರಕ್ಕೆ ಕನ್ನಡಿ ಹಿಡಿಯುತ್ತದೆ. ಆ ಮೂಲಕ ಅದು-ಇದು ಎಂಬ ಭೇದ ಭಾವವನ್ನು ಅಲ್ಲಗಳೆಯುವಲ್ಲಿ ಯಶಸ್ವಿಯಾಗಿ ನಿಲ್ಲುತ್ತದೆ.

ಕೊರಳ ಸರದಲ್ಲಿ ಹರಳು ಕೀಲಿಸಿಟ್ಟಂತೆ
ಮರಳ ಮೇಲೆ ತಿಳಿನೀರು ಹರಿದಂತೆ
ಓಣಿ ಓಣಿಯಲಿ ಹಣತೆ ಹಚ್ಚಿಟ್ಟಂತೆ
ಆಗಸದಿ ನಕ್ಷತ್ರ ಫಳ ಫಳ ಹೊಳೆವಂತೆ
ಕನ್ನಡದ ವಚನಗಳ ರಚನೆ ನೋಡಾ
ಸೋಮಲೋಚನ ಪ್ರಿಯ ಬಸವಣ್ಣ'[೩೪]

ವಚನಗಳ ಈ ಸಾಲುಗಳನ್ನು ಗಮನಿಸಿದಾಗ 'ವಚನಗಳ ಕುರಿತ ಈ ವಚನದ ರೀತಿ ಡಾ. ಯಾಳವಾರರ ಮುತ್ತಿನ ಮುತ್ತಿನ ಮಾತುಗಳು ಓದುಗರ ಹೃದಯದಲ್ಲಿ ಅಚ್ಚೊತ್ತಿದಂತೆ ಮೂಡುತ್ತವೆ. ವಚನಗಳ ಕುರಿತು ಅವರು ತಮ್ಮ ಗಾಢ ಅನುಭವಗಳನ್ನು ಅವಿಸ್ಮರಣೀಯ ಪದಪುಂಜಗಳಲ್ಲಿ ಹಿಡಿದಿರಿಸಿದ್ದು ಪ್ರಶಂಶನೀಯ ಎನ್ನುವ ಪ್ರೊ. ವಿರೇಂದ್ರ ಸಿಂಪಿ'ಯವರು ಇವು ವಚನಗಳ ಕುರಿತ ಮೇಲ್ನೋಟದ ಅನುಭವಗಳಲ್ಲ. ವಚನಗಳ ನಿರಂತರ ಅಧ್ಯಯನದ ಫಲವೆಂದು ಹೇಳಿದ್ದಾರೆ.[೩೫] ಇಲ್ಲಿಯ ಉಪಮೆಗಳು ಸುಂದರವಾಗಿದ್ದು, ಆಧುನಿಕ ವಚನಗಳಲ್ಲಿರುವ ಕವ್ಯಾಂಶಕ್ಕೆ ಕನ್ನಡಿ ಹಿಡಿಯುತ್ತವೆ.

ವಚನರೂಪದ ಸಂಕ್ಷಿಪ್ತತೆಯನ್ನು ತಮ್ಮ ತಮ್ಮ ಪ್ರಾದೇಶಿಕ ಭಾಷೆಗಳಲ್ಲಿ ಸೃಜನ ಶೀಲವಾಗಿ ಬಳಸಿಕೊಳ್ಳುವ ಅವರದೇ ಆದ ವೈಶಿಷ್ಟ್ಯಗಳನ್ನು ಇಲ್ಲಿಯ ವಚನಕಾರರಲ್ಲಿ ಕಾಣುತ್ತೇವೆ ಉದಾಹರಣೆಗಾಗಿ

'ಒತ್ತಿ ತುಂಬು ಅರಿವನು
ಕಿತ್ತಿ ಎಸೆ ಅವಗುಣವನು
ಬಿತ್ತುತಿರು ಬೆಳಕಿನ ನುಡಿಮುತ್ತುಗಳ
ಉತ್ತು ಹರಗು ಶರೀರದ ಹೊಲ
ಬೆಳೆ ಬರುವುದೆಂದ ಶರಣ ಕಿರಣ ಪ್ರಿಯ ಮಾಣಿಕ'[೩೬]

ಬೀದರ ಜಿಲ್ಲೆಯ ಈ ವಚನ ರಚನೆ ಪ್ರಾಸ, ಅನುಪ್ರಾಸಗಳ ಅಭಿವ್ಯಕ್ತಿಯಲ್ಲಿದ್ದು, ದೇಶಿಯ ಸೊಗಡನ್ನು ಪ್ರತಿಬಿಂಬಿಸುತ್ತದೆ. ಉತ್ತರ ಕನ್ನಡದ ಗಂಡು ಭಾಷೆಯ ಪದಗಳ ಬಳಕೆಯಿಂದ ವಚನದ ದಾಟಿ ವಿಶಿಷ್ಟವಾಗಿದ್ದು ಓದುಗರ ಮನ ಸೆಳೆಯುತ್ತದೆ. 'ಉತ್ತು ಹರಗು ಶರೀರದ ಹೊಲ'ವೆಂಬ ರೂಪಕ ಗಮನಾರ್ಹವಾಗಿದ್ದು, ಅನುಭಾವಿಕ ನೆಲೆಯಲ್ಲಿ ಒಡಮೂಡಿನಿಂತಿದೆ. ವಚನ ರೂಪದ ಸಂಕ್ಷಿಪ್ತತೆ ಹಾಗೂ ವಚನ ಬಂಧದ ಪ್ರಜ್ಞೆಯನ್ನು ಇದು ಎದೆ ತೆರೆದು ತೋರಿಸುವಲ್ಲಿ ಸಫಲವಾಗಿದೆ.

ಕೆಲವು ಪ್ರಯೋಗಾತ್ಮಕ ವಚನಗಳು ಶರಣರ ವಚನ ವಿಧಾನವನ್ನು ಮಾದರಿಯಾಗಿರಿಸಿಕೊಂಡು ಹೊರಟಿದ್ದರೂ, ರಚನಾ ವಿನ್ಯಾಸವನ್ನು ರೂಪಿಸಿಕೊಳ್ಳುವ ಪ್ರಯತ್ನದಲ್ಲಿ ವಿಫಲವಾಗಿದ್ದೂ ಉಂಟು. ತಮ್ಮ

ಅನುಭವದ ವಿವಿಧ ಮುಖಗಳಿಗೆ ಯಾವುದೇ ರೀತಿಯ ಬಂಧ ವಿನ್ಯಾಸವನ್ನು ರೂಪಿಸಿಕೊಳ್ಳದ, ಕೇವಲ ವಿಚಾರದ ಹೊಳಹುಗಳಾಗಿಯೋ, ತತ್‌ಕ್ಷಣದ ಚಮತ್ಕಾರಿಕ ಪ್ರತಿಕ್ರಿಯೆಗಳಾಗಿಯೋ ಗದ್ಯ ಶೈಲಿಯಲ್ಲಿಯೇ ಮೂಡಿದ ರಚನೆಗಳೂ ಇಲ್ಲುಂಟು.

ಉದಾಹರಣೆಗೆ

'ಬರೆದರೂ ಓದುವವರಿಲ್ಲ
ಓದಿ ಹೇಳಿದರೂ ಕೇಳುವವರಿಲ್ಲ
ಅತ್ತರೂ ಕಣ್ಣೀರು ಒರೆಸುವವರಿಲ್ಲ
ನಕ್ಕರು ಸಂತಸ ಪಡುವವರಿಲ್ಲ
ಸುಮ್ಮನಿದ್ದರೆ ಹುಚ್ಚಳೆನ್ನುವರು
ಹುಚ್ಚಳನ್ನು ಎಚ್ಚರಿಸಿ ಮಡಿಲ ಸೇರಿಸಿಕೋ'[೩೬]

ಇಂತಹ ರಚನೆಗಳನ್ನು ವಚನಗಳ ವ್ಯಾಪ್ತಿಗೆ ಸೇರಿಸುವುದು ಕೆಲವೊಮ್ಮೆ ಅತಿವ್ಯಾಪ್ತಿ ಎನಿಸಬಹುದು. ಇಂಥ 'ಶಿಥಿಲ ವಚನ'ಗಳ ರಚನೆಯನ್ನೂ ಹಲವರ ಆಧುನಿಕ ವಚನಗಳಲ್ಲಿ ಕಾಣುತ್ತೇವೆ. ಇಲ್ಲಿಯ ಇನ್ನೂ ಕೆಲವು ವಚನಗಳು ಹೊಸಗನ್ನಡ ಕವಿತೆಯ ರೀತಿಯಲ್ಲಿ ಹೊರಹೊಮ್ಮಿದ್ದು, ಶೈಲಿಯಲ್ಲಿ ಕವನದ ವ್ಯಾಪ್ತಿಯ ಭಾವವನ್ನು, ವಿಚಾರವನ್ನು ಹೊಂದಿರುವಂತಿವೆ. ನಾಗೇಂದ್ರ ಮಸೂತಿ. ಶೈಲಜಾ ಉಡಚಣ ಹಾಗೂ ಸರಸ್ವತಿ ಚಿಮ್ಮಲಗಿಯವರ ಬಹಳಷ್ಟು ವಚನಗಳು ಕವನದಂತೆ ದೀರ್ಘವಾಗಿದ್ದು, ಹೆಚ್ಚು ಗದ್ಯಾತ್ಮಕವಾಗಿರುವುದನ್ನು ಅಲ್ಲಗಳೆಯಲಾಗದು.

ನಾವು ಈ ಎರಡೂ ಜಿಲ್ಲೆಯ ಅಧುನಿಕ ವಚನಗಳನ್ನು ಭಾಷೆ, ಶೈಲಿ ಹಾಗೂ ರಚನಾ ವಿನ್ಯಾಸದ ದೃಷ್ಟಿಯಿಂದ ಗಮನಿಸಿದರೆ ಇಲ್ಲಿ ಒಟ್ಟಾರೆಯಾಗಿ ಇವು ಶರಣರ ವಚನಗಳ ಪ್ರಭಾವವನ್ನು ದಕ್ಕಿಸಿಕೊಂಡ ಸಾಂಪ್ರದಾಯಿಕ ವಚನಗಳು, ಪ್ರಯೋಗಾತ್ಮಕ ವಚನಗಳು ಹಾಗೂ ಗದ್ಯಗೀತಾತ್ಮಕ ವಚನಗಳೆಂದು ಗುರುತಿಸುವಂತೆ, ಇತರ ಪ್ರಕಾರದ ವಚನಗಳೂ ಇದರಲ್ಲಿ ಕಾಣಸಿಗುತ್ತವೆ. ತಮ್ಮದೇ ಆದ ವಚನ ವಿನ್ಯಾಸ, ಮುಕ್ತ ಛಂದಸ್ಸು 'ಕೆಲವರು ತ್ರಿಪದಿ, ಚೌಪದಿ, ಪಂಚಪದಿಯಲ್ಲಿ ರಚಿಸಿದ್ದಾರೆ) ವಿಶಿಷ್ಟವಾದ ಅಂಕಿತನಾಮ ಪದ್ಧತಿಯಿಂದ ಕೂಡಿವೆ. ಇಲ್ಲಿಯ ವಚನಕಾರರಲ್ಲಿ ಕೆಲವರು ಕವಿಗಳಾಗಿದ್ದು, ಹಲವರು ಲೇಖಕರಾಗಿದ್ದು, ಆಧುನಿಕ ವಚನಗಳಲ್ಲಿ ತಮ್ಮ ತಮ್ಮತನವನ್ನು ಉಳಿಸಿಕೊಂಡಿದ್ದಾರೆ.

ಸತ್ವ, ಸತ್ಯದ ನಿಲುವು, ಅನುಭಾವದ ದೃಷ್ಟಿಯಿಂದ ಆಧುನಿಕ ವಚನಗಳು ಶರಣರ ವಚನಗಳಿಗೆ ಸರಿಸಾಟಿಯಾಗಲಾರವು ನಿಜ. ಆದರೆ ಈ ಪ್ರಕಾರದ ಬೇರೆ ಬೇರೆ ಸಾಧ್ಯತೆಗಳನ್ನು ಪ್ರಯೋಗ ವೈವಿಧ್ಯದ ಮೂಲಕ ಬೆಳಕಿಗೆ ತಂದ ಕೀರ್ತಿ ಆಧುನಿಕರದು, ಸಂಸ್ಕೃತ ಭೂಯಿಷ್ಟ ಚಂಪೂ ಶೈಲಿಯಿಂದ ಬಿಡುಗಡೆ ಹೊಂದಿ, ದೇಶೀ ಶೈಲಿಯ ಪ್ರಭಾವ ಹಾಗೂ ಪಾಶ್ಚಾತ್ಯ ಕಾವ್ಯ ಚಿಂತನೆಯ ಪ್ರಯೋಗಗಳ ಪ್ರೇರಣೆಯ ಫಲವಾಗಿ ಮೂಡಿ ಬಂದ ನವೋದಯ ಕಾವ್ಯದ ಯಶಸ್ಸು ಒಂದು ರೀತಿಯದು. ನವೋದಯದ ಹಿನ್ನೆಲೆಯಲ್ಲಿಯೇ ವಚನದಂತಹ ದೇಶಿ ಪ್ರಕಾರದ ಸ್ವತಂತ್ರ ಹಾಗೂ ಪ್ರತ್ಯೇಕ ಅಸ್ತಿತ್ವವನ್ನು ಉಳಿಸಿಕೊಂಡು ಸೃಜನಾತ್ಮಕವಾಗಿ ಮುಂದುವರೆಸಿಕೊಂಡು ಬಂದ ಆಧುನಿಕ ವಚನಗಳ ಯಶಸ್ವಿ ಇನ್ನೊಂದು ರೀತಿಯದಾಗಿದೆ.[೩೭] ಎಂಬ ಹೇಳಿಕೆಯನ್ನು ಇಲ್ಲಿಯ ಆಧುನಿಕ ವಚನಕಾರರ ಭಾಷಾ ನೆಲೆಯ ಹಿನ್ನೆಲೆಯಲ್ಲೂ ಗಮನಿಸಬಹುದಾಗಿದೆ.

**ಶೈಲಿ ಮತ್ತು ತಂತ್ರ**

ಭಾವ ನಿಷ್ಠತೆ, ವಸ್ತು ನಿಷ್ಠತೆಗೆ ಹೆಚ್ಚಿನ ಆದ್ಯತೆ ನೀಡಿರುವ, ರಾಜಕೀಯ ಕ್ಷೇತ್ರ, ಸಾಮಾಜಿಕ ವ್ಯವಸ್ಥೆ, ಧಾರ್ಮಿಕ ಮೂಢನಂಬಿಕೆ, ಅತಿಯಾದ ಆಚಾರ ವಿಚಾರ, ಶೈಕ್ಷಣಿಕ ರಂಗದ ಅವನತಿ, ಕುಟುಂಬದ ಸಂಬಂಧಗಳು, ವ್ಯಕ್ತಿ ಚಿತ್ರ, ಆತ್ಮಕಥನ, ಪಾರಮಾರ್ಥಿಕ ವಿಷಯಗಳ ಚಿಂತನೆಗೆ ಒಳಗಾಗಿರುವ ಇಲ್ಲಿಯ ವಚನಗಳು ಹೆಚ್ಚಾಗಿ

ಭಾಷಾ ಶೈಲಿಯ ಯಾವುದೋ ಒಂದು ನಿಯಮ, ನೀತಿ, ನಿರ್ಬಂಧಗಳಿಗೆ ಒಳಗಾಗದೆ ಆಧುನಿಕ ವಚನಗಳು ತಮ್ಮದೇ ಆದ ಶೈಲಿಯಲ್ಲಿ ರಚಿತವಾಗಿವೆ.

ಇಲ್ಲಿಯ ಆಧುನಿಕ ವಚನಕಾರರ ವಚನಗಳಲ್ಲಿ ಸೋಲು–ಗೆಲವು ಇಲ್ಲದಿಲ್ಲ ಅವುಗಳಲ್ಲಿ ವ್ಯಕ್ತಿನಿಷ್ಠತೆ ಪ್ರಧಾನವಾಗಿದ್ದು, ಆ ವಚನಗಳು ಸಮಾಜ ಜೀವನದ ಸುತ್ತ ಸುತ್ತಿಕೊಂಡಿವೆ. ಅದರಿಂದಾಗಿ ವಾಸ್ತವಿಕ ಬದುಕಿನ ಅಂಶಗಳು ಹೆಚ್ಚಾಗಿದ್ದು, ರಾಷ್ಟ್ರೀಯ ವಿಷಯಗಳಿಗೆ ಪ್ರಾಧಾನ್ಯತೆ ದೊರೆತಿಲ್ಲ. ೧೨ನೇಯ ಶತಮಾನದ ಶರಣರು ಅಂದಿನ ಸಮಾಜದಲ್ಲಿನ ಸ್ತ್ರೀ–ಪುರುಷ ಭೇದ, ಜಾತಿಭೇದ, ಡಾಂಭಿಕ ಭಕ್ತಿ, ಬಹುದೇವೋಪಾಸನೆ ಹಾಗೂ ಮೂಢನಂಬಿಕೆಗಳನ್ನು ಹಾಗೂ ಅಂದಿನ ಸಮಾಜದ ಸ್ಥಿತಿಗತಿಗಳನ್ನು ಯಥಾವತ್ತಾಗಿ ಹಿಡಿದಿಟ್ಟಿವೆ. ಶರಣರು ಅಂದಿನ ಸಮಾಜದಲ್ಲಿನ ಅನೇಕ ಲೋಪ–ದೋಷಗಳಿಗೆ, ವೈಪರೀತ್ಯಗಳಿಗೆ, ಸಮಸ್ಯೆಗಳಿಗೆ ಹಾಗೂ ಜನತೆಯ ಇಬ್ಬಂದಿತನಕ್ಕೆ ಸ್ಪಂದಿಸಿದುದರ ಫಲಶ್ರುತಿಗಳೇ ಅವರ ವಚನಗಳು[೩೮] ಅವು ಮೊದಮೊದಲು ಲಿಂಗಾಯತ ಧರ್ಮ ಪ್ರಸಾರದ ಧ್ಯೇಯವನ್ನಿರಿಸಿಕೊಂಡು ಹುಟ್ಟಿದರೂ ಆನಂತರ ಅನೇಕ ಸಮಾಜ ಸಮ್ಮುಖವಾದ ವಿಚಾರಗಳನ್ನು ಅಭಿವ್ಯಕ್ತಿಸಿದವು. ಆಧುನಿಕ ಯುಗದ ವಚನಕಾರರಲ್ಲಿ ಕೆಲವರನ್ನು ಬಿಟ್ಟು ಉಳಿದವರೆಲ್ಲ ಯಾವುದೇ ಧರ್ಮ ಹಾಗೂ ಅದರ ತತ್ವಗಳ ಪ್ರಚಾರಕ್ಕೆಂದು ವಚನಗಳನ್ನು ಬರೆಯಲಿಲ್ಲ. ಅದೊಂದು ಸಾಹಿತ್ಯ ಪ್ರಕಾರವೆಂದೇ ಬಳಸಿರುವುದು ಕಂಡುಬರುತ್ತದೆ. ಇವರ ಮೂಲ ಕಾಳಜಿ ಸಮಕಾಲೀನ ಸಮಾಜದಲ್ಲಿನ ನಾನಾ ಸಮಸ್ಯೆಗಳಿಗೆ ಸ್ಪಂದಿಸುವುದೇ ಆಗಿದೆ. 'ಒಂದು ಮತಶಾಸ್ತ್ರ, ತತ್ವಗಳ ಪಡಿಯಚ್ಚಿನ ಮೇಲೆ ಆಧುನಿಕ ವಚನಗಳು ರಚನೆಯಾಗಿಲ್ಲ ಲೌಕಿಕ ಜೀವನಾನುಭವದ ವಾಸ್ತವ ಜಗತ್ತಿನ ಆಗು ಹೋಗುಗಳ ಸುತ್ತ ಹೆಣೆದುಕೊಂಡು ಬಂದಿರುವುದರಿಂದ ಇವು ಜನಸಾಮಾನ್ಯರಿಗೂ ಅರ್ಥವಾಗುವಂತಿವೆ' ಎಂಬ ಎಂ.ಎಸ್. ಲಠ್ಠೆಯವರ ಮಾತು.[೩೯] ಆಧುನಿಕ ವಚನಕಾರರ ಶೈಲಿಯನ್ನು ಕುರಿತು ಹೇಳಿರುವಂತಿದೆ.

ಈ ಜಿಲ್ಲೆಗಳ ಆಧುನಿಕ ವಚನ ರಚನೆಯ ಶೈಲಿಯು ಪುರಾತನ ವಚನಕಾರರಿಗಿಂತ ವಿಭಿನ್ನ ನೆಲೆಯಲ್ಲಿದೆ. ಶರಣರ ವಚನಗಳಷ್ಟು ಪ್ರಭಾವಶಾಲಿ ಇವು ಎನಿಸುವುದಿಲ್ಲ. ಅದರಲ್ಲೂ ಕಾವ್ಯ ಶ್ರೀಮಂತಿಕೆಯಲ್ಲಿ ಬಸವಣ್ಣ, ಅಕ್ಕಮಹಾದೇವಿಯ ವಚನಗಳನ್ನು ಹೋಲುವ ರಚನೆಗಳು ತುಂಬಾ ಕಡಿಮೆಯಿವೆ ಎನಿಸುತ್ತದೆ. ಆಧುನಿಕರ ವಚನಗಳಿಗೆ ಬೇರೆ ಬೇರೆ ಸ್ವರೂಪಗಳಿವೆ. ಕೆಲವು ವಚನಗಳು ದೀರ್ಘವಾಗಿದ್ದು ಕವನಗಳ ಮಾದರಿಯಲ್ಲಿವೆ. ಆದರೆ ಅವುಗಳಲ್ಲಿ ಗದ್ಯದ ಗುಣವೇ ಹೆಚ್ಚಾಗಿದೆ.

ಉದಾ:–

'ನೀನು ಕಟ್ಟಿದ ತಾಳಿ
ಹಾಕಿದ ಕಾಲುಂಗ್ರ ತಗೆದು
ಸೀರೆಯ ಸೆರಗಿಗೆ ಗಂಟು ಹಾಕಿದೆ

.............................................

.............................................

ದಶದಿಕ್ಕಿಗೆ ಸಿಡಿದಾಗ

ಅದರ ಸದ್ದು

ನನ್ನ ನಿನ್ನ ನಡುವಣವಲ್ಲವೆ

ಶ್ರೀ ಗುರುಸಿದ್ಧ'[೪೦]

ಈ ವಚನದ ರಚನಾಶೈಲಿ ದೀರ್ಘವಾಗಿದ್ದು ಇದನ್ನು ವಚನವೆಂದು ಹೇಗೆ ಹೇಳಬೇಕು ಎನಿಸುವಂತಿದೆ. ಕೆಲವು ವಚನಗಳು ತ್ರಿಪದಿ, ಚೌಪದಿ, ಪಂಚಪದಿ, ಷಟ್ಪದಿಯ ರೂಪಗಳಲ್ಲಿವೆ. ಆದರೆ ತ್ರಿಪದಿಯೊಂದನ್ನುಳಿದು, ಉಳಿದ ವಚನಗಳು ಆಯಾ ಛಂದಸ್ಸಿನ ಲಕ್ಷಣಗಳನ್ನು ಹೊಂದಿಲ್ಲ. ಕೆಲವರು ಜಾನಪದ ಗೀತೆಗಳ ದಾಟಿಯಲ್ಲಿ ವಚನ ರಚಿಸಿದ್ದು ತಿಳಿದುಬರುತ್ತದೆ.

ಪ್ರಾಚೀನ ಮಾದರಿಯ ವಚನಗಳಂತಿದ್ದರೂ ಇವುಗಳ ವಿನ್ಯಾಸ, ವೈವಿಧ್ಯತೆ, ನಾವಿನ್ಯತೆ, ವಸ್ತುವಿನ ಆಶಯ, ತಂತ್ರ ಶೈಲಿಯಲ್ಲಿ ಭಿನ್ನತೆ ಪಡೆದಿವೆ. ಹೇಳುವ ಪರಿಯಲ್ಲಿ ವಸ್ತುವಿನ ವೈಚಾರಿಕತೆಯಲ್ಲಿ, ಪದಪುಂಜಗಳ ಜೋಡಣೆಯಲ್ಲಿ ತಮ್ಮದೇ ಆದ ವಿಶಿಷ್ಟತೆಯಿಂದ ಆಧುನಿಕ ವಚನಗಳು ಕಣ್ಮನ ಸೆಳೆಯುತ್ತವೆ.

'ಅಲ್ಲಿ ಇರುವುದು ನಮ್ಮ ಮನೆ ಎನ್ನುವವರು

ಇಲ್ಲಿಗೇಕೆ ಬಂದರಯ್ಯಾ?

ಇಲ್ಲಿರುವುದು ಸುಮ್ಮನೆ ಎನ್ನುವವರು

ಅಲ್ಲಿಗೇಕೆ ಹೋಗರಯ್ಯಾ?

ಅಲ್ಲಿ ಇಲ್ಲಿ ಎಂಬ ಭೇದವ ಹುಟ್ಟಿಸಿ

ಗುಲ್ಲು ಮಾಡುತ್ತ ತಿರುಗುವ

ಗಲ್ಲಿ ಹೋಕರ ಮುಖವ ತೋರದಿರಾ...'[೪೧]

ಕಲಬುರ್ಗಿ ಕನ್ನಡದ ವಿಶಿಷ್ಟಶೈಲಿಯಲ್ಲಿರುವ ಈ ವಚನ ಆಡುಮಾತಿನ ಸಂಭಾಷಣೆಯ ರೂಪದಲ್ಲಿ ಅಭಿವ್ಯಕ್ತಗೊಂಡಿದ್ದು, ಪರಿಣಾಮಕಾರಿಯಾಗಿ ವಿಷಯವನ್ನು ಅರುಹುತ್ತದೆ. ಜನಸಾಮಾನ್ಯರಿಗೆ ಸಹಜವಾಗಿ, ಸರಳವಾಗಿ ಅರ್ಥವಾಗುವ ಪರಿ ಹಾಗೂ ವಸ್ತುವಿನ ಆಶಯ ಇಲ್ಲಿ ಈಡೇರಿರುವುದನ್ನು ಕಾಣಬಹುದು.

ಹಲವರ ರಚನೆಗಳು ಬಸವಾದಿ ಶರಣರ ವಚನಗಳ ಪಡಿನೆಳಲಿನಂತಿದ್ದು, ವಸ್ತು ಆಶಯ, ಭಾಷೆ, ಶೈಲಿ ಹಾಗೂ ವಚನದ ಸ್ವರೂಪಗಳಲ್ಲೂ ಗಮನಸೆಳೆಯುತ್ತವೆ. ಪ್ರಾಚೀನರಲ್ಲಿದ್ದ ಧಾರ್ಮಿಕತೆ, ಭಕ್ತಿಗಿಂತ ಆಧುನಿಕರಲ್ಲಿ ವೈಚಾರಿಕತೆ ಹಾಗೂ ಆದರ್ಶ ಮತ್ತು ಇಂದಿನ ವಾಸ್ತವಿಕ ನೆಲೆ ಎದ್ದು ಕಾಣುತ್ತದೆ.

ಉದಾ–

'ಉಳ್ಳವರು ಉತ್ಸವ ಮಾಡುವರಯ್ಯಾ

ಕಳ್ಳರು ಜಾತ್ರೆಯಲ್ಲಿ ಮೆರೆವರು

ನಾನೇನು ಹೋಗಲಿ ಕಿಸೆ ಇಲ್ಲದವನಯ್ಯಾ

ಎಲ್ಲ ಬಲ್ಲಿದ ನೀನು, ಇಲ್ಲೇಕೆ ಬರುವಿ?

ಸುಳ್ಳರ ಸಂತೆಯಲ್ಲಿ ನೀ ಸಿಲುಕೆಯಯ್ಯಾ
ಮೆಲ್ಲಗೆ ಮರೆಯಲ್ಲಿ ನಿಂತು, ಪಲ್ಲಕ್ಕಿ ಹೊರುವರ ಕಂಡು
ನೀ ಮರುಗುವೆಯೋ? ಇಲ್ಲಾ ಮುನಿಯುವೆಯೋ?
ನಾ ಕಾಣೆ ಸೋಮಲೋಚನಪ್ರಿಯ ಬಸವಣ್ಣ'[೪೨]

ಬಸವಣ್ಣನವರ 'ಉಳ್ಳವರು ಶಿವಾಲಯ ಮಾಡುವರಯ್ಯಾ' ವಚನದ ದಾಟಿಯಲ್ಲಿ ಆರಂಭವಾಗುವ ಈ ವಚನ ಇಂದಿನ ಜಾತ್ರೆಗಳ ವೈಪರೀತ್ಯವನ್ನು ವೈಚಾರಿಕ ನೆಲೆಯಲ್ಲಿ ಪ್ರಶ್ನಿಸುತ್ತ ಖಂಡಿಸುತ್ತದೆ. ಈ ವಚನದ ಶೈಲಿ, ತಂತ್ರ, ಆಶಯಗಳು ಮೂಲ ಬಸವಣ್ಣನವರ ವಚನಕ್ಕಿಂತ ಭಿನ್ನವಾಗಿದ್ದು ವಾಸ್ತವಿಕ ಘಟನೆಯೊಂದನ್ನು ಪರಿಣಾಮಕಾರಿಯಾಗಿ ಹಿಡಿದಿಟ್ಟಿದೆ ಎನ್ನಬಹುದು. ಹನ್ನೆರಡನೆಯ ಶತಮಾನದ ಶರಣರ ವಚನಗಳ ಪ್ರಭಾವವನ್ನು ದಕ್ಕಿಸಿಕೊಂಡಿರುವ ಭಾಷಾಶೈಲಿಯು ಭಿನ್ನವಾದ ರೀತಿಯಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಮನಗಾಣಬಹುದು.

ಸ್ತ್ರೀ ಶೋಷಣೆ, ಮಾನವ ಸ್ವಭಾವದ ಇಬ್ಬಂದಿತನ, ಭ್ರಷ್ಟಾಚಾರ, ವಂಚನೆ, ಸ್ವಾರ್ಥ, ಅನ್ಯಾಯ, ದೌರ್ಜನ್ಯ, ವ್ಯವಸ್ಥೆಗೆ ಕಾರಣರಾದವರನ್ನು ಹೀಗಳೆಯುವ ರೀತಿ, ಬಂಡಾಯ ಮನೋಭಾವ, ನಿಷ್ಠುರವಾಗಿ ಇಲ್ಲಿ ವ್ಯಕ್ತವಾಗಿವೆ. ಬಹಳ ವಚನಕಾರರು ಹರಿತವಾದ ಬರಹಗಳಿಂದ ಮೊನಚಾದ ಮಾತುಗಳಿಂದ, ತಮ್ಮದೇ ಆದ ಧ್ಯೇಯ–ಧೋರಣೆಗಳಿಂದ, ಆಶಯ–ಅಭಿವ್ಯಕ್ತಿ ನೆಲೆಯಲ್ಲಿ ವಚನ ಶೈಲಿಯನ್ನು ಹೆಣೆದಿದ್ದು, ಅವು ವಾಸ್ತವಿಕ ಸಂಗತಿಗಳನ್ನು ತೋರಿಸುವಲ್ಲಿ, ಜನಸಾಮಾನ್ಯರಿಗೆ ಅರ್ಥವಾಗುವಲ್ಲಿ ಸಫಲತೆ ಹೊಂದಿವೆ ಎನ್ನಬಹುದು. ಪ್ರಾದೇಶಿಕವಾದ ಲಯ, ಸೌದರ್ಯಪ್ರಜ್ಞೆ, ಅವರದೇ ಆದ ವಿಶ್ಲೇಷಣೆಗಳನ್ನು ನಿರೂಪಿಸುವ ತಂತ್ರಗಾರಿಕೆ ಇಲ್ಲಿದೆ.

ಯಾವುದೇ ತರದ ಒತ್ತಾಯ, ಒತ್ತಡಗಳಿಲ್ಲದ ಇಲ್ಲಿಯ ವಚನಗಳು ನೇರವಾದ ಅಭಿವ್ಯಕ್ತಿ ನೆಲೆಯಲ್ಲಿ ರಚನೆಗೊಂಡಿದ್ದು ಆಕರ್ಷಕವಾಗಿವೆ. ಲೋಕೋಕ್ತಿ, ನಾಣ್ಣುಡಿ, ಸುಭಾಷಿತ, ಶ್ಲೋಕಗಳನ್ನು ಸಮರ್ಥವಾಗಿ ದುಡಿಸಿಕೊಂಡದ್ದು ಎದ್ದು ಕಾಣುತ್ತದೆ. ಪ್ರಾಚೀನ ವಚನಗಳ ಪ್ರಭಾವಕ್ಕೊಳಗಾಗಿದ್ದರೂ ಇಲ್ಲಿಯ ಅಭಿವ್ಯಕ್ತಿಗಳಲ್ಲಿ ಸ್ವತಂತ್ರತೆಯಿದೆ, ವಾಸ್ತವಿಕ ಪ್ರಪಂಚದ ಅರಿವಿದೆ, ಎಲ್ಲಕ್ಕಿಂತ ಹೆಚ್ಚಾಗಿ ಸಮಕಾಲೀನ ಬದುಕಿನ ಅನಿವಾರ್ಯತೆ, ಅನುಭವಗಳ ಸಂಗಮವಿದೆ ಎನ್ನಬಹುದು.

'ಬಾಳ ಬಯಲ ಜಾತ್ರೆಯಲ್ಲಿ ಏನುಂಟು? ಏನಿಲ್ಲ', 'ಮಾನವನ ಆತ್ಮ ವಿಕಾಸದ ಬೆನ್ನುಡಿ ಈ ಶರಣರ ಸೂಳ್ನುಡಿ' 'ಮಣ್ಣಾಗಿದ್ದ ಮೈತೊಳೆದು ಹಣೆಗೆ ವಿಭೂತಿ ಹಚ್ಚಿದವರು' 'ದೇಶ ಗೌರವಿಸದವನು ಸೈನಿಕನಾಗಲಾರ' 'ಪರಿಮಿತದ ಬಾಳಿಗೆ ವಿಪರಿತ ತ್ಯಾಗಿ ತಾಯಿ' 'ಸಸಿಯು ಬಿಸಿಲಿಗೆ ಬಾಡಿದಂತೆ ಹಸಿದವನ ಮುಖ ನೋಡಯ್ಯಾ' 'ಬರವಣಿಗೆಗಿಂತ ಬದುಕು ದೊಡ್ಡದು ತಾನೇ?' 'ಜಾತ್ಯಾತೀತವೆಂದರೆ ಇಂದು ಜಾತಿ ರಾಜಕಾರಣ' 'ನಿನಗೆ ಗುಡಿಕಟ್ಟಿದವರೆಲ್ಲ ಇಲ್ಲಿ ಮನೆಯಿಲ್ಲದವರು' (ಸೋಮನಾಥ ಯಾಳವಾರರ 'ಆನು ಒಲಿದಂತೆ ಹಾಡುವೆ' ೨೦೧೩ ಪುಸ್ತಕದಲ್ಲಿ) ಈ ಸಾಲುಗಳು, 'ನ್ಯಾಯವೆಂಬುದು ನೋವುಂಡ ಜನತೆಯ ಬೇಡಿಕೆಯಯ್ಯಾ' 'ಏನು ಓದಿ ಏನು ಫಲ ವರದಕ್ಷಿಣೆ ಪಡೆದು ಮದುವೆಯಾದರೆ' 'ಧರ್ಮ ಬೆಳೆಯಲಿಲ್ಲವಯ್ಯಾ ಮತ ಧರ್ಮ ಬೆಳೆಯಿತು' 'ಎರಡಳಿದೆವೆಂದು ಅದ್ವೈತಿಗಳಾದವರು ಒಂದನೇನ ಬಲ್ಲರಯ್ಯಾ' 'ಆಸೆಯೆಂಬ ಹೆಂಡತಿಗೆ ಅಮಿಷವೆಂಬ ಗಂಡ' 'ಆಸೆ ಇಲ್ಲವೆನ್ನುವವರು ನಿರಾಶೆಯಾಗುವುದೇಕಯ್ಯಾ' (ಸಬರದ ಬಸವನ ವಚನಗಳಲ್ಲಿ) 'ನಾನೇ ಸಕಲ ಸೃಷ್ಟಿ ಶೂನ್ಯ ಬಯಲು' 'ಸೆರೆ ನಿಶೆ ಏರಿ ಕೆಟ್ಟರು, ಕೆಡಿಸಿದರು' 'ಕವಿಯಾಗಿ ಕವಿಗಳಲ್ಲಿ ಕಳೆದುಹೋರಯ್ಯಾ'

'ಇಹಲೋಕಕ್ಕೂ ಪರಲೋಕಕ್ಕೂ ಎತ್ತಣಿಂದ ಎತ್ತ ಸಂಬಂಧವಯ್ಯಾ' 'ಧರ್ಮವೆಂಬುದು ಅಂತರಂಗದ ಆಭರಣ' 'ವಿಪರೀತ ಕಲ್ಪನೆಗಳೇ ಅನಾಹಿತಕ್ಕೆ ಕಾರಣ' 'ಲೋಕವೆಂಬುದು ಕರ್ತಾರನ ಕಾಯ' (ಮಹಾದೇವ ಬಡಿಗೇರರ ಬದುಕಿನ ವಚನಗಳಲ್ಲಿ) 'ತಿಲದೊಳಗಿನ ತೈಲವು ಹತ್ತಿಯ ಸಂಗ ಬಯಸಿ ಲೋಕ ಬೆಳಗುವುದು' 'ಕಲಿತವರು ಕಲ್ಲೊಳಗೆ ಭೂತವನು ಅರಸುವರು' 'ಸತ್ಯವೆಂಬುದು ಒಂದು ಅರಿವು' 'ಎಲ್ಲ ಮೋಡಗಳು ಮಳೆ ಸುರಿಸುವುದಿಲ್ಲ' 'ಬಿಟ್ಟು ಬಂದ ಮನೆಯ ತುಂಬ ಕಸ ಹುಲ್ಲು ಬೆಳೆದಿದೆ. (ನಾಗೇಂದ್ರ ಮಸೂತಿಯವರ ವಚನಗಳಲ್ಲಿ) ಹಾಗೂ 'ಪಾತರದವಳ ಕಾಯಕ ನಿಷ್ಠೆ ಪಾತ್ರ ಹಾಕುವುದರಲ್ಲಿ' 'ಕಮ್ಮಟದ ಸಂಸ್ಕಾರ ಸಂತತಿಯ ಮೇಲೆ ಸಹಜ' 'ಹೆಂಡತಿ ಮನ ಕದಡಿದರೆ ಸೇರುವಳು ಒಳಮನೆ' 'ರಾತ್ರಿ ತೋಡಿದ ಬಾವಿಯಲ್ಲಿ ಹಗಲುಬಿದ್ದರು ತೋಡಿದವರೇ' 'ಹೆಣದವರು ಹೆಣಕ್ಕೆ ಅತ್ತರೆ ಸನಾದಿಯವರು ತಮ್ಮ ಹಣಕ್ಕೆ ಅಳುತ್ತಾರೆ' 'ನಿಶೆಯಲ್ಲಾಡಿದ ಮಾತು ಕಿಸೆಯಲಿಲ್ಲ' 'ಒಡೆಯ ಬಂದನೆಂದು ಬಾಲ ಮುದುರಬೇಡ (ಜಯಶ್ರೀ ದಂಡೆಯವರ ಸ್ವಭಾವದ ವಚನಗಳಲ್ಲಿ) 'ದುಡಿಯದೆ ಉಣ್ಣುವ ಕುನ್ನಿಗಳ ಕೈಯಲ್ಲಿ ಸಿಕ್ಕು ಸುಣ್ಣವಾದವಳು ಹೆಣ್ಣು' 'ದಾಸತ್ವ ನೀಗಿದವನೇ ನಿಜ ಮಾನವ' 'ಹಣಬಂತು ಮಾನ ಹೋಯ್ತು' 'ತಿಂದದ್ದು ಕಾರಬಹುದಲ್ಲದೆ ಕಾರಿದ್ದು ತಿನಬಹುದೇ?' 'ವಚನ ಪಚನ ಮಾಡಿಕೊಂಡು ನಡೆದವರ ಕಾಣೆನು' 'ಮಾತಿನ ಚತುರತೆಗೆ ಭಾಷೆ ಕಲಿತರೆ ಸಾಕೇನಯ್ಯಾ' (ಸೂಗಯ್ಯ ಹಿರೇಮಠರ ವಚನಗಳಲ್ಲಿ) 'ಬಸವನ ಹೆಸರೇ ಕರುಣೆಗೆ ನೆಲೆಯಾಯಿತ್ತು' 'ಮೌಢ್ಯದ ಹೊಲಿಗೆಯನು ಬಿಚ್ಚಬಲ್ಲಾತನೇ ಶರಣ' 'ಮನುಜರಾಗಿ ಜಗಳ ಕಾಯುತಿರಲು ನಾವಲ್ಲ ಮನುಜರು' (ಎಂ.ಜಿ. ಗಂಗನಪಳ್ಳಿ ವಚನಗಳಲ್ಲಿ) 'ಹೆಣ್ಣು ಜಗದ ಕಣ್ಣಾಗುವುದು ಕಾಯಬೇಕಯ್ಯ' 'ಕಾದ ಕಲ್ಲಿನ ಮೇಲೆ ಜಲ ಎರಚಿದಂತೆ' 'ಹೊಟ್ಟೆಯೆಂಬುದು ತಿಪ್ಪೆಗುಂಡಿಯೇನಯ್ಯಾ' 'ಕಾವಿ ಉಟ್ಟವರೆಲ್ಲ ಸ್ವಾಮಿಗಳಲ್ಲ' (ವೀರಶೆಟ್ಟಿ ಬಾವುಗೆಯವರ ವಚನಗಳಲ್ಲಿ) 'ಆಳವಾದ ಬಾವಿಗೆ ಅಂಗೈಚಾಚಿದರೆ ನಿಲುಕಬಲ್ಲದೇ ನೀರು?' 'ಬೇವಿಗೆ ಸಕ್ಕರೆ ಬೇನೆ ಬಂದುದುಂಟೇ?' 'ಮಿಂಡನ ಕಂಡು ಗಂಡನ ಮರೆವ ಸತಿಯಂತೆ' 'ಇಲಿಯ ಹೊಟ್ಟೆಯಲ್ಲಿ ಹುಲಿ ಹುಟ್ಟಲಾರದು' 'ಬೆರಳು ಡೊಂಕು ಮಾಡದೆ ತುಪ್ಪ ಕೈಗೆ ಬಾರದು' (ದೇಶಾಂಶ ಹುಡಗಿಯವರ ವಚನಗಳಲ್ಲಿ) ಹೀಗೆ ಮುಂತಾದ ವಚನಕಾರರಲ್ಲಿ ಗಾದೆಮಾತು, ನಾಣ್ನುಡಿ, ಲೋಕೋಕ್ತಿಗಳು ಅರ್ಥವತ್ತಾಗಿ ಬಳಕೆಯಾಗಿವೆ. ಆಯಾ ಜಿಲ್ಲೆಯ ಪ್ರಾದೇಶಿಕ ಪದಗಳು, ವಾಖ್ಯಗಳು ಅರ್ಥಪೂರ್ಣವಾಗಿ ಪ್ರಯೋಗಗೊಂಡಿದ್ದು, ಇಲ್ಲಿಯ ವಚನಗಳು ಒಟ್ಟಾರೆಯಾಗಿ ವಸ್ತು ಭಾಷೆ ಹಾಗೂ ಶೈಲಿಯ ನೆಲೆಯಲ್ಲಿ ಮಹತ್ವ ಪಡೆದಿವೆ ಎಂಬುದನ್ನು ಕಂಡುಕೊಳ್ಳಬಹುದಾಗಿದೆ.

ಟಿಪ್ಪಣಿಗಳು

೧) ಡಾ. ಪ್ರೀತಿ – ಶುಭಚಂದ್ರ – ಇಪ್ಪತ್ತನೆಯ ಶತಮಾನದ ವಚನ ಸಾಹಿತ್ಯ – ಒಂದು ಅಧ್ಯಯನ – ಪು. ೨೫೦

೨) ಎಂ. ಶಿವಕುಮಾರ ಸ್ವಾಮಿ (ಪ್ರ. ಸಂ.) ಆಧುನಿಕ ವಚನವೇತ್ತರು – ಪು. ೧೨

೩) ರಾಮಚಂದ್ರ ಗಣಾಪುರ – ಗುಲಬರ್ಗಾ ಜಿಲ್ಲೆಯ ಆಧುನಿಕ ವಚನಕಾರರು – ಪು. ೧೦೧

೪) ಶೋಭಾ ಔರಾದೆ – ವಚನಸಿರಿ – ವ. ೧೦೯ – ಪು. ೨೯

೫) ಜಗದೇವಿ ದುಬಲಗುಂಡಿ – ವಚನ ಸುಗಂಧ – ವ. ೭೮ – ಪು. ೨೧

೬) ಎಂ. ಚಿದಾನಂದ ಮೂರ್ತಿ – ವಚನ ಸಾಹಿತ್ಯ – ಪು. ೨೦೦

೭) ಡಾ. ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ. ೭೫ – ಪು. ೫೯

೮) ಡಾ. ನೀಲಮ್ಮ ಕತ್ನಳ್ಳಿ – ಆಧುನಿಕ ವಚನ ಸಾಹಿತ್ಯ – ಪು. ೬೯

೯) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೧೩೭ – ಪು. ೪೦

೧೦) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನಗಳು – ವ. ೧೮೩ – ಪು. ೭೮–೭೯

೧೧) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೪೨ – ಪು. ೫೫

೧೨) ಡಾ. ಚಿತ್ಕಳಾ ಮಠಪತಿ – ಡಾ. ಶೈಲಜಾ ಉಡಚಣರ ಸಮಗ್ರ ಸಾಹಿತ್ಯ – ೩೩೪

೧೩) ದೇಶಾಂಶ ಹುಡಗಿ – ದಿಗಂಬರ ವಚನಗಳು – ವ. ೩೨೫ – ಪು. ೭೩

೧೪) ವಿಜಯಕುಮಾರ ಪರುತೆ – ವಚನಧಾರೆ – ವ. ೪೭ – ಪು. ೧೬

೧೫) ದೇಶಾಂಶ ಹುಡಗಿ – ದಿಗಂಬರ ವಚನಗಳು – ವ. ೧೪೯ – ಪು. ೩೫

೧೬) ಎಂ.ಜಿ. ಗಂಗನಪಳ್ಳಿ – ವಚನ ಮಂದಾರ – ವ. ೪೩ – ಪು. ೧೨

೧೭) ಡಾ. ಜಯಶ್ರೀ ದಂಡೆ – ಸ್ವಭಾವದ ವಚನಗಳು – ವ. ೨೯ – ಪು. ೧೧೫

೧೮) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೫ – ಪು. ೮೭

೧೯) ಎಂ.ಜಿ. ದೇಶಪಾಂಡೆ – ವಚನ ಚಂದ್ರಿಕೆ – ವ. ೮೪ – ಪು. ೩೧

೨೦) ಹಂಶಕವಿ – ದತ್ತದಿಗಂಬರ ವಚನಗಳು – ವ. ೩೫ – ಪು. ೯

೨೧) ಬಿ.ಎನ್. ಸುಮಿತ್ರಾಬಾಯಿ – ಸ್ತ್ರೀವಾದಿ ವಿಮರ್ಶೆ ಮತ್ತು ಆಧುನಿಕ ಮಹಿಳಾ ಸಾಹಿತ್ಯ ಅಭಿವ್ಯಕ್ತಿ – ಪು. ೪೨–೪೪

೨೨) ದೇಶಾಂಶ ಹುಡಗಿ – ದಿಗಂಬರ ವಚನಗಳು – ವ. ೧೧೪ – ಪು. ೨೭

೨೩) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೫೫ – ಪು. ೫೩

೨೪) ಶಾಂತಮ್ಮ ಬಲ್ಲೂರ – ವಚನಗೊಂಚಲು – ೭೬ – ಪು. ೨೪

೨೫) ಡಾ. ವಜ್ರಾ ಪಾಟೀಲ – ವಜ್ರೇಶ್ವರಿಯ ವಚನಗಳು – ವ. ೬೮ – ಪು. ೧೮

೨೬) ಡಾ. ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ. ೧೧೩ – ಪು. ೭೮

೨೭) ದೇಶಾಂಶ ಹುಡಗಿ – ದಿಗಂಬರ ವಚನಗಳು – ವ. ೮೨ – ಪು. ೧೯

೨೮) ಸೂಗಯ್ಯ ಹಿರೇಮಠ – ಸೂಗೂರೇಶ್ವರ ವಚನ – ವ. ೩೬ – ಪು. ೧೨೦

೨೯) ಶಾಂತಮ್ಮ ಬಲ್ಲೂರ – ವಚನ ಗೊಂಚಲು – ವ. ೧೪೦ – ಪು. ೪೫

೩೦) ಜಿ.ಎಸ್. ಶಿವರುದ್ರಪ್ಪ – ಪೂರ್ವ – ಪಶ್ಚಿಮ

೩೧) ಡಾ. ಜಯಶ್ರೀ ದಂಡೆ – ಸ್ವಭಾವದ ವಚನಗಳು – ವ. ೪೭ – ಪು. ೬೦

೩೨) ಡಾ. ನಾಗೇಂದ್ರ ಮಸೂತಿ – ಉರಿವ ಕೆಂಡವ ಹೊತ್ತು – ವ. ೮೫ – ಪು. ೩೮

೩೩) ಡಾ. ಮಹಾದೇವ ಬಡಿಗೇರ – ಬದುಕಿನ ವಚನಗಳು – ವ. ೪೯ – ಪು. ೧೫

೩೪) ಡಾ. ಸೋಮನಾಥ ಯಾಳವಾರ – 'ಆನು ಒಲಿದಂತೆ ಹಾಡುವೆ' – ವ. ೬೯ – ಪು. ೫೬

೩೫) 'ಆನು ಒಲಿದಂತೆ ಹಾಡುವೆ' – ಮುನ್ನುಡಿಯಲ್ಲಿ ಪು. ೦೬–೦೭

೩೬) ಜಗದೇವಿ ದುಬಲಗುಂಡೆ – 'ವಚನ ಸುಗಂಧ' – ವ. ೭೨ – ಪು. ೧೯

೩೭) ಡಾ. ಪ್ರೀತಿ ಶುಭಶ್ಚಂದ್ರ – ಇಪ್ಪತ್ತನೆಯ ಶತಮಾನದ ವಚನ ಸಾಹಿತ್ಯ – ಪು. ೨೧೩

೩೮) ಡಾ. ವ್ಹಿ.ಜಿ. ಪೂಜಾರ – ವಚನ ಸಾಹಿತ್ಯ ಸಮೀಕ್ಷೆ – ಪು. ೧೮೪

೩೯) ಡಾ. ಎಂ.ಎಸ್. ಲಠ್ಠೆ – ವಚನೋಧ್ಯಾನದ ಕೊನನೆಯ ಪುಟದಲ್ಲಿ

೪೦) ಡಾ. ನಾಗೇಂದ್ರ ಮಸೂತಿ – ಕೆಂಡಮಲ್ಲಿಗೆ – ವ. ೨೮ – ಪು. ೧೪

೪೧) ಡಾ. ಬಸವರಾಜ ಸಬರದ – ಸಬರದ ಬಸವನ ವಚನಗಳು – ವ. ೫೬ – ಪು. ೬೧

೪೨) ಡಾ. ಸೋಮನಾಥ ಯಾಳವಾರ – ಆನು ಒಲಿದಂತೆ ಹಾಡುವೆ – ವ. ೫೨ – ಪು. ೪೭

# ಅಧ್ಯಾಯ – ೭

## ಸಮಾರೋಪ (ಅಧ್ಯಯದ ಫಲಿತಗಳು)

ಕರ್ನಾಟಕದ ಪ್ರಮುಖ ಜಿಲ್ಲೆಗಳಲ್ಲಿ ಬೀದರ ಹಾಗೂ ಕಲಬುರ್ಗಿ ಜಿಲ್ಲೆಗಳು ಸಾಹಿತ್ಯ, ಕಲೆ, ಇತಿಹಾಸ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮದೆ ಆದ ಹಿರಿಮೆ ಗರಿಮೆಗಳಿಂದ ಪ್ರಸಿದ್ಧವಾಗಿವೆ. ಇಲ್ಲಿಯ ನೆಲ, ಜಲ, ಕಲೆಗಳಲ್ಲಿ ವಿಶಿಷ್ಟತೆಯಿದ್ದು, ಕನ್ನಡ ಸಾಹಿತ್ಯಕ್ಕೆ ೧೨ನೆಯ ಶತಮಾನದಲ್ಲಿ ನವೀನವಾಗಿರುವ ವಚನ ಸಾಹಿತ್ಯವನ್ನು ಕಾಣಿಕೆಯಾಗಿ ಇತ್ತಿದೆ. ಕನ್ನಡದ ಮೊಟ್ಟ ಮೊದಲನೆಯ ಉಪಲಬ್ದ ಗ್ರಂಥ ಕವಿರಾಜಮಾರ್ಗ ಕಲಬುರ್ಗಿ ಜಿಲ್ಲೆಯ ಮಾನ್ಯಖೇಟದ್ದಾಗಿದ್ದರೆ, ಕನ್ನಡದ ಮೊದಲನೆಯ ಗದ್ಯಗ್ರಂಥ ವಡ್ಡಾರಾಧನೆ ಬೀದರ ಜಿಲ್ಲೆಯ ಹಳ್ಳಿಖೇಡ(ಬಿ)ದ್ದು ಎನ್ನಲಾಗಿದೆ. ಅನೇಕ ಆಳರಸರ ಸಂಸ್ಕೃತಿ, ಅವರ ಹಲವು ಭಾಷೆಗಳ ಒತ್ತಡದ ನಡುವೆ, ಕಲ್ಯಾಣ ಕ್ರಾಂತಿಯ ಬಿಸಿ ಉಸಿರಲ್ಲಿ ಬೆಂದರೂ, ವಚನ ವಾಙ್ಮಯ ಪೂರ್ಣ ಸುಟ್ಟು ಹೋಗದೆ ಪುಟಕಿಟ್ಟ ಚಿನ್ನದಂತೆ ಉಳಿದು ಬಂದಿದ್ದು ವಿಶೇಷವೆನ್ನಬಹುದು.

ಅಂಥ ಶರಣರ ವಚನ ಸಾಹಿತ್ಯದ ಪ್ರೇರಣೆ ಹಾಗೂ ಆಧುನಿಕ ಕನ್ನಡ ಸಾಹಿತ್ಯದ ನವೋದಯ, ನವ್ಯಗಳ ಪ್ರಭಾವದ ಹಿನ್ನೆಲೆಯಲ್ಲಿ ಒಡಮೂಡಿಬಂದಿದೆ. ಆಧುನಿಕ ವಚನ ಸಾಹಿತ್ಯ. ಜೀವಂತ ಸಮಾಜದ ಜೀವನ ಸಾಹಿತ್ಯದಂತಿರುವ ಇದು, ಈ ಎರಡೂ ಜಿಲ್ಲೆಗಳಲ್ಲಿ ಈಗ ಗಣನೀಯ ಪ್ರಮಾಣದಲ್ಲಿ ಬೆಳೆದು ನಿಂತಿರುವುದನ್ನು ಗಮನಿಸಬಹುದು. ಕನ್ನಡಿಗರು ವಿಶ್ವಸಾಹಿತ್ಯಕ್ಕೆ ನೀಡಿರುವ ಮಹತ್ವಕೊಡುಗೆಗಳಲ್ಲಿ ವಚನ ಸಾಹಿತ್ಯ ಪ್ರಮುಖವಾಗಿದೆ. ಈ ಸಾಹಿತ್ಯದ ಸ್ವರೂಪ, ರಚನೆ, ವೈಶಿಷ್ಟ್ಯಗಳು ವಿಶ್ವಸಾಹಿತ್ಯದಲ್ಲಿಯೇ ಅಪರೂಪವಾಗಿವೆ. 'ಲಿಂಗ ಮೆಚ್ಚಿ ಅಹುದು ಅಹುದು' ಎನ್ನುವಂತಿರುವ ಈ ಸಾಹಿತ್ಯದ ಪಡಿನೆಳಲಂತೆ ಮೂಡಿನಿಂತಿರುವುದು ಆಧುನಿಕ ವಚನ ಸಾಹಿತ್ಯ.

ಆಧುನಿಕ ವಚನ ಸಾಹಿತ್ಯವು ಇಂದು ಕಾಲಮಾನದ ಅಗತ್ಯಕ್ಕೆ ತಕ್ಕಂತೆ ವಿಶಿಷ್ಟವಾದ ಒಂದು ಅನುಭವ ಮಾರ್ಗವಾಗಿ ಅಭಿವ್ಯಕ್ತವಾಗಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. 'ವಚನ'ವೆನ್ನುವುದನ್ನು ಆಧುನಿಕರು ೧೨ನೆಯ ಶತಮಾನದಲ್ಲಿಯ ಅರ್ಥದಂತೆ ಬಳಸಿಕೊಂಡಿದ್ದರೂ, ಅದು ಇಂದು ಸೂಳ್ನುಡಿ, ನುಡಿಗಡಣ, ಅನುಭಾವಿಗಳ ಅಣಿಮುತ್ತಾಗದೆ ಕನ್ನಡ ಸಾಹಿತ್ಯದ ಒಂದು ಪ್ರಕಾರವಾಗಿರುವುದನ್ನು ಅರಿಯಲಾಗಿದೆ. ಈ ಎರಡೂ ಜಿಲ್ಲೆಯ ಆಧುನಿಕ ವಚನಕಾರರ ವಚನಗಳಲ್ಲಿ ದೈವ ಭಕ್ತಿ, ದೇಶದ ಚಿಂತನೆ, ಸಾಮಾಜಿಕ ವಿಡಂಬನೆ, ಮಾನವೀಯ ನೆಲೆ, ಅನುಕಂಪ, ಜೀವನ ಮೌಲ್ಯಗಳ ಪ್ರತಿಪಾದನೆ, ಪ್ರೀತಿ–ನೀತಿ, ರಾಜಕೀಯ ವ್ಯವಸ್ಥೆ, ಸಾಂಸ್ಕೃತಿಕ ಬದುಕು ಮುಂತಾದ ವಿಷಯಗಳು ಇಲ್ಲಿಯ ವಚನಗಳಿಗೆ ವಸ್ತುಗಳಾಗಿವೆ.

ಶರಣರ ವಚನಗಳ ಪ್ರಭಾವ ಪ್ರೇರಣೆಯಿಂದ ಆಧುನಿಕ ವಚನ ರಚನೆಕಾರರು, ರಚನಾ ಸ್ವರೂಪ, ವಿನ್ಯಾಸ, ವಚನಾಂಕಿತಗಳನ್ನು ಅವರಂತೆ ಬಳಸಿಕೊಂಡಿದ್ದರೂ ಅವು ಇಷ್ಟದೈವ, ಇಷ್ಟಗುರು, ಸ್ವನಾಮ, ತಾವು ಮೆಚ್ಚಿದ ಹೆಸರು ಮುಂತಾದವುಗಳನ್ನು ಉಪಯೋಗಿಸಿಕೊಂಡಿದ್ದಾರೆ. ಅವುಗಳಲ್ಲಿ 'ಸತ್ಯಜ್ಞ' ಸೂಗೂರೇಶ್ವರ, ಶಾಸನೇಶ್ವರಿ, ಕಾಳೂರಲಿಂಗ, 'ವಿಶಾಲಪ್ರಿಯ ಚನ್ನಬಸವ' 'ಸೋಮಲೋಚನ ಪ್ರಿಯ ಬಸವಣ್ಣ' 'ಆಚಾರ ಪ್ರಿಯ ಬಸವಲಿಂಗ' 'ಶ್ರೀ ಗುರುಸಿದ್ಧ' 'ದಿಗಂಬರ ಕರಿಬಸವೇಶ್ವರ' 'ಎಡಬಿಡಂಗಿ ದೇವ' 'ಚೆನ್ನಣ್ಣ ವಾಲಿಕಾರ' 'ಸಬರದ ಬಸವ' 'ಮಾಣಿಕ ವಿಠ್ಠಲ' 'ಪ್ರಭು' 'ಗುರುಮಹಾಂತ' 'ಗುರುಚನ್ನಬಸವ' 'ಗುರುನಂಜೇಶ' ಮೊದಲಾದವುಗಳನ್ನು ಇಲ್ಲಿ ಗಮನಿಸಬಹುದು.

ಆಧುನಿಕ ವಚನಕಾರರು ವಸ್ತು ವೈವಿಧ್ಯದ ದೃಷ್ಟಿಯಿಂದ, ವಚನರಚನಾ ವಿನ್ಯಾಸದ ದೃಷ್ಟಿಯಿಂದಲೂ ಪ್ರಾಚೀನರಿಗಿಂತ ಭಿನ್ನವಾಗಿ ಕಾಣುತ್ತಾರೆ. ಇವರ ವಚನಗಳಲ್ಲಿ ದೈವಭಕ್ತಿ ಪ್ರತಿಪಾದನೆ, ರಾಜಕೀಯ ವಿಮರ್ಶೆ, ವೈಯಕ್ತಿಕ ವಿಮರ್ಶೆ, ವ್ಯಕ್ತಿತ್ವ ನಿರ್ಮಾಣ, ಸಾಮಾಜಿಕ ವಿಡಂಬನೆ, ಜನಪರ ಆದರ್ಶ, ವಾಸ್ತವಿಕ ನೆಲೆಯ ವಿವರಣೆ ಮೊದಲಾದ ವಸ್ತು ವಿಷಯಗಳಲ್ಲಿ ಚಿಂತನೆಗೆ ಒಳಗಾಗಿವೆ.

ಇಲ್ಲಿಯ ಆಧುನಿಕ ವಚನಕಾರರಲ್ಲಿ ಹೆಚ್ಚಿನವರು ಶಿಕ್ಷಕ ವೃತ್ತಿಯಲ್ಲಿದ್ದವರು, ಕೆಲವರು ಧಾರ್ಮಿಕ ಸಂಘ ಸಂಸ್ಥೆಗಳ ಸದಸ್ಯರಾಗಿರುವುದರಿಂದ ಹೆಚ್ಚಾಗಿ ಆದರ್ಶ ಸಮಾಜದ ಕಳಕಳಿಯನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ. ಆದರೆ ಶರಣರಂತೆ ಧರ್ಮ ಪ್ರಚಾರ ಮಾಡುವ ಉದ್ದೇಶ ಹೊಂದಿದವರಲ್ಲ. (ಕೆಲವರನ್ನುಳಿದು) ಬಹಳ ಜನ ವಚನಕಾರರಲ್ಲಿ ಪಾರಮಾರ್ಥಿಕ ಮೌಲ್ಯಗಳ ಪ್ರತಿಪಾದನೆಯಿದೆ. ಆದರೆ ಆ ಮೌಲ್ಯಗಳ ಸಾಂಪ್ರದಾಯಿಕತೆಯನ್ನು ಪ್ರೋತ್ಸಾಹಿಸದೆ , ವೈಚಾರಿಕ ನೆಲೆಯಲ್ಲಿ ಅವುಗಳನ್ನು ವಿವೇಚಿಸಿರುವ ನೆಲೆಗಳು ಕಾಣುತ್ತವೆ. ಇಂಥ ವಚನಕಾರರಲ್ಲಿ ಕಲಬುರ್ಗಿ ಜಿಲ್ಲೆಯ ಜಯಶ್ರೀ ದಂಡೆ, ಬಸವರಾಜ ಸಬರದ, ಪ್ರೊ. ಸೂಗಯ್ಯ ಹಿರೇಮಠ, ಮಹಾದೇವ ಬಡಿಗೇರ ಹಾಗೂ ನಾಗೇಂದ್ರ ಮಸೂತಿ, ವಿಶಾಲಾಕ್ಷಿ ಹಿರೇಮಠರು ಪ್ರಮುಖವೆನಿಸಿದರೆ, ಬೀದರ ಜಿಲ್ಲೆಯಲ್ಲಿ ಗಿರಿಜಾ ಧರ್ಮರಡ್ಡಿ, ವೀರಶೆಟ್ಟಿ ಬಾವುಗೆ ಸೋಮನಾಥ ಯಾಳವಾರ ಹಾಗೂ ಕರುಣಾ ಸಲಗರ ಅವರು ಗಮನಾರ್ಹವೆನಿಸುತ್ತಾರೆ. ಶ್ರೀ ಶಿವಾನಂದ ಸ್ವಾಮಿಗಳು ಹುಲಸೂರ, ಚೆನ್ನಪ್ಪ ಮೋರ್ಗೆಯವರು, ಬಸವರಾಜ ಹದನೂರೆಯಂಥವರು ಮಠಗಳ ಪರಿಸರದಲ್ಲಿದ್ದುಕೊಂಡವರು. ಅವರು ಲಿಂಗಾಯತ ಧರ್ಮ ತತ್ವಗಳ ಪ್ರಚುರತೆಯನ್ನು ಹೆಚ್ಚಾಗಿ ವಿವೇಚಿಸಿದ್ದು ಕಂಡುಬರುತ್ತದೆ.

ಎಂ.ಜಿ. ಗಂಗನಪಳ್ಳಿ, ಚನ್ನಣ್ಣ ವಾಲಿಕಾರ, ಸರಸ್ವತಿ ಚಿಮ್ಮಲಗಿ, ಎಂ.ಜಿ. ದೇಶಪಾಂಡೆ, ಶಾಂತಮ್ಮ ಬಲ್ಲೂರ, ವಜ್ರಾ ಪಾಟೀಲ, ದೇಶಾಂಶ ಹುಡಗಿ, ಹಂಶಕವಿ, ವಿಜಯಕುಮಾರ ಪರುತೆ ಮೊದಲಾದವರು ತಾವು ಬಾಳುತ್ತಿರುವ ಸಮಾಜದಲ್ಲಿಯ ಆಗು ಹೋಗುಗಳನ್ನು ತಿಳಿಸಲು ಪ್ರಯತ್ನಿಸಿದ್ದಾರೆ. ವಾಸ್ತವ ಬದುಕಿನ ಅನೇಕ ಸಂಗತಿಗಳು ಆದರ್ಶದ ಹಿನ್ನೆಲೆಯಲ್ಲಿ ಅಭಿವ್ಯಕ್ತವಾಗಿವೆ ಇಲ್ಲಿ.

ಈ ಎಲ್ಲ ವಚನಕಾರರಲ್ಲಿ ಸಮಕಾಲೀನ ಸಮಾಜದ ದಟ್ಟವಾದ ಅನುಭವಗಳನ್ನು ಅನಿಸಿಕೆ ಆಸಕ್ತಿಗಳನ್ನು ಕಂಡುಕೊಳ್ಳಬಹುದಾಗಿದ್ದು, ಅವರು ತಾವು ಕಂಡಿರುವ ಸಂಗತಿಗಳನ್ನು ತಮ್ಮದೇ ಆದ ರೀತಿಯಲ್ಲಿ ವಚನಗಳ ಮಾಧ್ಯಮದ ಮೂಲಕ ಹೇಳಿಕೊಂಡಿರುವುದನ್ನು ಅರಿಯಬಹುದಾಗಿದೆ.

೧೨ನೆಯ ಶತಮಾನದ ವಚನಗಳನ್ನು ಅನುಸರಿಸಿಕೊಂಡು ಸೃಷ್ಟಿಯಾಗಿರುವ ಆಧುನಿಕ ವಚನಗಳು ಕನ್ನಡ ಸಾಹಿತ್ಯದ ಒಂದು ಪ್ರಕಾರವಾಗಿ ಇಂದು ಗುರುತಿಸಿಕೊಂಡಿದೆ. ರೂಪ, ರಚನಾ ವಿಧಾನ, ವಸ್ತು ವಿಷಯ–ಪ್ರೇರಣೆ–ಧೋರಣೆಗಳಲ್ಲಿ ಶರಣರ ವಚನಗಳಿಗಿಂತ ಭಿನ್ನವಾಗಿರುವ ನೆಲೆಯನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ವಚನಗಳ ಪರಿಭಾಷೆಯಲ್ಲಿ ತಮ್ಮನ್ನು ಅತ್ಯಂತ ಯಶಸ್ವಿಯಾಗಿ ದುಡಿಸಿಕೊಂಡಿರುವ ಇಲ್ಲಿಯ ಆಧುನಿಕ ವಚನಕಾರರು, ಆತ್ಮನಿವೇದನೆ, ವ್ಯಕ್ತಿತ್ವ ನಿರೂಪಣೆ, ಸಮಾಜ ವಿಡಂಬನೆಗೆ ಮಹತ್ವ ನೀಡಿರುವುದು ಹೆಚ್ಚಾಗಿ ಕಂಡುಬರುತ್ತದೆ.

ವಚನ ವಿಶಿಷ್ಟತೆ, ಅದರ ವೈವಿಧ್ಯತೆ ಮುಕ್ತಕತೆಯ ಆಕರ್ಷಣೆಗೆ ಒಳಗಾಗಿರುವ ಆಧುನಿಕ ವಚನಕಾರರು ಇದೊಂದು ಆಕರ್ಷಕ ಸಾಹಿತ್ಯ ಪ್ರಕಾರವೆನಿಸಿದ್ದರಿಂದ ಅದರ ಬಹುತೇಕ ಲಕ್ಷಣಗಳನ್ನು ಅಳವಡಿಸಿಕೊಂಡು, ವಚನಗಳನ್ನು ರಚಿಸಿದ್ದು ಇಲ್ಲಿ ಮಹತ್ವದ್ದೆನಿಸುತ್ತದೆ.

ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳುವ ನಿಟ್ಟಿನಲ್ಲಿ ಕೆಲವು ವಚನಕಾರರು ವೈದ್ಯಕೀಯ ನೆಲೆ, ಆಧುನಿಕ ಯಂತ್ರೋಪಕರಣಗಳ ಉಪಯೋಗದ ನೆಲೆಯಲ್ಲಿ ಚಿಂತಿಸಿ, ವಿಜ್ಞಾನದ ಸದುಪಯೋಗ ಹಾಗೂ ಆಧುನಿಕ ಯಂತ್ರೋಪಕರಣಗಳ ಬಳಕೆ ನಿಯಮಿತವಾಗಿರಿಸಲು ಮಾರ್ಗದರ್ಶನ ಮಾಡಿದ್ದಾರೆ.

ಆಧುನಿಕ ವಚನಕಾರರು ಹೆಚ್ಚಾಗಿ ಪ್ರಸ್ತುತ ವಿದ್ಯಮಾನಗಳು, ಸಾಮಾಜಿಕ ಸಮಸ್ಯೆಗಳು, ರಾಜಕೀಯ ವಾತಾವರಣ, ಭ್ರಷ್ಟಾಚಾರ, ಗೊಡ್ಡು ಸಂಪ್ರದಾಯ ಡಾಂಭಿಕ ಆಚರಣೆ, ವ್ಯಕ್ತಿ ನೆಲೆ, ಮಾನಸಿಕ ನೆಲೆ, ಸಾಂಸ್ಕೃತಿಕ ಬದುಕನ್ನು ಕುರಿತಾಗಿ ವಚನಗಳನ್ನು ರಚಿಸಿದ್ದಾರೆ. ವಚನ ರಚನೆಯ ದೃಷ್ಟಿಯಿಂದ ಈ ವಿಷಯದ ಅಭಿವ್ಯಕ್ತಿಯು ಅರ್ಥಪೂರ್ಣವಾಗಿರುವುದು ಕಂಡುಬರುತ್ತದೆ. ಇಲ್ಲಿ ಸಾಮಾಜಿಕ ಸಂದರ್ಭಗಳ ವೇದನೆಗಳಿವೆ ನಿವೇದನೆಗಳಿವೆ, ಸಾಮಾಜಿಕ ಕಳಕಳಿ ಹೊತ್ತುಕೊಂಡಿರುವ ವೈಶಿಷ್ಟ್ಯಪೂರ್ಣ ರಚನಾತಂತ್ರಗಳೂ ಕಂಡುಬರುತ್ತವೆ.

ಆಧುನಿಕ ವಚನ ರಚನೆಕಾರರು ಓದುಗರಿಗೆ ಬಹು ಹತ್ತಿರವಾಗಬಲ್ಲ ವಸ್ತುನಿಷ್ಠೆ, ಸಮಾಜನಿಷ್ಠೆ, ವ್ಯಕ್ತಿನಿಷ್ಠೆ ವಚನಗಳನ್ನು ರಚಿಸಿದ್ದು. ಅವುಗಳಲ್ಲಿ ಸಂಕುಚಿತಭಾವನೆಯ ವಿರೋಧ ನಿಲುವುಗಳು ಮುಕ್ತವಾಗಿ ಅಭಿವ್ಯಕ್ತವಾಗಿವೆ. ಕಲಾತ್ಮಕತೆಯನ್ನು ಅನೇಕ ವಚನಗಳು ರೂಢಿಸಿಕೊಳ್ಳದಿದ್ದರೂ, ಸಮಾನತೆ, ಸಹಬಾಳ್ವೆ, ಭ್ರಾತೃತ್ವದಂತಹ ಬದುಕಿನ ನೆಲೆಗಳು ಮಾನವನಲ್ಲಿ ಒಡಮೂಡಬೇಕೆಂಬ ನಿಲುವಿಗೆ ಬದ್ಧವಾಗಿರುವುದನ್ನು ಕಾಣುತ್ತೇವೆ.

ನಿತ್ಯ ಜೀವನದಲ್ಲಿ ಹಾಸುಹೊಕ್ಕಾಗಿರುವ ಅನೇಕ ವೇದ್ಯ ಸಂಗತಿಗಳು, ಜೀವನದ ರೀತಿ-ನೀತಿಗಳು, ಅರಿವು-ಆಚಾರಗಳು, ಅನುಭವಕ್ಕೆ ದಕ್ಕುವ ಸಂಗತಿಗಳು ತಿಳುವಳಿಕೆಗಳು, ಜೀವನದ ಜವಾಬ್ದಾರಿಗಳು, ರಾಜಕೀಯ ಸ್ಥಿತ್ಯಂತರದಂತಹ ಸನ್ನಿವೇಶಗಳು, ವಾಸ್ತವ ಬದುಕಿನಲ್ಲಿ ಕಾಣುವ ಸತ್ಯಸಂಗತಿಗಳು. ರೈತರು, ಕಾರ್ಮಿಕರು, ರಾಜಕಾರಣಿಗಳು, ಶಿಕ್ಷಕರು, ಹೆಣ್ಣುಮಕ್ಕಳು, ಯಾಂತ್ರಿಕತೆಯ ಪ್ರಭಾವಗಳು, ಆಧುನಿಕ ವಚನಕಾರರ ಆಕರ್ಷಕ ಕ್ಷೇತ್ರಗಳಾಗಿದ್ದು ಅಲ್ಲಿ ಕಂಡುಬರುವ ದೃಶ್ಯಗಳನ್ನು, ತಮ್ಮ ಆದರ್ಶದ ಅಳತೆ ಗೋಲಿನಿಂದ ತೂಗಿ, ಅಳೆದು, ಪೂರ್ವಭಾವಿಯಾಗಿ ಚಿಂತಿಸಿ, ತಮ್ಮದೇ ಆದ ನೆಲೆಯಲ್ಲಿ ವಚನ ಬಂಧಕ್ಕೆ ಒಳಪಡಿಸಿದ್ದು ಎದ್ದು ಕಾಣುತ್ತದೆ. ತಮ್ಮದೆ ಆದ ವಚನಾಂಕಿತಗಳನ್ನು ಬಳಸಿಕೊಂಡು ಅಭಿವ್ಯಕ್ತಿಸಿರುವ ಕ್ರಮವೂ ವೈಶಿಷ್ಟ್ಯಪೂರ್ಣವೆನಿಸುತ್ತದೆ. ಸಾಹಿತ್ಯಿಕ ಹಿರಿಮೆ ಗರಿಮೆ, ಸಾಮಾಜಿಕ ಮೌಲ್ಯಗಳು, ವಾಸ್ಯವ ಬದುಕಿಗೆ ಆದರ್ಶದ ಮಾರ್ಗ ತೋರುವಲ್ಲಿಯೂ ಇವು ಗಮನಾರ್ಹವಾಗುತ್ತವೆ.

ಶರಣರ ಅನುಭವದ ನುಡಿಗಳಲ್ಲಿ ಸತ್ಯ, ಧರ್ಮ, ಭಕ್ತಿ, ತತ್ವ ವಿವೇಚನೆಗಳು ಅಂದಿನ ಬದುಕಿಗೆ ಮುದನೀಡುವಂತೆ, ಆಧುನಿಕ ವಚನಗಳಲ್ಲಿ ಬಳಕೆಯಾಗಿರುವ, ಸತ್ಯ, ಅಹಿಂಸೆ, ನ್ಯಾಯ, ದಯೆ, ಕರುಣೆ, ಸಹಾಯ, ಸಹಕಾರ, ಸೇವೆ, ಲಂಚ, ಸ್ತ್ರೀ ಸಂವೇದನೆ, ನೀತಿ, ನಿಯಮಗಳು ನವೀನ ಅರ್ಥಗಳೊಂದಿಗೆ ವಾಸ್ತವಬದುಕಿನಲ್ಲಿ ಚಿಂತನೆಯ ನೆಲೆಯನ್ನು ಒಡಮೂಡಿಸುತ್ತವೆ. ಇವು ಅರಿತವರ ಮನದಲ್ಲಿ ವಿಚಾರಗಳನ್ನು ಅಚ್ಚಳಿಯದಂತೆ ಇರಿಸುವಲ್ಲಿಯೂ ಸಫಲವಾಗುತ್ತವೆ. ಈಗಿನ ಪರಿಸರಕ್ಕೆ ಸಂಬಂಧಿಸಿದಂತೆ ಆಧುನಿಕತೆಯ ಹೆಸರಿನಲ್ಲಿ ನಡೆಯುವ ಸಂಘರ್ಷಗಳು, ಬದುಕಿನ ತಲ್ಲಣಗಳನ್ನು ಜೀವಂತವಾಗಿ ಚಿಂತಿಸುವಲ್ಲಿ ತುಂಬಾ ಸರಳ ಹಾಗೂ ಸಹಜತೆಯ ಮಾರ್ಗ ಅನುಸರಿಸಿದ್ದು ಇಲ್ಲಿ ಕಂಡುಬರುತ್ತದೆ.

**ಸಾಧ್ಯ ಸಾಧ್ಯತೆಗಳು** ಒಟ್ಟಾರೆಯಾಗಿ ಕಲಬುರ್ಗಿ ಹಾಗೂ ಬೀದರ ಜಿಲ್ಲೆಯ ಆಧುನಿಕ ವಚನಕಾರರ ವಚನ ಸಾಹಿತ್ಯದ ನೆಲೆಗಳನ್ನು ಅಧ್ಯಯನ ಮಾಡಿದಾಗ ಇವರು ಮತ್ತೊಮ್ಮೆ ವಚನ ಸಾಹಿತ್ಯದ ಔನ್ನತ್ಯವನ್ನು ಪುನರುಜೀವನಗೊಳಿಸಿ ಮೆರೆಸಿದ್ದಾರೆಂಬ ಭಾವನೆ ಮೂಡುತ್ತದೆ. ವೈಜ್ಞಾನಿಕತೆ, ವೈಚಾರಿಕತೆ ಹಾಗೂ ತಮ್ಮದೇ

ಆದ ಅನುಭವದ ಮೂಸೆಯಲ್ಲಿ ಮೂಡಿಬಂದಿರುವ ಆಧುನಿಕ ವಚನಗಳಿಗೆ ನೂರೆಂಟು ನೆಲೆಗಳಿದ್ದು, ಅಧ್ಯಯನದ ವಿಸ್ತಾರತೆ ತುಂಬಾ ವ್ಯಾಪಕವೆನಿಸುತ್ತದೆ. ಹೀಗಾಗಿ ಉಲ್ಲೇಖಿಸಿದ ಪ್ರಮುಖ ನೆಲೆಗಳಲ್ಲಿ ಅಧ್ಯಯನ ಮಾಡಲಾಗಿದೆ. ಈ ನೆಲೆಯಲ್ಲಿಯ ಪರಿಪೂರ್ಣ ಅಧ್ಯಯನವೆಂದೆಂಬ ಭಾವನೆ ನನಗಿಲ್ಲ. ಈ ನೆಲೆಯಲ್ಲಿ ಇನ್ನೂ ಹೆಚ್ಚಿನ ಅಧ್ಯಯನ ಕೈಗೊಳ್ಳುವವರಿಗೆ ಇದು ಒಂದು ಮಾರ್ಗದರ್ಶಿಯಾಗಬಹುದೆನಿಸುತ್ತದೆ. ಆಧುನಿಕ ವಚನಕಾರರ ಸಂಖ್ಯೆ ಅಪಾರವಾಗಿದ್ದು, ಅವರ ಬದುಕು-ಬರಹಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡುವಷ್ಟು ಮಹತ್ವದ ವಚನಕಾರರೂ ಇಲ್ಲಿದ್ದಾರೆ. ಈ ನಿಟ್ಟಿನಲ್ಲಿ ಕಾರ್ಯ ಮಾಡುವವರಿಗೆ ಈ ಜಿಲ್ಲೆಗಳಲ್ಲಿ ಸಾಕಷ್ಟು ಅವಕಾಶಗಳಿವೆ. ಸಂಶೋಧನೆಯೆಂಬುದು ನಿರಂತರವಾಗಿ ಜರುಗುವ ಅನಂತ ಕ್ರಿಯೆಯಾಗಿದ್ದು, ಮತ್ತೊಂದು ರೀತಿಯಲ್ಲಿ ಅಧ್ಯಯನದಲ್ಲಿ ತೊಡಗುವವರಿಗೆ ಇದೊಂದು ಸಹಾಯಕ ಗ್ರಂಥವಾಗಬಹುದೆಂದು ನಾನು ಭಾವಿಸುತ್ತೇನೆ.

## ಅನುಬಂಧ

### ಬೀದರ ಜಿಲ್ಲೆಯ ಆಧುನಿಕ ವಚನಕಾರರು

| | ವಚನಕಾರರು | ಅಂಕಿತನಾಮ |
|---|---|---|
| ೧ | ಈಶ್ವರಮ್ಮ ಪಾಟೀಲ | 'ಶಿವಸಿದ್ಧಲಿಂಗ |
| ೨ | ಕರುಣಾ ಸಲಗರ | 'ಶಿವಲಿಂಗೇಶ್ವರಾ' |
| ೩ | ಕರುಣಕ್ಕ ಜೀರ್ಗೆ | 'ನಿಃಶೂನ್ಯ ಲಿಂಗಯ್ಯ' |
| ೪ | ಕಲಾವತಿ ಬಿರಾದಾರ | 'ಅಪ್ಪ ಚನ್ನಬಸವೇಶ' |
| ೫ | ಖೂಬಾ ಬಿ.ಎಸ್. | 'ಹುಲಿಯ ಸಿದ್ಧೇಶ್ವರಾ' |
| ೬ | ಗಂಗನಪಳ್ಳಿ ಎಂ.ಜಿ. | 'ಶರಣ ಕಿರಣ ಪ್ರಿಯ ಮಾಣಿಕನು' |
| ೭ | ಗಿರಿಜಾ ಧರ್ಮರಡ್ಡಿ | 'ಬಸವಲಿಂಗ' |
| ೮ | ಚಂದ್ರಮ್ಮ ದರ್ಗೆ | 'ತಂದೆ ಗುರುಬಸವಾ' |
| ೯ | ಚಂದ್ರಪ್ಪ ಹೆಬ್ಬಾಳಕರ್ | 'ಚಂದ್ರಣ್ಣ' |
| ೧೦ | ಚೆನ್ನಪ್ಪ ಮೋರ್ಗೆ | 'ಗುರು ಚೆನ್ನಬಸವಾ' |
| ೧೧ | ಜಗದೇವಿ ದುಬಲಗುಂಡಿ | 'ಸಿದ್ಧರಾಮ ಪ್ರಿಯ ಬಸವ ಶಿಶುವಿನ ಪರಮ ಗುರು' |
| ೧೨ | ಜನವಾಡಕರ ಎಸ್.ಎಂ. | 'ತಥಾಗತ' |
| ೧೩ | ದೇಶಪಾಂಡೆ ಎಂ.ಜಿ. | 'ಲಕ್ಷ್ಮೀಸುತ' |
| ೧೪ | ದೇಶಾಂಶ ಹುಡಗಿ | 'ದಿಗಂಬರ ಕರಿಬಸವೇಶ್ವರ' |
| ೧೫ | ಪುಷ್ಪಾ ಜಿ. ಕನಕಾ | 'ಕಾಳೂರ ಲಿಂಗಯ್ಯ' |
| ೧೬ | ಮುಕ್ತುಂಬಿ ಎಂ. | 'ಪ್ರಾಣೇಶ್ವರ' |
| ೧೭ | ಮಹೇಶ್ವರಿ ಹೇಡೆ | 'ಈಶ್ವರಿ ಪ್ರಿಯ ಶಿವಲಿಂಗ' |
| ೧೮ | ಮಂಗಲ ಮಾಶೆಟ್ಟಿ | 'ಮಂಗಲಾ ಪ್ರಿಯ ಲಿಂಗಯ್ಯ' |
| ೧೯ | ರಘುನಾಥ ಹಡಪದ | 'ನಿರಂಜೇಶ್ವರಾ' |
| ೨೦ | ರಮೇಶ ಬಿರಾದಾರ | 'ಪಾಪನಾಶ ಲಿಂಗದೇವಾ' |
| ೨೧ | ರಾಜಮ್ಮ ಚಿಕ್ಕಪೇಟಿ | 'ಕಾಯಕ ಪ್ರಿಯ ಬಸವೇಶ್ವರ' |
| ೨೨ | ವಜ್ರಾ ಪಾಟೀಲ (ಡಾ.) | 'ಸಿದ್ಧಾರೂಢ' |
| ೨೩ | ವಿ. ಸಿದ್ಧರಾಮಣ್ಣ | 'ಲೋಕ ಗುರು ಬಸವ ಪ್ರಭುವೆ' |
| ೨೪ | ವೀರಶೆಟ್ಟಿ ಬಾವುಗೆ | 'ವೀಪ್ರಬಾಧ' |
| ೨೫ | ವಿಶ್ವನಾಥ ಬಿರಾದಾರ | 'ಆದಿ ಗುರುನಾಥ' |
| ೨೬ | ವೇದಾವತಿ ಮಠಪತಿ | 'ಮಲ್ಲಿಕಾರ್ಜುನ ಪ್ರಿಯ ಬಸವಣ್ಣ' |
| ೨೭ | ಶಾಂತಮ್ಮ ಬಲ್ಲೂರ | 'ಶಾಸನೇಶ್ವರಿ' |

| | | |
|---|---|---|
| ೨೮ | ಶಾಂತಲಿಂಗ ಸ್ವಾಮಿ | 'ಶಾಂತಲಿಂಗೇಶ್ವರಾ' |
| ೨೯ | ಶಿವಸ್ವಾಮಿ ಚಿನಕೇರಾ | 'ಲಿಂಗದೇವ' ಹಾಗೂ 'ನಿರೂಪಲಿಂಗ' |
| ೩೦ | ಶ್ರೀ ಶಿವಾನಂದ ಸ್ವಾಮಿಗಳು ಹುಲಸೂರು | 'ಶಿವಾನಂದಪ್ರಿಯಗುರುಬಸವ ಪ್ರಭುವೆ' |
| ೩೧ | ಶೋಭಾ ಔರಾದೆ | 'ಆಚಾರ ಪ್ರಿಯ ಬಸವಲಿಂಗ' |
| ೩೨ | ಸೀಮಾ ಪಾಟೀಲ | 'ನಿಸ್ಸೀಮ ಪ್ರಭುವೆ' |
| ೩೩ | ಸಿದ್ಧರಾಮಣ್ಣ ಎ. | 'ಲೋಕ ಗುರು ಬಸವ ಪ್ರಭುವೆ' |
| ೩೪ | ಸುಂದರಮ್ಮ | 'ಉದಯ ಮಲ್ಲೇಶ್ವರ' |
| ೩೫ | ಸೋಮನಾಥ ಯಾಳವಾರ (ಡಾ.) | 'ಸೋಮಲೋಚನಪ್ರಿಯ ಬಸವಣ್ಣ' |
| ೩೬ | ಹಂಶಕವಿ | 'ದತ್ತದಿಗಂಬರ' |

## ಕಲಬುರ್ಗಿ ಜಿಲ್ಲೆಯ ಆಧುನಿಕ ವಚನಕಾರರು

| | ವಚನಕಾರರು | ಅಂಕಿತನಾಮ |
|---|---|---|
| ೩೭ | ಗುರುಲಿಂಗಪ್ಪ ಹಾಲಹಳ್ಳಿ | 'ಗುರುಬಸವಪ್ರಿಯ ಕೂಡಲ ಸಂಗಮದೇವ' |
| ೩೮ | ಚನ್ನಣ್ಣ ವಾಲಿಕಾರ (ಡಾ.) | 'ವಾಲಿಕಾರ ಚೆನ್ನಣ್ಣ' |
| ೩೯ | ಜಯಶ್ರೀ ದಂಡೆ (ಡಾ.) | 'ನಿಜಗುರು ಮಹಾಂತಲಿಂಗ' |
| ೪೦ | ನಾಗಮ್ಮ ಮುಗಳಿ | 'ಅಮ್ಮಾ' ಹಾಗೂ 'ಶ್ರೀ ಸೂಗೂರೇಶ' |
| ೪೧ | ನಾಗೇಂದ್ರ ಮಸೂತಿ (ಡಾ.) | 'ಶ್ರೀ ಗುರುಸಿದ್ಧ' |
| ೪೨ | ಎಸ್.ಎಸ್. ಪಾಟೀಲ (ಡಾ.) | 'ಸಿದ್ಧನೆ' |
| ೪೩ | ಬಸವರಾಜ ಮೋದಿ (ಡಾ.) | 'ವೀರಶಿವಲಿಂಗೇಶ್ವರಾ' |
| ೪೪ | ಬಸವರಾಜ ಸಬರದ | 'ಸಬರದ ಬಸವ" |
| ೪೫ | ಬಡಗೇರ ವಿ.ಎಂ. | 'ಶ್ರೀ ಗವಿಸಿದ್ಧೇಶ್ವರಾ' |
| ೪೬ | ಭೀಮರಾವ | 'ನೀಲಕಂಠೇಶ್ವರಾ' |
| ೪೭ | ಮಹಾದೇವ ಬಡಿಗೇರ (ಡಾ.) | 'ಪ್ರಭು' |
| ೪೮ | ವಿಶಾಲಾಕ್ಷಿ ಹಿರೇಮಠ | 'ವಿಶಾಲ ಪ್ರಿಯ ಚನ್ನಬಸವ' |
| ೪೯ | ವಿಜಯಕುಮಾರ ಪುರಂತೆ | 'ಗುರುನಂಜೇಶ್ವರಾ' |
| ೫೦ | ಶರಣಬಸಪ್ಪ ಅಪ್ಪ (ಡಾ.) | 'ಮಹಾದಾಸೋಹಿ ಶರಣಬಸವ' |
| ೫೧ | ಶಿವಕವಿ ಹಿರೇಮಠ | 'ಶಿವಕವೀಶ' |
| ೫೨ | ಶೈಲಜಾ ಉಡಚಣ (ಡಾ.) | 'ಕೇಳುಮಗಾ' |
| ೫೩ | ಸರಸ್ವತಿ ಚಿಮ್ಮಲಗಿ (ಡಾ.) | 'ಎಡಬಿಡಂಗಿದೇವಾ' |
| ೫೪ | ಸಿದ್ಧರಾಮ ಪೋಲಿಸಪಾಟೀಲ | 'ಸತ್ಯಜ್ಞ' |
| ೫೫ | ಸೂಗಯ್ಯ ಹಿರೇಮಠ | 'ಸೂಗೂರೇಶ್ವರ' |
| ೫೬ | ಹನಮಂತರಾವ ಮೋತಕಪಳ್ಳಿ | 'ಸಚ್ಚಿದಾನಂದ ಪ್ರಿಯ ವೀರಭದ್ರ |

## ಗ್ರಂಥಋಣ


| | | | |
|---|---|---|---|
| ೧ | ಅಶೋಕ ನರೋಡೆ – | ಆಧುನಿಕ ವಚನಕಾರರು – ೨೦೦೯ | –ಶ್ರೀ ಗುರು ಚನ್ನಬಸವೇಶ್ವರ ಗ್ರಂಥ ಮಾಲೆ, ಜಂಗಮಲಿಂಗ ಕ್ಷೇತ್ರ ಮೋಟಗಿಮಠ ಅಥಣಿ |
| ೨ | ಈಶ್ವರಯ್ಯ ಮಠ (ಡಾ.) – (ಸಂ) | ಬಸವ ಸಾಗರ ಸ್ಮರಣ ಗ್ರಂಥ – ೨೦೦೬ | –ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಜಿಲ್ಲಾ ಘಟಕ ಗುಲಬರ್ಗಾ |
| ೩ | ಉಷಾಕಿರಣ – | ವಚನಗಳಲ್ಲಿ ಪ್ರತಿಮೆಗಳು – ೧೯೮೯ | –ಲೋಕ ಶಿಕ್ಷಣ ಟ್ರಸ್ಟ ಗ್ರಂಥ ಮಾಲೆ ಬೆಂಗಳೂರು |
| ೪ | ಉಪಾಧ್ಯ ಜಿ.ಎನ್ (ಡಾ.) – | ಅನುಭಾವ ಸಾಹಿತ್ಯದ ವಿಭಿನ್ನ ನೆಲೆಗಳು – ೨೦೧೧ | –ಕನ್ನಡ ವಿಭಾಗ ಮುಂಬಯಿ ವಿಶ್ವವಿದ್ಯಾಲಯ |
| ೫ | ಎಲ್ಲೇಗೌಡ ಬೆಸಗರಹಳ್ಳಿ(ಸಂ) – | ಆಧುನಿಕ ವಚನಕಾರರು – ೨೦೦೯ | –ವಿನಯ ಪ್ರಕಾಶನ ಬೀದರ |
| ೬ | ಕರುಣಾ ಸಲಗರ – | ಶಿವಲಿಂಗೇಶ್ವರ ವಚನಗಳು – ೨೦೦೪ ಭಾವಧಾರೆ – ೨೦೦೮ | –ಧರಿನಾಡು ಸಂಘ, ಗ್ರಾಮ ಸಮಿತಿ ಯರಬಾಗ ತಾ. ಬಸವಕಲ್ಯಾಣ ಧರಿನಾಡು ಕನ್ನಡ ಸಂಘ ಬೀದರ |
| ೭ | ಕಲಬುರ್ಗಿ ಎಂ.ಎಂ (ಡಾ.) – | ಕನ್ನಡ ಸಂಶೋಧನ ಶಾಸ್ತ್ರ – ೨೦೦೯ | –ಸಪ್ನ ಬುಕ್ ಹೌಸ ಬೆಂಗಳೂರು |
| ೮ | ಖೂಬಾ ಬಿ.ಎಸ್ – | ಶತಕಾಂತ್ಯದ ವಚನ ಶತಕ – ೨೦೦೧ | –ಜಯಸಿಂಹ ಪ್ರಕಾಶನ ಹುಮನಾಬಾದ |
| ೯ | ಗಂಗನಪಳ್ಳಿ ಎಂ.ಜಿ – | ವಚನ ಮಂದಾರ – ೧೯೯೯<br>ವಚನ ಕಿರಣ – ೨೦೧೬ | –ಸಿರಿಗನ್ನಡ ಪ್ರಕಾಶನ ಬೀದರ<br>–ಸಿರಿಗನ್ನಡ ಪ್ರಕಾಶನ ಬೀದರ |
| ೧೦ | ಗಂಗಾಂಬಿಕೆ ಪಾಟೀಲ (ಡಾ.) – | ವಚನ ಸಂಸ್ಕೃತಿ – ೧೯೯೮ | –ಪ್ರಸಾರಾಂಗ ಗುಲಬರ್ಗಾ<br>–ವಿಶ್ವವಿದ್ಯಾಲಯ ಗುಲಬರ್ಗಾ |
| ೧೧ | ಗವಿಸಿದ್ಧಪ್ಪ ಪಾಟೀಲ (ಡಾ.) – (ಸಂ) | ಸುಗಂಧ – ೨೦೧೨ | –ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ |

| | | | |
|---|---|---|---|
| ೧೨ | ಗಿರಿಜಾ ಧರ್ಮರಡ್ಡಿ – | ವಚನ ಪುಷ್ಪಾಂಜಲಿ – ೨೦೧೦<br>ನಾನೊಂದು ಹುಲುಕಡ್ಡಿಯೆಂದು ಉದಾಸೀನವೇಕೆ? – ೨೦೧೦ | –ಬಸವಸೇವಾ ಪ್ರತಿಷ್ಠಾನ ಬೀದರ<br>ಓಂ ಪ್ರಕಾಶನ ಬೆಂಗಳೂರು |
| ೧೩ | ಗುರುಲಿಂಗಪ್ಪ ದಬಾಲೆ (ಡಾ.) – | ಬೀದರ ಜಿಲ್ಲೆಯ ಅನುಭಾವಿ ಕವಿಗಳು – ೨೦೦೬<br>ಬಸವಯೋಗಿ – ೨೦೦೬ | –ವಿಶ್ವಗುರು ಬಸವ ಧರ್ಮ ಪ್ರಸಾರ ಕೇಂದ್ರ, ಗುರುಬಸವೇಶ್ವರ ಸಂಸ್ಥಾನ ಮಠ ಹುಲಸೂರು<br>ವಿಶ್ವಗುರು ಬಸವ ಧರ್ಮ ಪ್ರಚಾರ ಕೇಂದ್ರ, ಗುರುಬಸವೇಶ್ವರ ಸಂಸ್ಥಾನ ಮಠ ಹುಲಸೂರು |
| ೧೪ | ಗುಂಜಾಳಎಸ್.ಆರ್. (ಡಾ.) – | ವಚನ ಸಾಹಿತ್ಯ ನಡೆದು ಬಂದ ದಾರಿ – ೨೦೦೮ | –ಬಸವ ಸಮೀತಿ ಬೆಂಗಳೂರು |
| ೧೫ | ಚಂದ್ರಪ್ಪ ಹೆಬ್ಬಾಳಕರ್ – | ಚಂದ್ರಣ್ಣನ ವಚನಗಳು – ೨೦೧೪<br>ದರ್ಶನ ಮಾಲಿಕೆ ಬೀದರ – ೨೦೦೮ | –ಧರಿನಾಡು ಕನ್ನಡ ಕೇಂದ್ರ ಸಮಿತಿ ಬೀದರ<br>–ಬಸವ ಪ್ರಕಾಶ ಮತ್ತು ಪುಸ್ತಕ ವ್ಯಾಪಾರಿಗಳು ಗುಲಬರ್ಗಾ |
| ೧೬ | ಚಂದ್ರ ಪೂಜಾರಿ ಎಂ. – | ಸಂಶೋಧನ ಪ್ರಸ್ತಾಪ – ೨೦೦೮ | –ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ |
| ೧೭ | ಚನ್ನಬಸಪ್ಪಾ ಗೊ.ರು. – | ಶರಣತತ್ವ ಚಿಂತನೆ – ೨೦೦೩ | –ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು |
| ೧೮ | ಚ್ಚಾಳಿ ಕೆ.ಬಿ – | ಧರೆಹತ್ತಿ ಉರಿದರೆ – ೧೯೯೭ | –ತಾಯಿ ಪ್ರಕಾಶನ ಕುಕನೂರು |
| ೧೯ | ಚಿತ್ಕಲಾ ಜಿ. ಮಠಪತಿ – | ಡಾ. ಶೈಲಜಾ ಉಡಚಣ ಅವರಸಮಗ್ರ ಸಾಹಿತ್ಯ – ೨೦೧೩ | – ಜೆ.ಎಸ್. ಪಬ್ಲಿಕೇಶನ್ ಬಸವಕಲ್ಯಾಣ |
| ೨೦ | ಚಿದಾನಂದ ಮೂರ್ತಿ (ಡಾ.) – ಎಂ. | ಸಂಶೋಧನೆ – ೨೦೧೧<br>ವಚನ ಸಾಹಿತ್ಯ–೨೦೧೫ | –ಡಿ.ವಿ.ಕೆ ಮೂರ್ತಿ ಪ್ರಕಾಶನ ಮೈಸೂರು<br>ಸ್ವಪ್ನಾ ಬುಕ್ಕ್ ಹೌಸ್ ಬೆಂಗಳೂರು |
| ೨೧ | ಚೆನ್ನಣ್ಣಾ ವಾಲಿಕಾರ (ಡಾ.) – | ಮುನ್ನೂರಾ ಮೂರು ವಚನಗಳು – ೧೯೯೩ | –ಬಸವ ವಿಚಾರ ಪ್ರಚಾರ ಸಮಿತಿ ಗುಲಬರ್ಗಾ |

| | | | |
|---|---|---|---|
| ೨೨ | ಚೆನ್ನಪ್ಪಾ ಮೋರ್ಗೆ – | ಗುರುಪ್ರಸಾದ – ೨೦೦೯ | –ಬಸವ ಧರ್ಮ ಪ್ರಸಾರ ಸಂಸ್ಥೆ ಹಿರೇಮಠ ಸಂಸ್ಥಾನ ಭಾಲ್ಕಿ-ಬೀದರ |
| ೨೩ | ಜನವಾಡಕರ ಎಸ್.ಎಂ –. | ತಥಾಗತ – ೨೦೦೬<br>ದಮ್ಮಾಮೃತ ಗೀತೆ | –ಆನಂದ ಪ್ರಕಾಶನ ಬೀದರ<br>ಭಾರತೀಯ ಬೌದ್ಧ ದಮ್ಮ ಚಾರಿಟೇಬರ್ಲ ಟ್ರಸ್ಟ ಬೀದರ |
| ೨೪ | ಜಯಶ್ರೀ ದಂಡೆ (ಡಾ.) – | ಶರಣ ಚೇತನ – ೨೦೦೮<br>ಸ್ವಭಾವದ ವಚನಗಳು – ೧೯೯೯ | –ಕವಿಮಾರ್ಗಪ್ರಕಾಶನ ಕಲಬುರ್ಗಿ<br>–ಕವಿಮಾರ್ಗಪ್ರಕಾಶನ ಕಲಬುರ್ಗಿ |
| ೨೫ | ಜಗದೇವಿ ದುಬಲಗುಂಡೆ – | ವಚನ ಕುಸುಮ – ೨೦೦೮<br>ವಚನ ಸುಗಂಧ ೨೦೧೬ | –ಬಸವ ಪ್ರಸಾದ ಪ್ರಕಾಶನ ಶಿವನಗರ ಬೀದರ |
| ೨೬ | ಜಯದೇವಪ್ಪ ಜೈನಕೇರಿ – | ವಚನ ರಶ್ಮಿ – ೨೦೧೬ | –ಶಾಂತಲಾ ಪ್ರಕಾಶನ ಶಿವಮೊಗ್ಗ |
| ೨೭ | ಜಗನ್ನಾಥ ಹೆಬ್ಬಾಳೆ (ಡಾ.) – (ಪ್ರಸಂ) | ಬೀದರ ಜಿಲ್ಲಾ ದರ್ಶನ – ೧೯೯೭ | –ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಬೀದರ |
| ೨೮ | ಜರಗನಹಳ್ಳೀ ಶಿವಶಂಕರ –(ಸಂ) | ವಚನ ಸಂಗಮ – ೨೦೧೫ | –ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು |
| ೨೯ | ತಿಪ್ಪೆರುದ್ರಸ್ವಾಮಿ ಎಚ್. – | ಶರಣರ ಅನುಭಾವ ಸಾಹಿತ್ಯ – ೧೯೯೮ | –ಡಿ.ವಿ.ಕೆ. ಮೂರ್ತಿ ಮೈಸೂರು |
| ೩೦ | ದೇಶಾಂಶ ಹುಡಗಿ – | ಬೀದರ ಕನ್ನಡ ಕೋಶ – ೨೦೧೦<br>ದಿಗಂಬರ ವಚನಗಳು – ೨೦೦೬ | –ಶಂಭುಲಿಂಗ ವಾಲ್ದೊಡ್ಡಿ ಪ್ರಕಾಶನ ಬೀದರ<br>–ಧರಿನಾಡು ಕನ್ನಡ ಸಂಘ ಕೇಂದ್ರ ಸಮಿತಿ (ರಿ) ಬೀದರ |
| ೩೧ | ದೇಶಪಾಂಡೆ ಎಂ.ಜಿ – | ವಚನ ಚಂದ್ರಿಕೆ – ೨೦೦೯ | –ಧರಿನಾಡು ಕನ್ನಡ ಸಂಘ ಕೇಂದ್ರ ಸಮಿತಿ (ರಿ) ಬೀದರ |
| ೩೨ | ನಾಗಭೂಷಣ ಸಿ. (ಡಾ.) – | ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ – ೧೯೯೯ | –ಅಮೃತವರ್ಷಿಣಿ ಪ್ರಕಾಶನ ನಂದಿಹಳ್ಳಿ |
| ೩೩ | ನಾಗರಾಜ ಎಂ.ಜಿ. (ಸಂ) – | ಆಧುನಿಕ ವಚನಸಿರಿ – ೧೯೯೯ | –ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು |
| ೩೪ | ನಾಗಪ್ಪಾ ಗೋಣಿ (ಡಾ.) – | ಅಂಬಿಗರ ಚೌಡಯ್ಯ ಒಂದು ಅಧ್ಯಯನ – ೨೦೧೦ | –ಪಿಹೆಚ್.ಡಿ.ಮಹಾಪ್ರಬಂಧ ಕನ್ನಡ ಅಧ್ಯಯನ ಸಂಸ್ಥೆಗು.ವಿ. ಗುಲಬರ್ಗಾ |

| | | | |
|---|---|---|---|
| ೩೫ | ನಾಗಾಬಾಯಿ ಬುಳ್ಳಾ (ಡಾ.) – | ಆಧುನಿಕ ವಚನ ಸಾಹಿತ್ಯ | –ಜ್ಯೋತಿ ಪ್ರಕಾಶನ ಗುಲಬರ್ಗಾ |
| ೩೬ | ನಾಗೇಂದ್ರ ಮಸೂತಿ (ಡಾ.) – | ಉರಿವ ಕೆಂಡವ ಹೊತ್ತು – ೨೦೦೮ ಕೆಂಡಮಲ್ಲಿಗೆ – ೨೦೧೬ ಭೂದಿಗರ್ಭದ ಕೆಂಡ – ೨೦೧೪ | –ಶ್ರೀ ರೇವಣಸಿದ್ಧೇಶ್ವರ ಪ್ರಕಾಶನ ಬೀದರ –ರೇವಣಸಿದ್ಧೇಶ್ವರ ಪ್ರಕಾಶನ ಕಲಬುರ್ಗಿ –ರೇವಣಸಿದ್ಧೇಶ್ವರ ಪ್ರಕಾಶನ ಕಲಬುರ್ಗಿ |
| ೩೭ | ನಾಯಕ ಡಿ.ಬಿ (ಡಾ.) – | ವಚನಾನುಭವ – ೨೦೦೪ | –ಬಂಜಾರ ಪ್ರಕಾಶನ ಗುಲಬರ್ಗಾ |
| ೩೮ | ನೀಲಮ್ಮ ಕತ್ನಳ್ಳಿ (ಡಾ.) – | ಮಹದೇವ ಬಣಕಾರರ ಕೃತಿಗಳು – ೧೯೯೯ | –ರೇಣುಕಾ ಪ್ರಕಾಶನ ಶಹಾಬಾದ |
| ೩೯ | ಪಾಟೀಲ ಎಂ.ಎಸ್ (ಸಂ)– | ಶರಣ ಸಾಹಿತ್ಯ ಸೌರಭ – ೨೦೦೯ | –ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ ಸೇಡಂ |
| ೪೦ | ಪಾಟೀಲ ಎಸ್.ಎಸ್ (ಡಾ.) – | ವಚನಗಳಲ್ಲಿ ವಿಜ್ಞಾನ – ೨೦೦೮ ವೈದ್ಯಕೀಯ ಮಗು ವಚನ– ೧೯೯೯ ನೇತ್ರವಚನ–೧೯೯೮ ವೈದ್ಯನ ವಚನಗಳು–೨೦೦೦ | –ಬಸವಧರ್ಮ ಪ್ರಸಾರ ಸಂಸ್ಥೆ ಹಿರೇಮಠ ಭಾಲ್ಕಿ..... ಬೀದರ ಸಿದ್ಧರತ್ನಾ ಪ್ರಕಾಶನ ಗುಲಬರ್ಗಾ ಸಿದ್ಧರತ್ನಾ ಪ್ರಕಾಶನ ಗುಲಬರ್ಗಾ ಎಂ.ಆರ್.ಎಲ್ ಪಬ್ಲಿಕೇಶನ್ ಹೌಸ್ ಬೆಂಗಳೂರು |
| ೪೧ | ಪ್ರೀತಿ ಶುಭಶ್ಚಂದ್ರ (ಡಾ.) – | ಇಪ್ಪತ್ತನೆಯ ಶತಮಾನದ ವಚನ ಸಾಹಿತ್ಯ ಒಂದು ಅಧ್ಯಯನ – ೧೯೯೫ | –ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು |
| ೪೨ | ಪುಷ್ಪಾ ಜಿ. ಕನಕಾ – | ವಚನ ಸುಮ – ೨೦೦೮ | –ಧರಿನಾಡು ಕನ್ನಡ ಂಘ ಕೇಂದ್ರ ಸಮಿತಿ ಬೀದರ |
| ೪೩ | ಪುಷ್ಪಲತಾ ಎಸ್ (ಸಂ) – | ಮೊದಲು ಮಾನವನಾಗು – ೨೦೦೬ | –ಸಿಂಚನ ಕನ್ನಡ ವೇದಿಕೆ ಜಯನಗರ, ಬೆಂಗಳೂರು |
| ೪೪ | ಪೂಜಾರ ವಿ.ಜಿ (ಡಾ.) – | ವಚನ ಸಾಹಿತ್ಯ ಸಮೀಕ್ಷೆ – ೨೦೦೯ ಕನ್ನಡ ವ್ಯಾಕರಣ ಮತ್ತು ಭಾಷೆ – ೨೦೦೮ | –ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ ಗುಲಬರ್ಗಾ ಚೇತನ ಪ್ರಕಾಶನ ಗುಲಬರ್ಗಾ |

| | | | |
|---|---|---|---|
| ೪೫ | ಪೋತೆ ಎಚ್.ಟಿ (ಡಾ.) (ಪ್ರ.ಸಂ)– | ಬಸವಣ್ಣ ಸಂಪುಟ– ೨ ಅಲ್ಲಮ ಪ್ರಭು ಸಂ. ೧ ಅಕ್ಕಮಹಾದೇವಿ ಸಂಪುಟ–೩ಚನ್ನಬಸವಣ್ಣ ಸಂಪುಟ–೪ ಶೂನ್ಯ ಸಂಪಾದನೆ ಸಂಪುಟ–೫ ವಚನ ಕಾವ್ಯ ಸಂಪುಟ–೬ – | –ಕನ್ನಡ ಅಧ್ಯಯನ ಸಂಸ್ಥೆ ಗು.ವಿ. ಗುಲಬರ್ಗಾ ೨೦೧೧ |
| ೪೬ | ಬಸವರಾಜ ಸಬರದ (ಡಾ.) – | ಸಾಹಿತ್ಯ ಸಂಗತಿ – ೨೦೧೪ ವಚನ ಚಳುವಳಿ – ೧೯೯೨ ವಚನ ಸಂಸ್ಕೃತಿ – ೨೦೦೭ ಹೈದ್ರಾಬಾರ ಕರ್ನಾಟಕದ ವಚನಕಾರರು – ೨೦೧೨ | –ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ ಗಲಬರ್ಗಾ ಶಾಂತಲಾ ಪ್ರಕಾಶನ ಶಿವಮೊಗ್ಗ ಪಲ್ಲವಿ ಪ್ರಕಾಶನ ಕಲಬುರ್ಗಿ ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ |
| ೪೭ | ಬಸವರಾಜ ಹದನೂರೆ – | ಗಿರಿಸಿದ್ಧಲಿಂಗನ ಪರಮಾನಂದರ ಪಂಚಪದಿಗಳು – ೨೦೧೧ | –ಬಸವ ಜ್ಯೋತಿ ಬುಕ್ ಸೆಲ್ಲರ್ಸ್ ಬೀದರ |
| ೪೮ | ಬಸವಶ್ರೀ ಸಿದ್ಧರಾಮ ಶರಣರು – | ಶೂನ್ಯ ಸಂಪಾದನೆಯ ರಹಸ್ಯ ಸಂ. ೧, ೨ – ೨೦೦೪ | –ಮಹಾಮನೆ ಪ್ರಕಾಶನ ಬಸವ ಯೋಗಾಶ್ರಮ ಕೌಠಾ ಬಿ. |
| ೪೯ | ಬಸವರಾಜ ಮೋದಿ (ಡಾ.) – | ಆನು ಒಲಿದಂತೆ – ೨೦೦೫ | –ವಚನೋತ್ಸವ ಪ್ರತಿಷ್ಠಾನ ಗುಲಬರ್ಗಾ |
| ೫೦ | ಬುಳ್ಳಾ .ಎನ್.ಬಿ (ಡಾ.) – | ಡಾ. ಸಿದ್ಧಯ್ಯ ಪುರಾಣಿಕರ ಕೃತಿಗಳು ೧೯೯೯ | –ಜ್ಯೋತಿ ಪ್ರಕಾಶನ ಗುಲಬರ್ಗಾ |
| ೫೧ | ಭಾಸ್ಕರ ಟಿ.ಎಂ. (ಸಂ) – | ಕಲಬುರ್ಗಿ ಜಿಲ್ಲಾ ದರ್ಶನ–೨೦೦೫ | –ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ |
| ೫೨ | ಮಹೇಶ್ವರಿ ಶಿ. ಹೇಡೆ – | ಭಾವ ಬಯಲಾದಾಗ – ೨೦೧೨ | –ವಿವೇಕಾನಂದ ಪ್ರಕಾಶನ ಸಂತಪೂರ ತಾ. ಔರಾದಬೀದರ ಜಿಲ್ಲೆ |
| ೫೩ | ಮಾಣಿಕರಾವ ಧನಾಶ್ರೀ (ಡಾ.) – (ಸಂ) | ಜನಸೇವಕನ ವಚನಗಳು – ೧೯೮೭ | –ಬಸವತೀರ್ಥ ಪ್ರಕಾಶನ ಹುಮನಾಬಾದ |
| ೫೪ | ಮುಕ್ತಾಂಬಿ ಎಂ. (ಡಾ.) – | ನನ್ನ ಶಿವ – ೨೦೦೮ ಭಾಲ್ಕಿ ಚಂದ್ರನ ಮಹಾಬೆಳಕು–೨೦೧೫ | –ಹಿರೇಮಠ ಸಂಸ್ಥಾನ ಭಾಲ್ಕಿ |
| ೫೫ | ಯಲ್ಲಪ್ಪ ಹಲುಕುರ್ಕಿ – | ವಚನ ಪಂಚಾಕ್ಷರಿ – ೧೯೯೫ | –ಡಾ. ಪಂಚಾಕ್ಷರಿ ಹಿರೇಮಠ ಅಭಿನಂದನ ಸಮಿತಿ ಧಾರವಾಡ |
| ೫೬ | ರಮೇಶ ಬಿರಾದಾರ (ಸಂ) – | ನೀಲಮ್ಮಾನ ಬಳಗಳ ವಚನಗಳು – ೨೦೧೬ | –ನೀಲಮ್ಮನ ಬಳಗ ಪ್ರಕಾಶನ ವಿದ್ಯಾನಗರ ಕಾಲೋನಿ ಬೀದರ |

| | | | |
|---|---|---|---|
| ೫೭ | ರಾಜಪ್ಪಾ ದಳವಾಯಿ (ಡಾ.) (ಸಂ)– | ಕನ್ನಡ ಸಾಹಿತ್ಯ ಕೋಶ – ೨೦೦೬ | –ಶ್ರೀರಾಘವೇಂದ್ರ ಪ್ರಕಾಶನ ಬೆಂಗಳೂರು |
| ೫೮ | ರಾಮಚಂದ್ರ ಗಣಾಪುರೆ (ಡಾ.) – | ಗುಲಬರ್ಗಾ ಜಿಲ್ಲೆಯ ಆಧುನಿಕ ವಚನ ಸಾಹಿತ್ಯ – ೨೦೧೨ | –ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ ಗುಲಬರ್ಗಾ |
| ೫೯ | ರವೀಂದ್ರನಾಥ ಕೆ. (ಡಾ.) (ಸಂ) – | ಬಳ್ಳಾರಿ ಜಿಲ್ಲಾದರ್ಶನ – ೨೦೦೫ | –ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ |
| ೬೦ | ರಂಜಾನ ದರ್ಗಾ – | ಶರಣರ ಸಮಗ್ರ ಕ್ರಾಂತಿ – ೨೦೧೫ | –ಲೋಹಿಯಾ ಪ್ರಕಾಶನ ಬಳ್ಳಾರಿ |
| ೬೧ | ಲಿಂಗಯ್ಯಾ. ಡಿ. – | ವಚನ ಹೊಂಬಾಳೆ – ೨೦೦೭ | –ದಿನಕರ ಪ್ರಕಾಶನ ಬೆಂಗಳೂರು |
| ೬೨ | ವಜ್ರಾ ಪಾಟೀಲ (ಡಾ.) – | ವಜ್ರೇಶ್ವರಿಯ ವಚನಗಳು – ೨೦೧೩ | –ಪಾರ್ವತಿದೇವಿ ಪ್ರಕಾಶನ ಬೀದರ |
| ೬೩ | ವಿಜಯಕುಮಾರ ಪರುತೆ – | ವಚನಧಾರೆ – ೨೦೦೯ | –ಶ್ರೀ ಗುರುನಂಜೇಶ್ವರ ವಿರಕ್ತಮಠ ಸುಕ್ಷೇತ್ರ ಭರತನೂರು |
| ೬೪ | ವಿಜಯಲಕ್ಷ್ಮಿ ಬಾಳೆಕುಂದ್ರೆ (ಡಾ.) – | ಸಮಾಜ ವಿಕಾಸಕ್ಕೆ ಶರಣ ಸಂಸ್ಕೃತಿ – ೨೦೧೩ | –ಸಪ್ನ ಬುಕ್ ಹೌಸ ಬೆಂಗಳೂರು |
| ೬೫ | ವಿಜಯಶ್ರೀ ಸಬರದ (ಡಾ.) – | ನಡೆದದ್ದೇ ದಾರಿ – ೨೦೧೫ | –ಪಲ್ಲವಿ ಪ್ರಕಾಶನ ಕಲಬುರ್ಗಿ |
| ೬೬ | ವಿದ್ಯಾ ಎಂ. ಶಿವಕುಮಾರ –ಸ್ವಾಮಿ | ಆಧುನಿಕ ವಚನವೇತ್ತರು – ೨೦೦೯ | –ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು (ರಿ) ಮೈಸೂರು |
| ೬೭ | ವಿಶ್ವನಾಥ ಬಿರಾದಾರ – | ಆದಿನಾಥನ ಗಾನಲಹರಿ – ೨೦೧೪ | –ವಿನಯ ಪ್ರಕಾಶನ ಬೀದರ |
| ೬೮ | ವಿರುಪಾಕ್ಷಪ್ಪ ಬಿ. – | ಶರಣ ದೀಪಿಕೆ – ೨೦೦೪ | –ಬಸವ ಸಮಿತಿ ಬೆಂಗಳೂರು |
| ೬೯ | ಶಾಂತಮ್ಮಾ ಬಲ್ಲೂರ – | ವಚನಗೊಂಚಲು – ೨೦೧೫ | –ಸುದರ್ಶನಿ ಬಲ್ಲೂರ ಎಜುಕೇಶನ ಟ್ರಸ್ಟ ಬೀದರ |
| ೭೦ | ಶಾಂತಲಿಂಗ ಸ್ವಾಮಿ – | ವಚನಾಮೃತ – ೨೦೧೨ | –ಕನ್ನಡಾಂಬೆ ಪ್ರಕಾಶನ ಬೀದರ |
| ೭೧ | ಶಿವರುದ್ರಪ್ಪ ಜಿ.ಎಸ್ – | ಕನ್ನಡ ಸಾಹಿತ್ಯ ಸಮೀಕ್ಷೆ – ೨೦೧೨ | –ತಳುಕಿನ ವೆಂಕಣಯ್ಯ ಸ್ಮಾರಕ ಗ್ರಂಥಮಾಲೆ ಮೈಸೂರು |
| ೭೨ | ಶಿವಸ್ವಾಮಿ ಚೀನಕೇರಾ – | ವಚನಾಂಕುರ – ೧೯೯೫ ಲಿಂಗದೇವನ ದೀಪ್ತಿ – ೨೦೦೨ | –ಕಲ್ಯಾಣ ಕರ್ನಾಟಕ ಶರಣ ಸಾಹಿತ್ಯ ಪರಿಷತ್ತು ಬೀದರ |

| | | | |
|---|---|---|---|
| ೭೩ | ಶಿವಾನಂದ.ವಿ. – | ವಚನ ಸಾಹಿತ್ಯದಲ್ಲಿ ಸಮಾಜೋ ಭಾಷಿಕ ಚಿಂತನೆಗಳು – ೨೦೦೩ | –ಶ್ರೀ ಬಸವೇಶ್ವರ ಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ |
| ೭೪ | ಶಿವಾನಂದ ಸ್ವಾಮಿಗಳು – | ಹುಲುಸೂರ ಶಿವಾನಂದ ಸ್ವಾಮಿಗಳ ವಚನಗಳು – ೧೯೮೯ ವಚನ ಶಿವ – ೨೦೧೬ | –ವಿಶ್ವ ಬಸವಧರ್ಮ ಪ್ರಚಾರ ಕೇಂದ್ರ<br>–ಶ್ರೀ ಗುರು ಬಸವೇಶ್ವರ ಸಂಸ್ಥಾನ ಮಠ ಹುಲಸೂರ ಬಸವಕಲ್ಯಾಣ |
| ೭೫ | ಶೇಷಗಿರಿರಾವ ಎಸ್.ಎಲ್. – | ಹೊಸಗನ್ನಡ ಸಾಹಿತ್ಯ ಚರಿತ್ರೆ –೨೦೦೬ | –ಅಂಕಿತ ಪುಸ್ತಕ ಗಾಂಧಿಬಜಾರ ಬಸವನಗುಡಿ ಬೆಂಗಳೂರು |
| ೭೬ | ಶೈಲಜಾ ಉಡಚಣ (ಡಾ.) – | ಕೇಳು ಮಗಾ – ೧೯೯೭<br>ಗಿರಿಸುತೆಯ ವಚನಗಳು – ೨೦೦೩ನಾನು ನಾವು ಮತ್ತು ಸಾಹಿತ್ಯ–೧೯೯೯ | –ಚೇತನ ಪ್ರಕಾಶನ ಗುಲಬರ್ಗಾ |
| ೭೭ | ಶೋಭಾ ಔರಾದೆ – | ವಚನ ಸಿರಿ – ೨೦೧೩ | –ಪೂಜಾ ಪ್ರಕಾಶನ ಬೀದರ |
| ೭೮ | ಶಂಕರ ಪಿ.ಎಸ್. – | ವಚನಗಳಲ್ಲಿ ವ್ಯಕ್ತಿತ್ವ ವಿಕಸನ – ೨೦೦೮ | –ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ |
| ೭೯ | ಸರಸ್ವತಿ ಚಿಮ್ಮಲಗಿ (ಡಾ.) – | ಎಡಬಿಡಂಗಿ ದೇವನ ವಚನಗಳು – ೧೯೯೬ | –ಶಿವಗಂಗಾ ಪ್ರಕಾಶನ ಗುಲಬರ್ಗಾ |
| ೮೦ | ಸಂಗಮನಾಥರೇವತಗಾಂವ– | ದರ್ಶನ ಮಾಲಿಕೆ ಕಲಬುರ್ಗಿ – ೨೦೦೮ | –ಬಸವ ಪ್ರಕಾಶನ ಮತ್ತು ಪುಸ್ತಕ ವ್ಯಾಪಾರಿಗಳು ಗುಲಬರ್ಗಾ |
| ೮೧ | ಸಿದ್ಧರಾಮಣ್ಣ ವಿ. – | ಸಿದ್ಧರಾಮಣ್ಣ ಶರಣರ ವಚನಗಳು – ೨೦೧೩ | –ಬಸವಧರ್ಮ ಪ್ರಸಾರ ಸಂಸ್ಥೆ ಹಿರೇಮಠ ಸಂಸ್ಥಾನ ಭಾಲ್ಕಿ |
| ೮೨ | ಸಿದ್ಧರಾಮ ಪೋಲೀಸ – ಪಾಟೀಲ | ಸತ್ಯಜನ ವಚನಗಳು (ಭಾಗ–೪)<br>ಸತ್ಯಜ್ಞನ ವಚನ ಭಾಗ–೨ – ೧೯೯೩<br>ಸತ್ಯಜ್ಞನ ವಚನಗಳೂ ಭಾಗ–೩ | –ಸಿದ್ಧಲಿಂಗೇಶವರ ಬುಕ್ ಡಿಪೋ ಪ್ರಕಾಶನಾಲಯ ಕಲಬುರ್ಗಿ<br>ಕಾಡಸಿದ್ದೇಶ್ವರ ಪ್ರಕಾಶನ ಡಿಕ್ಸಂಗಿ<br>ಅಖಿಲ ಭಾರತ ೬೮ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಬಾಗಲಕೋಟೆ |
| ೮೩ | ಸಿದ್ಧಣ್ಣ ಲಂಗೋಟಿ (ಪ್ರೋ)– | ವಿಶ್ವಗುರು ಬಸವಣ್ಣನವರು – ೨೦೧೬ | –ಪ್ರಸಾರಾಂಗ ವಚನ ವಿಶ್ವವಿದ್ಯಾಲಯ ಅನುಭವ ಮಂಟಪ ಬಸವಕಲ್ಯಾಣ |

| | | | |
|---|---|---|---|
| ೮೪ | ಸೋಮನಾಥ ಯಾಳವಾರ (ಡಾ) (ಸಂ) | ಬೀದರ ಜಿಲ್ಲಾ ದರ್ಶನ–೨೦೦೫ ಬೀದರ ಜಿಲ್ಲೆಯ<br>ಶರಣ ಸ್ಮಾರಕಗಳು – ೨೦೦೬ಪುಲಿಗೆರೆಯ<br>ಆದಯ್ಯಾ – ೨೦೦೫<br>ವಚನ ಸಾಹಿತ್ಯ ಸಾಮರಸ್ಯದ ನೆಲೆಗಳು – ೨೦೧೬<br>ಆನು ಒಲಿದಂತೆ ಹಾಡುವೆ – ೨೦೧೩ | –ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ<br>ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು<br>–ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ ಸುಕ್ಷೇತ್ರ ಹಾರಕೂಡ ತಾ. ಬಸವಕಲ್ಯಾಣ<br>ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ ಕಲಬುರ್ಗಿ<br>–ನಂದಾದೀಪ ಪ್ರಕಾಶನ ಬಸವೇಶ್ವರ ನಗರ ಹುಮನಾಬಾದ (ಬೀದರ ಜಿಲ್ಲೆ) |
| ೮೫ | ಷಡಕ್ಷರಯ್ಯ ಆರ್.ಎಂ. (ಡಾ.) – | ಬಸವಕಲ್ಯಾಣದ ಕಲೆ ಸಂಸ್ಕೃತಿ – ೨೦೦೬ | –ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು |
| ೮೬ | ಹಂಶಕವಿ (ಸಂ) – | ದತ್ತದಿಗಂಬರ ವಚನಗಳು – ೨೦೧೪<br>ಆಧುನಿಕ ವಚನಗಳು – ೨೦೦೮<br>ಆಧುನಿಕ ವಚನ ಮಂಜರಿ – ೨೦೧೦ | –ವಿನಯ ಪ್ರಕಾಶನ ಬೀದರ<br>–ಸಿದ್ಧಲಿಂಗೇಶ್ವರ ಬುಕ್ ಡಿಪೋ ಗುಲಬರ್ಗಾ<br>–ಬಾಪು ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ರಿ) ಬೀದ |

**ಪತ್ರಿಕೆಗಳು**

* ಧರ್ಮೋಪದೇಶ–ಕನ್ನಡ ತ್ರೈಮಾಸಿಕಬೀದರ–ಆಧುನಿಕ ವಚನ ಸಾಹಿತ್ಯಪರಂಪರೆ– ಎಪ್ರಿಲ್–೨೦೧೦ ಸಂ.೧–ಸಂ.೪
* ದಾಸೋಹಜ್ಞಾನರತ್ನ–ಪಾಕ್ಷಿಕ ಪತ್ರಿಕೆ–ಆಧುನಿಕ ವಚನಕಾರರು ಪೂಜ್ಯ ಶ್ರೀ ಡಾ.ಶರಣಬಸಪ್ಪಅಪ್ಪ ಫೆಬ್ರುವರು–೨೦೧೦ ಸಂ. ೮ ಸಂ.೩
* ಜ್ಞಾನದೀಪ್ತಿ–ಗುಲ್ಬರ್ಗಾ ಜಿಲ್ಲೆಯ ಆಧುನಿಕ ವಚನಕಾರರು–ಜ್ಞಾನ ಮೇ ೨೦೧೦ ಸಂ. ವೀರಣ್ಣದಂಡೆ
* ಶರಣಚೇತನಕನ್ನಡ ಸಾಹಿತ್ಯ ಪರಿಷತ್ತು ಪತ್ರಿಕೆ, ಮಹಾಮನೆ 'ಬಸವಪಥ' 'ಸುದ್ಧಿಚಿಂತನ' 'ಬಸವಬೆಳಗು' 'ಲಿಂಗಾಯತ' 'ಚೇತನತರಂಗ'ಕನ್ನಡ ದಿನಪತ್ರಿಕೆಗಳು

**ವಕ್ತಾರರ ಪಟ್ಟಿ**

* ಹೆಸರು – ಡಾ.ಸೋಮನಾಥ ಯಾಳವಾರ
ಊರು – ಹುಮನಾಬಾದ
ವಯಸ್ಸು – ೬೩
ವೃತ್ತಿ – ನಿವೃತ್ತ ಅಧ್ಯಾಪಕರು

* ಹೆಸರು – ರಮೇಶ ಬಿರಾದಾರ
ಊರು – ಬೀದರ
ವಯಸ್ಸು – ೪೨
ವೃತ್ತಿ – ಸಾಹಿತಿಗಳು

* ಹೆಸರು – ಡಾ. ಚೆಲುಮೆ
ಊರು – ಧಾರವಾಡ
ವಯಸ್ಸು – ೬೫
ವೃತ್ತಿ – ನಿವೃತ್ತ ಅಧ್ಯಾಪಕರು

* ಹೆಸರು – ಡಾ. ಸಂಗಮೇಶ ಹಂಡಗಿ
ಊರು – ಹುಬ್ಬಳ್ಳಿ
ವಯಸ್ಸು – ೭೦
ವೃತ್ತಿ – ನಿವೃತ್ತ ಅಧ್ಯಾಪಕರು

* ಹೆಸರು – ದೇಶಾಂಶ ಹುಡಗಿ
ಊರು – ಬೀದರ (ಕುಂಬರವಾಡ)
ವಯಸ್ಸು – ೭೫
ವೃತ್ತಿ – ನಿವೃತ್ತ ಶಿಕ್ಷಕರು

* ಹೆಸರು – ಹಂಸಕವಿ
ಊರು – ಔರಾದ
ವಯಸ್ಸು – ೫೦
ವೃತ್ತಿ – ಪೋಲಿಸ್

* ಹೆಸರು – ಕಲಾವತಿ ಬಿರಾದಾರ
ಊರು – ಬೀದರ
ವಯಸ್ಸು – ೫೯
ವೃತ್ತಿ – ಗೃಹಿಣಿ

* ಹೆಸರು – ಎಂ.ಜಿ. ದೇಶಪಾಂಡೆ

ಊರು – ಬೀದರ

ವಯಸ್ಸು – ೬೨

ವೃತ್ತಿ – ನಿವೃತ್ತ ಬ್ಯಾಂಕ್ ಅಧಿಕಾರಿ

* ಹೆಸರು – ಡಾ. ಮುಕ್ತಂಬಿ

ಊರು – ಭಾಲ್ಕಿ

ವಯಸ್ಸು – ೩೮

ವೃತ್ತಿ – ಅಧ್ಯಾಪಕಿ

* ಹೆಸರು – ಗಂಗಾಬಿಂಕಾ ಪಾಟೀಲ

ಊರು – ಬೀದರ

ವಯಸ್ಸು – ೪೦

ವೃತ್ತಿ – ಅಧ್ಯಾಪಕರು